ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

ಅನುವ್ಯಾಖ್ಯಾನಂ  ಜಿಜ್ಞಾಸಾಧಿಕರಣಂ

# ಶ್ರೀಮನ್ನ್ಯಾಯಸುಧಾಭಾವಸಂಗ್ರಹ

( ಶ್ರೀಮದುತ್ತರಾದಿ ಮಠಾಧೀಶರ ಅನುಗ್ರಹ ಸಂದೇಶದೊಂದಿಗೆ )

( ಮೂಲ ಶ್ಲೋಕಗಳು ಹಾಗೂ ತಿಳಿಗನ್ನಡದಲ್ಲಿ ನ್ಯಾಯ ಸುಧೆಯ ವಿಷಯ ನಿರೂಪಣೆ )

( ಅವತರಣಿಕೆ-ಅನುವಾದ-ವಿವರಣೆ ರೂಪದಲ್ಲಿ )

*

ಲೇಖಕರು :

ಶ್ರೀ ಬಿ. ಡಿ. ಕರಜಗಿ

B. A. (Hons), M.Ed.

Rtd. Professor & Principal,

Govt. College of Education & D.D.P.I.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

ಅನುವ್ಯಾಖ್ಯಾನಂ ಜಿಜ್ಞಾಸಾಧಿಕರಣಂ

# ಶ್ರೀಮನ್ನ್ಯಾಯಸುಧಾಭಾವಸಂಗ್ರಹ

( ಶ್ರೀಮದುತ್ತರಾದಿ ಮಠಾಧೀಶರ ಅನುಗ್ರಹ ಸಂದೇಶದೊಂದಿಗೆ )

( ಮೂಲ ಶ್ಲೋಕಗಳು ಹಾಗೂ ತಿಳಿಗನ್ನಡದಲ್ಲಿ ನ್ಯಾಯ ಸುಧೆಯ ವಿಷಯ ನಿರೂಪಣೆ )

( ಅವತರಣಿಕೆ-ಅನುವಾದ-ವಿವರಣೆ ರೂಪದಲ್ಲಿ )

ಲೇಖಕರು :

ಶ್ರೀ ಬಿ. ಡಿ. ಕರಜಗಿ

B. A. (Hons), M.Ed.

Rtd. Professor & Principal,

Govt. College of Education & D.D.P.I.

Shrimat-Nyayasudha Bhava Sangraha (Kannada)
ಶ್ರೀಮನ್ನ್ಯಾಯಸುಧಾ ಭಾವಸಂಗ್ರಹ (ಜಿಜ್ಞಾಸಾಧಿಕರಣ)

ಲೇಖಕರು : **ಶ್ರೀ ಬಿ. ಡಿ. ಕರಜಗಿ** B.A. (Hons) M.Ed.
ಪ್ರಕಾಶಕರು 134, ಭಾರತೀಶ ಸದನ, ತೇಜಸ್ವಿನಗರ,
ಧಾರವಾಡ–580002

ಮುದ್ರಕರು ; **ಶ್ರೀ ಆನಂದ ವೈದ್ಯ**
ಸಾಧನಾ ಪ್ರೆಸ್, ಧಾರವಾಡ.

ಪ್ರಥಮ ಮುದ್ರಣ : ಸಪ್ಟಂಬರ, 1996

ಪುಟಗಳು : 248 + 16 = 264

ಪ್ರತಿಗಳು ; 1000



ಬೆಲೆ : ರೂ. **30/—** (ಮೂವತ್ತು ರೂಪಾಯಿಗಳು)

ಪುಸ್ತಕಗಳು ದೊರೆಯುವ ಸ್ಥಳ :

i) **ಬಿ. ಡಿ. ಕರಜಗಿ**
134, ಭಾರತೀಶ ಸದನ, ತೇಜಸ್ವಿನಗರ, ಧಾರವಾಡ–2.

ii) **ಭಾರತ ಬುಕ್ ಡಿಪೋ ಮತ್ತು ಪ್ರಕಾಶನ**
ಶಂಕರ ಪ್ಲಾಝಾ, ಕಿಟೆಲ್ ಕಾಲೇಜ ಎದುರಿಗೆ,
ಪಿ. ಬಿ. ರೋಡ, ಧಾರವಾಡ-580001.
ಫೋನ : 347349

iii) **ವೇದವ್ಯಾಸ ವೇದಾಂತ ಪುಸ್ತಕ ಪ್ರಕಾಶನ,**
ಗುರುಸ್ಮೃತಿ ಕಾಂಪ್ಲೆಕ್ಸ, ರಾಯರ ಮಠದ ಹತ್ತಿರ,
ಮಾಳಮಡ್ಡಿ, ಧಾರವಾಡ–580007.

॥ ಶ್ರೀ ಲಕ್ಷ್ಮೀ-ವೆಂಕಟೇಶಃ ಪ್ರಸೀದತು ॥



## ಕೃತಜ್ಞತೆಗಳು.

ಈ ಪುಸ್ತಕವನ್ನು ತಿರುಮಲ ತಿರುಪತಿ ದೇವಸ್ಥಾನದ
ಧನಸಹಾಯದಿಂದ ಪ್ರಕಟಿಸಲಾಗಿದೆ,

This book is published with the financial assistance of
Tirumala Tirupati Devasthanams under their scheme
"Aid to Publish Religious Books"




ಶ್ರೀ ರಾಮಕೃಷ್ಣ-ವೇದವ್ಯಾಸರನ್ನು ಸೇವಿಸುತ್ತಿರುವ ಹನುಮ-ಭೀಮ-ಮಧ್ವರು.



ಶ್ರೀವೇದವ್ಯಾಸರು
**ಸೂತ್ರಕಾರರು**



ಶ್ರೀ ಗುರುಮಧ್ವರು
**ಅನುವ್ಯಾಖ್ಯಾನಕಾರರು**



ಶ್ರೀ ಟೀಕಾಕೃತ್ಪಾದರು
**ಸುಧಾಕಾರರು**



ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥರು
ಉತ್ತರಾದಿ ಮಠದ ಕಿರಿಯ ಸ್ವಾಮಿಗಳು



ಶ್ರೀ ೧೦೦೮ ಸತ್ಯಪ್ರಮೋದತೀರ್ಥರು
ಉತ್ತರಾದಿಮಠದ ಹಿರಿಯ ಸ್ವಾಮಿಗಳು



ಶ್ರೀ ೧೦೦೮ ಶ್ರೀ ರಘುಪ್ರಿಯತೀರ್ಥರು
ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ
ಮಠಾಧೀಶರು

# ಅರ್ಪಣೆ



**ವೈ.ವಾ.ಪಂ. ದಾಸಾಚಾರ್ಯ ಶ್ರೀನಿವಾಸಾಚಾರ್ಯ ಕರಜಗಿ**

( 1892–1946 )

ಭಾರತೀರಮಣ ಮುಖ್ಯಪ್ರಾಣಾಂತರ್ಗತ
ಶ್ರೀ ಲಕ್ಷ್ಮೀವೆಂಕಟೇಶದೇವರ ಪ್ರೀತ್ಯರ್ಥವಾಗಿ,
ನನಗೆ ಜನ್ಮಕೊಟ್ಟು ಸಂಸ್ಕಾರ ನೀಡಿ
ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸಿ ಪ್ರೋತ್ಸಾಹಿಸಿದ
ಪೂಜ್ಯ ತಂದೆಯವರಾದ
ವೈ.ವಾ.ಪಂ. **ದಾಸಾಚಾರ್ಯ**ರ ಅಡಿದಾವರೆಗಳಲ್ಲಿ,
ಭಕ್ತಿಪೂರ್ವಕವಾಗಿ ಸಮರ್ಪಿತ,

—ಭೀಮಾಚಾರ್ಯ ಕರಜಗಿ

**ಶ್ರೀಕೃಷ್ಣಾರ್ಪಣಮಸ್ತು.**

|| ಓಂ ||

**ಶ್ರೀ ದಿಗ್ವಿಜಯ ರಾಮೋ ವಿಜಯತೇ**

**ಶ್ರೀ ಮಜ್ಜಗದ್ಗುರು ಮಧ್ವಾಚಾರ್ಯ ಮೂಲಸಂಸ್ಥಾನ**

**ಉತ್ತರಾದಿಮಠ.**

ಶ್ರೀಃ

ಬಿಜಾಪೂರ
ದಿನಾಂಕ 10–9–96.

# ಅನುಗ್ರಹ ಸಂದೇಶ

ಗಾಂಗಮಂಗಲತರಂಗಭಂಗದಪ್ರಾಂತಸುಶ್ರೀಹರಿವೇಶ್ಮಕೃತ್ಸಮಃ ।
ಯದ್ಗತೈಕ ತಮ ವರ್ಣಲೇಖಕಃ, ಸತ್ಯತೀರ್ಥ ಇಹ ಭಾಷ್ಯಮಾಲಿಖತ್॥

ಎಂಬ ನಾರಾಯಣ ಪಂಡಿತಾಚಾರ್ಯರ ಉಕ್ತಿಯಂತೆ ಶ್ರೀಮದಾಚಾರ್ಯರ ಭಾಷ್ಯದಲ್ಲಿಯ ಒಂದು ಅಕ್ಷರವನ್ನು ಬರೆದರೂ ಗಂಗಾನದಿಯ ತೀರದಲ್ಲಿ ಶ್ರೇಷ್ಠವಾದ ಭಗವಂತನ ಮಂದಿರವನ್ನು ಕಟ್ಟಿಸಿದ ಮಹಾಪುಣ್ಯ ಪ್ರಾಪ್ತವಾಗುತ್ತದೆ. ಹೀಗಿರುವಾಗ ಅದರ ವ್ಯಾಖ್ಯಾನ ಮಾಡಿ ಜನರಿಗೆ ತಿಳಿಯುವಂತೆ ಮಾಡಿದರೆ ಇನ್ನೂ ಪುಣ್ಯ ಬರುತ್ತದೆ, ಎಂಬ ವಿಷಯದಲ್ಲಿ ಸಂದೇಹವಿಲ್ಲ. ಪ್ರಕೃತ ನಮ್ಮ ಪ್ರಿಯ ಶಿಷ್ಯರಾದ ಶ್ರೀ ಭೀಮಾಚಾರ್ಯ ಕರಜಗಿ ಅವರು ಅನುವ್ಯಾಖ್ಯಾನ ಹಾಗೂ ಶ್ರೀಮನ್ನ್ಯಾಯಸುಧಾ ಜಿಜ್ಞಾಸಾಧಿಕರಣವನ್ನು ಸರಳ ಕನ್ನಡ ಭಾಷೆಯಲ್ಲಿ ಅನುವಾದ ಮಾಡಿ ಸಾಮಾನ್ಯ ಜನರಿಗೆ ಶಾಸ್ತ್ರದಲ್ಲಿ ಪ್ರವೇಶ ಸಿಗುವಂತೆ ಪ್ರಯತ್ನಿಸಿದ್ದಾರೆ. ಈ ಗ್ರಂಥವನ್ನು ಬಹಳ ಪರಿಶ್ರಮದಿಂದ ಅಧ್ಯಯನ ಮಾಡಿ ಅನೇಕ ಕಠಿಣ ಭಾಗಗಳನ್ನು ಸುಲಭ ಶೈಲಿಯಲ್ಲಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ಇದು ಬಹಳ ಸ್ತುತ್ಯವಾದ ಕಾರ್ಯ. ಹೀಗೆಯೇ ಇನ್ನೂ ಅನೇಕ ಕೃತಿಗಳು ಇವರಿಂದ ರಚಿಸಲ್ಪಡಲಿ ಎಂದು ಶ್ರೀ ಮನ್ಮೂಲರಾಮದೇವರಲ್ಲಿ ಪ್ರಾರ್ಥಿಸುತ್ತೇವೆ. ಎಲ್ಲ ಜಿಜ್ಞಾಸುಗಳು ಇದನ್ನು ಓದಿ ಇದರ ಲಾಭ ಪಡೆಯಬೇಕು.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು,

**ಶ್ರೀಮತ್ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು**
ಶ್ರೀಮದುತ್ತರಾದಿಮಠ.

|| ಶ್ರೀಃ ||

ಶ್ರೀ ವೈಕುಂಠರಾಮೋ ವಿಜಯತೇ.

ಶ್ರೀಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಶ್ರೀಪಾದಂಗಳವರ ಸಂಸ್ಥಾನ.

ವಿಜಾಪೂರ

11-9-1996

|| ಶ್ರೀಃ ||

ಶ್ರೀ ವೈಕುಂಠರಾಮೋ ವಿಜಯತೇ.

ಮೀಮಾಂಸಾ ದ್ವಿವಿಧಾ ಪ್ರೋಕ್ತಾ ಕರ್ಮಣೋ ಬ್ರಹ್ಮಣಸ್ತಥಾ ।
ವೇದಾರ್ಥ ಜ್ಞಾನ ತುಲ್ಯಾಡ್ಯಾ ದ್ವಿತೀಯಾಯಾಃ ಫಲಂ ಶೃಣು
ಪ್ರತ್ಯಕ್ಷರಂ ತು ಲಭತೇ ಗ್ರಾಯತ್ರೀಶತಜಂ ಫಲಂ ।

ಎಂಬ ಮಹಿಮೋಪೇತವಾದ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ (ಬ್ರಹ್ಮಸೂತ್ರಗಳಿಗೆ) ಶ್ರೀಮದಾನಂದತೀರ್ಥರು ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ, ಅವುಗಳಲ್ಲಿ ಅನುವ್ಯಾಖ್ಯಾನ ಪದ್ಯರೂಪ ವ್ಯಾಖ್ಯಾನ. ಇದಕ್ಕೆ ದಿವ್ಯ ಟೀಕೆಯನ್ನು ಬರೆದವರು ಶ್ರೀಮತ್ ಟೀಕಾಕೃತ್ಪಾದರು. ಇದರಲ್ಲಿಯ ಅಮೃತ ಸದೃಶ ಯುಕ್ತಿಗಳನ್ನ-ರಿತು ಸವಿಯುವದು ಜೀವನದ ಸಾಫಲ್ಯತೆ. ಆದರೆ ಈ ಗ್ರಂಥವು ತಂತ್ರ-ಚತುಷ್ಟಯಾತ್ಮಕವಾದುದರಿಂದ ಸಾಮಾನ್ಯ ಜನರಿಗೆ ಯುಕ್ತಿಗಳನ್ನು ತಿಳಿಯುವದು ಕಠಿಣವಾಗುತ್ತದೆ. ಪ್ರಕೃತ ಶ್ರೀ ಭೀಮಾಚಾರ್ಯ ಕರಜಗಿ ಅವರು ಬಹಳ ಪರಿಶ್ರಮ ವಹಿಸಿ ಅನುವ್ಯಾಖ್ಯಾನದ ಭಾವವನ್ನು ಸುಧೋಕ್ತ ರೀತಿಯಂತೆ ಸುಲಭವಾಗಿ ಎಲ್ಲರಿಗೂ ತಿಳಿಯುವಂತೆ ತಿಳಿಗನ್ನಡದಲ್ಲಿ "ಶ್ರೀಮನ್ನ್ಯಾಯ ಸುಧಾ ಭಾವಸಂಗ್ರಹ" ದಲ್ಲಿ ವಿವರಿಸಿದ್ದಾರೆ.

ಬೋಧನೆಯ ಆಧುನಿಕ ಪದ್ಧತಿಯನುಸರಿಸಿ ತಾತ್ಪರ್ಯವು ಎಲ್ಲರಿಗೂ ತಿಳಿಯುವಂತೆ ಪ್ರಯತ್ನಿಸಿದ್ದಾರೆ. ಈ ಪ್ರಯತ್ನ ಸ್ತುತ್ಯ. ಈ ಗ್ರಂಥವನ್ನು ಅಲ್ಲಲ್ಲಿ ನೋಡಿದ್ದೇವೆ. ವಿಷಯ ವಿವೇಚನೆ ಸರಿಯಾಗಿ ಇದೆ. ಪಾರಿಭಾಷಿಕ ಶಬ್ದಗಳ ಪರಿಚಯವು ಆರಂಭಿಕ ಓದುಗರಿಗೆ ತುಂಬಾ ಉಪಯುಕ್ತವಿವೆ. ಇದರ ಲಾಭವನ್ನು ಎಲ್ಲರೂ ಪಡೆಯಲಿ. ಇವರಿಂದ ಇಂತಹ ಅನೇಕ ಕೃತಿಗಳು ರಚಿಸಲ್ಪಡಲಿ ಎಂದು ನಮ್ಮ ಉಪಾಸ್ಯ ಮೂರ್ತಿಯಾದ ಶ್ರೀ ವೈಕುಂಠ ರಾಮದೇವ ರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು.

ಶ್ರೀ ರಘುಪ್ರಿಯ ತೀರ್ಥ ಶ್ರೀಪಾದಂಗಳವರು
ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥಮಠ

# ವಿದ್ವಾಂಸರ ಅಭಿಪ್ರಾಯಗಳು

## ( ೧ )

**ಶ್ರೀ ಗೋವಿಂದರಾಜೋ ವಿಜಯತೇ.**

ಸಕಲ ಸಾತ್ವಿಕ ಜನರಲ್ಲಿ ವಿನಂತಿ.

ವೇ. ಶಾ. ಸಂ. ಶ್ರೀಮಾನ್ ಭೀಮಾಚಾರ್ಯ ಕರಜಗಿ ಇವರು ಬರೆದ ಶ್ರೀಮನ್ನ್ಯಾಯಸುಧಾ ಜಿಜ್ಞಾಸಾಧಿಕರಣದ ಭಾವಸಂಗ್ರಹವನ್ನು ಆಮೂಲಾಗ್ರವಾಗಿ ನೋಡಿದ್ದೇನೆ. ಇದರಲ್ಲಿ ಇವರು ವಿಶೇಷ ಪರಿಶ್ರಮಪಟ್ಟು ಉಪಕ್ರಮ, ವಿವರಣೆ ವಿಶೇಷಾರ್ಥ ಪೂರ್ವಪಕ್ಷ, ಸಮಾಧಾನ ಹೀಗೆ ವಿವರವಾಗಿ ಅನುವ್ಯಾಖ್ಯಾನದಲ್ಲಿ ರುವ ಎಲ್ಲ ಶ್ಲೋಕಗಳಿಗೆ ಸುಧೋಕ್ತ ಅರ್ಥ ವಿವರಿಸಿದ್ದಲ್ಲದೆ ಅಲ್ಲಲ್ಲಿ ವಿಶೇಷ ಟಿಪ್ಪಣಿಗಳನ್ನೂ ಅಲ್ಲಿಯ ವಾಕ್ಯಗಳನ್ನೂ ಉದಾಹರಿಸಿದ್ದು ಅವರ ವಿಶೇಷ ಮನನಕ್ಕೆ ನಿದರ್ಶನವಾಗಿದ್ದಲ್ಲದೆ ಜಿಜ್ಞಾಸುಗಳಿಗೂ ವಿಶೇಷ ಮನನ ಸಾಧನಗಳಾಗಿವೆ.

"ಅಥವಾ ಸತತಶಾಸ್ತ್ರವಿಮರ್ಶೇನ ಭವಿಷ್ಯತಿ" ಎಂದು ಹೇಳಿದಂತೆ ಅವರ ಈ ಅಭ್ಯಾಸ, ಮನನ, ಲೇಖನ ಮುದ್ರಣಾದಿಗಳಿಂದ ಸುಪ್ರೀತರಾದ ಶ್ರೀಮದಾಚಾರ್ಯಾಂತರ್ಗತ ಕರುಣಾವರುಣಾಲಯರಾದ ಬಾದರಾಯಣದೇವರು ಅವರಿಗೆ ವಿಶೇಷಾನುಗ್ರಹ ಮಾಡಲಿ ಹಾಗೂ ಈ ಪುಸ್ತಕವನ್ನು ಆದರ್ಶವಾಗಿಟ್ಟುಕೊಂಡು ಅಭ್ಯಸಿಸುವವರಿಗೂ ಅನುಗ್ರಹ ಮಾಡಲಿ ಎಂದು ಅವರಲ್ಲಿ ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ಇತಿ ಸಜ್ಜನ ವಿಧೇಯ,
**ಪಂ. ದಾಮೋದರಾಚಾರ್ಯ ಉಮರ್ಜಿ**
ನಿವೃತ್ತ ಪ್ರಾಧ್ಯಾಪಕರು,
ಸರ್ಕಾರೀ ಸರ್ದಾರ್ಸ್ ಹೈಸ್ಕೂಲ, ಬೆಳಗಾವ.



## (೨)

ಸರ್ವಜ್ಞಕಲ್ಪರಾದ ಶ್ರೀಮತ್ ಟೀಕಾಕೃತ್ಪಾದರಿಂದ ರಚಿತವಾದ ಶ್ರೀಮನ್ನ್ಯಾಯಸುಧಾ ಗ್ರಂಥವು ತಂತ್ರ ಚತುಷ್ಟಯಾತ್ಮಕವಾಗಿರುವದರಿಂದ ಸರ್ವಗ್ರಂಥಗಳಲ್ಲಿ

ಶ್ರೀಮನ್ನ್ಯಾಯಸುಧೆಯು ಸಾರ್ವಭೌಮ ಸ್ಥಾನದಲ್ಲಿ ಅಲಂಕೃತವಾಗಿದೆ. ಈ ಗ್ರಂಥದಲ್ಲಿ ಪ್ರತಿ ವಿಷಯವು ಕೂಲಂಕಷವಾಗಿ (ತಲಸ್ಪರ್ಶಿಯಾಗಿಯೂ) ವಿಮರ್ಶಿತ ವಾಗಿ ಇದೇ ಸಿದ್ಧಾಂತವೆಂದು ನಿರ್ಣಯಿಸಲಾಗಿದೆ. ಈ ಅಭೂತಪೂರ್ವ ಗ್ರಂಥದ ಪ್ರಥಮಾಧಿಕರಣವು ಜಿಜ್ಞಾಸಾಧಿಕರಣ. ಈ ಅಧಿಕರಣದಲ್ಲಿ ಬಂಧಸತ್ಯತ್ವವಾದ, ಅನ್ಯಥಾಖ್ಯಾತಿವಾದ, ಕಾರ್ಯತಾವಾದ, ಸಿದ್ಧಾರ್ಥವ್ಯುತ್ಪತ್ತಿವಾದ, ವೇದಪ್ರಾಮಾಣ್ಯವಾದ ಇವೇ ಮೊದಲಾದ ಕ್ಲಿಷ್ಟ ವಾದಗಳು ವಿಜೃಂಭಿಸುತ್ತವೆ.

ಈ ವಾದಗಳನ್ನೂ ಸುಂದರ ಸರಳ ಶೈಲಿಯಲ್ಲಿ ಕನ್ನಡ ಭಾಷೆಯಿಂದ ಪ್ರಮಾಣ ಪರಿಚಯವುಳ್ಳ ಸಾಮಾನ್ಯರಿಗೂ ತಿಳಿಯುವಂತೆ ಅನುವಾದ ಮಾಡಿದ್ದಾರೆ. ಹಾಗೂ 88 ಅನುವ್ಯಾಖ್ಯಾನ ಶ್ಲೋಕಗಳನ್ನು ಸುಧಾರೀತಿಯನ್ನು ಅನುಸರಿಸಿ ಅವತರಣಿಕಾ ಸಹಿತವಾಗಿ ಸಮೀಚೀನವಾಗಿ ತಿಳಿಯುವಂತೆ ಅರ್ಥ ಮಾಡಿದ್ದಾರೆ.

ಪಾರಿಭಾಷಿಕ ಶಬ್ದಾರ್ಥಗಳನ್ನೂ ಹಾಗೂ ಕೆಲವು ಭಾಗದಲ್ಲಿ ಕ್ಲಿಷ್ಟ ವಿಷಯ ಗಳನ್ನೂ ವಾದಿ ಪ್ರತಿವಾದಿ ಸಂಭಾಷಣೆ ಮೂಲಕ ಮನವರಿಕೆ ಮಾಡಿಕೊಟ್ಟಿದ್ದಾರೆ. ಹೀಗೆ ಜಿಜ್ಞಾಸುಗಳಿಗೂ ವಿದ್ಯಾರ್ಥಿಗಳಿಗೂ ಶ್ರೀಸುಧೆಯ ಭಾವಾರ್ಥ ವಾಗುವಂತೆ ಪ್ರಯತ್ನ ಮಾಡಿದ್ದಾರೆ. ಶ್ರೀ ಬಿ. ಡಿ. ಕರಜಗಿಯವರ ಸುಧಾ ಭಾವ ಸಂಗ್ರಹ ಗ್ರಂಥವು ಇದೇ ರೀತಿಯಿಂದ ಮುಂದುವರೆದು ನಿರ್ವಿಘ್ನ ರೀತಿ ಯಿಂದ ಪೂರ್ಣವಾಗಲೆಂದು ಹಾಗೂ ಅವರಿಗೆ ಆಯುರಾರೋಗ್ಯ ಭಾಗ್ಯವನ್ನೂ ಶ್ರೀ ಹರಿವಾಯು ಗುರುಗಳು ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ. ಅವರ ಈ ಸುಧಾಭಾವ ಸಂಗ್ರಹ ಗ್ರಂಥ ಮುಂದಿನ ಪೀಳಿಗೆಯವರಿಗೆ ದಾರಿದೀಪವಾಗಲೆಂದು ಹಾರೈಸುತ್ತೇನೆ.

**ಪಂ. ವಾದಿರಾಜಾಚಾರ್ಯ ಅಗ್ನಿಹೋತ್ರಿ**
ನ್ಯಾಯವೇದಾಂತ ವಿಶಾರದ,
ಸಾಹಿತ್ಯಾಲಂಕಾರ ರಾಜ್ಯಪ್ರಶಸ್ತಿ ವಿಜೈತ
"ವಿಜಯಪ್ರಸಾದ" ಬ್ರಹ್ಮಪುರ, ಗುಲ್ಬರ್ಗಾ.



(೩)

॥ ಶ್ರೀಶಃ ಶರಣಂ ॥

॥ ಶ್ರೀಗುರುಭ್ಯೋ ನಮಃ ॥

ಹಿರಿಯರಾದ ವಿದ್ವಾನ್ ಕರಜಗಿ ಭೀಮಾಚಾರ್ಯರಿಗೆ ವಂದನೆಗಳು.

ನಿಮ್ಮ "ಶ್ರೀಮನ್ನ್ಯಾಯಸುಧಾಭಾವಸಂಗ್ರಹ"ವೆಂಬ ಗ್ರಂಥವನ್ನು ನಾನು

ಕಂಡೆ. ಓದಿ ಬಹಳ ಸಂತೋಷವಾಯಿತು. ನೀವು ತುಂಬಾ ಶ್ರಮಪಟ್ಟು ಈ ಗ್ರಂಥವನ್ನು ಬರೆದದ್ದು, ಓದಿದವರಿಗೆ ತಿಳಿದುಬರುವ ವಿಷಯ. ನಿಮ್ಮ ಸ್ವಭಾವವೇ ಇದು. ಯಾವುದೇ ವಿಷಯವನ್ನು ನೀವು ಕೂಲಂಕಷವಾಗಿ ಪರಿಶೀಲಿಸಿ, conceptual clarity ಪಡೆದು ಗ್ರಂಥವನ್ನು, ಲೇಖವನ್ನು ಬರೆಯುವದು. ಸಾಮಾನ್ಯವಾಗಿ ಅನೇಕ ಜನರಿಗೆ ಈ ತರಹದ conceptual clarity ಇರುವದಿಲ್ಲ. ಆ ಕಾರಣದಿಂದ ನೀವು, ನಿಮ್ಮ ಸ್ವಭಾವ, ನಿಮ್ಮ ಈ ಪ್ರಯತ್ನ, ಪ್ರವೃತ್ತಿಗಳು ತುಂಬ ಸ್ತುತ್ಯ.

ಈ ಗ್ರಂಥದಲ್ಲಿ ಅನೇಕ ವಿಷಯಗಳು ಬಹಳ ಚೆನ್ನಾಗಿ ಸ್ಪಷ್ಟೀಕೃತವಾಗಿವೆ. ಇದರಿಂದಾಗಿ ಬಹಳ ಜನರಿಗೆ ಲಾಭವಾಗುವದರಲ್ಲಿ ಯಾವ ಸಂದೇಹವಿಲ್ಲ. ಇದು ಉತ್ತಮವಾದ ಸೇವೆ– ಭಗವಾನ್ ವೇದವ್ಯಾಸರ, ಶ್ರೀಮದಾಚಾರ್ಯರ, ಟೀಕಾಕೃತ್ಪಾದರ.

ದೇವರು ಗುರುಗಳು ನಿಮ್ಮಿಂದ ಈ ತರಹದ ಉತ್ತಮ ಕೆಲಸಗಳನ್ನು ಅನೇಕ ಬಾರಿ ಮಾಡಿಸಲಿ ಎಂದು ದೇವರಲ್ಲಿ ಪ್ರಾರ್ಥಿಸುವೆ.

ನಿಮ್ಮ ಆತ್ಮೀಯ,
**ವಿದ್ಯಾಸಿಂಹಾಚಾರ್ಯ ಮಾಹುಲಿ.**
'ಪಂಡಿತರಾಜ', 'ಪಂಡಿತರತ್ನ'
ತತ್ತ್ವವಾಚಸ್ಪತಿ, 'ಶಾಸ್ತ್ರರತ್ನಾಕರ',
"ನ್ಯಾಯ ವೇದಾಂತ, ವ್ಯಾಕರಣ,
ಸಾಹಿತ್ಯ, ಮೀಮಾಂಸಾವಿದ್ವಾನ್" ಮತ್ತು
**ಕುಲಪತಿ**
ವಾಣೀವಿಹಾರ ಸಂಸ್ಕೃತ ಮಹಾವಿದ್ಯಾಲಯ
ಹಾಗೂ ಶ್ರೀ ಸತ್ಯಧ್ಯಾನ ವಿದ್ಯಾಪೀಠ,
ಮುಳುಂದ, ಮುಂಬಯಿ–80

● ● ● ●

( ೪ )

॥ ಶ್ರೀಶಂ ವಂದೇ ॥

ಪಂ. ಭೀಮಾಚಾರ್ಯ ಕರ್ಜಗಿಯವರು ಸವ್ಯಸಾಚಿ ವಿದ್ವಾಂಸರು. ಹುಟ್ಟಿನಿಂದಲೇ ಪಾಠ ಪ್ರವಚನ, ಪಂಡಿತರ ವಾತಾವರಣದಲ್ಲಿಯೇ ಬೆಳೆದವರು. ತಂದೆ

ದಾಸಾಚಾರ್ಯರು ಅನೇಕ ಪಂಡಿತರಿಂದ ಪಾಠ ಕೇಳಿದವರು. ಅವರಂತೆ ಶ್ರೀ ಭೀಮಾಚಾರ್ಯರೂ ಅನೇಕ ಹಿರಿಯ ವಿದ್ವಾಂಸರಿಂದ ಪಾಠ ಕೇಳಿದವರು, ಕಳೆದ ಅನೇಕ ದಶಕಗಳಿಂದ ನಿರಂತರ ಪಾಠ, ಲೇಖನ, ಗ್ರಂಥಾವಲೋಕನ, ವಿಮರ್ಶನ ಗಳಲ್ಲಿಯೇ ತಮ್ಮ ಎಲ್ಲ ಸಮಯವನ್ನು ಕಳೆಯುವ ಸಾಧಕರು. ಇಂದಿನ ಇಳಿ ವಯಸ್ಸಿನಲ್ಲಿಯೂ ಪಾಠ ಪ್ರವಚನಗಳ ವಿಷಯದಲ್ಲಿ ಸದಾ ಚೈತನ್ಯಪೂರ್ಣರು, ಪ್ರತಿಭಾಶಾಲಿಗಳು, ಪರಿಶ್ರಮಿಗಳು. ಅನೇಕ ವಿಷಯಗಳಲ್ಲಿ ಹತ್ತಾರು ಪುಸ್ತಕ ಗಳನ್ನು ಬರೆದಿದ್ದಾರೆ. ಅನೇಕ ಸಂಸ್ಕೃತ ಗ್ರಂಥಗಳನ್ನು ಅನುವಾದಿಸಿದ್ದಾರೆ. ಅವರ ವೇದಾಂತ ಕೃತಿ ಈ "ಸುಧಾಭಾವಸಂಗ್ರಹ"

ವಿಶಾಲವಾದ ವೇದ ಪ್ರಪಂಚದ ತತ್ತ್ವ ತಿಳಿಯಲು, ಬದುಕನ್ನು ಉದ್ಧ ರಿಸಿಕೊಳ್ಳಲು, ಸಾಧನ ಮಾಡಲು ನಿರ್ಣಯದ ರೂಪದಲ್ಲಿ ಬ್ರಹ್ಮಸೂತ್ರಗಳ ನಿರ್ಮಾಣವಾಯಿತು. ಶ್ರೀವೇದವ್ಯಾಸರ ಈ ಮೌಲಿಕ ಕೃತಿಗೆ ಶ್ರೀ ಮಧ್ವಾ ಚಾರ್ಯರು ಶ್ಲೋಕ ರೂಪದಲ್ಲಿ ಅನುವ್ಯಾಖ್ಯಾನವೆಂಬ ವ್ಯಾಖ್ಯಾನ ರಚಿಸಿದರು. ಈ ಅನುವ್ಯಾಖ್ಯಾನದ ಪರಿಚಯ, ವಿವರಣೆ, ವಿಸ್ತಾರ ವ್ಯಾಖ್ಯಾನದ ಕೃತಿಯೇ ಶ್ರೀಮನ್ನ್ಯಾಯಸುಧಾ. ಶ್ರೀಮನ್ನ್ಯಾಯಸುಧಾಕ್ಕೆ 50ಕ್ಕೂ ಹೆಚ್ಚು ವ್ಯಾಖ್ಯಾನ ಗಳು ರಚಿಸಲ್ಪಟ್ಟಿವೆ. ಇಂತಹ ಗ್ರಂಥ ರಾಜದ ಪರಿಚಯ, ಅಧ್ಯಯನ, ಮನನವು ಬದುಕಿನ ಪರಮಭಾಗ್ಯ. ಈ ಸುಧಾ ಗ್ರಂಥವನ್ನು ಕಳೆದ ಮೂವತ್ತು ವರ್ಷಗಳ ಅಧ್ಯಯನ ಮನನದಿಂದ ಪರಿಪಕ್ವವಾಗಿ, ಸುಲಭವಾಗಿ, ಸುರಳಿತವಾಗಿ, ತಿಳಿಗನ್ನಡದಲ್ಲಿ ಮೊದಲ ಸೂತ್ರದ ವಿವರಣೆಯ ಸಾರ, ಈ ಗ್ರಂಥದ ರೂಪದಲ್ಲಿ ಅರಳಿದೆ. ಗಂಭೀರವಾದ ವಿಚಾರಗಳು ರಹಸ್ಯವಾದ ಪ್ರಮೇಯಗಳು ಸುಲಭವಾಗಿ ಜಿಜ್ಞಾಸುಗಳ ಮನಮುಟ್ಟುವಂತಾಗಿವೆ. ಇದು ಹರಿವಾಯುಗಳ ಉತ್ತಮ ಸೇವೆ, ಅವರಿಂದ ಇನ್ನೂ ಅನೇಕ ಕೃತಿಗಳು ಹೊರಬರಲಿ ಎಂದು ಹಾರೈಸುವೆ.

**ಪಂ. ಜಯತೀರ್ಥಾಚಾರ್ಯ ಮಳಗಿ**

ಎಂ. ಎ. (ಕನ್ನಡ, ಹಿಂದಿ, ಸಂಸ್ಕೃತ)

"ಪಂಡಿತರತ್ನಂ", "ಸಚ್ಛಾಸ್ತ್ರ ವಿಚಕ್ಷಣ ರತ್ನಂ", ವೇದಾಂತಾಚಾರ್ಯ",

"ಧರ್ಮಶಾಸ್ತ್ರಾಚಾರ್ಯ", "ಸಾಹಿತ್ಯರತ್ನ", "ಸಾಹಿತ್ಯ ಶಿರೋಮಣಿ"

ಅಧ್ಯಾಪಕರು

ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ವಿಭಾಗ,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.



(೫)

**ಶ್ರೀಮನ್ನ್ಯಾಯಸುಧಾಭಾವಸಂಗ್ರಹ**

ಪಾರಿಭಾಷಿಕ ಶಬ್ದಗಳನ್ನು ತಿಳಿಯದೇ ಇದ್ದವರಿಗೆ, ತಾರ್ಕಿಕರ ಅನುಮಾನ ಪ್ರಕ್ರಿಯೆಯನ್ನು ಅಭ್ಯಾಸ ಮಾಡದೇ ಇದ್ದವರಿಗೆ ಬಹು ಉಪಯುಕ್ತ ಗ್ರಂಥ ವಾಗಿದೆ, ಅತ್ಯಂತ ಗಂಭೀರ ಶೈಲಿಯಲ್ಲಿದ್ದ, ತರ್ಕ, ವ್ಯಾಕರಣ, ಮೀಮಾಂಸಾದಿಂದ ಪರಿಪೂರ್ಣವಾದ ಸುಧಾವಾಕ್ಯಗಳನ್ನು ಸರಳವಾದ ಕನ್ನಡದಲ್ಲಿ ಅನುವಾದ ಮಾಡಿ ಮಹೋಪಕಾರವನ್ನು ಮಾಡಿದ್ದಾರೆ. ಕನ್ನಡದಲ್ಲಿ ಅನುವಾದಿಸುವ ಕೌಶಲ, ಸಾರಾಂಶ ವನ್ನು ಹೇಳುವ ಪಂ. ಭೀಮಸೇನಾಚಾರ್ಯರ ಈ ಪ್ರಯತ್ನ ಯಶಸ್ವಿಯಾಗಿದೆ.

ಬಹುಶ್ರುತ ಜನರಿಗೆ, ಜಿಜ್ಞಾಸುಗಳಿಗೆ ಉಪಯುಕ್ತ ಪುಸ್ತಕವಾಗಿದೆ. ಮುದ್ರಣ ದೋಷಗಳಿದ್ದರೂ ಪ್ರಮೇಯ ದೋಷಗಳು ಇಲ್ಲ.

**ಪಂ. ಅಶ್ವತ್ಥನಾರಾಯಣಾಚಾರ್ಯ ಮಾಹುಲಿ**
"ವೇದಾಂತಾಚಾರ್ಯ" "ವೇದಾಂತ ವಿಶಾರದ"
"ವೇದಾಂತವಿದ್ವಾನ್" "ಸಾಹಿತ್ಯರತ್ನ"
"ಸಾಹಿತ್ಯಾಲಂಕಾರ"

● ● ● ●

(೬)

ಶ್ರೀ ಭೀಮಾಚಾರ್ಯ ಕರಜಗಿಯವರು ಬರೆದ ಶ್ರೀಮನ್ನ್ಯಾಯಸುಧಾಭಾವ ಸಂಗ್ರಹವನ್ನು (ಜಿಜ್ಞಾಸಾಧಿಕರಣ) ಅಲ್ಲಲ್ಲಿ ನೋಡಿದೆ, ಬಹಳ ಬೋಧಕವಾಗಿದೆ. ಜಿಜ್ಞಾಸುಗಳಿಗೆ ಸುಧಾಭಾವವನ್ನು ಒಳ್ಳೆಯ ರೀತಿಯಿಂದ ಕನ್ನಡದಲ್ಲಿ ವಿವೇಚಿಸಿ ದ್ದಾರೆ. ಇದರ ಉಪಯೋಗವನ್ನು ಎಲ್ಲ ಸಜ್ಜನರು ಪಡೆದುಕೊಳ್ಳಬೇಕೆಂದು ನಮ್ಮ ಅಭಿಪ್ರಾಯ. ಇವರಿಗೆ ಶ್ರೀ ಟೀಕಾಕೃತ್ಪಾದರು ಅವರ ಅಂತರ್ಯಾಮಿ ಶ್ರೀ ವೇದವ್ಯಾಸರು ಅನುಗ್ರಹಿಸಲಿ. ಇಂತಹ ಕಾರ್ಯ ಪುನಃ ಪುನಃ ಇವರ ದ್ವಾರಾ ಶ್ರೀ ಹರಿ-ವಾಯು-ಗುರುಗಳು ಮಾಡಿಸಿ ಇವರಿಗೆ ಅನುಗ್ರಹಿಸಲೆಂದು ನಮ್ಮ ಉಪಾಸ್ಯ ಶ್ರೀ ಹಯಗ್ರೀವ ದೇವರಲ್ಲಿ ಪ್ರಾರ್ಥಿಸುವೆವು.

ಧಾರವಾಡ **"ಪಂಡಿತರತ್ನ" ರಾಘವೇಂದ್ರಾಚಾರ್ಯ ಗಂಗೂರ**
14-9-1996 (ಜಾಲೀಹಾಳ)

● ● ● ●

(೭)

॥ ಶ್ರೀ ॥

"ಶ್ರೀಮನ್ನ್ಯಾಯಸುಧಾಭಾವಸಂಗ್ರಹ" ಇದು ಶ್ರೀಮತ್ ಟೀಕಾಕೃತ್ಪಾದಾ ಚಾರ್ಯರ ಮೇರುಕೃತಿಯಾದ "ಶ್ರೀಮನ್ನ್ಯಾಯಸುಧಾ" ಗ್ರಂಥದ ಜಿಜ್ಞಾಸಾಧಿ

ಕರಣದ ಸಾರಸಂಗ್ರಹವಾಗಿದೆ. ಅನುವ್ಯಾಖ್ಯಾನದ ಎಲ್ಲ ಶ್ಲೋಕಗಳ ಅನುವಾದದೊಂದಿಗೆ ಶ್ರೀಮನ್ನ್ಯಾಯಸುಧೆಯ ವಿಷಯ ವಿವರಣವನ್ನು ಸಾಮಾನ್ಯರಿಗೆ ತಿಳಿಯುವಂತೆ ಸಂಗ್ರಹಿಸಿರುವದು ಇದರ ವೈಶಿಷ್ಟ್ಯವಾಗಿದೆ. ಗುರುಮುಖದಿಂದ ಅಧ್ಯಯನ ಮಾಡಿದ ಸಾಮಾನ್ಯ ಜನರಿಗೆ ಶ್ರೀಮನ್ನ್ಯಾಯಸುಧೆಯ ಸಾರವನ್ನು ಪುನಃ ಪುನಃ ಗ್ರಹಿಸಲು ಅನುಕೂಲವಾಗುವಂತೆ ಮಾಡಿದ ಶ್ಲಾಘನೀಯ ಪ್ರಯತ್ನವಿದಾಗಿದೆ. ನುರಿತ ಶಿಕ್ಷಕರಾದ ಶ್ರೀ ಭೀಮಾಚಾರ್ಯ ಕರಜಗಿಯವರಿಗೆ ವಿದ್ಯಾರ್ಥಿಗಳಿಗೆ ವಿಷಯ ತಿಳಿಸಿಕೊಡುವ ಕಲೆ ಕರಗತವಾಗಿದೆ. ಜಿಜ್ಞಾಸಾಧಿಕರಣದ ಸಾರಸಂಗ್ರಹವನ್ನು ಉಣಬಡಿಸಿದ ಶ್ರೀ ಕರಜಗಿಯವರು ಪೂರ್ಣಗ್ರಂಥದ ಸಾರಸಂಗ್ರಹವನ್ನು ಮಾಡುವಂತೆ ಶ್ರೀಹರಿಯು ಅನುಗ್ರಹಿಸಲೆಂದು (ಶ್ರೀಹರಿಯನ್ನು) ಪ್ರಾರ್ಥಿಸುತ್ತೇನೆ.

ಧಾರವಾಡ
14 9-1996

**ಪಂ. ಭೀಮಸೇನಾಚಾರ್ಯ ಕಲ್ಲಾಪೂರ**
ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು,
ಜೆ.ಎಸ್.ಎಸ್.ಕಾಲೇಜ, ಧಾರವಾಡ.

● ● ● ●

(ಅ)

॥ ಶ್ರೀರಸ್ತು ॥

ಶ್ರೀಮಟ್ಟೀಕಾಕೃತ್ಪಾದರ ಶ್ರೀಮನ್ನ್ಯಾಯಸುಧಾ ಗ್ರಂಥವು ಅಪರ ಮಹಾಮೇರುಕೃತಿ, ಯುಕ್ತಮಣಿಗಳ ಮಂಜೂಷ, ಮಾಧ್ವವೇದಾಂತ ತತ್ವಗಳ ಗಣಿ ಎಂದು ವರ್ಣಿಸಲ್ಪಟ್ಟಿದೆ........ಪಂ. ಭೀಮಾಚಾರ್ಯ ಕರಜಗಿಯವರು ಬರೆದ 'ಶ್ರೀಮನ್ನ್ಯಾಯಸುಧಾಭಾವ ಸಂಗ್ರಹವನ್ನು ನಾನು ಓದಿ ನೋಡಿದೆ. ಅದು ಆಧುನಿಕ ಸಾತ್ವಿಕ ಸದ್ಗೃಹಸ್ಥರಿಗೆ ವೇದಾಂತಜಿಜ್ಞಾಸುಗಳಿಗೆ ಬಹಳ ಉಪಯುಕ್ತವಿದೆ. ಜಿಜ್ಞಾಸಾಧಿಕರಣದಲ್ಲಿ ಅನೇಕ ಜಟಿಲ ವಿಷಯಗಳು ಬಂದಿವೆ. ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ತಿಳಿಸಲು ಲೇಖಕರು ಮಧ್ಯೇ ಮಧ್ಯೇ ಸಂವಾದ ಪದ್ಧತಿಯನ್ನು ಅವಲಂಬಿಸಿದ್ದಾರೆ. ಸಂಕ್ಷೇಪದಲ್ಲಿ ಹೇಳುವದಾದರೆ ಪುಸ್ತಕ ಬಹಳ ಉಪಯುಕ್ತವಾಗಿದೆ. ಅನುವಾದ, ಭಾಷಾಶೈಲಿ, ವಿಷಯ ನಿರೂಪಣೆ ಇತ್ಯಾದಿ ಎಲ್ಲ ದೃಷ್ಟಿಯಿಂದ ಜಿಜ್ಞಾಸುಗಳಿಗೆ ಬಹಳ ಉಪಯುಕ್ತವಾಗಿದೆ. ಜಿಜ್ಞಾಸುಗಳು ಈ ಪುಸ್ತಕವನ್ನು ಪಡೆದು ಅವಶ್ಯವಾಗಿ ಅಧ್ಯಯನ ಮಾಡಬೇಕಾದದ್ದು........ಲೇಖಕರಿಗೆ ಅಭಿನಂದನೆಗಳು. ಶ್ರೀಹರಿಯು ಲೇಖಕರಿಗೆ ದೀರ್ಘವಾದ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ಇದೇ ರೀತಿಯಾಗಿ ಮುಂದಿನ ಅಧಿಕರಣಗಳ ಕನ್ನಡ ಅನುವಾದ ಕಾರ್ಯವನ್ನು ಬೇಗನೆ ಮಾಡಿಸಲೆಂದು ಪ್ರಾರ್ಥಿಸುತ್ತೇನೆ.

**ಪಂ. ಕೃಷ್ಣಾಚಾರ್ಯ ವಾಸುದೇವಾಚಾರ್ಯ ಪಾಚ್ಛಾಪೂರ**
ಮುಳುಂದ-ಮುಂಬೈ "ವೇದಾಂತಾಚಾರ್ಯ" "ಹಿಂದೀಸಾಹಿತ್ಯರತ್ನ"

# ಪ್ರಸ್ತಾವನೆ

**ವೇದಗಳು :** ಭಾರತೀಯ ಪರಂಪರೆಯ ಪ್ರಕಾರ ವೇದಗಳು ಅಪೌರುಷೇಯ, ನಿತ್ಯ ಮತ್ತು ಪರಮಪ್ರಮಾಣ. ಇವು ಮುಖ್ಯವಾಗಿ ಪ್ರವೃತ್ತವಾದದ್ದು ಜೀವರ ನಾನಾ ಬಗೆಯ ದುಃಖ ಪರಿಹರಿಸಿ ಅವರಿಗೆ ಅಭ್ಯುದಯ ಮತ್ತು ಆತ್ಯಂತಿಕ ಶ್ರೇಯಸ್ಸಾಗಲೆಂಬ ಉಚ್ಚ ಉದಾತ್ತ ಧ್ಯೇಯಕ್ಕೋಸ್ಕರ. "ತೇಷಾಂ ದುಃಖ ಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ." ವೇದದಲ್ಲಿ ಜ್ಞಾನ ಭಾಂಡಾರ ಅಡಗಿದೆ. ಅದು ಜ್ಞಾನದ ಖಣಿ. ಎಲ್ಲ ವಿಧದ ಜ್ಞಾನ ನೀಡುವದರಿಂದ ವೇದ ಎಂದು ಕರೆಯಲಾಗುತ್ತದೆ. "ವೇದಯಂತೀತಿ ವೇದಾಃ".

**ಬ್ರಹ್ಮಸೂತ್ರಗಳು ;** ಆದರೆ ವೇದಾರ್ಥ ಸುಲಭವಾಗಿ ತಿಳಿಯುವದಿಲ್ಲ. ಆದ್ದರಿಂದ ವೇದಾರ್ಥ ನಿರ್ಣಯಿಸಲು ಭಗವಾನ್ ನಾರಾಯಣನು ವೇದವ್ಯಾಸ ರೂಪದಿಂದ ಅವತರಿಸಿ ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯ ಮೇರೆಗೆ ವೇದಾರ್ಥ ನಿರ್ಣಾಯಕ ಬ್ರಹ್ಮ ಸೂತ್ರಗಳನ್ನು ರಚಿಸಿದನು. "ತದರ್ಥ ನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ." ಬ್ರಹ್ಮ ಎಂದರೆ ವೇದ ಅಥವಾ ವೇದಪ್ರತಿಪಾದ್ಯ ಪರಬ್ರಹ್ಮ–ವಿಷ್ಣು. ಆದ್ದರಿಂದ ಬ್ರಹ್ಮ ಸೂತ್ರಗಳೆಂದರೆ ವೇದಾರ್ಥ ನಿರ್ಣಾಯಕ ಸೂತ್ರಗಳು ಅಥವಾ ವೇದ ಪ್ರತಿಪಾದ್ಯ ಪರಬ್ರಹ್ಮನ, ವಿಷ್ಣುವಿನ ಸ್ವರೂಪವನ್ನು ನಿರ್ಧರಿಸಿ ತಿಳಿಸುವ ಸೂತ್ರಗಳು.

ಸೂತ್ರಗಳು ಯುಕ್ತ್ಯಾತ್ಮಕ ಮತ್ತು ಬಹ್ವರ್ಥಗರ್ಭಿತವಿದ್ದು ಅತಿಸಂಕ್ಷಿಪ್ತವಿರುತ್ತವೆ. "ಅಲ್ಪಾಕ್ಷರಮಸಂದಿಗ್ಧಂ ಸಾರಾವತ್ ವಿಶ್ವತೋಮುಖಂ । ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥" ಎಂದು ಸೂತ್ರದ ಲಕ್ಷಣ ಹೇಳುತ್ತಾರೆ, ಬ್ರಹ್ಮಸೂತ್ರದ ಒಂದೊಂದು ಅಕ್ಷರದ ಜ್ಞಾನಕ್ಕೆ ನೂರು ಗಾಯತ್ರೀ ಜಪದ ಫಲ ಇದೆಯೆಂದು ವರಾಹ ಪುರಾಣದಲ್ಲಿ ಹೇಳಲಾಗಿದೆ. "ಪ್ರತ್ಯಕ್ಷರಂ ತು ಲಭತೇ ಗಾಯತ್ರೀಶತಜಂ ಫಲಂ– ವರಾಹ ಪುರಾಣ. ಬ್ರಹ್ಮಸೂತ್ರಗಳ ಸಾರ ಹೀಗಿದೆ. ಭಗವಂತನು ಸ್ವತಂತ್ರ, ಗುಣಪರಿಪೂರ್ಣ, ಜಗಜ್ಜನ್ಮಾದಿಕರ್ತಾ ಮತ್ತು ದೋಷ ವಿದೂರ. ಸಜ್ಜನರು ವೈರಾಗ್ಯ–ಭಕ್ತಿ–ನಿಯತ ಧ್ಯಾನದಿಂದ ದೊರೆಯುವ ಅಪರೋಕ್ಷ ಜ್ಞಾನದಿಂದ, ಭಗವಂತನ ಪ್ರಸಾದ ಪಡೆದು ಅವನನ್ನೇ ಹೊಂದುತ್ತಾರೆ. ಒಲಿದ ಭಗವಂತನು ಅವರಿಗೆ ಸದಾ ಮಹಾನಂದ ಮತ್ತು ಭೋಗವುಳ್ಳ ಮೋಕ್ಷವನ್ನು ಕರುಣಿಸುತ್ತಾನೆ. ಭಗವಂತನ ಗುಣ, ರೂಪ, ಕ್ರಿಯೆಗಳಲ್ಲಿ ಅಭೇಧವಿದೆ. ಆತನು ಜೀವ–ಜಡರಿಂದ ಅತ್ಯಂತ ಭಿನ್ನನಿದ್ದಾನೆ. ಜೀವ, ಜಡ, ಈಶ್ವರರಲ್ಲಿ

ಪರಸ್ಪರ ಭೇದವಿದೆ. ಜೀವರಲ್ಲಿ ಈಗ ಮತ್ತು ಮೋಕ್ಷದಲ್ಲಿ ಕೂಡ ಭೇದವಿದೆ. ಎಲ್ಲ ವೇದಗಳು ಮುಖ್ಯವೃತ್ತಿಯಿಂದ ಭಗವಂತನನ್ನು ಪ್ರತಿಪಾದಿಸುತ್ತವೆ. "ಔಪನಿಷದಃ ಪುರುಷಃ"..........."ಸರ್ವೇ ವೇದಾ ಯತ್ಪದಮಾಮನಂತಿ........... ಪುರಾಣ ವಾಕ್ಯದಲ್ಲಿ ಬ್ರಹ್ಮಸೂತ್ರಗಳ ಸಾರವನ್ನು ಹೀಗೆ ಸಂಗ್ರಹಿಸಲಾಗಿದೆ.

**ಸರ್ವದೋಷವಿಹೀನತ್ವಂ ಗುಣೈಃಸರ್ವೈರುದೀರ್ಣತಾ**
**ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಚ ।**
**ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೈಕ್ಯತಾ ತಥಾ**
**ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ ||** ಪುರಾಣವಾಕ್ಯ.

**ಶ್ರೀಮನ್ಮಧ್ವಾಚಾರ್ಯರು** :– ಕಾಲಕ್ರಮದಿಂದ ಬಂದ ಶಂಕರಾಚಾರ್ಯ, ಭಾಸ್ಕರಾಚಾರ್ಯ, ರಾಮಾನುಜಾಚಾರ್ಯ ಮೊದಲಾದ ೨೧ ಭಾಷ್ಯಕಾರರು ಸೂತ್ರಕಾರರ ನಿಜವಾದ ಅಭಿಪ್ರಾಯವನ್ನು ಅರಿಯದೆ ಸೂತ್ರಗಳಿಗೆ ಅಪಾರ್ಥ ಮಾಡಿ, ತಮ್ಮ ಬುದ್ಧಿಗೆ ತೋಚಿದಂತೆ ಭಾಷ್ಯ ರಚಿಸಿದರು. ಹೀಗಾಗಿ ಸಜ್ಜನರು ಅಜ್ಞಾನಾಂಧಕಾರದಲ್ಲಿ ಸಿಕ್ಕು ತೊಳಲಾಡುತ್ತಿದ್ದರು. "ದುರ್ಭಾಷ್ಯಸಂತಮಸಸಂಶತಿತೋ ಜನೇಽಭೇ. (ಸುಮಧ್ವವಿಜಯ–||–1) ಆಗ ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನಾದ ಶ್ರೀ ಮನ್ನಾರಾಯಣನು ವಾಯುದೇವರಿಗೆ ಆಜ್ಞೆ ಮಾಡಲಾಗಿ ಅವರು ತಮ್ಮ ಮೂರನೆಯದಾದ ಮಧ್ವರೂಪದಿಂದ ಉಡುಪಿಯಲ್ಲಿ ಕ್ರಿ.ಶ. ೧೨೩೮ರಲ್ಲಿ ಅವತರಿಸಿ ಹಿಂದಿನ ೨೧ ಭಾಷ್ಯಗಳನ್ನು ಖಂಡಿಸಿ ವೇದವ್ಯಾಸರಿಗೆ ಸಮ್ಮತವಾದ ಅರ್ಥವನ್ನು ತಮ್ಮ ಸೂತ್ರಭಾಷ್ಯದಲ್ಲಿ ನಿರೂಪಿಸಿದರು. ಹಾಗೂ ಮೂಲ ಮೂವತ್ತೇಳು ಗ್ರಂಥಗಳನ್ನು ರಚಿಸಿದರು. ಈ ಗ್ರಂಥಗಳು ಅವರ ಪ್ರತೀಕವೇ (ರೂಪಮನ್ಯದಿವ). ಅವು ತತ್ವಜ್ಞಾನಕ್ಕೆ ಮೂಲ; ಯುಕ್ತಿಗೂ ಮೂಲ.

**ಅನುವ್ಯಾಖ್ಯಾನ** : ಶ್ರೀಮನ್ಮಧ್ವಾಚಾರ್ಯರು ಬ್ರಹ್ಮಸೂತ್ರಗಳ ಮೇಲೆ (i) ಭಾಷ್ಯ (ii) ಅಣುಭಾಷ್ಯ (iii) ಅನುವ್ಯಾಖ್ಯಾನ (iv) ನ್ಯಾಯವಿವರಣ ಎಂಬ ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ. "ಮಂದಬುದ್ಧಿಯುಳ್ಳ ನಮಗೆ ತಮ್ಮ ಅಗಾಧ ಗ್ರಂಥಗಳಲ್ಲಿ ಅಡಕವಾದ ಯುಕ್ತಿಗಳನ್ನು ಗ್ರಹಿಸಲು ಅಶಕ್ಯವಾಗಿದೆ. ಆದ್ದರಿಂದ ನಮಗೆ ಸ್ಪಷ್ಟವಾಗಿ ತೋರುವಂತೆ ಯುಕ್ತ್ಯಾತ್ಮಕ ಗ್ರಂಥವೊಂದನ್ನು ರಚಿಸಿರಿ. "ವ್ಯಕ್ತ ತರ್ಕತತಿಂ ಕುರು", ಎಂದು ತ್ರಿವಿಕ್ರಮ ಪಂಡಿತಾಚಾರ್ಯರು ಪ್ರಾರ್ಥಿಸಲಾಗಿ ಶ್ರೀಮದಾಚಾರ್ಯರು ಅನುವ್ಯಾಖ್ಯಾನವೆಂಬ ದಿವ್ಯಗ್ರಂಥ ರಚಿಸಿದರು. ಈ ಗ್ರಂಥದ ನಾಲ್ಕು ಅಧ್ಯಾಯಗಳನ್ನು ಗುರು

ಮಧ್ವರು ಏಕಕಾಲಕ್ಕೆ ರಚಿಸಿ ನಾಲ್ಕು ಕುಶಲ ಶಿಷ್ಯರಿಂದ ಏಕಕಾಲಕ್ಕೆ ಬರೆಯಿಸಿದರು. ಈ ಗ್ರಂಥವು ಪದ್ಯಾತ್ಮಕವಾಗಿದ್ದು ದುರ್ವಾದಿಗಳ ಗರ್ವವೆಂಬ ಪರ್ವತಕ್ಕೆ ವಜ್ರಾಯುಧದಂತೆಯೂ (ದುರ್ವಾದಿ ಗರ್ವಾದ್ರಿಪವಿಂ), ಮಾಯಾವಾದವೆಂಬ ಕತ್ತಲೆಗೆ ಸೂರ್ಯಪ್ರಕಾಶದಂತೆಯೂ (ಮಾಯಿಧ್ವಾಂತದಿವಾಕರಂ) ಹಾಗೂ ಸಜ್ಜನರಿಗೆ ಅಮೃತದಂತೆಯೂ (ಸತಾಂ ಸುಧಾಂ) ಇದೆ ಎಂದು ಸುಮಧ್ವ ವಿಜಯದಲ್ಲಿ ವರ್ಣಿಸಲಾಗಿದೆ. (xv-88)

**ನ್ಯಾಯಸುಧಾ :** ಯುಕ್ತಿಗಳು ತುಂಬಿ ತುಳುಕುವ ಪದ್ಯಾತ್ಮಕವಾದ ಅನುವ್ಯಾಖ್ಯಾನ ಗ್ರಂಥಕ್ಕೆ ಕಾಮಧುಕ್ ಮತ್ತು ಸರ್ವಜ್ಞಕಲ್ಪರಾದ ಶ್ರೀಮಜ್ಜಯತೀರ್ಥರು(1346-1388) ನ್ಯಾಯಸುಧಾ ಎಂಬ ದಿವ್ಯವ್ಯಾಖ್ಯಾನ ರಚಿಸಿದ್ದಾರೆ. ಜಯತೀರ್ಥರ ಜೀವನಚರಿತ್ರೆ ನಿಜಕ್ಕೂ ರೋಮಾಂಚನಕಾರಿ, ಕುದುರೆಯ ಮೇಲೆ ಕುಳಿತೇ ನದಿಗೆ ಬಾಯಿಹಚ್ಚಿ ಭೀಮಾ ನದಿಯ ನೀರನ್ನು ಕುಡಿಯುವದನ್ನು ಆಚೆಯ ದಂಡೆಯಲ್ಲಿದ್ದ ಅಕ್ಷೋಭ್ಯತೀರ್ಥರು ಕಂಡು "ಕಿಂ ಪಶುಃ ಪೂರ್ವದೇಹೇ" ಎಂದು ಪ್ರಶ್ನಿಸಿದೊಡನೆ, ಧೋಂಡೋಪಂತರ ಜೀವನದ ದಿಶೆಯೇ ಬದಲಾಯಿತು. ಕುದುರೆಯ ಸವಾರನೊಬ್ಬ ಪೂರ್ಣ ವಿರಕ್ತನಾಗಿ ಯತಿ–ಪುಂಗವನಾದ ! ಮುಂದೆ ಇವರು ಅಕ್ಷೋಭ್ಯತೀರ್ಥರಲ್ಲಿ ಶ್ರೀಮದಾನಂದತೀರ್ಥರ ಮೂಲ ೩೭ ಗ್ರಂಥಗಳ ಅಧ್ಯಯನ ಮಾಡಿದರು. ಇವರು ಏಕನಿಷ್ಠೆಯಿಂದ ಮಾಡಿದ ತಪಸ್ಸಿನ ಫಲವಾಗಿ ದುರ್ಗಾದೇವಿಯ (ಸರಸ್ವತಿಯ) ವಿಶೇಷಾನುಗ್ರಹ ಪಡೆದರು. ಹಾಗೂ ಜೋಳದ ನುಚ್ಚನ್ನು ತಿನ್ನುತ್ತ ಸಾಕ್ಷಿ ಪ್ರಾಣದೇವರ ಸನ್ನಿಧಿಯಲ್ಲಿ ಯರಗೋಳ ಗುಹೆಯಲ್ಲಿ ಕುಳಿತುಕೊಂಡು ಆಚಾರ್ಯರ 18 ಗ್ರಂಥಗಳಿಗೆ ಟೀಕೆಗಳನ್ನೂ 5 ಸ್ವತಂತ್ರ ಗ್ರಂಥಗಳನ್ನೂ ರಚಿಸಿದರು. ವಿದ್ಯಾರಣ್ಯರೆಂಬ ದಿಗ್ದಂತಿ ಪಂಡಿತರು ಜಯತೀರ್ಥರ ಗ್ರಂಥದ ಪ್ರತಿಭೆಗೆ ಮಾರುಹೋಗಿ ಅವರನ್ನೂ ಅವರ ಗ್ರಂಥಗಳನ್ನೂ ಆನೆಯ ಮೇಲಿಟ್ಟು ಮೆರವಣಿಗೆ ಮಾಡಿದರು. ಮುಂದೆ ಜಯತೀರ್ಥರು ಸೀತಾಸಮೇತ ಮೂಲ ರಾಮದೇವರ ಪೂಜೆ ಮಾಡುತ್ತ, ಶಿಷ್ಯರಿಗೆ ಉಪದೇಶಿಸುತ್ತ ಸಂಚಾರದಲ್ಲಿ ವಾದಿಗಳನ್ನು ಜಯಿಸುತ್ತ ದ್ವೈತ ವೇದಾಂತ ತತ್ವಗಳನ್ನು ಪ್ರಚಾರ ಮಾಡುತ್ತ ಸಜ್ಜನರನ್ನು ಉದ್ಧರಿಸಿದರು.

ಶ್ರೀ ನ್ಯಾಯಸುಧಾ ಗ್ರಂಥದಲ್ಲಿ ಮೂಲ ಅನುವ್ಯಾಖ್ಯಾನದ ಯುಕ್ತಿಗಳನ್ನು ಮತ್ತು ಆಚಾರ್ಯರ ಭಾವವನ್ನು ಬಹು ಸೊಗಸಾಗಿ ನಿರೂಪಿಸಲಾಗಿದೆ, ಅಮೃತ (ಸುಧಾ) ಸದೃಶವಾದ ಯುಕ್ತಿಗಳನ್ನು (ನ್ಯಾಯ) ಒಳಗೊಂಡ ಈ ಗ್ರಂಥಕ್ಕೆ "ನ್ಯಾಯ ಸುಧಾ" ಎಂಬ ಹೆಸರು ಅನ್ವರ್ಥಕವಾಗಿದೆ. "ಅಮೃತ ಹೇತುತ್ವೇನ ಸುಧಾರೂಪಾಃ ನ್ಯಾಯಾಃ ಯಸ್ಯಾಂ (ಸಾ) ಇತಿ ವಿಗ್ರಹಃ" –ಯಾದವಾರ್ಯರು, ಈ ಗ್ರಂಥದ ಪ್ರಾರಂಭದಲ್ಲಿ ಶ್ರಿಯಃ ಎಂದೂ, ಕೊನೆಗೆ 'ಭೂತೀಃ ಮಹಾಲಕ್ಷ್ಮೀಃ' ಎಂದೂ ಇರುವದರಿಂದ (ಶ್ರೀಕೀರ್ತನೇನ). ಈ ಗ್ರಂಥವು

ಶ್ರೀಕರ, ಸಮೃದ್ಧಿದಾಯಕ. ಎಂದರೆ ಸಕಲ ಭೌತಿಕ ಆಧ್ಯಾತ್ಮಿಕ ಸಂಪತ್ತನ್ನು ನೀಡುತ್ತದೆ. ನ್ಯಾಯಸುಧೆಯು ಟೀಕಾರಾಯರ ಮೇರುಕೃತಿ. ಅದು ಅವರ ಪ್ರಕಾಂಡ ವಿದ್ವತ್ತಿಗೆ ನಿದರ್ಶನ. ಅವರ ವಾಣಿ ಗಂಗಾ ಪ್ರವಾಹದಂತೆ ನಿರರ್ಗಳ ವಾಗಿ ಹರಿಯುತ್ತದೆ. ಪರವಾದಿಗಳ ಯುಕ್ತಿಗಳನ್ನು ಖಂಡಿಸಿ ಸ್ವಮತವನ್ನು ಸಮರ್ಥವಾಗಿ ಸ್ಥಾಪಿಸುತ್ತಾರೆ. ಆದರೆ ಅವರಿಗೆ ಎಳ್ಳಷ್ಟೂ ಅಹಂಕಾರವಿಲ್ಲ. ಗುರುಗಳಲ್ಲಿ ಅಪಾರ ಭಕ್ತಿ ಇದೆ. ಅಂತೆಯೇ ಅವರು ತಾವು ಜಗತ್ತಿನಲ್ಲಿ ಮಾನ್ಯರಾದುದಕ್ಕೆ ಶ್ರೀಮದಾನಂದತೀರ್ಥರ ವಿಶೇಷ ಕರುಣೆಯೇ ಕಾರಣವೆಂದು ವಿನಯಪೂರ್ವಕವಾಗಿ ಹೇಳಿದ್ದಾರೆ. "ಪರಂ ಶ್ರೀಮತ್ಪೂರ್ಣಪ್ರಮತಿಗುರು ಕಾರುಣ್ಯಸರಣಿಂ ಪ್ರಪನ್ನಾ ಮಾನ್ಯಾಃಸ್ಮಃ...." ಶ್ರೀಮನ್ನ್ಯಾಯ ಸುಧೆಯ ಪ್ರತಿಯೊಂದು ಅಕ್ಷರ ಮತ್ತು ಶಬ್ದ ಬಹ್ವರ್ಥಗರ್ಭಿತವಾಗಿವೆ. ಅಂತೆಯೇ ಇವರ ಮೇಲೆ ಅನೇಕ ಟಿಪ್ಪಣಿಗಳಿವೆ. ಶ್ರೀಪಾದರಾಜರು, ವ್ಯಾಸರಾಜರು, ರಘೂತ್ತಮರು, ವಿದ್ಯಾಧೀಶರು, ರಾಘವೇಂದ್ರತೀರ್ಥರು. ವಿಷ್ಣುತೀರ್ಥರು, ಯಾದವಾರ್ಯರು, ಶ್ರೀನಿವಾಸತೀರ್ಥರು, ವಿಜಯದಾಸರು, ಜಗನ್ನಾಥದಾಸರು, ಮೊದಲಾದ ವಿದ್ವನ್ಮಣಿಗಳು ಮುಕ್ತಕಂಠದಿಂದ ಜಯತೀರ್ಥರನ್ನೂ ಅವರ ಕೃತಿ ಗಳನ್ನೂ ಹೊಗಳಿದ್ದಾರೆ. ಟೀಕಾರಾಯರ ಕೃತಿಗಳಿಂದ ಅವರಿಗಿದ್ದ ಹರಿಭಕ್ತಿ, ಗುರುಭಕ್ತಿ. ವಿನಯ, ಉದ್ದಾಮಪಾಂಡಿತ್ಯ ಮೊದಲಾದವು ಸ್ಪಷ್ಟವಾಗುತ್ತವೆ. ಅವರ ಶೈಲಿ ಸುಲಲಿತ ಮತ್ತು ಭಾಷೆ ಅತಿ ಸರಳ. ಅವರ ವಿಚಾರ ಮಂಡನೆ, ವಿಷಯ ವಿವೇಚನೆ, ಯುಕ್ತಿ ಪ್ರತಿಪಾದನೆ, ಸಮುಚಿತ ದೃಷ್ಟಾಂತ,ಅಗಾಧ ವಿದ್ವತ್ತೆ ಎಲ್ಲರನ್ನೂ ಬೆರಗುಗೊಳಿಸುತ್ತವೆ. ಅಂತೆಯೇ ಶ್ರೀಮನ್ನ್ಯಾಯಸುಧಾ ಗ್ರಂಥದ ಪಠಣವು ಜೀವನದ ಧ್ಯೇಯವೆಂಬ ಲೋಕೋಕ್ತಿಯುಂಟು. "ಸುಧಾ ವಾ ಪಠ ನೀಯಾ ವಸುಧಾ ವಾ ಪಾಲನೀಯಾ".

ಶ್ರೀಮಜ್ಜಯತೀರ್ಥರ ಬಗ್ಗೆ ಅವರ ಕೃತಿಗಳ ಹಿರಿಮೆಯ ಬಗ್ಗೆ ಜ್ಞಾನ ವರೇಣ್ಯರು ಆಡಿದ ಕೆಲವೊಂದು ನುಡಿಮುತ್ತುಗಳನ್ನು (ಉದ್ಗಾರಗಳನ್ನು) ಕೆಳಗೆ ಕೊಡಲಾಗಿದೆ.

1) ಶ್ರುತಿಕ್ಷೀರಾಬ್ಧಿಮಾಮಥ್ಯ ಧೀಮಂದರಮಹೀಭೃತಾ । ಪ್ರಾಪ್ತಾ ನ್ಯಾಯ ಸುಧಾ ಯೇನ ತಂ ಜಯೀಂದ್ರಮಹಂ ಭಜೇ — ಶ್ರೀನಿವಾಸತೀರ್ಥರು

2) ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈಃ ಮಾನೈರಖಂಡಿತೈಃ
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್
—ಶ್ರೀ ವ್ಯಾಸರಾಜರು ನ್ಯಾಯಾಮೃತದಲ್ಲಿ

3) ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ
ಜಯತೀರ್ಥಾಖ್ಯತರಣಿರ್ಭಾಸತಾಂ ನೋ ಹೃದಂಬರೇ
—ಶ್ರೀ ವ್ಯಾಸರಾಜರು ಚಂದ್ರಿಕಾದಲ್ಲಿ

4) ಯದೀಯವಾಕ್ತರಂಗಾಣಾಂ ವಿಪ್ಲುಷೋ ವಿದುಷಾಂ ಗಿರಃ
—ಶ್ರೀ ಸತ್ಯಪ್ರಿಯ ತೀರ್ಥರು

5) ಸುಧಾಯಾಃ ಶ್ರೀಕರತ್ವೇ ಪಯೋಮೇಘ ಸಾಕ್ಷಿಣಃ —ವಾದಿರಾಜರು

6) ಯಸ್ಯ ವಾಕ್ ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ
—(ಶ್ರೀ ವಿಜಯೀಂದ್ರರು)

7) ಸತ್ಸೂತ್ರಾನ್ವಿತಮಧ್ವಭಾಷ್ಯವಿಲಸತ್‌ಗಾಂಡೀವ ಸಂಯೋಜಿತೈಃ
ಸನ್ನ್ಯಾಯೈಃ ಶರಭಿರರ್ದಯನ್ ಕುಸಮಯಪ್ರತ್ಯರ್ಥಿಚಕ್ರಂ ಸ್ಯದನಾನ್
ಶ್ರೀಕೃಷ್ಣೇರಿತವೇದವಾಜಿನಿಯತಶ್ರೀಮಧ್ವಶಾಸ್ತ್ರೋಲ್ಲಸತ್
ದಿವ್ಯಸ್ಯಂದನಸಂಸ್ಥಿತೋ ಜಯಮುನೀಶಾಖ್ಯಾರ್ಜುನಃ ಸ್ಯಾನ್ಮುದೇ
ವಿದ್ಯಾಧೀಶರು.

8) ಪ್ರತ್ಯಕ್ಷರಂ ಪ್ರತಿಪದಂ ಅನೇಕಾಕೂತಿಗರ್ಭಿತಾ
ಪ್ರತಿಭಾತಿ ಸುಧಾಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ.
-ರಾಘವೇಂದ್ರತೀರ್ಥರು (ಪರಿಮಳ)

9) ಟೀಕಾಗಾಂಭೀರ್ಯಮಾಹಾತ್ಮ್ಯಂ ಮರ್ಶಂ ಮರ್ಶಂ ಪುರೋಮನಃ
ನೈತಿ ತದ್ವಿಸ್ತರಭಯಾತ್ ಕರೋತ್ಯಗ್ರೇಸರಂ ಮನಃ
—ರಾಘವೇಂದ್ರರು (ಭಾವದೀಪ)

10) ಯತ್‌ಕೃಪಾಲೇಶಮಾತ್ರೇಣ ಪುರುಷಾರ್ಥಚತುಷ್ಟಯಂ
ಲಭತೇ ಮಾನುಷಾ ನೂನಂ ತಾನ್ ಜಯಾದಿಗುರೂನ್ ಭಜೇ
—ಸತ್ಯಧ್ಯಾನ ತೀರ್ಥರು (ಚಂದ್ರಿಕಾಮಂಡನ)

11) ನವವಸುಧಾಲೇಖನತೋ ಬಹುಧಾನ್ಯಸ್ಯ ಜಾಯತೇ ವೃದ್ಧಿಃ
ನವವಸುಧಾಲೇಖನತೋ ಬಹುಧಾನ್ಯಸ್ಯ ಜಾಯತೇ ವೃದ್ಧಿಃ

12) ಆಮೂಲಾಗ್ರನಿಬದ್ಧತರ್ಕಜಟಿಲಂ....ಶಾಸ್ತ್ರಂ ತಂತ್ರಚತುಷ್ಟಯಾತ್ಮಕಮಿದಂ

13) ಜಯತೀರ್ಥಕೃತೌ ಪ್ರವಣಃ ನ ಪುನರ್ಭವಭಾಗ್ ಭವತೀತಿ ಮತಿರ್ಮಮ.
—ವಿಷ್ಣುತೀರ್ಥರು

14) ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ —ಲೋಕೋಕ್ತಿ

ಹೀಗೆ ವಿದ್ವನ್ಮಣಿಗಳಿಂದ ಮುಕ್ತಕಂಠದಿಂದ ಸ್ತುತಿಸಲ್ಪಟ್ಟ ಶ್ರೀಮನ್ನ್ಯಾಯ ಸುಧಾ ಗ್ರಂಥವು ವಿಶ್ವಮಾನ್ಯವಾಗಿದೆ. ಇದರ ಅಧ್ಯಯನದಿಂದ ಜೀವನ ಸಫಲವಾಗುತ್ತದೆ. ಇದರ ಮೊದಲನೆಯ ಅಧಿಕರಣದ ವಿವರಣೆ ಈ ಗ್ರಂಥದಲ್ಲಿದೆ. ಇದರ ಸಾರಾಂಶವನ್ನು ಮುಂದೆ ಕೊಡಲಾಗಿದೆ.

**ಭೀಮಾಚಾರ್ಯ ದಾಸಾಚಾರ್ಯ ಕರಜಗಿ**
ನಿವೃತ್ತ ಪ್ರಾಧ್ಯಾಪಕರು, ಪ್ರಾಂಶುಪಾಲರು
ಸರಕಾರೀ ಶಿಕ್ಷಣ ಮಹಾವಿದ್ಯಾಲಯ ಮತ್ತು D.D P.I

# ಅರಿಕೆ

ಸರ್ವಜ್ಞಕಲ್ಪರೆಂದು ವಿಖ್ಯಾತರಾದ ಶ್ರೀಮಜ್ಜಯತೀರ್ಥರ ಮೇರು ಕೃತಿಯಾದ ಶ್ರೀಮನ್ನ್ಯಾಯಸುಧಾ ಗ್ರಂಥವು ನ್ಯಾಯ–ವ್ಯಾಕರಣ–ಮೀಮಾಂಸಾ–ವೇದಾಂತ ಎಂಬ "ತಂತ್ರ (ಶಾಸ್ತ್ರ) ಚತುಷ್ಟಯಾತ್ಮಕ"ವಾಗಿದೆ. ಅಂತೆಯೇ ನ್ಯಾಯ ವ್ಯಾಕರಣಾದಿ ಶಾಸ್ತ್ರಗಳಲ್ಲಿ ತಲಸ್ಪರ್ಶಿ ಜ್ಞಾನವಿದ್ದು ಶಮ ದಮಾದಿ ಸಂಪತ್ತಿಯುಳ್ಳವರು ಇದಕ್ಕೆ ನಿಜವಾದ ಅಧಿಕಾರಿಗಳು. ಹೀಗೆಂದ ಮಾತ್ರಕ್ಕೆ ಉಳಿದವರು ಈ ಗ್ರಂಥವನ್ನು ಅಧ್ಯಯನ ಮಾಡಬಾರದೆಂದು ತಾತ್ಪರ್ಯವಲ್ಲ. ತಕ್ಕ ಮಟ್ಟಿಗಾದರೂ ಇತರ ಶಾಸ್ತ್ರಗಳ ಸಾಮಾನ್ಯ ಪರಿಚಯವುಳ್ಳ ಸದಾಚಾರಿಗಳೂ ಭಗವನ್ನಿಷ್ಠರೂ ಆದ ಜಿಜ್ಞಾಸುಗಳು, ಶ್ರದ್ಧಾಭಕ್ತಿಪೂರ್ವಕವಾಗಿ ಗುರುಮುಖದಿಂದ ಶ್ರೀಕರವಾದ ಶ್ರೀಮನ್ನ್ಯಾಯಸುಧಾ ಗ್ರಂಥದ ಅಧ್ಯಯನ ಮಾಡಿ ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ಟೀಕಾರಾಯರ ವಾದದಲ್ಲಿರುವ ಅಮೃತ ಸದೃಶ ಯುಕ್ತಿ (ಸುಧಾಭೂತ ನ್ಯಾಯ)ಗಳ ಆಸ್ವಾದನೆ ಸವಿದು ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬಹುದು. ಈ ದೃಷ್ಟಿಯಿಂದಲೇ ನಾನು ಕಳೆದ ಮೂರು–ನಾಲ್ಕು ದಶಕಗಳಿಂದ ಗುರು ಮುಖದಿಂದ ಯಥಾಶಕ್ತಿ ಅಧ್ಯಯನ ಮಾಡಿದ್ದೇನೆ. ಕಳಕಂಡ ಘನವಿದ್ವಾಂಸರ ಚರಣಸನ್ನಿಧಿಯಲ್ಲಿ ಸುಧಾಧ್ಯಯನ ಮಾಡುವ ಸುಯೋಗ ನನಗೆ ದೊರೆತದ್ದಕ್ಕಾಗಿ ನಾನು ಅವರಿಗೆಲ್ಲ ಚಿರಋಣಿ, (i) ಬೆಳಗಾವಿಯ ಶ್ರೀಮತ್ಪೂಜ್ಯ ವೈ. ವಾ. ಪಂ. ರಾಮಾಚಾರ್ಯ ಗಲಗಲಿ (ii) ಬೆಳಗಾವಿಯ ಶ್ರೀಮತ್ಪೂಜ್ಯ ಪಂ. ದಾಮೋದರಾಚಾರ್ಯ ಉಮರ್ಜಿ(iii.iv) ಮುಂಬಯಿಯ ಶ್ರೀಮತ್ಪೂಜ್ಯ ಪಂ. ವಿದ್ಯಾಸಿಂಹಾಚಾರ್ಯ ಮಾಹುಲಿ ಮತ್ತು ಶ್ರೀಮತ್ಪೂಜ್ಯ ಅಶ್ವತ್ಥಾಮಾಚಾರ್ಯ ಮಾಹುಲಿ ಹಾಗೂ (v) ಧಾರವಾಡದ ಶ್ರೀಮತ್ಪೂಜ್ಯ ವೈ. ವಾ.ಪಂ. ಬಿಂದಾಚಾರ್ಯ ಹಾವನೂರ. ಇದಲ್ಲದೆ ನಾನು ಗುಲಬುರ್ಗಾದಲ್ಲಿರುವಾಗ ಶ್ರೀಮತ್‌ಪೂಜ್ಯ ಪಂಡಿತ ವಾದಿರಾಜಾಚಾರ್ಯ ಅಗ್ನಿಹೋತ್ರಿಯವರ ಚರಣ ಸನ್ನಿಧಿಯಲ್ಲಿ ಸರ್ವಮೂಲದ ಕೆಲವು ಗ್ರಂಥಗಳನ್ನು ಅಧ್ಯಯನ ಮಾಡಿದ್ದು ಅವರಿಂದ ನನಗಾದ ಮಹೋಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಅಧ್ಯಯನ ಮಾಡುವಾಗ ಹಾಗೂ ನಂತರ ನಾನು ಮಾಡಿಕೊಂಡ ಟಿಪ್ಪಣಿಗಳ ಸಹಾಯದಿಂದ ಮುಖ್ಯವಾಗಿ ನನ್ನ ಸ್ವಂತ ಉಪಯೋಗಕ್ಕಾಗಿ ಈ ಪುಸ್ತಕವನ್ನು ಸಿದ್ಧಗೊಳಿಸಿದ್ದೇನೆ. ಆದರೆ ಆತ್ಮೀಯ ಮಿತ್ರರ ಸಲಹೆಯ ಮೇರೆಗೆ ಅಧ್ಯಾತ್ಮ ವಿಷಯದಲ್ಲಿ ಅಭಿರುಚಿ ಇರುವ ಇತರ ಜಿಜ್ಞಾಸುಗಳಿಗೂ ನೆರವಾಗಲೆಂದು ಈ ಪುಸ್ತಕವನ್ನು ಪ್ರಕಟಿಸಿದ್ದೇನೆ.

ಇದರಲ್ಲಿ ಮೊದಲು ಮೂಲ ಅನುವ್ಯಾಖ್ಯಾನದ ಶ್ಲೋಕಗಳಿದ್ದು ನಂತರ ಅವತರಣಿಕೆ, ಅನುವಾದ, ವಿವರಣೆ ಎಂಬ ಮೂರು ವಿಭಾಗಗಳಲ್ಲಿ ಆ ಶ್ಲೋಕಗಳ ವಿವೇಚನೆ ಸುಧೋಕ್ತ ರೀತಿಯಿಂದ ಇದೆ.

ಅಲ್ಲಲ್ಲಿ ಟಿಪ್ಪಣಿಕಾರರ ಅಭಿಪ್ರಾಯವನ್ನೂ ಉಲ್ಲೇಖಿಸಲಾಗಿದೆ. ಪೂರ್ವ ಪಕ್ಷ ಮತ್ತು ಸಿದ್ಧಾಂತಗಳ ವಾದಸರಣಿ ಸುಲಭವಾಗಿ ತಿಳಿಯಲೆಂದು ಕೆಲವೆಡೆ ಸಂಭಾಷಣಾ ಪದ್ಧತಿಯನ್ನು ಅನುಸರಿಸಲಾಗಿದೆ. ಪ್ರಸಾದವಾದ, ಬಂಧ–ಸತ್ಯತ್ವ ವಾದ, ಸಿದ್ಧಾರ್ಥ ವ್ಯುತ್ಪತ್ತಿವಾದ, ವೇದ–ಪ್ರಾಮಾಣ್ಯವಾದ, ಶಕ್ತಿವಾದ ಮೊದ ಲಾದವನ್ನು ಸಾಕಷ್ಟು ವಿಸ್ತಾರವಾಗಿಯೇ ನಿರೂಪಿಸಲಾಗಿದೆ. ಆದರೆ ಮುಖ್ಯ ವಾಗಿ ಸಾಮಾನ್ಯ ಓದುಗರಿಗಾಗಿರುವ ಈ ಕಿರು ಹೊತ್ತಿಗೆಯಲ್ಲಿ ಕ್ಲಿಷ್ಟವಾದ ಅನುಮಾನಾದಿ ಪ್ರಯೋಗಗಳ ಕೂಲಂಕಷ ಚರ್ಚೆ, ದಳಕೃತ್ಯ, ವ್ಯಾಕರಣಾದಿ ಅಂಶ ಗಳ ಸ್ಪಷ್ಟೀಕರಣ ಮೊದಲಾದವು ಇಲ್ಲ. ಅದರಂತೆ ಕಥಕವಾದ, ಪಂಚಾಖ್ಯಾತಿ ವಾದಗಳ ಸ್ಥೂಲ ವಿವರಣೆ ಮಾತ್ರ ಇದೆ. ಹೆಚ್ಚು ವಿವರಗಳಿಲ್ಲ. ಓದುಗರ ಸೌಕರ್ಯಕ್ಕೋಸ್ಕರ ಪ್ರಾರಂಭದಲ್ಲಿ ಶ್ರೀಮನ್ನ್ಯಾಯಸುಧೆಯ ಮಹತ್ವ, ಶ್ರೀಮಜ್ಜಯತೀರ್ಥರು ಹಾಗೂ ಅವರ ಕೃತಿಗಳ ಬಗ್ಗೆ ಜ್ಞಾನವರೇಣ್ಯರು ತೆಗೆದ ಉದ್ಗಾರಗಳು, ಜಿಜ್ಞಾಸಾಧಿಕರಣದ ಸಾರಾಂಶ, ವಿವರವಾದ ಅನುಕ್ರಮಣಿಕೆ ಹಾಗೂ ಕೊನೆಯಲ್ಲಿ ಪಾರಾಯಣಕ್ಕಾಗಿ ಶ್ಲೋಕಗಳು ಮತ್ತು ಆರಂಭಿಕ ಓದು ಗರ ನೆರವಿಗಾಗಿ ನ್ಯಾಯಶಾಸ್ತ್ರದ ಪಾರಿಭಾಷಿಕ ಶಬ್ದಗಳ ಸುಲಭ ಸಾಮಾನ್ಯ ಪರಿಚಯ ಇವೆ. ಒಟ್ಟಿನಲ್ಲಿ ಪುಸ್ತಕವು ಸಾಮಾನ್ಯ ಓದುಗರಿಗೆ ಉಪಯುಕ್ತ ವಾಗುವಂತೆ ಎಲ್ಲ ರೀತಿಯಿಂದ ಪ್ರಯತ್ನ ಮಾಡಲಾಗಿದೆ.

ಈ ಪುಸ್ತಕದ ಲೇಖನ ಕಾರ್ಯ ಕೈಕೊಳ್ಳುವ ಮೊದಲು ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದ ತೀರ್ಥರ ಹಾಗೂ ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಮಠಾಧೀಶರಾದ ಶ್ರೀ ಶ್ರೀ ೧೦೦೮ ಶ್ರೀ ರಘುಪ್ರಿಯತೀರ್ಥರ ಅನುಮತಿಯನ್ನೂ ಅನುಗ್ರಹಪೂರ್ವಕ ಮಂತ್ರಾಕ್ಷತೆಯನ್ನೂ ಮಹಿಷಿ ಕ್ಷೇತ್ರದಲ್ಲಿ ಪಡೆದುಕೊಂಡೆನು. ಅವರೀರ್ವರ ಆಶೀರ್ವಾದದಿಂದಲೇ ಲೇಖನ ಕಾರ್ಯ ಮುಗಿದಿದೆ. ಮುಂದೆ ಇವರೀರ್ವರೂ ನನ್ನ ಪ್ರಾರ್ಥನೆಯ ಮೇರೆಗೆ ಅನುಗ್ರಹ ಸಂದೇಶ ದಯಪಾಲಿಸಿದ್ದಾರೆ. ಇದಕ್ಕೋಸ್ಕರ ಉಭಯ ಶ್ರೀಪಾದಂಗಳವರೆಗೆ ನನ್ನ ಅನಂತ ಶಿರಸಾಷ್ಟಾಂಗ ನಮಸ್ಕಾರಗಳು.

ಇದೇ ಸಂದರ್ಭದಲ್ಲಿ ಶ್ರೀಮದುತ್ತರಾದಿಮಠದ ಕಿರಿಯ ಶ್ರೀಪಾದಂಗಳವ ರಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥರು ನನ್ನನ್ನು ಪ್ರೋತ್ಸಾಹಿಸಿ ಅನು ಗ್ರಹಿಸಿದ್ದಕ್ಕಾಗಿ ಅವರಿಗೂ ನನ್ನ ಅನಂತ ಶಿರಸಾಷ್ಟಾಂಗ ಪ್ರಣಾಮಗಳು.

ಈ ಪುಸ್ತಕ ಓದಿ ತಮ್ಮ ಅಭಿಪ್ರಾಯ ಕೊಟ್ಟ ಎಲ್ಲ ವಿದ್ವಾಂಸರಿಗೆ ನಾನು ಆಭಾರಿಯಾಗಿದ್ದೇನೆ.

ಆರ್ಥಿಕ ತೊಂದರೆಯ ಮೂಲಕ ಪುಸ್ತಕ ಪ್ರಕಾಶನ ಕಾರ್ಯ ಸ್ಥಗಿತಗೊಂಡಾಗ ನಮ್ಮ ಕುಲಸ್ವಾಮಿ ಶ್ರೀ ಲಕ್ಷ್ಮೀ-ವೆಂಕಟೇಶದೇವರ ಅನುಗ್ರಹದಿಂದ ತಿರುಪತಿಯ ತಿರುಮಲ-ತಿರುಪತಿ ದೇವಸ್ಥಾನದ ಉದಾರ ಆರ್ಥಿಕ ನೆರವು ದೊರೆಯಿತು, ಇದಕ್ಕಾಗಿ ನಾನು ಟಿ. ಟಿ. ದೇವಸ್ಥಾನದ ಸಂಬಂಧಪಟ್ಟ ಅಧಿಕಾರಿಗಳಿಗೆ ಉಪಕೃತನಿದ್ದೇನೆ. ಈ ಧನಸಹಾಯ ದೊರೆತದ್ದರಿಂದ ಪುಸ್ತಕವನ್ನು ಪ್ರಕಟಿಸಲು ಮತ್ತು ಓದುಗರಿಗೆ ಅನುಕೂಲವಾಗಲೆಂದು ಅದರ ಬೆಲೆಯನ್ನು ಸಾಕಷ್ಟು ತಗ್ಗಿಸಲು ಶಕ್ಯವಾಗಿದೆ. ಇಷ್ಟಾದರೂ ಈ ಬೆಲೆ ಭಾರವೆನಿಸಿದಲ್ಲಿ ಪಾಠಶಾಲಾ ವಿದ್ಯಾರ್ಥಿಗಳಿಗೆ ಅವರು ತಿಳಿಸಿದಲ್ಲಿ ಅರ್ಧ ಬೆಲೆಗೆ ಪುಸ್ತಕಗಳನ್ನೊದಗಿಸಲಾಗುವದು.

ಈ ಪುಸ್ತಕದ ಹಸ್ತಪ್ರತಿಯನ್ನು ಸಿದ್ಧಗೊಳಿಸುವಲ್ಲಿ ಮತ್ತು ನಂತರ ಪ್ರೂಫ್ ತಿದ್ದುವಲ್ಲಿ ನೆರವಾದ ಚಿ॥ ವಿನಯಾ (ರಾಧಾ) ಹರವಾಳಕರ ಹಾಗೂ ಶ್ರೀ ಎಸ್. ಎಚ್. ಜೋಶಿಯವರ ಸಹಾಯವನ್ನು ಈ ಸಂದರ್ಭದಲ್ಲಿ ನೆನೆಯ ಬಯಸುತ್ತೇನೆ. ಅದರಂತೆ ಈ ಪುಸ್ತಕವನ್ನು ಅಂದವಾಗಿ ಅಲ್ಪಕಾಲದಲ್ಲಿ ಮುದ್ರಿಸಿಕೊಟ್ಟ ಸಾಧನಾ ಪ್ರೆಸ್ಸಿನ ಒಡೆಯರಾದ ಶ್ರೀ ಆನಂದ ವೈದ್ಯ ಮತ್ತು ಅವರ ಸಿಬ್ಬಂದಿಯವರಿಗೆ ನನ್ನ ಧನ್ಯವಾದಗಳು. ಬಹಳ ಜಾಗ್ರತೆ ವಹಿಸಿದ್ದರೂ ಕಣ್ತಪ್ಪಿ ಮುದ್ರಣ ದೋಷಗಳು ಉಳಿದಿರಬಹುದು. ಇದಕ್ಕಾಗಿ ಸಹೃದಯ ಓದುಗರ ಕ್ಷಮೆ ಕೋರುತ್ತೇನೆ. ಅತಿಗಹನವಾದ ನ್ಯಾಯಸುಧೆಯ ಭಾವನಿರೂಪಣೆಯಲ್ಲಿ ಸಂಭವಿಸಿರಬಹುದಾದ ಸ್ಖಲನಗಳನ್ನು ಸುಜ್ಞರು ತಿಳಿಸಿದಲ್ಲಿ ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ಸರಿಪಡಿಸಿಕೊಳ್ಳಲಾಗುವದು. ಪುಸ್ತಕ ಲೇಖನದ ಈ ಅಳಿಲು ಸೇವೆಯಿಂದ ನಮ್ಮ ಕುಲಸ್ವಾಮಿ ಶ್ರೀ ಲಕ್ಷ್ಮೀ-ವೆಂಕಟೇಶ ದೇವರು ಸುಪ್ರಸನ್ನರಾಗಲಿ.

**ಶ್ರೀ ಕೃಷ್ಣಾರ್ಪಣಮಸ್ತು.**

ಸಜ್ಜನ ವಿಧೇಯ,

ಧಾರವಾಡ
14-9-1996

**ಭೀಮಾಚಾರ್ಯ ದಾಸಾಚಾರ್ಯ ಕರಜಗಿ**
ನಿವೃತ್ತ ಪ್ರಾಧ್ಯಾಪಕರು, ಪ್ರಾಂಶುಪಾಲರು,
ಸರಕಾರೀ ಶಿಕ್ಷಣ ಮಹಾವಿದ್ಯಾಲಯ ಮತ್ತು ಡಿ.ಡಿ.ಪಿ.ಆಯ್.

## ಪ್ರಾರ್ಥನೆ

ಶ್ರೀಮನ್ಮಧ್ವಕೃತಾಂತಸಂಗತ ಕೃತೀರ್ಯನ್ನಿರ್ಮಿತಾತ್ಮಧ್ಯುತಾಃ
ಸರ್ವೇಧೀತ್ಯ ಸತೀರ್ಹಿ ತತ್ಪ್ರವಚನಾಸಕ್ತ್ಯಾ ರಮಂತೇಽನಿಶಂ
ಸೋಽಸೌ ಶ್ರೀ ಜಯತೀರ್ಥಪೂಜ್ಯಚರಣಃ ಸ್ವಗ್ರಂಥಸಕ್ತಿಂ ಪರಾಂ
ಅಸ್ಮಿನ್ಜನ್ಮನಿ ಯಾವದಾಯುರಖಿಲಾನ್ ವಿಘ್ನಾನ್ನಿವಾರ್ಯಾದಿಶೇತ್

# ಜಿಜ್ಞಾಸಾಧಿಕರಣದ ಸಾರಾಂಶ

"ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" (ಬಳಿಕ ಬ್ರಹ್ಮ ವಿಷಯಕ ವಿಚಾರ ಮಾಡಬೇಕು.) ಎಂಬ ಮೊದಲನೆಯ ಬ್ರಹ್ಮಸೂತ್ರದ ಸುದೀರ್ಘ ವಿವೇಚನೆಯುಳ್ಳ ಜಿಜ್ಞಾಸಾಧಿಕರಣವು ಸಕಲ ಶಾಸ್ತ್ರದ ಸಾರ ರೂಪವಾಗಿದೆ. ಗಾತ್ರದಲ್ಲಿ ಇದು ಸಮಗ್ರ ನ್ಯಾಯಸುಧೆಯ ಏಳನೆಯ ಒಂದು ಭಾಗವಾಗಿದ್ದು ಇದರಲ್ಲಿ ಅನೇಕ ಮಹತ್ವದ ವಿಷಯಗಳು ಚರ್ಚಿಸಲ್ಪಟ್ಟಿವೆ. ಇವುಗಳಲ್ಲಿ ಕೆಲವೊಂದನ್ನು ಮಾತ್ರ ಕೆಳಗೆ ಸಂಕ್ಷೇಪದಲ್ಲಿ ನಿರೂಪಿಸಲಾಗಿದೆ.

**ಮಂಗಲ ಶ್ಲೋಕಗಳು :** "ಕಾಮಧುಕ್" ಮತ್ತು "ಸರ್ವಜ್ಞ ಕಲ್ಪ"ರೆಂದು ವಿಖ್ಯಾತರಾದ ಶ್ರೀಮಜ್ಜಯತೀರ್ಥರು ಶ್ರೀಮನ್ನ್ಯಾಯಸುಧಾ ಗ್ರಂಥದ ಆರಂಭದಲ್ಲಿ ಆರು ಮಂಗಲಾಚರಣ ಶ್ಲೋಕಗಳಲ್ಲಿ ಶ್ರೀಹರಿ. ಶ್ರೀವೇದವ್ಯಾಸರು, ಶ್ರೀಮದಾನಂದ ತೀರ್ಥರು, ಭಾರತೀದೇವಿ, ಶ್ರೀ ಪದ್ಮನಾಭತೀರ್ಥರು ಮತ್ತು ಸಾಕ್ಷಾತ್ ಗುರುಗಳಾದ ಶ್ರೀಮತ್ ಅಕ್ಷೋಭ್ಯತೀರ್ಥರನ್ನು ಕ್ರಮವಾಗಿ ನಮಸ್ಕರಿಸಿ ಶ್ರೀಮದಾಚಾರ್ಯರ ಅನುವ್ಯಾಖ್ಯಾನ ಗ್ರಂಥಕ್ಕೆ ವ್ಯಾಖ್ಯಾನವನ್ನು (ಟೀಕೆಯನ್ನು) ಆರಂಭಿಸುತ್ತಾರೆ, "ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ" ಎಂದು ೭ನೇ ಶ್ಲೋಕದಲ್ಲಿ ಹೇಳುತ್ತಾರೆ. ಎಂದರೆ ದುಂಬಿಯು ಹೂವಿನ ಸುತ್ತುಮುತ್ತಲೂ ಸಂಚರಿಸುತ್ತ ಅದರ ಮಕರಂದವನ್ನು ಪುನಃ ಪುನಃ ಹೀರುವಂತೆ ನನ್ನ ಮನಸ್ಸು ಅನುವ್ಯಾಖ್ಯಾನವೆಂಬ ಕಮಲದ ಸೌರಭವನ್ನು ಪರಿಪರಿಯಿಂದ ಹೀರುತ್ತದೆ ಎಂದು ಭಾವ. ಎಂದರೆ ಆಚಾರ್ಯರ ಮೂಲ ಶ್ಲೋಕಕ್ಕೆ ಒಂದಲ್ಲದಂತೆ ಅನೇಕ ರೀತಿಯಿಂದ ಟೀಕಾರಾಯರು ಅರ್ಥವಿವರಿಸುತ್ತಾರೆ. ಮುಂದೆ ೮ನೆಯ ಶ್ಲೋಕದಲ್ಲಿಯು ಸ್ವಾಹಂಕಾರ ಖಂಡನೆಯಿಂದ ಅವರಲ್ಲಿದ್ದ ವಿನಯ ಮತ್ತು ಗುರುಭಕ್ತಿ ಸ್ಪಷ್ಟವಾಗುತ್ತವೆ. ತಾವು ಜಗನ್ಮಾನ್ಯರಾದುದಕ್ಕೆ ಕಾರಣ ತಮ್ಮಲ್ಲಿಯ ವ್ಯಾಕರಣ–ನ್ಯಾಯ–ಮೀಮಾಂಸಾದಿ ಪಾಂಡಿತ್ಯ ಸರ್ವಥಾ ಅಲ್ಲವೆಂದೂ, ಆಚಾರ್ಯಮಧ್ವರ ವಿಶೇಷಕೃಪೆ, ಅವರು ಹಾಕಿಕೊಟ್ಟ ಮಾರ್ಗದ ಅನುಸರಣೆಯೇ, ಕಾರಣವೆಂದು ಅತಿ ನಮ್ರವಾಗಿ ಹೇಳಿದ್ದಾರೆ. "ಪರಂ ಶ್ರೀಮತ್ಪೂರ್ಣ ಪ್ರಮತಿ ಗುರುಕಾರುಣ್ಯ ಸರಣಿಂ ಪ್ರಪನ್ನಾ ಮಾನ್ಯಾಃ ಸ್ಮಃ".

**ಅನುವ್ಯಾಖ್ಯಾನದ ಮಂಗಲಾಚರಣೆ :** ಅನುವ್ಯಾಖ್ಯಾನ ಗ್ರಂಥವು ಶ್ರೀಮನ್ನಾರಾಯಣನ ನತಿ (ನಮಸ್ಕಾರ)– ಸ್ತುತಿರೂಪ ಮಂಗಲಪದ್ಯದಿಂದ (ನಾರಾಯಣಂ .......ಸನ್ನಮಾಮಿ) ಆರಂಭವಾಗುತ್ತದೆ. ಇದಕ್ಕೆ ಟೀಕಾರಾಯರು ಏಳು ರೀತಿ

ಯಿಂದ ವ್ಯಾಖ್ಯಾನ ಮಾಡಿದ್ದಾರೆ. ಆಚಾರ್ಯರಿಗೆ ಸ್ವತಃ ವಿಘ್ನಗಳಿಲ್ಲದಿದ್ದರೂ ಶಿಷ್ಟ ಪರಂಪರೆಗನುಸಾರವಾಗಿ ಶಿಷ್ಯ ಶಿಕ್ಷಾರ್ಥ ಎಾಗಿ ಮಂಗಲವನ್ನಾಚರಿಸಿ ಅದನ್ನು ಗ್ರಂಥದಲ್ಲಿ ಸೇರಿಸಿದ್ದಾರೆ. ಶ್ರೀಮನ್ನಾರಾಯಣನು ಮುಖ್ಯವಾಗಿ ವಿಶಿಷ್ಟ (ಸರ್ವೋತ್ತಮ), ಅಧಿಕೃತ (ಗ್ರಂಥಪ್ರತಿಪಾದ್ಯ) ಮತ್ತು ಇಷ್ಟ (ಮನೋಭೀಷ್ಟ) ಹೀಗೆ ಮೂರು ಬಗೆಯ ದೇವತೆಯಾಗಿದ್ದರಿಂದ ಅತ್ಯಂತ ವಂದ್ಯನು. ಆದ್ದರಿಂದ ಆಚಾರ್ಯರು ಅವನಿಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿದ್ದು ಅತ್ಯಂತ ಉಚಿತವೆಂದು ಟೀಕಾರಾಯರು ನಿರೂಪಿಸಿದ್ದಾರೆ. ಮುಂದೆ ೨ನೇ ಶ್ಲೋಕದಲ್ಲಿ ಆಚಾರ್ಯರು ಇದೇ ನಾರಾಯಣನಿಗೆ ಗುರುತ್ವೇನ ನಮಸ್ಕಾರ ಮಾಡಿ ಪರವಿದ್ಯಾ ಎಂದು ಕರೆಯಲ್ಪಡುವ ನಿರ್ಣಾಯಕ ಬ್ರಹ್ಮಸೂತ್ರಗಳಿಗೆ ತಾವೇ ಪುನಃ (ಸ್ಪಷ್ಟೀಕರಣಕ್ಕಾಗಿ) ವ್ಯಾಖ್ಯಾನ ಮಾಡುವದಾಗಿ ಪ್ರತಿಜ್ಞೆ ಮಾಡುತ್ತಾರೆ.

**ಬ್ರಹ್ಮಸೂತ್ರ ಪ್ರಾಮಾಣ್ಯ :** "ವ್ಯಾಖ್ಯಾಂ ಕರೋಮ್ಯಸ್ಪಷಿ ಚಾಹಮೇವ" ಎಂದು ೨ನೇ ಶ್ಲೋಕದಲ್ಲಿ ಪ್ರತಿಜ್ಞೆ ಮಾಡಿದರೂ ನೇರವಾಗಿ ವ್ಯಾಖ್ಯಾನವನ್ನಾರಂಭಿಸದೆ ಶ್ಲೋಕ 3, 4, 5, 6ರಲ್ಲಿ ಬ್ರಹ್ಮಸೂತ್ರ ಪ್ರಾಮಾಣ್ಯ ಸ್ಥಾಪಿಸುತ್ತಾರೆ. ಪರಿಮಳಾಚಾರ್ಯರು ಹೇಳಿದಂತೆ, ಯಾವದೇ ಗ್ರಂಥದ ಅಧ್ಯಯನವನ್ನಾರಂಭಿಸುವಾಗ ಅದರ ಪ್ರಾಮಾಣ್ಯ ಸಂದೇಹ ಮತ್ತು ವಿಷಯ ಪ್ರಯೋಜನಾದಿ ಅನುಬಂಧ ಚತುಷ್ಟಯದ ಸಂದೇಹ ಬರುತ್ತವೆ. ೨ನೇ ಸಂದೇಹವನ್ನು ಸೂತ್ರಕಾರರೇ ಅತಃ ಶಬ್ದದಿಂದ ಪರಿಹರಿಸಿದ್ದರಿಂದ ಪ್ರಾಮಾಣ್ಯ ಸಂದೇಹವನ್ನು ಆಚಾರ್ಯರು ಮೊದಲು ಪರಿಹರಿಸುತ್ತಾರೆ, ಬ್ರಹ್ಮಸೂತ್ರಗಳು ಅತ್ಯಂತ ಪ್ರಮಾಣ. ಪರವಿದ್ಯಾ ಎನಿಸಿದ ಬ್ರಹ್ಮಸೂತ್ರಗಳನ್ನು ಜಗದ್ಗುರುಗಳಿಗೆ ಗುರುಗಳಾದ ಶ್ರೀ ವೇದವ್ಯಾಸರು ರಚಿಸಿ, ಬ್ರಹ್ಮಾದಿ ದೇವತೆಗಳಿಗೆ ಮೋಕ್ಷದ ಸಲುವಾಗಿ ಉಪದೇಶಿಸಿದ್ದರಿಂದ ಈ ಸೂತ್ರಗಳಿಗೆ ಆಪ್ತಿ ಮೂಲಕ ಪ್ರಾಮಾಣ್ಯವಿದೆ. ಅಲ್ಲದೆ ಇವುಗಳಿಗೆ ಶ್ರುತಿ–ಸಂವಾದ, ಯುಕ್ತಿ ಸಂವಾದಗಳಿರುವದರಿಂದ ಬ್ರಹ್ಮಸೂತ್ರಗಳು ಅತ್ಯಂತ ಪ್ರಮಾಣ. (ಪ್ರಮಾಣತಮಂ). ಇವುಗಳಿಗೆ ಸಮಾನವಾದ ಬೇರೊಂದು ಶಾಸ್ತ್ರವಿಲ್ಲ. ಬ್ರಹ್ಮಸೂತ್ರಗಳಿಗೆ ಮೂರು ಬಗೆಯ ಮಹತ್ ಪ್ರಾಮಾಣ್ಯವಿರುವದರಿಂದ ಅವುಗಳಲ್ಲಿ ಶೀಘ್ರ ನಿಃಶಂಕ ಪ್ರವೃತ್ತಿ ಹುಟ್ಟುತ್ತದೆ.

**ಸೂತ್ರಕಾರರಿಂದ ಮಂಗಲ :** ಮಂಗಲಾಚರಣೆ ಇಲ್ಲವಾದ್ದರಿಂದ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ ಮಾಡುವದು ಅಯುಕ್ತ ಎಂಬ ಆಕ್ಷೇಪವನ್ನು 8ನೇ ಶ್ಲೋಕದಿಂದ ಪರಿಹರಿಸುತ್ತಾರೆ. ಪ್ರಥಮ ಸೂತ್ರದ ಪ್ರಾರಂಭದಲ್ಲಿಯೇ ಓಂ ಮತ್ತು ಅಥ ಶಬ್ದಗಳಿಂದ ಸೂತ್ರಕಾರರು ಮಂಗಲ ಆಚರಿಸಿದ್ದಾರೆ. ಮಂಗಲದ ಉದ್ದೇಶ ನಿರ್ವಿಘ್ನ ಪರಿಸಮಾಪ್ತಿ, ಪ್ರಸಿದ್ಧಿ ಮುಂ. ಓಂ ಮತ್ತು ಅಥ ಶಬ್ದಗಳು ಸ್ವರೂಪತಃ ಮಂಗಲಕರವಿದ್ದು, ಶಂಖ–ವೀಣಾ–ವೇಣು ಧ್ವನಿಯಂತೆ ಶ್ರವಣ ಮಾತ್ರದಿಂದ ಮಂಗಲಕರವಾಗಿವೆ. ಬ್ರಹ್ಮಸೂತ್ರಗಳು ಅವಾಂತರ ವೇದ ವಿದ್ಯೆಯಾದ್ದ

ರಿಂದ ಅವುಗಳಿಂದ ಅದೃಷ್ಟ ಹುಟ್ಟಲು, ಆದ್ಯಂತದಲ್ಲಿ ಓಂಕಾರವನ್ನು ಉಚ್ಚರಿಸುತ್ತಾರೆ, ಇದಕ್ಕೆ "ಸ್ರವತ್ಯನೋಂ ಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ" ಎಂಬುದೇ ಪ್ರಮಾಣ.

**ಅನುಬಂಧ ಚತುಷ್ಟಯ :** ಶಾಸ್ತ್ರಕ್ಕೆ ವಿಷಯ–ಪ್ರಯೋಜನ–ಅಧಿಕಾರಿ–ಪರಸ್ಪರ ಸಂಬಂಧ ಎಂಬ ಅನುಬಂಧ ಚತುಷ್ಟಯವಿದ್ದರೆ ಮಾತ್ರ ಅದು ಆರಂಭಣೀಯ. ಆದರೆ ಇಲ್ಲಿ ಅವಾವೂ ಇಲ್ಲ ಎಂದು ಪೂರ್ವಪಕ್ಷಿಯ ವಾದ. ಹೇಗೆಂದರೆ, ಜಡ ಶಾಸ್ತ್ರಕ್ಕೆ ವಿಷಯವಲ್ಲ. ಏಕೆಂದರೆ ಜಡಜ್ಞಾನ ಬೇರೆ ಶಾಸ್ತ್ರಗಳಿಂದಾಗುತ್ತದೆ. ಜೀವನ ಬಗ್ಗೆ ನಾನು ನಾನು ಎಂಬ ನಿಶ್ಚಿತ ಜ್ಞಾನವಿರುವದರಿಂದ ಅವನು ವಿಷಯವಾಗಲಾರನು. ಏಕೆಂದರೆ ಸಂದಿಗ್ಧವಾದುದೇ ವಿಷಯ. ಇನ್ನು ಬ್ರಹ್ಮನೂ ವಿಷಯ ಅಲ್ಲ. ಏಕೆಂದರೆ ಬ್ರಹ್ಮ ಎಂದರೆ ಜೀವ. ಜೀವಜ್ಞಾನದಿಂದ ಇಷ್ಟ ಪ್ರಾಪ್ತಿ ಅನಿಷ್ಟ ನಿವೃತ್ತಿರೂಪ ಯಾವ ಪ್ರಯೋಜನವೂ ಇಲ್ಲ. ಹೀಗೆ ಪ್ರಯೋಜನ ಇಲ್ಲವಾದ್ದರಿಂದ ಅದನ್ನು ಬಯಸುವ ಅಧಿಕಾರಿಯೂ ಇಲ್ಲ. ವಿಷಯ ಪ್ರಯೋಜನ ಅಧಿಕಾರಿಗಳಿಲ್ಲವಾದ್ದರಿಂದ ಪರಸ್ಪರ ಸಂಬಂಧವೂ ಇಲ್ಲ. ಆದ್ದರಿಂದ ಶಾಸ್ತ್ರವು ಆರಂಭಣೀಯವಲ್ಲ. ಆದರೆ ಈ ವಾದ ಅಯುಕ್ತ. ಜೀವ–ಜಡ ಶಾಸ್ತ್ರಕ್ಕೆ ವಿಷಯವಾಗದಿದ್ದರೂ ಜೀವ–ಜಡರಿಂದ ಅತ್ಯಂತ ಭಿನ್ನನಾದ ಈಶ್ವರನು ಶಾಸ್ತ್ರಕ್ಕೆ ವಿಷಯ. ಈಶ್ವರ ಅಥವಾ ಬ್ರಹ್ಮ ಎಂದರೆ ಜೀವ ಅಲ್ಲ. ಪ್ರಥಮಸೂತ್ರದ ಪ್ರಾರಂಭದಲ್ಲಿದ್ದ ಓಂಕಾರವು ಗುಣಪೂರ್ಣತ್ವವಾಚಕವಿದ್ದು ಅದು ಭಗವಂತನು ಗುಣಪರಿಪೂರ್ಣನೆಂದು ಹೇಳುತ್ತದೆ. "ಓತತ್ವವಾಚೀ ಹಿ ಓಂಕಾರಃ ವಕ್ತ್ಯಸೌ ತದ್ಗುಣೋತತಾಂ". ಇಂತಹ ಈಶ್ವರನ ಬಗ್ಗೆ, ಪರಬ್ರಹ್ಮನ ಬಗ್ಗೆ ಸಂಶಯವಿರುವದರಿಂದ ಅವನು ಶಾಸ್ತ್ರಕ್ಕೆ ವಿಷಯ ಆಗಿದ್ದಾನೆ. ಜಿಜ್ಞಾಸಾ ಎಂದರೆ ತಿಳಿಯಬೇಕೆಂಬ ಇಚ್ಛೆ (ಜ್ಞಾತುಮಿಚ್ಛಾ) ಅಲ್ಲ. ಏಕೆಂದರೆ ಇಚ್ಛೆಯನ್ನು ವಿಧಿಸಲು ಬರುವದಿಲ್ಲ (ವಿಧೇಯವಲ್ಲ). ಇದರಂತೆ ಜ್ಞಾನವನ್ನೂ ವಿಧಿಸಲು ಬರುವದಿಲ್ಲ. ಏಕೆಂದರೆ ದುರ್ಗಂಧಾದಿ ಜ್ಞಾನ ನಾವು ಅಪೇಕ್ಷಿಸದಿದ್ದರೂ ಆಗುತ್ತದೆ, ಆದ್ದರಿಂದ ಜಿಜ್ಞಾಸಾ ಎಂದರೆ ಜ್ಞಾನೇಚ್ಛೆಗಳ ನಡುವೆ ಇರುವ ವಿಚಾರ. ಬ್ರಹ್ಮ ಮೀಮಾಂಸಾ ಶಾಸ್ತ್ರಕ್ಕೆ ಮೋಕ್ಷವೇ ಪ್ರಯೋಜನ. ಅದನ್ನಪೇಕ್ಷಿಸುವ ಜೀವ ಅಧಿಕಾರಿ. ಮೂರರಲ್ಲಿ ಪರಸ್ಪರ ಸಂಬಂಧವಿದೆ. ಹೀಗೆ ಅನುಬಂಧ ಚತುಷ್ಟಯವಿರುವದರಿಂದ ಶಾಸ್ತ್ರ ಆರಂಭಣೀಯ.

**ಪ್ರಸಾದವಾದ :** ಮೋಕ್ಷ ಎಂದರೆ ಬಂಧ ನಿವೃತ್ತಿ. "ಬಂಧಕೋ ಭವಪಾಶೇವ ಭವಪಾಶಾಚ್ಚ ಮೋಚಕಃ" ಎಂಬ ಪ್ರಮಾಣಾನುಸಾರವಾಗಿ ಮೋಕ್ಷಕ್ಕಾಗಿ ಬಂಧಕನಾದ ಭಗವಂತನ ಅನುಗ್ರಹ, ಪ್ರಸಾದ ಅವಶ್ಯ. ಭವಪಾಶದಿಂದ ಕಟ್ಟುವ ಪರಮಾತ್ಮನೇ ಅದರ ಮೋಚಕ ಎಂಬುದು ಸುಸಂಗತ. ಪರಮಾತ್ಮನೇ ತನ್ನ

ಇಚ್ಛೆಯಿಂದ, ತನ್ನ ಅದ್ಭುತ ಶಕ್ತಿಯಿಂದ, ತನ್ನ ಅಧೀನವಾದ ಪ್ರಕೃತಿಯಿಂದ ಜೀವನನ್ನು ಆಚ್ಛಾದಿಸಿ ಅವನಿಗೆ ರಾಗ ದ್ವೇಷಾದಿಗಳನ್ನು ಹುಟ್ಟಿಸುತ್ತಾನೆ, ಇದರಿಂದ ಜೀವನಿಗೆ ತನ್ನಲ್ಲಿ ಇಲ್ಲದ ಕರ್ತೃತ್ವಾದಿ ಭ್ರಮ ಹಾಗೂ ತನ್ಮೂಲಕ ದುಃಖಾದಿಗಳುಂಟಾಗುತ್ತವೆ. ಹೀಗೆ ಸಂಸಾರಬಂಧ ಈಶ್ವರಾಧೀನವಾದುದರಿಂದ ಅವನೇ ಅದರ ಮೋಚಕ. ಆದ್ದರಿಂದ ಭವಬಂಧ ಅನಾದಿಯಾದರೂ ಅದು ಕಳಚಿ ಮೋಕ್ಷದೊರೆಯುವದು ಭಗವಂತನ ಪ್ರಸಾದದಿಂದ. ಯಮೇವ ಏಷ ವೃಣುತೇ ತೇನ ಲಭ್ಯಃ" ವರಣಂ ತು ಪ್ರಸಾದ ಏವ—ಸುಧಾ.

**ಅಧ್ಯಾಸ ಭಾಷ್ಯ ಅಸಂಗತ :** ಈ ವರೆಗೆ ತಮ್ಮ ಮತದಂತೆ ಸೂತ್ರದ ವ್ಯಾಖ್ಯಾನ ಮಾಡಿ ಈಗ ಅದರ ಪರಿಶುದ್ಧಿಗಾಗಿ, ಎಂದರೆ ಭಗವಂತನ ಪ್ರಸಾದ ದಿಂದಲೇ ಮೋಕ್ಷವೆಂಬ ಸಿದ್ಧಾಂತವು ಶ್ರೋತೃಗಳ ಮನಸ್ಸಿನಲ್ಲಿ ಸ್ಥಿರವಾಗಿ ಉಳಿ ಯುವದಕ್ಕೋಸ್ಕರ, ಬೇರೆಯವರ ಅಪವ್ಯಾಖ್ಯಾನವನ್ನು ದೂಷಿಸುತ್ತಾರೆ. ಮಾಯಾವಾದಿಗಳ ಪ್ರಕಾರ, "ನಾನು ಮಾಡುತ್ತೇನೆ, ತಿನ್ನುತ್ತೇನೆ" ಎಂಬ ಕರ್ತೃತ್ವ-ಭೋಕ್ತೃತ್ವ ರಾಗ-ದ್ವೇಷ, ಸುಖ-ದುಃಖಾದಿ ಲಕ್ಷಣವುಳ್ಳ ಸಂಸಾರ ಬಂಧವು, ಸಕಲ ಜಗತ್ತು ಮಿಥ್ಯಾ (ಸುಳ್ಳು). ಶಿಂಪಿನಲ್ಲಿ ಬೆಳ್ಳಿಯನ್ನು ಆರೋ ಪಿಸುವಂತೆ ಬ್ರಹ್ಮನಲ್ಲಿ ಜಗತ್ತನ್ನು ಆರೋಪಿಸಲಾಗಿದೆ. ಆರೋಪಿತ ಬೆಳ್ಳಿ ಸುಳ್ಳು. ಅದು ಮುಂದೆ ಶಿಂಪಿನ ಜ್ಞಾನದಿಂದ ಬಾಧಿತವಾಗುವಂತೆ, ಬ್ರಹ್ಮಜ್ಞಾನದಿಂದ, "ಜಗತ್ತು ಸತ್ಯ, ಸಂಸಾರಬಂಧ ಸತ್ಯ" ಎಂಬ ಭ್ರಮ ಹೋಗಿ, ಎಲ್ಲ ಅನರ್ಥ ಗಳು ದೂರಾಗಿ (ಅನರ್ಥ ನಿಬರ್ಹಣಂ), ಮೋಕ್ಷ ದೊರೆಯುತ್ತದೆ. ಈ ವಾದ ವನ್ನು ಶಂಕರಾಚಾರ್ಯರು ತಮ್ಮ ಭಾಷ್ಯದ ಪ್ರಾರಂಭದಲ್ಲಿ ಹೇಳಿದ್ದಾರೆ. ಇದಕ್ಕೆ ಅಧ್ಯಾಸ ಭಾಷ್ಯ ಎನ್ನುವರು. ಅಧ್ಯಾಸ ಎಂದರೆ ಇಲ್ಲದ ವಸ್ತುವಿನಲ್ಲಿ ಇದೆ ಎಂಬ ಆರೋಪ. "ಅತಸ್ಮಿನ್ ತದಿತಿ ಪ್ರತ್ಯಯಃ" ಬೆಳ್ಳಿಯಲ್ಲದ ಶಿಂಪಿನಲ್ಲಿ ಬೆಳ್ಳಿ ಎಂಬ ಆರೋಪ. ಈ ವಾದವನ್ನು ಅವರು 3 ರೀತಿಯಿಂದ (ಪ್ರಯೋ ಜನಾಕ್ಷಿಪ್ತ, ವಿಷಯಾಕ್ಷಿಪ್ತ ಮತ್ತು ಉಪೋದ್ಘಾತ ಸಂಗತಿಗಳಿಂದ) ಸಮರ್ಥಿಸು ತ್ತಾರೆ.

ಪುಷ್ಟನಾದ ದೇವದತ್ತನು ಹಗಲು ಊಟ ಮಾಡುವದಿಲ್ಲವೆಂದರೆ ಅವನು ರಾತ್ರಿ ಊಟ ಮಾಡುತ್ತಾನೆ ಎಂಬುದು ಅರ್ಥತಃ ಸಿದ್ಧಿಸುವಂತೆ, ಶಾಸ್ತ್ರಪ್ರಯೋ ಜನವಾದ ಮೋಕ್ಷವು ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದ, ಬ್ರಹ್ಮ ಜ್ಞಾನದಿಂದ ನಿವೃತ್ತವಾಗುವ ಸಂಸಾರಬಂಧವು ಮಿಥ್ಯಾ, ಅಜ್ಞಾನ ಕಲ್ಪಿತ ಎಂದು ಒಪ್ಪಬೇಕು. ಇದಲ್ಲದೆ ನಿರ್ಗುಣ ಬ್ರಹ್ಮ, ಸಗುಣ ಬ್ರಹ್ಮವೆಂದು ದ್ವಿರೂಪ ಬ್ರಹ್ಮನನ್ನು ಒಪ್ಪಬೇಕು. ಇದುವೇ ಶಾಸ್ತ್ರದ ಸಾರ. ಸಂಸಾರಾ ವಸ್ಥೆಯಲ್ಲಿ ತೋರುವ ಕರ್ತೃತ್ವಾದಿಗಳು ಸುಖದುಃಖಾದಿಗಳು ಮಿಥ್ಯಾ,ಅಜ್ಞಾನ ಕಲ್ಪಿತವೆಂದು ಅಧ್ಯಾಸ ಭಾಷ್ಯದಲ್ಲಿ ಹೇಳಲಾಗಿದೆ.

ಆದರೆ ಈ ಬಂಧ ಮಿಥ್ಯಾತ್ವವಾದವು ನಿರಾಧಾರ ಮತ್ತು ಸ್ವಕಪೋಲ ಕಲ್ಪಿತ ವೆಂದು ಸಯುಕ್ತಿಕವಾಗಿ ನಿರಾಕರಿಸಲಾಗಿದೆ. "ಬಂಧವು ಸತ್ಯವಾದ್ದರಿಂದ (ಬಂಧಸ್ಯ ಸತ್ಯತ್ವಾತ್) ಎಂಬುದು ಅತಃ ಶಬ್ದದ ಎರಡನೆಯ ಅರ್ಥ. ಬಂಧಮಿಥ್ಯಾತ್ವದ ನಿರಾಕರಣೆ ಸ್ಥೂಲವಾಗಿ ಕೆಳಗಿನಂತೆ ಇದೆ.

(a) ಶಾಸ್ತ್ರದ ಪ್ರಯೋಜನವಾದ ಮೋಕ್ಷವು ಬೇರೆ ರೀತಿಯಿಂದ ಎಂದರೆ ವಿಷ್ಣುವಿನ ಪ್ರಸಾದದಿಂದಲೇ ಸಿದ್ಧಿಸುತ್ತದೆ, ಬೇರೆ ರೀತಿಯಿಂದ ಸಿದ್ಧಿಸ ದಿದ್ದರೆ ಮಾತ್ರ ಅರ್ಥಾಪತ್ತಿ ಪ್ರಮಾಣ ಹೇಳಬೇಕು, ಆದ್ದರಿಂದ ನೀನು (ಮಾಯಾವಾದಿ) ಹೇಳಿದ ಅರ್ಥಾಪತ್ತಿ ಪ್ರಮಾಣ (ಪ್ರಯೋಜನಾಕ್ಷಿಪ್ತ ಎಂಬುದು ಅಸಂಗತ.)

(b) ಶಾಸ್ತ್ರಕ್ಕೆ ವಿಷಯ ಬ್ರಹ್ಮ ಆಗಬೇಕಾದರೆ ದ್ವಿರೂಪ ಬ್ರಹ್ಮಕಲ್ಪನೆ ಅನವ ಶ್ಯಕ. ಸಕಲ ಗುಣಪರಿಪೂರ್ಣ ಪರಬ್ರಹ್ಮನೇ ಶಾಸ್ತ್ರಕ್ಕೆ ವಿಷಯ.

(c) ಶಾಸ್ತ್ರದ ಸಾರವೆಂದರೆ, ಬ್ರಹ್ಮನು ಗುಣಪರಿಪೂರ್ಣ, ದೋಷವಿದೂರ ಎಂಬುದು.

(d) ಕರ್ತೃತ್ವ-ಭೋಕ್ತೃತ್ವ, ಸುಖ ದುಃಖಾದಿ ರೂಪ, ಸಂಸಾರಬಂಧವು ಮಿಥ್ಯಾ ಎಂಬುದು ಅನುಭವಕ್ಕೆ, ಪ್ರತ್ಯಕ್ಷಕ್ಕೆ ವಿರುದ್ಧ, (ಪ್ರತ್ಯಕ್ಷ ವಿರೋಧತಃ).

(e) ನಿನ್ನ ಪ್ರಕಾರ ಬ್ರಹ್ಮನೊಬ್ಬನೇ ಸತ್ಯ. ಬ್ರಹ್ಮ ಭಿನ್ನವಾದುದೆಲ್ಲ ಮಿಥ್ಯಾ. ಹೀಗಾದರೆ ಬ್ರಹ್ಮಭಿನ್ನವಾದ ವೇದ ಕೂಡ ಮಿಥ್ಯಾ. ಆದ್ದರಿಂದ ಭೇದ ಸುಳ್ಳು ಎಂದು ಪ್ರತಿಪಾದಿಸಲು ನೀನು ಉದಾಹರಿಸುವ ನೇಹ ನಾನಾಸ್ತಿ ಕಿಂಚನ ಎಂಬ ಶ್ರುತಿಯೂ ಮಿಥ್ಯಾ (ಸುಳ್ಳು) ಆಗುತ್ತದೆ. ಮತ್ತು ಸುಳ್ಳಾದ ವೇದವಾಕ್ಯವು ಏನನ್ನೂ ಸಾಧಿಸಲಾರದು, ಬಂಜೆಯ ಮಗನ ವಾಕ್ಯದಂತೆ.

ಇನ್ನು ಮಿಥ್ಯಾಭೂತವಾದುದೂ ಸಾಧಕ ಎಂದು ನೀನು ಹೇಳುವದು ಪ್ರತಿವಾದಿಗಳಾದ ನಮಗೆ ಸಮ್ಮತವಿಲ್ಲ. ಇದರಿಂದಾಗಿ ಪ್ರಮಾಣ ಸತ್ಯತ್ವವನ್ನು ಒಪ್ಪದ ನೀನು ವಾದಿಯಾಗಲಾರಿ. "ಅನಂಗೀಕುರ್ವತಾಂ ವಿಶ್ವಸತ್ಯತಾಂ ತನ್ನ ವಾದಿತಾ." ಈ ಸಂದರ್ಭದಲ್ಲಿ ಟೀಕಾರಾಯರು ಕಥಕವಾದವನ್ನು ವಿಸ್ತಾರವಾಗಿ ನಿರೂಪಿಸಿ ಪ್ರಮಾಣ ಸತ್ಯತ್ವವನ್ನು ಒಪ್ಪುವದು ಅವಶ್ಯವೆಂದು ತಿಳಿಸುತ್ತಾರೆ.

**ಕಥಕವಾದ**- ವಿದ್ವಾಂಸರಲ್ಲಿ ಜರುಗುವ ವಾದ ವಿವಾದಕ್ಕೆ, ಚರ್ಚೆಗೆ, ವಿದ್ವದ್ಗೋಷ್ಠಿಗೆ ಕಥಾ ಎನ್ನುವರು. ಇದು ವಾದ-ಜಲ್ಪ-ವಿತಂಡವೆಂದು ಮೂರು ವಿಧ. ಕಥಾ ನಡೆಯಲಿಕ್ಕೆ ಪ್ರಮಾಣಾದಿಗಳು ಸತ್ಯವಿರಬೇಕಿಲ್ಲ ಎಂದು ಖಂಡನ ಖಂಡ ಖಾದ್ಯಕಾರನಾದ ಶ್ರೀಹರ್ಷನು ಪ್ರತಿಪಾದಿಸುತ್ತಾನೆ. ಆದರೆ ಇದನ್ನು ಟೀಕಾ ರಾಯರು ಸಯುಕ್ತಿಕವಾಗಿ ನಿರಾಕರಿಸುತ್ತಾರೆ. ಪ್ರಮಾಣಗಳನ್ನಾಧರಿಸಿಯೇ

ವಾದಕಥೆ ನಡೆಯುವದರಿಂದ ಕಥೆಯ ಕಾರಣವಾದ ಪ್ರಮಾಣಗಳು ಸತ್ಯವಿರಬೇಕು. ಪ್ರಮಾಣಗಳ ಸತ್ಯತೆಯನ್ನು ಒಪ್ಪದ ನೀನು ವಾದಿ ಅಥವಾ ಕಥಕ ಆಗಲಾರಿ ಎಂದು ಅನಿಷ್ಟ ಆಪಾದಿಸುತ್ತಾರೆ. "ವಾದಿತಾ ನ ಸ್ಯಾತ್" (ವಾದಿತಾ= ಕಥಕತಾ).

**ಸತ್ ತ್ರೈವಿಧ್ಯ :** ಮಾಯಾವಾದಿಯ ಪ್ರಕಾರ ಸತ್ಯವು ಮುಖ್ಯ ಸತ್ಯ ಮತ್ತು ಅಮುಖ್ಯ ಸತ್ಯವೆಂದು ಎರಡು ವಿಧ. ಮುಖ್ಯ ಅಥವಾ ಪಾರಮಾರ್ಥಿಕ ಸತ್ಯ ವೆಂದರೆ ಪರಬ್ರಹ್ಮ. ಅಮುಖ್ಯ ಸತ್ಯವು ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ. ವೆಂದು ಎರಡು ವಿಧ. ಅಂಬರಾದಿ ಪ್ರಪಂಚ, ಜಗತ್ತು ವ್ಯಾವಹಾರಿಕ ಸತ್ಯ. ಏಕೆಂದರೆ ಇಲ್ಲಿ "ಕೊಡುವ, ತೆಗೆದುಕೊಳ್ಳುವ" ವ್ಯವಹಾರ ನಡೆಯುತ್ತದೆ. ಶಿಂಪಿ ನಲ್ಲಿ ತೋರುವ ಬೆಳ್ಳಿಯಿಂದ ವ್ಯವಹಾರ ನಡೆಯುವದಿಲ್ಲವಾದ್ದರಿಂದ ಅದು ಪ್ರಾತಿಭಾಸಿಕ ಸತ್ಯ, ಅರ್ಥಾತ್ ಶಿಂಪಿನ ಭ್ರಮ ಅತ್ಯಲ್ಪಕಾಲದ್ದು. ಜಗತ್ತು ವ್ಯಾವಹಾರಿಕ ಎಂದರೆ ಅದು ದೀರ್ಘಕಾಲದ ಭ್ರಮವೆಂದು ಹೇಳಬೇಕು. ಅದು ಬ್ರಹ್ಮಜ್ಞಾನದಿಂದ ನಿವೃತ್ತವಾಗುತ್ತದೆ. ಜಗತ್ತು **ಮಿಥ್ಯಾ ಎಂದರೆ** ಅದು **ಅನಿರ್ವಚನೀಯ. ಸದಸದ್ ವಿಲಕ್ಷಣ** ಎಂದು ಮಾಯಾವಾದಿಯು ಅನುಮಾನ ಪ್ರಯೋಗಿಸುತ್ತಾನೆ. "ವಿಶ್ವಂ ಸದಸದ್ವಿಲಕ್ಷಣಂ, ಜ್ಞಾನಬಾಧ್ಯತ್ವಾತ್, ಶುಕ್ತಿ ರಜತವತ್." ಆದರೆ ಈ ಅನುಮಾನದ ಪ್ರತಿಜ್ಞಾ ವಾಕ್ಯವೇ ದೋಷಯುಕ್ತ. ನಾವೂ ಕೂಡ ಸತ್ ಎಂದರೆ ಭಾವ ಪದಾರ್ಥವು, ಅಸತ್ ಎಂದರೆ ಅಭಾವ ದಿಂದ ವಿಲಕ್ಷಣ, ಭಿನ್ನ ಎಂದೂ, ಅಸತ್ (ಅಭಾವ) ಸತ್‌ದಿಂದ ಭಿನ್ನ ಎಂದೂ ಸತ್ ಪದಾರ್ಥಗಳು ಪರಸ್ಪರ ಭಿನ್ನ ಮತ್ತು ಅಸತ್ ಪದಾರ್ಥಗಳೂ ಪರಸ್ಪರ ಭಿನ್ನ ಅಥವಾ ವಿಲಕ್ಷಣವೆಂದೂ ಒಪ್ಪಿದ್ದರಿಂದ ನಿನ್ನ ಅನುಮಾನಕ್ಕೆ ಸಿದ್ಧ ಸಾಧನತಾ ದೋಷ ಬರುತ್ತದೆ. ಇದಲ್ಲದೆ ಈ ಅನುಮಾನದಿಂದ ಜಗತ್ತು ಸುಳ್ಳು ಎಂಬ ನಿನ್ನ ಉದ್ದೇಶ ಸಾಧಿಸುವದಿಲ್ಲವಾದ್ದರಿಂದ, ಅನುಮಾನಕ್ಕೆ ಅರ್ಥಾಂತರತಾ ದೋಷ ಬರುತ್ತದೆ. ಆದ್ದರಿಂದ ಜಗತ್ತು ಸದಸದ್ವಿಲಕ್ಷಣ ಎಂದು ಸಾಧಿಸುವದ ರಿಂದ ನಮಗೆ ಹೇಗೆ ಅನಿಷ್ಟ ? ನಿನಗೇನೇ ಅನಿಷ್ಟ ಬರುತ್ತದೆ. "ತೇನಾ ನಿಷ್ಟಂ ಕಥಂ ಭವೇತ್" — ತೇ ಅನಿಷ್ಟಂ ಕಥಂ ನ ಭವೇತ್ ?

**ಜ್ಞಾನಬಾಧ್ಯತ್ವ :** ಬಾಧ ಎಂದರೆ ಜ್ಞಾನದಿಂದ ನಾಶವಾಗುವದು ಎಂದು ನೀನು ಹೇಳುವ ಲಕ್ಷಣ ಅಯುಕ್ತ. ಶಿಂಪಿನಲ್ಲಿ ತೋರಿದ ಬೆಳ್ಳಿಯು ಶಿಂಪಿನ ಜ್ಞಾನ ದಿಂದ ನಾಶವಾಗುವಂತೆ ಬ್ರಹ್ಮಜ್ಞಾನದಿಂದ ಜಗತ್ತು ನಿವೃತ್ತವಾಗುತ್ತದೆ ಎಂದು ನಿನ್ನ ವಾದ. ಆದರೆ ಜಗತ್ತೇ ಸುಳ್ಳು ಇರುವಾಗ ಸುಳ್ಳಿಗೆ ನಾಶ ಹೇಗೆ ? "ನ ಹಿ ನಾಶಃ ಅಸತಃ ಭವೇತ್". ನಾವಾದರೋ (ವಿಜ್ಞಾತಸ್ಯ ಅನ್ಯಥಾ ಸಮ್ಯಕ್ ವಿಜ್ಞಾನಂ ಬಾಧಃ) ತಪ್ಪಾಗಿ ತಿಳಿದುಕೊಂಡಿದ್ದನ್ನು ಸರಿಯಾಗಿ ತಿಳಿದುಕೊಳ್ಳು ವದು ಬಾಧ ಎಂದು ಹೇಳುತ್ತೇವೆ. ಶಿಂಪನ್ನು ತಪ್ಪಾಗಿ ಬೆಳ್ಳಿ ಎಂದು ತಿಳಿದ್ದು

ಕೊಂಡಿದ್ದನ್ನು ನಂತರ ಸರಿಯಾಗಿ **ಶಿಂಪು** ಎಂದು ತಿಳಿಯುವದೇ ಬಾಧ.

**ಪಂಚಾಖ್ಯಾತಿ ವಾದ :** ಬಾಧದ ಲಕ್ಷಣವನ್ನು ವಿವೇಚಿಸುವ ಸಂದರ್ಭದಲ್ಲಿ ಟೀಕಾರಾಯರು ಬಾಧಜ್ಞಾನವು ಬರುವ ಭ್ರಮದ ಬಗ್ಗೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ಭ್ರಮದ ಐದು ವಾದಗಳನ್ನು ನಿರೂಪಿಸಿ ಅವು ಅಯುಕ್ತವೆಂದು ಅವುಗಳನ್ನು ನಿರಾಕರಿಸಿ, ಸಿದ್ಧಾಂತವನ್ನು ಕೊನೆಗೆ ನಿರೂಪಿಸುತ್ತಾರೆ. ಭ್ರಮದ ಐದು ವಾದಗಳು ಹೀಗಿವೆ. (i) ಅಖ್ಯಾತಿವಾದ (ii) ಅನ್ಯಥಾಖ್ಯಾತಿವಾದ (iii) ಆತ್ಮಖ್ಯಾತಿವಾದ (iv) ಅಸತ್‌ಖ್ಯಾತಿವಾದ (v) ಅನಿರ್ವಚನೀಯ ಖ್ಯಾತಿವಾದ.

i) **ಅಖ್ಯಾತಿವಾದ ;** ಭ್ರಮುವೇ ಇಲ್ಲವೆನ್ನುವ ವಾದ. "ಖ್ಯಾತಿವಾದೀ, ಭ್ರಾಂತಿರಸ್ತೀತಿವಾದೀ । ನ ಖ್ಯಾತಿವಾದೀ ಅಖ್ಯಾತಿವಾದೀ (ಪರಿಮಳ), ಭ್ರಮವಿಲ್ಲ ಎನ್ನುವವರು ಪ್ರಾಭಾಕರರು, ರಾಮಾನುಜರು ಮತ್ತು ಕೆಲವು ತಾರ್ಕಿಕರು. ಆದರೆ ಭ್ರಮ ಇಲ್ಲವೆನ್ನುವದು ಅನುಭವ ವಿರುದ್ಧ, ಇಷ್ಟು ಕಾಲ ನಾನು ಶಿಂಪನ್ನೇ ಬೆಳ್ಳಿಯನ್ನಾಗಿ ತಿಳಿದಿದ್ದೆನು ಎಂದು ಹಿಂದಿನಿಂದ ಬಾಧಜ್ಞಾನ ಬರುತ್ತದೆ. ಇದುವೇ ಭ್ರಮ ವಿಷಯದಲ್ಲಿ ಪ್ರಮಾಣ. (ರಾಮಾನುಜರು ಎಲ್ಲದರಲ್ಲಿ ಎಲ್ಲ ಅಂಶಗಳಿರುವದರಿಂದ ಭ್ರಮವೇ ಇಲ್ಲವೆನ್ನುತ್ತಾರೆ. ಇದಕ್ಕೆ ಶ್ರುತಿ ಪುರಾಣೋಕ್ತ ತ್ರಿವೃತ್ಕರಣದ ಆಧಾರ ಹೇಳುತ್ತಾರೆ. ಆದರೆ ಈ ಪ್ರಕ್ರಿಯೆಯ ಪ್ರಕಾರ ಎಲ್ಲ ದ್ರವ್ಯಗಳಲ್ಲಿ ಅಗ್ನಿ ಜಲ ಪೃಥ್ವಿಗಳ ಮಿಶ್ರಣವಿದೆಯೆಂದು ಹೇಳಲಾಗಿದೆ. ಶಿಂಪಿನಲ್ಲಿ ಬೆಳ್ಳಿಯ ಅಂಶವಿದೆ ಎಂದು ಎಲ್ಲಿಯೂ ಹೇಳಿಲ್ಲ.]

ii) **ಅನ್ಯಥಾಖ್ಯಾತಿವಾದ ;** ಇದು ಪ್ರಾಚೀನ ತಾರ್ಕಿಕರ ಮತ. ಭ್ರಮಕಾಲದಲ್ಲಿ ಶಿಂಪಿನಲ್ಲಿ ತೋರಿದ ಬೆಳ್ಳಿ ಸತ್ಯವೇ. ಅಂಗಡಿಯಲ್ಲಿದ್ದ ಸತ್ಯವಾದ ಬೆಳ್ಳಿ ತೋರುತ್ತದೆ. (ಪ್ರತೀತಂ ರಜತಂ ದೇಶಾಂತರೇ ಸದೇವ).

iii) **ಆತ್ಮಖ್ಯಾತಿವಾದ :** ಇದು ವಿಜ್ಞಾನವಾದೀ ಬೌದ್ಧರ ವಾದ. ತೋರಿದ ಬೆಳ್ಳಿ ಆಂತರಿಕ, ಸತ್ಯ, ಜ್ಞಾನಾಕಾರದ್ದು.

iv) **ಅಸತ್‌ಖ್ಯಾತಿವಾದ :** ಶೂನ್ಯವಾದಿ ಬೌದ್ಧರ ವಾದ. ಭ್ರಮದಲ್ಲಿ ಅಸತ್ಯಕ್ಕೆ ಪ್ರತೀತಿ ಉಂಟು ಎಂಬ ವಾದ.

v) **ಅನೀರ್ವಚನೀಯ ಖ್ಯಾತಿವಾದ :** ಇದು ಮಾಯಾವಾದಿ ಅದ್ವೈತಿಗಳ ವಾದ. ಭ್ರಮದಲ್ಲಿ ತೋರಿದ ಬೆಳ್ಳಿ ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. ಸದಸತ್ ಅಲ್ಲ. ಆದರೆ ಅದು ಅನಿರ್ವಚನೀಯ. ಸದಸದ್ವಿಲಕ್ಷಣ ಎಂದು ಹೇಳುತ್ತಾರೆ.

**ಸಿದ್ಧಾಂತ :** ಮೇಲಿನ ಐದೂ ವಾದಗಳನ್ನು ಟೀಕಾರಾಯರು ವಿವರವಾಗಿ ಖಂಡಿಸಿ ಸಿದ್ಧಾಂತವನ್ನು ಹೇಳುತ್ತಾರೆ. ನಾವು ಭ್ರಮ ಒಪ್ಪುತ್ತೇವೆ. ನಮ್ಮದು ಅಭಿನವ ಅನ್ಯಥಾಖ್ಯಾತಿವಾದ. ಸತ್ಯವಾದ ಶಿಂಪೇ ಕಣ್ಣಿನ ದೋಷ ಮೂಲಕ

ಅತ್ಯಂತ ಅಸತ್ಯವಾದ ಬೆಳ್ಳಿ ಎಂದು ತೋರುತ್ತದೆ ಎಂದು ಶ್ರೀಮದಾಚಾರ್ಯರ ಮತ.

**ಟೀಪು** : ಭ್ರಮದ 5 ವಾದಗಳಲ್ಲಿ ಸುಧಾಕಾರರು ಅಖ್ಯಾತಿವಾದವನ್ನು (ಭ್ರಮವೇ ಇಲ್ಲವೆನ್ನುವ ವಾದವನ್ನು) ಮೊದಲು ನಿರೂಪಿಸಿದ್ದರಿಂದ ಪಂಚಾಖ್ಯಾತಿ ವಾದಃ ಎಂಬ ಶೀರ್ಷಿಕೆ ಇದೆ.

**ಅಸತ್ ಪ್ರತೀತಿವಾದ** : ಮಾಯಾವಾದಿಯು ಅಸತ್ತಿಗೆ ಪ್ರತೀತಿ ಇಲ್ಲ ಎನ್ನುತ್ತಾನೆ. ಅಸತ್‌ಚೇತ್‌ನ ಪ್ರತಿಯೇತ ಎಂಬುದು ಅವನ ಸಿದ್ಧಾಂತ. ಅವನಾದರೋ ಶುಕ್ತಿ ರಜತ, ಸದಸದ್ವಿಲಕ್ಷಣ ಎಂದು ಹೇಳುತ್ತಾನೆ. ಎಂದರೆ ಅದು ಸದ್ವಿಲಕ್ಷಣ ಮತ್ತು ಅಸದ್ವಿಲಕ್ಷಣ. ಅದು ಅಸದ್ವಿಲಕ್ಷಣ ಎಂದು ತಿಳಿಯಲು ಪ್ರತಿಯೋಗಿಯಾದ ಅಸತ್‌ದ ಜ್ಞಾನ ಅವಶ್ಯಕ. ಆದ್ದರಿಂದ ಅವನು ಅಸತ್ತಿಗೆ ಪ್ರತೀತಿಯನ್ನು ಒಪ್ಪಲೇಬೇಕು. "ಅಸದ್ವಿಲಕ್ಷಜ್ಞಪ್ತ್ಯೈ ಜ್ಞಾತವ್ಯಂ ಅಸದೇವ ಹಿ."

**ಅಜ್ಞಾನವಾದ** : ಇಲ್ಲಿಯವರೆಗೆ ಸಂಸಾರ ಬಂಧ ಮಿಥ್ಯಾ ಎಂಬುದನ್ನು ಖಂಡಿಸಿದ್ದಾಯಿತು. ಈಗ ಸಂಸಾರಬಂಧವು ಮಿಥ್ಯಾಭೂತ ಅಜ್ಞಾನದಿಂದ ಹುಟ್ಟಿದ್ದು, ಆದ್ದರಿಂದ ಮಿಥ್ಯಾ (ಮಿಥ್ಯಾ ಅಜ್ಞಾನ ಕಲ್ಪಿತಃ ಬಂಧಃ) ಎಂಬುದನ್ನು ನಿರಾಕರಿಸುತ್ತಾರೆ. ಮಾಯಾವಾದಿಗಳು ಭಾವರೂಪ ಅಜ್ಞಾನ ಒಪ್ಪುತ್ತಾರೆ ಮತ್ತು ಅದರ ನಿವೃತ್ತಿಯೇ ಮೋಕ್ಷ ಎನ್ನುತ್ತಾರೆ. ಆದರೆ ಅವರ ಮತದಲ್ಲಿ ಅಜ್ಞಾನವೇ ಕೂಡುವದಿಲ್ಲ. ಹೇಗೆಂದರೆ, ಆವರಣವು, ಪಟ್ಟಿ ಎಂಬ ಆವರಣವು ಕಣ್ಣನ್ನು ಆಶ್ರಯಿಸಿ ಘಟವಿಷಯಕ ಜ್ಞಾನವನ್ನು ಪ್ರತಿಬಂಧಿಸುತ್ತದೆ. ಅದರಂತೆ ಅಜ್ಞಾನವು ಏನನ್ನು ಆಶ್ರಯಿಸುತ್ತದೆ ಮತ್ತು ಏನನ್ನು ಪ್ರತಿಬಂಧಿಸುತ್ತದೆ ಎಂದು ಕೇಳುತ್ತೇವೆ. ಅಜ್ಞಾನವು ಜೀವನನ್ನು ಆಶ್ರಯಿಸಲಾರದು. ಏಕೆಂದರೆ ಜೀವನು ಅಜ್ಞಾನ ಕಲ್ಪಿತ. ಕಾರಣವಾದ ಅಜ್ಞಾನವು ಕಾರ್ಯ ಎಾದ ಜಡವನ್ನೂ ಆಶ್ರಯಿಸಲಾರದು. ಆದ್ದರಿಂದ ಪರಿಶೇಷದಿಂದ ಅಜ್ಞಾನವು ಬ್ರಹ್ಮನನ್ನು ಆಶ್ರಯಿಸುತ್ತದೆಂದು ಹೇಳಬೇಕು. ಈ ಅಜ್ಞಾನವು ಬ್ರಹ್ಮನ ಸ್ವರೂಪವನ್ನು ಪ್ರತಿಬಂಧಿಸಲಾರದು. ಏಕೆಂದರೆ ಬ್ರಹ್ಮ ಸ್ವಪ್ರಕಾಶ. ಅದು ಜೀವನನ್ನೂ ಪ್ರತಿಬಂಧಿಸಲಾರದು. ಏಕೆಂದರೆ ಅಜ್ಞಾನಮೂಲಕ ಬ್ರಹ್ಮನಿಗೆ ಜೀವಭಾವ ಬಂದಿದೆ. ಅದು ಜಡವನ್ನೂ ಪ್ರತಿಬಂಧಿಸಲಾರದು. ಏಕೆಂದರೆ ಜಡವೂ ಅಜ್ಞಾನ ಕಲ್ಪಿತ. ಹೀಗೆ ಮಾಯಾವಾದಿಗಳ ಮತದಲ್ಲಿ ಅಜ್ಞಾನವೇ ಕೂಡುವದಿಲ್ಲ, ಆದ್ದರಿಂದ ಅಜ್ಞಾನ ಕಾರ್ಯವಾದ ಬಂಧವೂ ಕೂಡುವದಿಲ್ಲ. ಅಜ್ಞಾನವೇ ಇಲ್ಲವಾದ್ದರಿಂದ ಶಾಸ್ತ್ರವೇ ವ್ಯರ್ಥವಾಗುತ್ತದೆ. ಏಕೆಂದರೆ ಅಜ್ಞನೇ ಅಧಿಕಾರಿ, ಅಜ್ಞಾನವೇ ವಿಷಯ, ಅಜ್ಞಾನ ನಿವಾರಣೆಯೇ ಪ್ರಯೋಜನವೆಂದು ನೀನು ಹೇಳುತ್ತೀ. ಅಜ್ಞಾನವೇ ಕೂಡ ವದಿಲ್ಲವಾದ್ದರಿಂದ ಶಾಸ್ತ್ರ

ವ್ಯರ್ಥ. "ಅಜ್ಞಾನಾಭಾವತಃ ಶಾಸ್ತ್ರಂ ಸರ್ವಂ ವ್ಯರ್ಥೀಭವಿಷ್ಯತಿ." ಹೀಗೆ ಅನಂತ ದೋಷಗಳಿರುವ ಮಾಯಾವಾದವು ಸಜ್ಜನರಿಂದ ತ್ಯಾಜ್ಯ. "ಅತೋಽಧಿಕಾರಿವಿಷಯಫಲಯೋಗಾದಿವರ್ಜಿತಂ, ಅನಂತ ದೋಷದುಷ್ಟಂಚ ಹೇಯಂ ಮಾಯಾಮತಂ ಶುಭೈಃ".

**ಸ್ವಭಾವಾಜ್ಞಾನವಾದ** : ನಾವಾದರೋ ಅಜ್ಞಾನದ ವಿರೋಧಿಗಳಲ್ಲ. ನಾವು ಭಾವರೂಪ ಅಜ್ಞಾನ ಒಪ್ಪುತ್ತೇವೆ. ಇದರಲ್ಲಿ ಯಾವ ದೋಷವೂ ಇಲ್ಲ. ಅಜ್ಞಾನ ಸ್ವಾಭಾವಿಕವಾದುದು. ಸ್ವಭಾವಾಜ್ಞಾನವಾದ ಎಂದರೆ ಜೀವನನ್ನಾಶ್ರಯಿಸಿ ಪರತಂತ್ರನಾದ ಜೀವನಿಗೆ ತನ್ನ ಸ್ವರೂಪದ ಬಗ್ಗೆ ಇರುವ ಅಜ್ಞಾನ. ಈ ವಾದದಲ್ಲಿ ಯಾವ ದೋಷವೂ ಇಲ್ಲ.

**ಜೀವಬ್ರಹ್ಮರ ಐಕ್ಯ** : ಶಾಸ್ತ್ರದಲ್ಲಿ ಅಲ್ಲಲ್ಲಿ ಕಂಡುಬರುವ ಐಕ್ಯಬೋಧಕ ಶ್ರುತಿಗಳಿಗೆ ಗತಿ ಕಲ್ಪಿಸುತ್ತಾರೆ. ಯಜಮಾನಃ ಪ್ರಸ್ತರಃ ಎಂದರೆ ಯಜಮಾನನು ಧರ್ಭದ ಮುಷ್ಟಿ ಆಗಲಾರ. ಏಕೆಂದರೆ ಇದು ಪ್ರತ್ಯಕ್ಷಕ್ಕೆ ವಿರುದ್ಧವಾಗಿದೆ. ಆದ್ದರಿಂದ ದರ್ಭದ ಮುಷ್ಟಿಯು ಯಜಮಾನನ ಕೆಲಸ ಮಾಡುತ್ತದೆ ಎಂದು ಅರ್ಥ. ಅದರಂತೆ ಐಕ್ಯಬೋಧಕ ಶ್ರುತಿಗಳಿಗೆ ಸ್ಥಾನೈಕ್ಯ, ಮತ್ಯೈಕ್ಯ, ಸಾದೃಶ್ಯ ಮುಂ. ಅರ್ಥ ಹೇಳಬೇಕು. ಬೇರೆ ಅರ್ಥ ಹೇಳಲು ಬರುವದರಿಂದ ಐಕ್ಯ ಬೋಧಕ ವಾಕ್ಯಗಳು ಸಾವಕಾಶ. ಆದರೆ ಭೇದವಾಕ್ಯಗಳು ನಿರವಕಾಶ.

**ಸಿದ್ಧಾರ್ಥೇ ವ್ಯುತ್ಪತ್ತಿ** : ಅತಃ ಶಬ್ದದ ಮೂರನೆಯ ಅರ್ಥವೆಂದರೆ, ಶಬ್ದ ಅಥವಾ ಶಬ್ದಾತ್ಮಕವಾದ ವೇದವು, ಇಷ್ಟವಾದ ಸಿದ್ಧರೂಪ ವಸ್ತು (ಬ್ರಹ್ಮ) ಬೋಧಕವಾಗಿದೆ ಕಾರ್ಯತಾಪರವಲ್ಲ. ತಾವು ಜೈಮಿನಿ ಮತದವರೆಂದು ತಿಳಿದುಕೊಳ್ಳುವ ಪ್ರಾಭಾಕರ ಮೊದಲಾದವರು ಶಬ್ದವು ಸಿದ್ಧರೂಪ ಬೋಧಕವಲ್ಲವಾದ್ದರಿಂದ ವೇದವು ಬ್ರಹ್ಮ ಬೋಧಕವಲ್ಲ ಎಂದು ಆಕ್ಷೇಪಿಸುತ್ತಾರೆ. ಲಿಜಾ-ಲೋಟ್ ಮತ್ತು ತವ್ಯ ಯ ಅನೀಯಗಳು ಸಾಕ್ಷಾತ್ ಕಾರ್ಯ ಬೋಧಕ, ಉಳಿದವುಗಳು ಇದಕ್ಕೆ ಸಹಾಯಕವಾಗಿ ಪರಂಪರಯಾ ಕಾರ್ಯಬೋಧಕವೆಂದು ವಾದಿಸುತ್ತಾರೆ. ಆದರೆ ಈ ಕಾರ್ಯತಾವಾದ ಅಯುಕ್ತ. ಹಿಂದೆ ಹೇಳಿದಂತೆ ಸಮಸ್ತ ವೇದವು ಬ್ರಹ್ಮಬೋಧಕ. ಈ ಬಗ್ಗೆ ಪ್ರಮಾಣಗಳಿವೆ. "ಓಂ ಇತಿ ಬ್ರಹ್ಮ" ಸ ಏವ ಸರ್ವ ವೇದಾರ್ಥಃ ಶ್ಲೋಕಗಳು 9, 10 ಮತ್ತು 11.

ಕಾರ್ಯತಾ ಎಂದರೆ ಇಷ್ಟ ಅಥವಾ ಇಷ್ಟ ಸಾಧನ. ಭಗವಂತನು ಏಕಾಂತ ಭಕ್ತರಿಗೆ ಸಾಕ್ಷಾತ್ ಇಷ್ಟನು; ಉಳಿದವರಿಗೆ ಅಪೇಕ್ಷಿತ ಮೋಕ್ಷ ದಯಪಾಲಿಸುವದರಿಂದ ಇಷ್ಟ ಸಾಧನನೂ ಆಗಿದ್ದಾನೆ. ಆದ್ದರಿಂದ ವೇದವು ಸಿದ್ಧರೂಪ ಪರಬ್ರಹ್ಮನನ್ನು-ನಾರಾಯಣನನ್ನು ಪ್ರತಿಪಾದಿಸುತ್ತದೆ.

ಇದಲ್ಲದೆ ಶಬ್ದಕ್ಕೆ ಸಿದ್ಧಾರ್ಥ ದಲ್ಲಿಯೂ ವ್ಯುತ್ಪತ್ತಿ ಇದೆ. ಉದಾ— ಇವಳು ನಿನ್ನ ತಾಯಿ, ಇವನು ತಂದೆ, ನೀನು ಸುರೂಪಿ, ನಿನ್ನ ಅಣ್ಣ ಭಕ್ಷ್ಯ ತಿನ್ನುತ್ತಾನೆ ಮುಂ.

ಇನ್ನು ವೇದ ಕಾರ್ಯಪರ ಎಂದು ಒಪ್ಪಿದರೂ ಕೂಡ, ಬ್ರಹ್ಮನನ್ನು ಉಪಾಸಿಸಬೇಕು (ಆತ್ಮಾನಂ ಉಪಾಸೀತ) ಎಂದು ಬ್ರಹ್ಮೋಪಾಸನೆ ವಿಧಿಸುವ ವೇದಕ್ಕೆ, ಉಪಾಸನಾ ಕಾರ್ಯಕ್ಕೆ ಕರ್ಮವಾದ ಬ್ರಹ್ಮನ ಸ್ವರೂಪ–ಗುಣ–ಕ್ರಿಯಾದಿಗಳಲ್ಲಿಯೂ ತಾತ್ಪರ್ಯವಿದೆ ಎಂದು ಒಪ್ಪಬೇಕು. ಏಕೆಂದರೆ ಕಾರ್ಯತಾವಾದಿಗಳಾದ ಮೀಮಾಂಸಕರು ಸಹ, ಯಜ್ಞ ವಿಧಿಸುವ ವೇದಕ್ಕೆ ಯಜ್ಞಾಂಗವಾದ, ಸ್ರುಕ್–ಸ್ರುವ–ವಹ್ನಿ–ಯೂಪ ಮೊದಲಾದವುಗಳಲ್ಲಿಯೂ ತಾತ್ಪರ್ಯವಿದೆ ಎಂದು ಒಪ್ಪಿದ್ದಾರೆ. ಆದ್ದರಿಂದ ಶಬ್ದಾತ್ಮಕವಾದ ವೇದವು ಸಿದ್ಧಾರ್ಥರೂಪ ಪರಬ್ರಹ್ಮ ಬೋಧಕವಾಗಿದೆ.

**ವೇದ ಪ್ರಾಮಾಣ್ಯವಾದ :** ಅತಃ ಶಬ್ದದ 4ನೇ ಅರ್ಥವೆಂದರೆ ಶಬ್ದ, ಶಬ್ದಾತ್ಮಕವಾದ ವೇದ ಪ್ರಮಾಣವಾದ್ದರಿಂದ. ಕೆಲವೊಂದು ಸಲ ಶಬ್ದದಿಂದ ಜ್ಞಾನ ಹುಟ್ಟುವದಿಲ್ಲವಾದ್ದರಿಂದ ಶಬ್ದವೇ ಅಪ್ರಮಾಣ ಮತ್ತು ಶಬ್ದಾತ್ಮಕವಾದ ವೇದವೂ ಅಪ್ರಮಾಣ ಎಂದು ಬೌದ್ಧರು ವಾದಿಸುತ್ತಾರೆ. ಇದಲ್ಲವೆ ವೇದ ವಿಧಿಸುವ ಯಜ್ಞ–ಯಾಗಾದಿಗಳಿಗೆ ಅಭೀಷ್ಟಫಲ (ಪುತ್ರ, ಮಳೆ ಮುಂ.) ದೊರೆಯುವದಿಲ್ಲವಾದ್ದರಿಂದ ವೇದ ಸುಳ್ಳು ಎಂದು ಹೇಳುತ್ತಾರೆ. ಉದಿತೇ ಚ ಹೋತವ್ಯಂ, ಅನುದಿತೇ ಚ ಹೋತವ್ಯಂ ಮೊದಲಾದ ಪರಸ್ಪರ ವಿರುದ್ಧ ವಚನಗಳಿವೆ,(ವ್ಯಾಘಾತ ದೋಷ). ತ್ರಿಃ ಪ್ರಥಮಾಂ ತ್ರಿರುತ್ತರಾಂ ಮುಂತಾದರಲ್ಲಿ ಪುನರುಕ್ತಿ ಇದೆ. ಆದರೆ ಈ ಎಲ್ಲ ಆಕ್ಷೇಪಗಳು ಅಯುಕ್ತ. ಶಬ್ದದಿಂದ ಜ್ಞಾನವಂತೂ ಹುಟ್ಟುತ್ತವೆ. ಆದ್ದರಿಂದ ಶಬ್ದವು ಪ್ರಮಾಣ. "ಶಬ್ದಃ ಪ್ರಮಾಣಂ, ಪ್ರಮಿತಿಜನಕತ್ವಾತ್". ಇನ್ನು ಕೆಲವೆಡೆಯಲ್ಲಿ ಶಬ್ದದಿಂದ ಜ್ಞಾನ ಹುಟ್ಟುವದಿಲ್ಲವಾದ್ದರಿಂದ ಶಬ್ದವೇ ಅಪ್ರಮಾಣವೆನ್ನುವದು ಅಯುಕ್ತ. ಪ್ರತ್ಯಕ್ಷ ಅಥವಾ ಅನುಮಾನ ಕೆಲವೆಡೆ ವ್ಯಭಿಚರಿತವಾದರೆ, ಅವು ಅಪ್ರಮಾಣವಾಗುವದಿಲ್ಲ, ಅದರಂತೆ ವೇದವು ಅಪ್ರಮಾಣವಲ್ಲ.

ಇನ್ನು ವೇದದಲ್ಲಿ ಅನೃತತ್ವಾದಿ ದೋಷಗಳಿಲ್ಲ, ಯಜ್ಞದಿಂದ ವಿಶಿಷ್ಟ ಫಲ ದೊರೆಯದಿದ್ದರೆ ಅದು ಯಜ್ಞಮಾಡುವವನ (ಕರ್ತಾನ ಅಥವಾ ಕರಣದ) ದೋಷವೆಂದು ಹೇಳಬೇಕು. ವ್ಯಾಘಾತ ದೋಷಗಳು ಇಲ್ಲವೇ ಇಲ್ಲ. ವ್ಯಾಘಾತ ದೋಷವನ್ನು ಶಾಖಾಭೇದ, ಅಧಿಕಾರಿಭೇದದಿಂದ ಸುಲಭವಾಗಿ ಪರಿಹರಿಸಿಕೊಳ್ಳಬಹುದು. ಪುನರುಕ್ತಿಯಂತೂ ದೋಷವೇ ಅಲ್ಲ. ಅಭ್ಯಾಸವು ವಾಕ್ಯ ತಾತ್ಪರ್ಯಕ್ಕಾಗಿ ಇದೆ. ಅನುವಾದವು ಅಧಿಕ ವಿಧಾನಕ್ಕಾಗಿ ಇದೆ. ಪುನರುಕ್ತಿಯು ದಾರ್ಢ್ಯಕ್ಕಾಗಿ ಇದೆ ಎಂದು ಆಚಾರ್ಯರು ಹೇಳಿದ್ದಾರೆ.

ವೇದಪ್ರಾಮಾಣ್ಯವು ಸ್ವತಃ ಇದೆ. "ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವ ಆಗಮಸ್ಯ ಹಿ."

**ವರ್ಣನಿತ್ಯತ್ವ :** ವೇದ ಎಂದರೆ ವಿಶಿಷ್ಟ ಕ್ರಮದಲ್ಲಿರುವ ವರ್ಣಗಳು. ವರ್ಣಗಳು ಕ್ರಿಯೆಯಿಂದ ಹುಟ್ಟುತ್ತವೆಯಾದ್ದರಿಂದ ಅವು ಅನಿತ್ಯ ಹಾಗೂ ಅನಿತ್ಯ ವರ್ಣಗಳ ಸಮುದಾಯದೇ ವೇದ. ಹೀಗಾಗಿ ವೇದ ನಿತ್ಯವಾಗಲಾರದು ಎಂದು ಆಕ್ಷೇಪಿಸುತ್ತಾರೆ. ಆದರೆ ಇದು ಅಯುಕ್ತ. ವೇದವು ಅಪೌರುಷೇಯ ಮತ್ತು ನಿತ್ಯ. ವರ್ಣಗಳು ನಿತ್ಯವೇ. ಉಚ್ಚಾರದಿಂದ ಹೊರಡುವದು ಧ್ವನಿ ಮಾತ್ರ. ಧ್ವನಿಯಿಂದ ನಿತ್ಯ ವರ್ಣಗಳು ವ್ಯಕ್ತವಾಗುತ್ತವೆ. ಸ ಏವ ಅಯಂ ಗಕಾರಃ ಎಂದು ಬರುವ ಪ್ರತ್ಯಭಿಜ್ಞೆ ವರ್ಣ ನಿತ್ಯ ಎಂಬುದಕ್ಕೆ ಪ್ರಮಾಣ. ಆದ್ದರಿಂದ ವರ್ಣಾತ್ಮಕವಾದ ವೇದ ಅಪೌರುಷೇಯ, ನಿತ್ಯ. ಅದರಲ್ಲಿ ಯಾವ ಪುರುಷ ದೋಷಗಳೂ ಇಲ್ಲ. ಆದ್ದರಿಂದ ಅದು ಅತ್ಯಂತ ಪ್ರಮಾಣ..

**ವೇದ ಅಪೌರುಷೇಯ ಏಕೆ ?** ಸಾರಾಸಾರ ವಿವೇಕ ಜ್ಞಾನವುಳ್ಳ ಎಲ್ಲರೂ ಒಪ್ಪಿದ ಧರ್ಮಾದಿ ಸಿದ್ಧಿಗೋಸ್ಕರ, ಅಪೌರುಷೇಯ ವೇದ ಒಪ್ಪಬೇಕು. ಅಪೌರುಷೇಯ ವಾಕ್ಯಗಳಿಲ್ಲದೆ ಧರ್ಮಾದಿಗಳು ಸಿದ್ಧಿಸುವದಿಲ್ಲ. ಇನ್ನು ಧರ್ಮಾದಿಗಳು ಬುದ್ಧ, ಕಪಿಲ, ಜಿನ, ರುದ್ರ ಮೊದಲಾದವರಿಂದ ರಚಿತವಾದ ವಾಕ್ಯಗಳಿಂದಲೂ ಸಿದ್ಧಿಸಲಾರವು. ಏಕೆಂದರೆ ಅವರಿಗೆ ಧರ್ಮಾದಿ ಜ್ಞಾನವಿದೆ, ಅವರು ವಂಚಕರಲ್ಲ, ಅವರಿಂದಲೇ ಪ್ರಚಲಿತ ಆಗಮಗಳು ವಿಂಚಿತವಾಗಿವೆ ಎಂಬುದಕ್ಕೆ ಪ್ರಮಾಣವಿಲ್ಲ. ಹೀಗಾಗಿ ಇದರಲ್ಲಿ ಕಲ್ಪನಾ ಗೌರವ ದೋಷ ಬರುತ್ತದೆ. ಆದ್ದರಿಂದ ಬೌದ್ಧಾದಿ ಆಗಮ ಪ್ರಮಾಣವಲ್ಲ. ಮತ್ತು ಧರ್ಮಾದಿ ಸಿದ್ಧಿಗೋಸ್ಕರ ನಿತ್ಯ ವಾಕ್ಯಗಳನ್ನು ಒಪ್ಪಬೇಕು.

**ಶಕ್ತಿವಾದ :** ಶಬ್ದವು ವಾಕ್ಯದ ಅರ್ಥವನ್ನು ಹೇಗೆ ತಿಳಿಸುತ್ತದೆ ? ಅದು ಬೋಧಕೋಪಾಯ ಹೇಗೆ ಎಂಬುದನ್ನು ವಿಚಾರಿಸುತ್ತಾರೆ, ಆ ಆ ಶಬ್ದಗಳು ತಮ್ಮ ತಮ್ಮ ಅರ್ಥವನ್ನು ಹೇಳುತ್ತವೆಯಷ್ಟೇ. ಆದರೆ ಈ ಎಲ್ಲ ಅರ್ಥಗಳು ಸಂಬದ್ಧವಾಗಿ ವಾಕ್ಯಾರ್ಥ ಆಗುವದು ಹೇಗೆ ಎಂಬುದು ಮುಖ್ಯ ಸಮಸ್ಯೆ. ಈ ವಿಷಯದಲ್ಲಿ ಅನೇಕ ವಾದಗಳಿವೆ. ನಮ್ಮದು ಸಾಮಾನ್ಯ ಅನ್ವಿತಾಭಿಧಾನವಾದ. ಶಬ್ದಗಳಿಗೆ ಒಂದೇ ಶಕ್ತಿ ಇದೆ. ಆ ಶಕ್ತಿ ಮೂಲಕ ಶಬ್ದಗಳು ಯೋಗ್ಯ ಇತರ ಶಬ್ದಗಳ ಅರ್ಥಗಳೊಡನೆ ಸಂಬದ್ಧವಾಗಿ ತಮ್ಮ ಅರ್ಥ ಹೇಳುತ್ತವೆ. ಇದುವೇ ಅತಃ ಶಬ್ದದ 5ನೇ ಅರ್ಥ. "ಶಕ್ತಿಶ್ಚೈವ ಅನ್ವಿತೇ ಸ್ವಾರ್ಥೇ ಶಬ್ದಾನಾಂ ಅನುಭೂಯತೇ". ನಂತರ ಪದಗಳ ಯೋಗ್ಯ ಜೋಡಣೆಯಿಂದ (ಪದಾಂತರಸಮಭಿಹಾರೇಣ) ಅವುಗಳ ಅಂಗಾಂಗಿ ಭಾವ ಅಥವಾ ವಿಶೇಷಣ, ವಿಶೇಷ್ಯಭಾವ ತಿಳಿದು ವಾಕ್ಯಾರ್ಥ ಜ್ಞಾನವಾಗುತ್ತದೆ.

**ಅಥ ಮತ್ತು ಅತಃ ಶಬ್ದಗಳ ಅರ್ಥದಲ್ಲಿ ಪುನರುಕ್ತಿ ಇಲ್ಲ.** ಅಥ ಎಂದರೆ ಅನಂತರ, ಶಮ ದಮಾದಿ ಅಧಿಕಾರ ಪಡೆದ ನಂತರ, ಇದು ಅಧಿಕಾರಿಗಳನ್ನು ಅನಧಿಕಾರಿಗಳಿಂದ ಬೇರ್ಪಡಿಸುತ್ತದೆ. ಅತಃ ಶಬ್ದವು ಪ್ರಯೋಜನ ಮತ್ತು ವಿಷಯ ಗಳಿಗೆ ಸಂಬಂಧಿಸಿದ ಯುಕ್ತಿಗಳನ್ನು ಹೇಳುತ್ತದೆ. ಉದಾ– ಪ್ರಸಾದವಾದ, ಬಂಧ ಸತ್ಯತ್ವ, ವೇದ ಪ್ರಾಮಾಣ್ಯ ಮುಂ.

**ಬ್ರಹ್ಮತರ್ಕ :** ತರ್ಕಶಾಸ್ತ್ರವು ಮೀಮಾಂಸಾ ಶಾಸ್ತ್ರದ ಅಂಗ. ಬ್ರಹ್ಮತರ್ಕ ವೆಂಬ ತರ್ಕಗ್ರಂಥದಲ್ಲಿ ವೇದಪ್ರಾಮಾಣ್ಯಾದಿಗಳನ್ನು ವಿವರವಾಗಿ, ಕೂಲಕಂಷವಾಗಿ ಚರ್ಚಿಸಲಾಗಿದೆ. ಆದ್ದರಿಂದ ಆ ವಿಷಯಗಳನ್ನು ಬ್ರಹ್ಮಸೂತ್ರಗಳಲ್ಲಿ ಸಂಕ್ಷೇಪ ವಾಗಿ ಹೇಳಲಾಗಿದೆ. ಐದು ಸಹಸ್ರ ಶ್ಲೋಕಗಳುಳ್ಳ ಬ್ರಹ್ಮತರ್ಕವನ್ನು ವೇದ ವ್ಯಾಸರು ರಚಿಸಿರುವದರಿಂದ ಅದು ಅತ್ಯಂತ ಪ್ರಮಾಣ. ವೇದವ್ಯಾಸರಾದರೋ ತಾವು ಹಿಂದೆ ನಾರಾಯಣಾವತಾರದಲ್ಲಿ ಮಾಡಿದ 50 ಕೋಟಿ ಶ್ಲೋಕಗಳುಳ್ಳ ಬ್ರಹ್ಮತರ್ಕವೆಂಬ ಗ್ರಂಥದಿಂದ ಕೆಲವು ಅರ್ಥಗಳನ್ನು ಎತ್ತಿಕೊಂಡು 5 ಸಹಸ್ರ ಶ್ಲೋಕಗಳುಳ್ಳ ಬ್ರಹ್ಮತರ್ಕ ರಚಿಸಿದ್ದಾರೆ. ಎರಡೂ ಪ್ರಮಾಣಗಳೇ. ಒಂದು ವಿಸ್ತಾರವಾಗಿದ್ದರೆ ಇನ್ನೊಂದು ಸಂಕ್ಷಿಪ್ತರೂಪದಲ್ಲಿದೆ.

**ಬ್ರಹ್ಮಶಬ್ದಾರ್ಥ :** ಸೂತ್ರದಲ್ಲಿಯ ಬ್ರಹ್ಮ ಎಂದರೆ ವಿಷ್ಣು. ಹೇಗೆಂದರೆ—

a) **ಸಂದರ್ಭ :** ಬ್ರಹ್ಮಸೂತ್ರಗಳ ಹಿಂದೆ ಇದ್ದ ದೈವೀ ಮೀಮಾಂಸಾದಲ್ಲಿಯ ಕೊನೆಯ ಎರಡು ಸೂತ್ರಗಳನ್ನು ವೇದವ್ಯಾಸರೇ ರಚಿಸಿದ್ದು ಅಲ್ಲಿ ಬ್ರಹ್ಮ ಎಂದರೆ ವಿಷ್ಣು ಎಂದು ಹೇಳಿದ್ದಾರೆ. (ಸ ವಿಷ್ಣುರಾಹ ಹಿ, ತಂ ಬ್ರಹ್ಮೇತ್ಯಾಚಕ್ಷತೇ) ಆದ್ದರಿಂದ ಪ್ರಕೃತ ಸೂತ್ರದಲ್ಲಿ ಬ್ರಹ್ಮ ಎಂದರೆ ವಿಷ್ಣು.

b) **ಯೋಗ :** ಬೃಹಂತೋ ಹಿ ಅಸ್ಮಿನ್ ಗುಣಾ ಇತಿ ಬ್ರಹ್ಮ, ವಿಷ್ಣು ಎಂದರೆ ವ್ಯಾಪ್ತ.

c) **ರೂಢಿ :** ವಿದ್ವದ್ ರೂಢಿಯಲ್ಲಿ ಬ್ರಹ್ಮ ಎಂದರೆ ವಿಷ್ಣು. "ತದೇವ ಬ್ರಹ್ಮ ಪರಮಂ ಕವೀನಾಂ." ಇಲ್ಲಿ ಸರ್ವನಾಮವಾದ ತತ್– ಎಂದರೆ ಯಾರು ಎಂಬುದು ಪ್ರಶ್ನೆ. ಅದು ವಿಷ್ಣುವೇ. ಏಕೆಂದರೆ, ಈ ವಾಕ್ಯವು ನಾರಾಯಣೋಪನಿಷತ್ತಿನಲ್ಲಿ ಬಂದಿದೆ. ಈ ವಾಕ್ಯಕ್ಕಿಂತ ಮೊದಲು ಇರುವ ಕೆಳಗಿನ ವಾಕ್ಯಗಳು ವಿಷ್ಣು ಬೋಧಕವಾದ್ದರಿಂದ ತತ್ ಶಬ್ದಕ್ಕೆ ವಿಷ್ಣು ಎಂದೇ ಅರ್ಥೈಸಬೇಕು. (i) ಅಂಭಸ್ಯ ಪಾರೇ ಭುವನಸ್ಯ ಮಧ್ಯೇ, ನಾಕಸ್ಯ ಪೃಷ್ಠೇ ಎಂಬಲ್ಲಿ ಹೇಳಿದ ನೀರಿನಲ್ಲಿರುವ ಧರ್ಮ, ಸಮುದ್ರಸ್ಥತ್ವವು ವಿಷ್ಣುವಿನದೇ ಎಂಬುದು ಅಂಭ್ರಣೀ ಸೂಕ್ತದಿಂದ ತಿಳಿಯುತ್ತದೆ. (ii) ಯಸ್ಮಿನ್‌ದೇವಾ **ಅಧಿವಿಶ್ವೇ ನಿಷೇದುಃ** ಇಲ್ಲಿ ಸರ್ವ ದೇವತೆ ಗಳಿಗೆ ಆಶ್ರಯ ಎಂದು ಹೇಳಿದೆ. ಇದು ವಿಷ್ಣುವಿನ ಧರ್ಮ (iii) ಯತಃ ಪ್ರಸೂತಾ, ಜಗತಃ ಪ್ರಸೂತೀ ಎಂದರೆ ಜಗನ್ಮಾತೆಯಾದ ಲಕ್ಷ್ಮೀದೇವಿಗೆ ಕಾರಣನು.

ಎಂದರೆ ಆಶ್ರಯನು ವಿಷ್ಣು. ಏಕೆಂದರೆ ಅಂಭೃಣೀ ಸೂಕ್ತದಲ್ಲಿ "ಮಮ ಯೋನಿಃ ಅಪ್ಸು ಅಂತಃ" ಎಂದು ಲಕ್ಷ್ಮೀದೇವಿಯು ತನಗೆ ಕಾರಣನು ನೀರಿನಲ್ಲಿರುವವನು, ಎಂದರೆ ನಾರಾಯಣ, ವಿಷ್ಣು ಎಂದು ಹೇಳಿದ್ದಾಳೆ.

**ಉಪಸಂಹಾರ :** ಈ ವರೆಗೆ ನಿರೂಪಿಸಿದಂತೆ ಬ್ರಹ್ಮಸೂತ್ರಗಳಿಗೆ ಬ್ರಹ್ಮನು (ನಾರಾಯಣನು) ವಿಷಯ, ಮೋಕ್ಷರೂಪ ಫಲವೇ ಪ್ರಯೋಜನ. ಮೋಕ್ಷ ಬಯಸುವ ಸಜ್ಜನರೇ ಅಧಿಕಾರಿಗಳು. ಈ ಮೂರರಲ್ಲಿ ಪರಸ್ಪರ ಸಂಬಂಧವೂ ಇದೆ, ಹೀಗೆ ಅನುಬಂಧ ಚತುಷ್ಟಯವಿರುವದರಿಂದ ಶಾಸ್ತ್ರವು ಆರಂಭಣೀಯ. ಆದ್ದರಿಂದ ಬ್ರಹ್ಮ ವಿಷಯಕ ವಿಚಾರ ಮಾಡಬೇಕು. **"ಬ್ರಹ್ಮಜಿಜ್ಞಾಸಾ ಕರ್ತವ್ಯಾ"**

— ● —

# ಅನುಕ್ರಮಣಿಕೆ


| | | ಪುಟಸಂಖ್ಯೆ |
|---|---|---|
| i) | ಪ್ರಸ್ತಾವನೆ | |
| ii) | ಅರಿಕೆ | |
| iii) | ಜಿಜ್ಞಾಸಾಧಿಕರಣದ ಸಾರಾಂಶ | |
| ೧ | ಪೀಠಿಕೆ | 1 |
| ೨ | ಶ್ರೀಮನ್ನ್ಯಾಯಸುಧೆಯ ಮಂಗಲಶ್ಲೋಕಗಳು | 2–12 |
| ೩ | ಶ್ರೀಮಜ್ಜಯತೀರ್ಥರಿಂದ ವ್ಯಾಖ್ಯಾನ ಪ್ರತಿಜ್ಞೆ, ಶ್ಲೋಕ ೭ | 12 |
| ೪ | ಶ್ರೀಮಜ್ಜಯತೀರ್ಥರಿಂದ ಸ್ವಾಹಂಕಾರ ಖಂಡನೆ, ಶ್ಲೋಕ ೮ | 13 |
| ೫ | ಶ್ರೀಮದಾನಂದತೀರ್ಥರಿಂದ ಮಂಗಲಾಚರಣೆ, ಶ್ಲೋಕ ೧ | 14 |
| ೬ | ನಾರಾಯಣನಿಗೆ ಗುರುತ್ವೇನ ನಮಸ್ಕಾರ ಮತ್ತು ವ್ಯಾಖ್ಯಾನ ಪ್ರತಿಜ್ಞೆ, ಶ್ಲೋಕ–೨ | 18 |
| ೭ | ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯ–ಆಗಮದಿಂದ, ಶ್ಲೋಕ ೩ | 20 |
| ೮ | ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯ, ಆಪ್ತ–ಶ್ರುತಿ–ಯುಕ್ತಿ ಮೂಲಕ ಶ್ಲೋಕ ೪–೬ | 22–26 |
| ೯ | ಬ್ರಹ್ಮಸೂತ್ರ ಶ್ರೇಷ್ಠ ಪ್ರಮಾಣ, ಶ್ಲೋಕ ೭ | 26 |
| ೧೦ | ಮಂಗಲವಾದ, ಶ್ಲೋಕ ೮ | 27 |
| ೧೧ | ಪ್ರಥಮಸೂತ್ರದಲ್ಲಿ ಪ್ರವೃತ್ತಿ ಹೇಗೆ ? | 30 |
| ೧೨ | ಓಂಕಾರವಾದ, ಅನುಬಂಧ ಚತುಷ್ಟಯ, ಶ್ಲೋಕ ೯ಅ | 32 |
| ೧೩ | ಓಂ–ವ್ಯಾಹೃತಿ–ಗಾಯತ್ರೀ–ಪುರುಷಸೂಕ್ತ–ಸಕಲವೇದ ಪ್ರತಿಪಾದ್ಯನು ನಾರಾಯಣ, ಶ್ಲೋಕ ೯, ೧೦, ೧೧ಅ | 35 |
| | **ಅತಃ ಶಬ್ದದ ಒಂದನೆಯ ಅರ್ಥ, ಪ್ರಸಾದವಾದ** | 38-43 |
| ೧೪ | ಪ್ರಸಾದವಾದದ ಆರಂಭ. ಶ್ಲೋಕ ೧೧, ೧೨ | 38 |
| ೧೫ | ಜ್ಞಾನ ಸ್ವಭಾವದಿಂದಲೇ ಮೋಕ್ಷವಿಲ್ಲ, ಶ್ಲೋಕ ೧೩-೧೪ | 40 |
| ೧೬ | ಪ್ರಸಾದವಾದದ ಉಪಸಂಹಾರ, ಶ್ಲೋಕ ೧೫ | 42 |
| | **ಅತಃ ಶಬ್ದದ ೨ನೆಯ ಅರ್ಥ-ಬಂಧ ಸತ್ಯವಾದ್ದರಿಂದ** | 43–111 |
| ೧೭ | ಮೋಕ್ಷವು ಬಂಧಮಿಥ್ಯಾತ್ವವನ್ನು ಅಪೇಕ್ಷಿಸುವದಿಲ್ಲ. ಶ್ಲೋಕ ೧೬ಅ | 43 |
| ೧೮ | ಬಂಧಮಿಥ್ಯಾತ್ವವು ಪ್ರತ್ಯಕ್ಷಕ್ಕೆ ವಿರುದ್ಧ ಶ್ಲೋಕ ೧೬ | 46 |

೧೯ ಬಂಧ ಮಿಥ್ಯಾ ಎನ್ನುವ ಮಾಯಾವಾದಿಗೆ ಅನಿಷ್ಟ ಆಪಾದನೆ
ಶ್ಲೋಕ ೧೭ಅ 47
೨೦ ಮಿಥ್ಯಾಪ್ರಮಾಣಕ್ಕೆ ಸಾಧಕತ್ವವಿಲ್ಲ, ಶ್ಲೋಕ, ೧೭-೧೮ 49
೨೧ ಮಾಯಾವಾದಿಯೇ ಸತ್ಯಪ್ರಮಾಣಕ್ಕೆ ಸಾಧಕತ್ವವನ್ನು
ಒಪ್ಪಿದ್ದಾನೆ, ಶ್ಲೋಕ ೧೯-೨೦ಅ 51
೨೨ ಮಿಥ್ಯಾಪ್ರಮಾಣಕ್ಕ ಸಾಧಕತ್ವವಿಲ್ಲ ಎಂಬುದರ ಉಪಸಂಹಾರ
ಶ್ಲೋಕ ೨೦-೨೧ 52
೨೩ **ಕಥಕವಾದ** 53- 61
೨೪ ವ್ಯಾವಹಾರಿಕ ಸತ್ಯಪ್ರಮಾಣಕ್ಕೂ ಸಾಧಕತ್ವವಿಲ್ಲ ಶ್ಲೋಕ ೨೨ಅ 61
೨೫ ಸತ್ ತ್ರೈವಿಧ್ಯದ ನಿರಾಕರಣೆ ಶ್ಲೋಕ ೨೨-೨೩ 62
೨೬ ಜಗತ್ತು ಸದಸದ್ವಿಲಕ್ಷಣ ಎಂದರೆ ಆದರಿಂದ ಸಿದ್ಧಾಂತಿಗೆ
ಅನಿಷ್ಟವಿಲ್ಲ ಶ್ಲೋಕ ೨೪ 64
೨೭ ಜಗತ್ತು ಸದಸದ್ವಿಲಕ್ಷಣ ಎಂಬ ಅನುಮಾನದ ಬೇರೆ ದೋಷಗಳು
ಶ್ಲೋಕ ೨೫ 69
೨೮ ಬಾಧದ ಲಕ್ಷಣ ಮತ್ತು ಹಿಂದಿನ ಅನುಮಾನದ ದೂಷಣೆ
ಶ್ಲೋಕ ೨೬ 70
೨೯ **ಪಂಚಾಖ್ಯಾತಿವಾದ** 76- 92
i) ಅಖ್ಯಾತಿವಾದ 76
ii) ಅನ್ಯಥಾಖ್ಯಾತಿವಾದ 85
iii) ಆತ್ಮಖ್ಯಾತಿವಾದ (ಜ್ಞಾನಖ್ಯಾತಿವಾದ) 86
iv) ಅಸತ್‌ಖ್ಯಾತಿವಾದ 88
v) ಅನಿರ್ವಚನೀಯ ಖ್ಯಾತಿವಾದ 89
vi) ಸಿದ್ಧಾಂತಿಗಳ ಅಭಿನವ ಅನ್ಯಥಾಖ್ಯಾತಿವಾದ 91
೩೦ ಅಸತ್ತಿಗೆ ಪ್ರತೀತಿಯನ್ನು ನಿರಾಕರಿಸಲಿಕ್ಕಾಗದು ಶ್ಲೋಕ ೨೭ 92
೩೧ ಅಸತ್ತಿಗೆ ಪ್ರತೀತಿ ಇಲ್ಲ ಎಂಬುದರ ಖಂಡನೆ ಶ್ಲೋಕ ೨೮-೨೯ಅ93
೩೨ ಮಾಯಾವಾದಿಗಳ ಅಜ್ಞಾನವಾದದ ನಿರಾಕರಣೆ
ಶ್ಲೋಕ ೨೯-೩೦ಅ 95
೩೩ ಅಜ್ಞಾನವಾದದ ನಿರಾಕರಣೆ ಮುಂದುವರೆದುದು
ಶ್ಲೋಕ ೩೦-೩೧-೩೨ 96
೩೪ ಸಿದ್ಧಾಂತಿಗಳ ಸ್ವಭಾವಾಜ್ಞಾನವಾದ ಶ್ಲೋಕ ೩೩ಅ 100
೩೫ ಅವಿದ್ಯಾ ದುರ್ಘಟ ಎಂಬುದರ ನಿರಾಕರಣೆ ಶ್ಲೋಕ ೩೩ 102

೩೬ ಮಾಯಾವಾದವು ಅನಂತದೋಷಮುಷ್ಟವಾದ್ದರಿಂದ
ತ್ಯಾಜ್ಯ ಶ್ಲೋಕ ೩೪ 103
೩೭ ಜೀವಬ್ರಹ್ಮರ ಐಕ್ಯ ಶಾಸ್ತ್ರ ವಿಷಯವಾಗಲಾರದು–ತತ್ವಮಸಿ
ವಾಕ್ಯಾರ್ಥ ಶ್ಲೋಕ ೩೫ 103
೩೮ ತತ್ವಮಸಿ ವಾಕ್ಯಾರ್ಥ ವಿವೇಚನೆ ಮುಂದುವರೆದುದು
ಶ್ಲೋಕ–೩೬ 105
೩೯ ಬ್ರಹ್ಮನಿಗೆ ಜೀವನೊಡನೆ ಐಕ್ಯವಿಲ್ಲ ಶ್ಲೋಕ ೩೭-೩೮ ಅ. 107
೪೦ ಐಕ್ಯ ಬೋಧಕ ಶ್ರುತಿಗಳು ಸಾವಕಾಶ, ಭೇದ ಶ್ರುತಿಗಳು
ನಿರವಕಾಶ ಶ್ಲೋಕ ೩೮-೩೯ ಅ 108
೪೧ ಬಂಧ ಸತ್ಯ ಎಂಬುದರ ಉಪಸಂಹಾರ, ಮೋಕ್ಷ ಪ್ರಸಾದ
ದಿಂದಲೇ ಶ್ಲೋಕ ೪೦–೪೨ 110
**ಅತಃ** ಶಬ್ದದ 3 ನೆಯ ಅರ್ಥ (ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ) 111-135
೪೨ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ ಎಂಬುದರ ಉಪಕ್ರಮ 111
೪೩ ಕಾರ್ಯತಾವಾದದ ನಿರಾಕರಣೆ ಶ್ಲೋಕ ೪೨-೪೪ 112
೪೪ ಕಾರ್ಯ ಎಂದರೆ ಇಷ್ಟ ಅಥವಾ ಇಷ್ಟಸಾಧನ
ಶ್ಲೋಕ ೪೫-೪೭ 115
೪೫ ಶಬ್ದಗಳಿಗೆ ಇಷ್ಟವಾದ ಸಿದ್ಧ ವಿಶೇಷದಲ್ಲಿಯೂ ವ್ಯುತ್ಪತ್ತಿ ಇದೆ
ಶ್ಲೋಕ ೪೮-೪೯ ಅ 117
೪೬ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ ಯುಕ್ತ. ಶ್ಲೋಕ ೪೯-೫೦ 119
೪೭ ವ್ಯುತ್ಪತ್ತಿಯು ಮೊದಲು ವರ್ತಮಾನ ಕಾಲದಲ್ಲಿ
ಶ್ಲೋಕ ೫೦-೫೩ ಅ 120
೪೮ ಸಿದ್ಧಾರ್ಥ ವ್ಯುತ್ಪತ್ತಿಯಲ್ಲಿ ಬರುವ ಬಾಧಕ ಪರಿಹಾರ.
ಶ್ಲೋಕ ೫೩-೫೫ ಅ. 121
೪೯ ವೇದವು ಕಾರ್ಯಾಪರವಾದರೂ ಬ್ರಹ್ಮ ವಿಷಯಕ
ವಿಚಾರ ಕೊಡುತ್ತದೆ, ಶ್ಲೋಕ ೫೫-೫೮ ಅ. 124
೫೦ ವೇದಗಳಲ್ಲಿ ಏಕವಾಕ್ಯತೆ ಇದೆ, ವಾಕ್ಯಭೇದ ಅಯುಕ್ತ
ಶ್ಲೋಕ ೫೮-೫೯ ಅ. 127
೫೧ ವೇದಗಳಿಗೆ ಉಪಾಸನಾಕಾರ್ಯ ಮತ್ತು ಬ್ರಹ್ಮ ಸ್ವರೂಪ
ಎರಡರಲ್ಲಿಯೂ ತಾತ್ಪರ್ಯ. ಶ್ಲೋಕ ೫೯–೬೧ 129
೫೨ ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂಬ ಶ್ರುತ್ಯರ್ಥ ವಿಚಾರ
ಶ್ಲೋಕ ೬೨-೬೪ 131

೫೩ ಕರ್ಮಗಳು ಅಂತಃಕರಣ ಶುದ್ಧಿದ್ವಾರಾ ಜ್ಞಾನಕ್ಕೆ ಸಹಾಯಕ
ಮುಕ್ತಿ ಪ್ರಸಾದದಿಂದ ಶ್ಲೋಕ ೬೫-೬೬ ಅ. 134

**ಅತ: ಶಬ್ದದ ಶಬ್ದದ ೪ನೆಯ ಅರ್ಥ, ಶಬ್ದ**
**ಪ್ರಮಾಣವಾದ್ದರಿಂದ** 135-165

೫೪ ಶಬ್ದ ಅಪ್ರಮಾಣ ಎಂಬ ಪೂರ್ವಪಕ್ಷ 135
೫೫ ಶಬ್ದವು ಪ್ರಮಾಣ ಶ್ಲೋಕ ೬೬ 137
೫೬ ವೇದಪ್ರಾಮಾಣ್ಯದ ಸ್ವತಸ್ತ್ವ 147
೫೭ ಜ್ಞಾನಪ್ರಾಮಾಣ್ಯವು ಜ್ಞಪ್ತೌ ಸ್ವತ: ಎಂದು ಒಪ್ಪದಿದ್ದರೆ
ಬರುವ ದೋಷ ಶ್ಲೋಕ ೬೭ 151
೫೮ ಅಪೌರುಷೇಯ ನಿತ್ಯವಾಕ್ಯವಿಲ್ಲದೆ ಧರ್ಮಾದಿ ಸಿದ್ಧಿ ಇಲ್ಲ
ಶ್ಲೋಕ ೬೮ 153
೫೯ ಪುರುಷವಾಕ್ಯಗಳು ಧರ್ಮಾದಿ ನಿಶ್ಚಾಯಕವಲ್ಲ
ಶ್ಲೋಕ ೬೯-೭೦ 156
೬೦ ವೇದವು ಸಕರ್ತೃಕ ಎಂಬ ಪೂರ್ವ ಪಕ್ಷ ಹಾಗೂ
ಅದರ ನಿರಾಕರಣೆ 159
೬೧ ವರ್ಣನಿತ್ಯತ್ವ 162
೬೨ ಚಾರ್ವಾಕವಾದದ ನಿರಾಕರಣೆ ಶ್ಲೋಕ ೭೧–೭೨ ಅ. 164

**ಅತ: ಶಬ್ದದ ೫ ನೆಯ ಅರ್ಥ**
(ಸಾಮಾನ್ಯ ಅನ್ವಿತಾಭಿಧಾನವಾದ) 166-177

೬೩ ಶಬ್ದಗಳಿಗೆ ಅನ್ವಿತ ಸ್ವ ಅರ್ಥದಲ್ಲಿ ಶಕ್ತಿ ಇದೆ.
ಶ್ಲೋಕ ೭೨–೭೩ ಅ. 166
೬೪ ಶಬ್ದಗಳು ಸ್ವಾಭಾವಿಕ ಶಕ್ತಿಯಿಂದಲೇ ಅನ್ವಯ ಬೋಧಕ
ವಾಗಿವೆ. ಶ್ಲೋಕ ೭೩ 175
೬೫ ಅಥ ಅತಃ ಶಬ್ದಗಳ ಅರ್ಥದಲ್ಲಿ ಪುನರುಕ್ತಿ ಇಲ್ಲ 178
೬೬ ಅತ: ಶಬ್ದದ ಅರ್ಥ ನಿರೂಪಣೆ ಬಗ್ಗೆ ಎರಡು ಆಕ್ಷೇಪ ಮತ್ತು
ಪರಿಹಾರ-ಬ್ರಹ್ಮತರ್ಕ-ಶ್ಲೋಕ ೭೫-೮೦ ಅ. 179-185
೬೭ ಸೂತ್ರದಲ್ಲಿಯ ಬ್ರಹ್ಮಶಬ್ದ ವಿಷ್ಣುವಾಚಕ ಶ್ಲೋಕ ೮೦-೮೮ 185

ಪರಿಶಿಷ್ಟ ೧. ಪಾರಿಭಾಷಿಕ ಶಬ್ದಗಳ ಅಲ್ಪ ಪರಿಚಯ 193-224
ಪರಿಶಿಷ್ಟ ೨. ನ್ಯಾಯಸುಧೆಯ ಮಂಗಲ ಶ್ಲೋಕಗಳು
ಮತ್ತು ಅನುವ್ಯಾಖ್ಯಾನ ಶ್ಲೋಕಗಳು. 225–232

|| ಶ್ರೀವೇದವ್ಯಾಸಾಯ ನಮಃ ||

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

ಅನುವ್ಯಾಖ್ಯಾನಂ — ಜಿಜ್ಞಾಸಾಧಿಕರಣಂ

# ಶ್ರೀಮನ್ನ್ಯಾಯಸುಧಾಭಾವಸಂಗ್ರಹ

**ಪೀಠಿಕೆ :** ಶ್ರೀಮತ್ಪೂಜ್ಯ ವೇದವ್ಯಾಸರು ಜನರಿಗೆ ಆತ್ಯಂತಿಕ ಶ್ರೇಯಸ್ಸಾಗಲೆಂದು ವೇದಾರ್ಥನಿರ್ಣಾಯಕ ಬ್ರಹ್ಮಸೂತ್ರಗಳನ್ನು ರಚಿಸಿದರು. ಆದರೆ ಮುಂದೆ ಕಾಲಕ್ರಮದಿಂದ ಶಂಕರಾಚಾರ್ಯ, ಭಾಸ್ಕರಾಚಾರ್ಯ, ರಾಮಾನುಜಾಚಾರ್ಯ ಮೊದಲಾದ ಇಪ್ಪತ್ತೊಂದು ಭಾಷ್ಯಕಾರರು ವೇದವ್ಯಾಸರ ಅಭಿಪ್ರಾಯಕ್ಕೆ ವಿರುದ್ಧವಾಗಿ ಬ್ರಹ್ಮಸೂತ್ರಗಳಿಗೆ ಅಪವ್ಯಾಖ್ಯಾನ ಮಾಡಿದರು. ಹೀಗಾಗಿ ಜನರು ಅಜ್ಞಾನಾಂಧಕಾರದಲ್ಲಿ ಸಿಕ್ಕು ತೊಳಲುತ್ತಿದ್ದಾಗ, ಶ್ರೀಮನ್ಮಧ್ವಾಚಾರ್ಯರು ಅವತರಿಸಿ, ಹಿಂದಿನ ೨೧ ಭಾಷ್ಯಗಳನ್ನು (ಭಾರತೀವಿಜಯ ಬ್ರಹ್ಮಘೋಷ, ವಿಜಯ, ಶಂಕರ ಭಾಷ್ಯ, ಭಾಸ್ಕರಭಾಷ್ಯ, ಯಾದವ ಪ್ರಕಾಶ, ರಾಮಾನುಜ ಭಾಷ್ಯ ಮುಂ.) ಖಂಡಿಸಿ, ಸೂತ್ರಕಾರರಾದ ಶ್ರೀ ವೇದವ್ಯಾಸದೇವರ ಅಭಿಪ್ರಾಯಕ್ಕನುಗುಣವಾಗಿ ಬ್ರಹ್ಮಸೂತ್ರ ಭಾಷ್ಯ ರಚಿಸಿದರು. ಭಾಷ್ಯ ರಚಿಸಿದ ನಂತರ(ಅನು) ಆದರ ಸ್ಪಷ್ಟೀಕರಣಕ್ಕಾಗಿ, ಅದಕ್ಕೆ ಅನುರೂಪವಾದ, ಅನುಕೂಲಕರವಾದ ಉಪೋದ್ಬಲಕವಾದ ಅನುವ್ಯಾಖ್ಯಾನ ಎಂಬ ಖಂಡನ–ಮಂಡನಾತ್ಮಕವಾದ, ಹರಿತ ಯುಕ್ತಿಗಳನ್ನೊಳಗೊಂಡ ಪ್ರೌಢ ವ್ಯಾಖ್ಯಾನ ಗ್ರಂಥವನ್ನು ಪದ್ಯರೂಪದಲ್ಲಿ ರಚಿಸಿ, ಸಜ್ಜನರಿಗೆ ಆನಂದವನ್ನುಂಟು ಮಾಡಿದರು. ಇದರಂತೆಯೆ ಆನಂದ ಮತ್ತು ಮಂಗಲಕರವಾದ ಮೂಲ ೩೭ ಗ್ರಂಥಗಳನ್ನು (ತೀರ್ಥ–ಶಾಸ್ತ್ರ) ರಚಿಸಿದ್ದರಿಂದ ಮತ್ತು ಸದಾ ಭಗವಂತನಲ್ಲಿ, ಭಗವಂತನ ಪಾದಗಳಲ್ಲಿ ಆಸಕ್ತರಾದ್ದರಿಂದ ಶ್ರೀಮಧ್ವರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೆಂದೇ ಪ್ರಸಿದ್ಧರಾಗಿದ್ದಾರೆ.

ಈ ಅನುವ್ಯಾಖ್ಯಾನ ಗ್ರಂಥಕ್ಕೆ ಶ್ರೀಮಜ್ಜಯತೀರ್ಥರು (ಟೀಕಾಕೃತ್ಪಾದರು) "ನ್ಯಾಯಸುಧಾ" ಎಂಬ ಅತ್ಯಂತ ವಿದ್ವತ್ಪೂರ್ಣ ಹಾಗೂ ಅತಿವಿಸ್ತಾರವಾದ

ಅದ್ವಿತೀಯ ಟೀಕಾ ರಚಿಸಿದ್ದಾರೆ. ಅಮೃತರೂಪವಾದ (ಸುಧಾ) ಯುಕ್ತಿಗಳನ್ನು (ನ್ಯಾಯ) ಒಳಗೊಂಡಿರುವದರಿಂದ ಈ ಮಂಗಲಕರ ಟೀಕಾ ಗ್ರಂಥಕ್ಕೆ "ಶ್ರೀಮನ್ನ್ಯಾಯಸುಧಾ" ಎಂಬ ಅನ್ವರ್ಥಕ ಹೆಸರಿದೆ. ಶ್ರೀಮಜ್ಜಯತೀರ್ಥರ ಈ ಮೇರುಕೃತಿಯನ್ನು ಶ್ರೀಪಾದರಾಜರು, ವ್ಯಾಸತೀರ್ಥರು, ವಾದಿರಾಜರು, ರಘೂತ್ತಮರು, ವಿದ್ಯಾಧೀಶರು, ಸತ್ಯಪ್ರತರು, ರಾಘವೇಂದ್ರತೀರ್ಥರು, ವಿಷ್ಣುತೀರ್ಥರು, ಯಾದವಾರ್ಯರು ಮೊದಲಾದ ಎಲ್ಲ ವಿದ್ವಾಂಸರು ಮುಕ್ತ ಕಂಠದಿಂದ ಸ್ತುತಿಸಿದ್ದಾರೆ. ಈ ಗ್ರಂಥದ ಪ್ರಾರಂಭದಲ್ಲಿರುವ ಶ್ರೀಮಜ್ಜಯತೀರ್ಥರಿಂದ ವಿರಚಿತವಾದ ಮಂಗಲಶ್ಲೋಕಗಳನ್ನು ಕೆಳಗೆ ಕೊಡಲಾಗಿದೆ.

## ಶ್ರೀಮನ್ನ್ಯಾಯಸುಧಾ

**ಶ್ರಿಯಃ ಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ–**
**ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ।**
**ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ**
**ನಮೋಽಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ ॥೧॥**

**ಅವತರಣಿಕೆ :** ಶ್ರೀ ವೇದವ್ಯಾಸ ಮೊದಲಾದ ಮಹಾಜ್ಞಾನಿಗಳು ಅನುಸರಿಸಿದ ಶಿಷ್ಟಾಚಾರ ಪರಂಪರೆಗನುಸಾರವಾಗಿ ಟೀಕಾಕೃತ್ಪಾದರು ಗ್ರಂಥದ ನಿರ್ವಿಘ್ನ ಪರಿಸಮಾಪ್ತಿ, ಪ್ರಸಿದ್ಧಿ, ಮೊದಲಾದ ಉದ್ದೇಶಕ್ಕೋಸ್ಕರ ಹರಿನಮಸ್ಕಾರ ರೂಪ ಮಂಗಲವನ್ನು ಆಚರಿಸುತ್ತಾರೆ. (ಮಂಗಲದ ಅವಶ್ಯಕತೆಗಾಗಿ ಅನುವ್ಯಾಖ್ಯಾನದ ೮ ನೇ ಶ್ಲೋಕದ ವಿವರಣೆ ನೋಡಿರಿ).

**ಅನುವಾದ :** ಎಣಿಸಲು ಬಾರದ ಗುಣಗಳೆಂಬ ಮಾಣಿಕ್ಯಗಳ ಶುಭ್ರ (ವಿಶದ) ಕಾಂತಿ ಸಮೂಹದ ಉಲ್ಲಾಸದಿಂದ ಸಮಸ್ತದೋಷಗಳೆಂಬ ಕತ್ತಲೆಯು ನಾಶಗೊಂಡ, ಜಗತ್ತಿನ ಸೃಷ್ಟಿ–ಸ್ಥಿತಿ–ಪ್ರಲಯ ಮೊದಲಾದವುಗಳ ರಚನೆಯೇ (ಎಂದರೆ ಜನ್ಮಾದ್ಯಷ್ಟಕವೇ) ಸ್ವಭಾವರೂಪವಾದ ದೇಹವಾಗಿಯುಳ್ಳ, ಸಕಲ ಶ್ರುತಿ–ಸ್ಮೃತಿಗಳ ತಾತ್ಪರ್ಯದಿಂದ ಪ್ರತಿಪಾದ್ಯನಾದ (ದೀಪ್ತಾಯ), ಹರಿಗೆ ನಮಸ್ಕಾರವು.

**ವಿವರಣೆ :** ೧) ಶ್ರೀಮನ್ನ್ಯಾಯಸುಧಾ ಗ್ರಂಥವು "ಶ್ರಿಯಃ" ಎಂದು ಪ್ರಾರಂಭವಾಗಿ 'ಭೂತಿಃ ಮಹಾಲಕ್ಷ್ಮೀಃ' ಎಂದು ಕೊನೆಗೊಳ್ಳುತ್ತದೆ. ಹೀಗೆ ಆದ್ಯಂತದಲ್ಲಿ ಶ್ರೀಕಾರವಿರುವದರಿಂದ ಈ ಗ್ರಂಥವು ಶ್ರೀಕರ (ಸಂಪದ್ದಾಯಕ),

೨) ಈ ಶ್ಲೋಕವು ಅನುವ್ಯಾಖ್ಯಾನದ ನಾರಾಯಣಂ........ಸನ್ನಮಾಮಿ ಎಂಬ ೧ ನೇ ಶ್ಲೋಕದ ವಿವರಣೆಯಾಗಿದೆ. ಆ ಶ್ಲೋಕದ ವಿವರವಾದ ಅರ್ಥವಿವೇಚನೆಯನ್ನು ಶ್ರೀಮಜ್ಜಯತೀರ್ಥರೇ ಮುಂದೆ ಏಳು ರೀತಿಯಿಂದ ಮಾಡುತ್ತಾರೆ. ಆದ್ದರಿಂದ ಅದನ್ನು ಮೊದಲು ಈ ಸಂದರ್ಭದಲ್ಲಿ ಅಭ್ಯಸಿಸ ಬೇಕು.

೩) ಜಗತ್ತಿನಲ್ಲಿ ವಿಶಿಷ್ಟ (ಉತ್ತಮ), ಅಧಿಕೃತ (ಗ್ರಂಥಪ್ರತಿಪಾದ್ಯ) ಮತ್ತು ಇಷ್ಟ (ಮನೋಭೀಷ್ಟ) ಎಂಬ ಮೂರು ಬಗೆಯ ದೇವತೆಗಳು ವಂದ್ಯರು ಎಂದರೆ ನಮಸ್ಕಾರಕ್ಕೆ ಅರ್ಹರು.

ಶ್ರೀ ಹರಿಯು (ನಾರಾಯಣನು) ವಿಶಿಷ್ಟನೂ ಅಧಿಕೃತನೂ ಇಷ್ಟನೂ ಆಗಿ ರುವದರಿಂದ ಅವನಿಗೆ ಶ್ರದ್ಧಾ ಭಕ್ತಿಯಿಂದ ನಮಸ್ಕಾರ ಮಾಡುವದು ಅತ್ಯಂತ ಉಚಿತವಾಗಿದೆ. ಹೇಗೆಂದರೆ : ಶ್ರೀ ಹರಿಯು (ನಾರಾಯಣನು) ಸರ್ವೋತ್ತಮ (ವಿಶಿಷ್ಟ) ದೇವತೆ, ಏಕೆಂದರೆ ಅವನು ಗುಣಪೂರ್ಣನೂ ದೋಷ ವಿದೂರನೂ ಜಗಜ್ಜನ್ಮಾದಿಕರ್ತನೂ ಆಗಿದ್ದಾನೆ. ಅವನು ಅಧಿಕೃತ ದೇವತೆ, ಏಕೆಂದರೆ ಅವನು ಸಕಲ ಶ್ರುತಿ-ಸ್ಮೃತಿಗಳಿಂದ ಪ್ರತಿಪಾದ್ಯನು. ಇನ್ನು ಅವನು ಇಷ್ಟದೇವತೆಯೂ ಆಗಿರುವನು ಎಂಬುದು "ಹರಿ" ಶಬ್ದದ ವ್ಯುತ್ಪತ್ತಿಯಿಂದ ತಿಳಿದು ಬರುತ್ತದೆ. 'ಹರತ್ಯ'ಶೇಷಾನ್ ಕ್ಲೇಶಾನ್' ಇತಿ ಹರಿಃ ಎಲ್ಲ ದುಃಖಗಳನ್ನು ಸಂಕಟಗಳನ್ನು ಪರಿಹರಿಸುವದರಿಂದ ಹರಿಶಬ್ದ ವಾಚ್ಯನಾಗಿದ್ದಾನೆ. ದುಃಖನಿವಾರಕನು ಸಕಲರಿಗೆ ಇಷ್ಟನೇ.

೪) ಈ ಶ್ಲೋಕದಲ್ಲಿಯ 'ಹರಿ' ಶಬ್ದದ ವಿಶೇಷಣಗಳು ಅನು ವ್ಯಾಖ್ಯಾನದ ೧ ನೇ ಶ್ಲೋಕದಲ್ಲಿಯ 'ನಾರಾಯಣ' ಶಬ್ದದ ವಿಶೇಷಣಗಳನ್ನು ವಿವರಿಸುತ್ತವೆ. ಆದ್ದರಿಂದ ಆ ಶ್ಲೋಕದ ವ್ಯಾಖ್ಯಾನದಲ್ಲಿ ಟೀಕಾರಾಯರು ಆ ವಿಶೇಷಣಗಳಿಗೆ ಹೇಳಿರುವ ಪ್ರಯೋಜನಗಳು ಇಲ್ಲಿಯು ಹರಿ ಶಬ್ದದ ವಿಶೇಷಣಗಳಿಗೂ ಅನ್ವಯಿಸುತ್ತವೆ. ಹೇಗೆಂದರೆ :

i) 'ಶ್ರಿಯಃ ಪತ್ಯೆ' ಎಂಬುದು ಮೂಲದ ನಾರಾಯಣಂ ಹಾಗೂ ಅಶೇಷ ವಿಶೇಷತೋಪಿ ವಂದ್ಯಂ ಎಂಬುದರ ಸ್ಪಷ್ಟೀಕರಣವಾಗಿದೆ. 'ನಾರಾ' ಎಂದರೆ ದೋಷರಹಿತಳಾದ ಲಕ್ಷ್ಮೀದೇವಿ (ಶ್ರೀ). ಅವಳಿಗೆ ಪತಿಯಾಗಿ ಆಶ್ರಯನು (ಆಯನಂ) ನಾರಾಯಣನು. ಈ ನಾರಾಯಣನಾದರೋ ಸರ್ವೋತ್ತಮತ್ವ

ಧರ್ಮದ ಮೂಲಕ (ಅಶೇಷ ವಿಶೇಷತಃ) ರಮಾ ಬ್ರಹ್ಮಾದಿಗಳಿಗಿಂತಲೂ ಹೆಚ್ಚು ವಂದ್ಯಳು. ಸಕಲವಾಙ್ಮನೋದೇವತೆಯಾದ ಲಕ್ಷ್ಮೀದೇವಿಗೂ ಗ್ರಂಥಾರಂಭದಲ್ಲಿ ಅವಶ್ಯವಾಗಿ ನಮಸ್ಕಾರ ಮಾಡಬೇಕೆಂದೂ, ಆದರೆ ಅವಳಿಗೆ ಪ್ರತ್ಯೇಕ ನಮಸ್ಕಾರ ಮಾಡದೆ ಪರಮಾತ್ಮನ ಜೊತೆಗೆ ಅಪ್ರಧಾನವಾಗಿ (ಈಶ್ವರೋಪಸರ್ಜನತಯಾ) ನಮಸ್ಕಾರ ಮಾಡಬೇಕೆಂದು ತಿಳಿಸಲು ವಿಷ್ಣುವಿನಲ್ಲಿ ರೂಢವಾದ ಶ್ರೀಪತಿಯೇ ಎಂಬ ಸಮಸ್ತ ಪದದ ಬದಲಾಗಿ "ಶ್ರಿಯಃ ಪತ್ಯೇ" ಎಂಬ ಪದಪ್ರಯೋಗವಿದೆ. "ವಿಷ್ಣುನಾ ಸಹಿತಾ ಧ್ಯಾತಾ ಸಾ ಹಿ ತುಷ್ಟಿಂ ಪರಿವ್ರಜೇತ್ ಎಂಬುದೇ ಈ ವಿಷಯ ದಲ್ಲಿ ಪ್ರಮಾಣ.

ii) ನಿತ್ಯಾಗಣಿತ........ತಮಸೇ ಎಂಬ ವಿಶೇಷಣವು ಮೂಲದಲ್ಲಿಯ ನಿಖಿಲ........ ದೇಹಂ ಮತ್ತು ನಿರ್ದೋಷಂ ಎಂಬ ಪದಗಳ ವಿವರಣೆ. ಗುಣ ಮಾಣಿಕ್ಯಗಳ ಶುಭ್ರ ಕಾಂತಿಯ ಉಲ್ಲಾಸದಿಂದ ನಾಶಗೊಳಿಸಲ್ಪಟ್ಟ ದೇಹವುಳ್ಳವ ಭಗವಂತ ಎಂದು ಇಲ್ಲಿ ಹೇಳಿದ್ದರಿಂದ ಗುಣಪೂರ್ಣತ್ವ ಮತ್ತು ನಿರ್ದೋಷತ್ವ ಗಳಲ್ಲಿ ಕಾರಣ-ಕಾರ್ಯಭಾವ ಇದೆ ಎಂದು ತಿಳಿದುಬರುತ್ತದೆ. ಭಗವಂತನು ನಿರ್ದೋಷನೆಂದರೆ ಅವನಲ್ಲ ಪಾರತಂತ್ರ್ಯ ಚಿಂತಾ-ಸಂತಾಪಾದಿ ಯಾವ ದೋಷ ಗಳೂ ಇಲ್ಲ ಎಂದು ಭಾವ. ಅವನ ದೇಹವು ಅಪ್ರಾಕೃತ ಮತ್ತು ನಿತ್ಯವಾದ ಜ್ಞಾನಾನಂದಾದಿ ಗುಣಾತ್ಮಕವಾಗಿರುವದರಿಂದ ಅದಕ್ಕೆ ನಾಶವಿಲ್ಲ. ಅವನ ದೇಹವೂ ನಿತ್ಯವೇ.

iii) ಜಗಜ್ಜನ್ಮ ........ವಪುಷೇ ಎಂಬುದು ಮೂಲದಲ್ಲಿಯ 'ಅಸ್ಯೋದ್ಭ ವಾದಿದಂ' ಎಂಬುದರ ವಿವರಣೆ. ಅಸ್ಯ ಎಂದರೆ ಜಗತ್ತಿನ ಎಂದು ಅರ್ಥ. ಭಗವಂತನು ಜಗತ್ತಿನಲ್ಲಿ ಸೇರಿಲ್ಲ. ಅವನು ಜಗನ್ನಿರ್ಮಾಪಕ, ನಿಯಾಮಕ, ನಿತ್ಯ ಮತ್ತು ಸನಾತನ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಮೊದಲಾದವುಗಳ ರಚನೆಯೇ ಅವನ ಸ್ವಭಾವವಾಗಿರುವದರಿಂದ ಅವನಿಗೆ ಅವುಗಳಿಂದ ಸ್ವಂತ ಪ್ರಯೋಜನವಂತೂ ಸರ್ವಥಾ ಇಲ್ಲ. ಇದು ಅವನ ಲೀಲಾವ್ಯಾಪಾರ. ಅವನು ಸದಾ ಆನಂದಾದಿ ಪೂರ್ಣನಾದ್ದರಿಂದ ಹಾಗೆ ಲೀಲೆಸುತ್ತಾನೆ. ಆದರೆ ಸೃಷ್ಟ್ಯಾದಿ ಗಳಿಗೆ ಪರ ಪ್ರಯೋಜನವಿದೆ. ತನ್ನನ್ನಾಶ್ರಯಿಸಿದ ಸುಜನರ ಅಭ್ಯುದಯ ಕ್ಕೋಸ್ಕರ ಪರಮಾತ್ಮನ ಸೃಷ್ಟಿ ವ್ಯಾಪಾರವಿದೆ. (ಭೂತ್ಯೈ ನಿಜಾಶ್ರಿತಜನಸ್ಯ-ಮ. ಭಾ. ತಾ. ನಿ. 1-3) ಸುಜೀವಿಗಳು ಸ್ವೋಚಿತ ಸಾಧನ ಮಾಡಿಕೊಂಡು ತಮ್ಮ ಸ್ವರೂಪಭೂತ ಆನಂದಾನುಭವ ಅಥವಾ ಮೋಕ್ಷ ಪಡೆಯಬೇಕೆಂಬುದೇ ಭಗ ವಂತನ ಸೃಷ್ಟಿಯ ಪ್ರಯೋಜನ........ ಸ್ಥೇಮ ಎಂದರೆ ಸ್ಥಿತಿ, ರಕ್ಷಣೆ. ಇದು

ಸ್ಥಿರ ಶಬ್ದದಿಂದಉತ್ಪನ್ನವಾಗಿದೆ. ಭಗವಂತನು ಮಾಡುವ ರಕ್ಷಣೆ ಕೇವಲ ಅನ್ನದಾನಾದಿಗಳಿಂದಲ್ಲ. ಅವನು ಜ್ಞಾನವನ್ನು ನೀಡಿ ನಮ್ಮನ್ನು ರಕ್ಷಿಸುತ್ತಾನೆ.

**ಟೀಪು :** ಜಗತ್ತಿನ ಸೃಷ್ಟಿ ಸಂಹಾರಾದಿಗಳು ಭಗವಂತನ ಸ್ವಭಾವ (ಶೀಲ) ಎಂದು ಹೇಳಿದ್ದರಿಂದ ಜನ್ಮಾದಿಕರ್ತೃತ್ವವು ಪರಮಾತ್ಮನ ಸ್ವರೂಪ ಲಕ್ಷಣ. ಪರರು ಹೇಳುವಂತೆ ತಟಸ್ಥ ಲಕ್ಷಣ ಸರ್ವಥಾ ಅಲ್ಲ ಎಂದು ತಿಳಿದುಬರುತ್ತದೆ.

iv) 'ಅಶೇಷಾ........ದೀಪ್ತಾಮ' ಎಂಬ ವಿಶೇಷಣವು ಮೂಲದ ನಿಖಿಲೈಃ ಸುವಾಕ್ಯೈಃ ಅಪ್ರತಿಮಂ ಎಂಬುದರ ವಿವರಣೆ. ಭಗವಂತನು ಸಕಲ ಶ್ರುತಿ ಸ್ಮೃತ್ಯಾದಿ ಸತ್‌ಶಾಸ್ತ್ರದಿಂದ ಮುಖ್ಯ ವೃತ್ತಿಯಿಂದ ಪ್ರತಿಪಾದ್ಯನು.

v) ಹರಯೇ ನಮಃ ಎಂಬುದು ಮೂಲದ 'ನಾರಾಯಣಂ' ಸನ್ನಮಾಮಿ ಎಂಬುದರ ವ್ಯಾಖ್ಯಾನ. ಹರಿ, ನಾರಾಯಣ, ವೇದವ್ಯಾಸ ಮೊದಲಾದ ಭಗವಂತನ ರೂಪಗಳಲ್ಲಿ ಪರಸ್ಪರ ಭೇದವಿಲ್ಲ. ಎಲ್ಲವೂ ಅಭಿನ್ನ, ಎಲ್ಲ ರೂಪಗಳಲ್ಲಿ ಎಲ್ಲ ಸಾಮರ್ಥ್ಯವಿದೆ.

5) ಈ ಶ್ಲೋಕವು ಬ್ರಹ್ಮಸೂತ್ರಗಳ ನಾಲ್ಕು ಅಧ್ಯಾಯಗಳ ಅರ್ಥವನ್ನು ಸಂಕ್ಷಿಪ್ತದಲ್ಲಿ ಸೂಚಿಸುತ್ತದೆ. "ನಿತ್ಯಾಗಣಿತ........ತಮಸೇ" ಎಂಬ ವಿಶೇಷಣದಿಂದ ಭಗವಂತನು ಗುಣಪೂರ್ಣ ಮತ್ತು ನಿರ್ದೋಷ ಎಂದು ತಿಳಿದುಬರುತ್ತದೆ.

ಇದುವೇ ಮೊದಲಿನ ಎರಡು ಅಧ್ಯಾಯಗಳ ತಾತ್ಪರ್ಯ. ಅಶೇಷಾಮ್ನಾಮ.... ದೀಪ್ತಾಯ ಎಂಬ ವಿಶೇಷಣದಿಂದ ಭಗವಂತನು ಜ್ಞೇಯನೆಂದು ಗೊತ್ತಾಗುತ್ತದೆ. ಇದು 3 ನೇ ಅಧ್ಯಾಯದ ತಾತ್ಪರ್ಯ. ಹರಯೇ ಎಂಬುದರಿಂದ ಭಗವಂತನು ಕ್ಲೇಶನಿವಾರಕ ಮತ್ತು ತನ್ಮೂಲಕ ಮೋಕ್ಷಪ್ರದಾತಾ ಎಂಬುದು ನಾಲ್ಕನೇ ಅಧ್ಯಾಯದ ತಾತ್ಪರ್ಯ (ಗಮ್ಯಂ) ಎಂದು ಸೂಚಿತವಾಗುತ್ತದೆ.

**ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ**
**ಪಾಥೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ತ್ವಂ ಪರಂ ।**
**ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಲಾಘಕಾರಿ ಸನ್ಮಾರ್ಗಗಃ ।**
**ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಂ ॥೨॥**

**ಅವತರಣಿಕೆ :** ಗ್ರಂಥ ಪ್ರತಿಪಾದ್ಯನಾದ ಶ್ರೀ ಹರಿ ಅಥವಾ ನಾರಾಯಣನನ್ನು ೧ ನೇ ಶ್ಲೋಕದಲ್ಲಿ ನಮಸ್ಕರಿಸಿದ ನಂತರ, ಆನುಷಂಗಿಕವಾಗಿ ಅನುವ್ಯಾಖ್ಯಾನದ ೨ ನೇ ಶ್ಲೋಕದಲ್ಲಿರುವ "ಶಾಸ್ತ್ರಪ್ರಭವಂ" ಎಂಬ ಪದದ ಅರ್ಥವನ್ನು ತುಸು ವಿವೇಚಿಸುತ್ತ, ಸೂತ್ರಕಾರರಾದ ಶ್ರೀ ವೇದವ್ಯಾಸರನ್ನು ತಮ್ಮ ಅಭೀಷ್ಟ ಸಿದ್ಧಿಗಾಗಿ ಟೀಕಾರಾಯರು ಇಲ್ಲಿ ಪ್ರಾರ್ಥಿಸುತ್ತಾರೆ.

**ಅನುವಾದ :** ಯಾರು ಈ ಭೂಮಂಡಲದಲ್ಲಿ ಅವತರಿಸಿ ವಾಕ್ಯಸಮೂಹವನ್ನು ಅಥವಾ ಜ್ಞಾನ ಸಂತತಿಯನ್ನು ವಿಸ್ತರಿಸಿದರೋ, ವೇದವೆಂಬ ಕಮಲವನ್ನು ಅರಳಿಸಿದರೋ, ಕರುಣೆಯಿಂದ ಸರ್ವೋತ್ತಮ ತತ್ವವನ್ನು ಪ್ರಕಾಶಗೊಳಿಸಿದರೋ ಅಜ್ಞಾನವೆಂಬ ಕತ್ತಲೆಯನ್ನು ನಾಶಗೊಳಿಸಿದರೋ, ಸಜ್ಜನರ ಸಮೂಹವನ್ನು ಸನ್ಮಾರ್ಗದಲ್ಲಿ ಹೋಗುವಂತೆ ಮಾಡಿದರೋ, ಆ ವೇದವ್ಯಾಸರೆಂಬ ಸೂರ್ಯನೊಂದಿಗೆ (ಇರುವದನ್ನು) ನನ್ನ ಮನಸ್ಸು ಬಿಡದಿರಲಿ (ಎಂದರೆ ನನ್ನ ಮನಸ್ಸು ಸದಾ ವೇದವ್ಯಾಸರಲ್ಲಿಯೇ ಆಸಕ್ತವಾಗಲಿ ಎಂದು ಭಾವ).

**ವಿವರಣೆ :** ೧) ವೇದವ್ಯಾಸರು ಈ ಭೂಮಂಡಲದಲ್ಲಿ ಯಮುನಾ ದ್ವೀಪದಲ್ಲಿ ಅವತರಿಸಿ ಮಾಡಿದ ಮುಖ್ಯ ಕಾರ್ಯಗಳನ್ನು ಇಲ್ಲಿ ನಿರೂಪಿಸಲಾಗಿದೆ. ಅವರು ಅವತಾರ ಮಾಡಿದೊಡನೆ ಅಪಹಾರಾದಿಗಳಿಂದ ತಿರೋಹಿತವಾದ ವೇದ ಸಮೂಹವನ್ನು ಅಭಿವ್ಯಕ್ತಗೊಳಿಸುವದಕ್ಕೋಸ್ಕರ ವೇದವಿಭಾಗ ಮಾಡಿದರು. ಇದಲ್ಲದೆ ಭಾರತ ಮತ್ತು ಪುರಾಣಗಳನ್ನು, ವೇದಾರ್ಥ ನಿರ್ಣಾಯಕ ಬ್ರಹ್ಮಸೂತ್ರಗಳನ್ನು ರಚಿಸಿದರು. ಹೀಗೆ ಮೂರು ರೀತಿಯಿಂದ ವಾಕ್ಯಸಮೂಹವನ್ನು ಅಥವಾ ಜ್ಞಾನ ಸಂತತಿಯನ್ನು ವಿಸ್ತಾರಗೊಳಿಸಿದರು. ಮತ್ತು ತಮ್ಮ ಜ್ಞಾನ ಕಿರಣದಿಂದ (ಗೋ) ವೇದವೆಂಬ ಕಮಲವನ್ನು ಅರಳಿಸಿದರು. ಎಂದರೆ ವೇದವನ್ನು ಅಭಿವ್ಯಕ್ತಗೊಳಿಸಿದರೆಂದು ತಾತ್ಪರ್ಯ. ಹೀಗೆ ಅವರು ಶಾಸ್ತ್ರಪ್ರಭವ ಆಗಿದ್ದಾರೆ. ಎಂದರೆ ಪೌರುಷೇಯವಾದ ಬ್ರಹ್ಮಸೂತ್ರ–ಭಾರತ–ಪುರಾಣಗಳನ್ನು ರಚಿಸಿದರು. ಮತ್ತು ಅಪೌರುಷೇಯವಾದ ವೇದವನ್ನು ಪ್ರವರ್ತಿಸಿದರು ಎಂದು ತಾತ್ಪರ್ಯ.

೨) ಈ ಶ್ಲೋಕದಲ್ಲಿಯ 'ಕರುಣಯಾ' ಎಂಬ ಶಬ್ದವನ್ನು ಎಲ್ಲ ಕ್ರಿಯೆಗಳೊಡನೆ ಅನ್ವಯಿಸಬಹುದು, ಎಂದರೆ ಯಾರು ಜನರ ಮೇಲಿನ ಕರುಣೆಯಿಂದ ಅವತರಿಸಿದರೋ ಯಾರು ದಯೆಯಿಂದ ಶಾಸ್ತ್ರ ರಚಿಸಿದರೋ........ಮುಂ.

೩) ಈ ಶ್ಲೋಕದ ಸೌಂದರ್ಯ ಇಲ್ಲಿ ಪ್ರಯೋಗಿಸಲ್ಪಟ್ಟ ಪ್ರಾದುರ ಭಾವಿ, ವ್ಯಸ್ತಾರಿ, ಮೊದಲಾದ ಏಳು ಲುಙ (ತೃತೀಯ ಭೂತ, Aorist) ಪ್ರಯೋಗಳಿಂದ ಹೆಚ್ಚಿದೆ.

**ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ ।**
**ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೇ ಸಕ್ತಿರ್ನವೈ ಬಾಧಿತೇ ।**
**ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸ ಮೇ ।**
**ಭೂಯಾತ್ತತ್ತ್ವವಿನಿರ್ಣಯಾಯ ಭಗವಾನಾನಂದತೀರ್ಥೋಮುನಿಃ ॥೩॥**

**ಅವತರಣಿಕೆ :** ಯುಕ್ತಿಗಳ ಆಕರವಾದ ಅನುವ್ಯಾಖ್ಯಾನ ಗ್ರಂಥದಲ್ಲಿಯ ಯುಕ್ತಿಗಳ ಸರಿಯಾದ ಜ್ಞಾನಕ್ಕೋಸ್ಕರ ಗ್ರಂಥಕರ್ತರಾದ ಭಗವಾನ್ ಆನಂದ ತೀರ್ಥರನ್ನು 'ಯುಕ್ತಿಶ್ಲೇಷದಿಂದ' ತತ್ವಜ್ಞಾನ ಕರುಣಿಸಲು ಟೀಕಾಕೃತ್ಪಾದರು ಪ್ರಾರ್ಥಿಸುತ್ತಾರೆ.

**ಅನುವಾದ :** ಯಾರು ಸ್ವಸಾಮರ್ಥ್ಯದಿಂದ (ನಿಜೇನ ಮಹಸಾ) ತಮ್ಮ ಪಕ್ಷ ದಲ್ಲಿ ಎಂದರೆ ಭಕ್ತವರ್ಗದಲ್ಲಿ ಅಥವಾ ಸೂತ್ರಕಾರರಿಗೆ ಸಮ್ಮತವಾದ ಸ್ವಸಿದ್ಧಾಂತ ದಲ್ಲಿ ನಿಯತಸಂಬಂಧವುಳ್ಳವರಾಗಿರುವರೋ (ವ್ಯಾಪ್ತಿ), ಸಪಕ್ಷದಲ್ಲಿಯೂ ಇರು ವರೋ (ಎಂದರೆ ಯೋಗ್ಯ ಜನರಲ್ಲಿ, ಹರಿಯಲ್ಲಿ ಅಥವಾ ಸ್ವಸಮ್ಮತವಾದ ವೈಶೇಷಿಕರ ಭೇದಸತ್ಯತ್ವದಲ್ಲಿ ಇರುವರೋ), ವಿಪಕ್ಷದಿಂದ ಎಂದರೆ ಅಯೋಗ್ಯ ಜನರಿಂದ ಅಥವಾ ವಿರುದ್ಧ ಸಿದ್ಧಾಂತ ಇಲ್ಲವೇ ಪ್ರಮೇಯಗಳಿಂದ ದೂರವಿರು ವರೋ (ವ್ಯಾವೃತ್ತಿಃ) ಎಂದರೆ ಅವುಗಳನ್ನು ಸರ್ವಥಾ ಅಂಗೀಕರಿಸುವದಿಲ್ಲವೋ, ಯಾರಿಗೆ ಪ್ರಮಾಣಬಾಧಿತವಾದ ವಿಷಯದಲ್ಲಿ ಆಸಕ್ತಿ ಇಲ್ಲವೇ ಇಲ್ಲವೋ (ನವೈ) ಮತ್ತು ಯಾರಿಗೆ ಪ್ರತಿವಾದಿಗಳ ಸಂಬಂಧವೇ ಇಲ್ಲವೋ (ನೈವ) ಆ ಅಸದೃಶ (ಅತುಲಃ) ನಿರ್ದುಷ್ಟ (ಶುದ್ಧಂ) ಪ್ರಮಾಣ ರೂಪವಾದ (ಎಂದರೆ ಜ್ಞಾನಸಾಧನ ಅಥವಾ ಕರಣವಾದ) ಆ ಪೂಜ್ಯ ಆನಂದತೀರ್ಥಮುನಿ ನನಗೆ ತತ್ವ ನಿರ್ಣಯಕ್ಕೆ ಕಾರಣವಾಗಲಿ.

**ವಿವರಣೆ :** ೧) ನಿಜೇನ ಮಹಸಾ–ಸ್ವಸಾಮರ್ಥ್ಯದಿಂದ, ವರಬಲ ಅಥವಾ ತಪಃ ಪ್ರಭಾವಗಳಿಂದಲ್ಲ. ಮಹಸ್ – (ನ) ಸಾಮರ್ಥ್ಯ.

2) **ತತ್ವನಿರ್ಣಯ :** ಇದು ಹೀಗೆಯೇ (ಇದಂ ಇತ್ಥಂ) ಎಂಬ ನಿಶ್ಚಿತ ತತ್ವ ಜ್ಞಾನ. ಇದೋ, ಅದೋ ಅಥವಾ ಬೇರೆಯದೋ ಎಂಬ ಸಂಶಯ, ವಿಪರೀತ

ಜ್ಞಾನರಹಿತವಾದ ನಿಶ್ಚಯಾತ್ಮಕ ತತ್ವಜ್ಞಾನ. ಇಂತಹ ತತ್ವಜ್ಞಾನವು ನನಗೆ ಆನಂದತೀರ್ಥರಿಂದಾಗಲಿ ಎಂದು ಟೀಕಾರಾಯರ ಪ್ರಾರ್ಥನೆ.

3) ಶುದ್ಧಂ ಪ್ರಮಾಣಂ – ನಿರ್ದುಷ್ಟ ಅಥವಾ ನಿರ್ಮಲ ಪ್ರಮಾಣ. ಇಲ್ಲಿ ಪ್ರಮಾಣ ಎಂದರೆ ಜ್ಞಾನಕರಣ, ಜ್ಞಾನಸಾಧನ, ಮನಸ್ಸು ಮತ್ತು ಇಂದ್ರಿಯಾದಿ ಕರಣಗಳಿಂದ ಜ್ಞಾನವಾಗುವಂತೆ ಶ್ರೀಮದಾನಂದತೀರ್ಥರೆಂಬ ಸಾಧನದಿಂದ ಜ್ಞಾನವಾಗುತ್ತದೆ. ಅವರು ಪೂರ್ಣಪ್ರಜ್ಞರು ಮತ್ತು ಜ್ಞಾನದಾತಾ ಆಗಿದ್ದಾರೆ. ಮನಸ್ಸು ಮೊದಲಾದ ಇಂದ್ರಿಯಗಳು ಉಪಯೋಗಿಸುವವನ ಅಧೀನ. ಆದರೆ ಆನಂದತೀರ್ಥರು ಹಾಗಲ್ಲ. ಅವರು ಮನುಷ್ಯನ ಮನ ಆದಿ ಇಂದ್ರಿಯಗಳನ್ನು ಪ್ರೇರಿಸಿ, ಜ್ಞಾನ ಉಂಟುಮಾಡುತ್ತಾರೆ.

೪) ಇಲ್ಲಿ ಆನಂದತೀರ್ಥರನ್ನು ಶುದ್ಧ ಪ್ರಮಾಣಕ್ಕೆ ಹೋಲಿಸಲಾಗಿದೆ. ಶುದ್ಧ ಪ್ರಮಾಣವಾದ ಅನ್ವಯವ್ಯತಿರೇಕಿ ಅನುಮಾನ 'ಪಂಚಾವಯವಿಯಾಗಿದೆ.' ಆ ಐದು ಧರ್ಮ ಅಥವಾ ರೂಪಗಳೆಂದರೆ i) ಹೇತು ಪಕ್ಷದಲ್ಲಿರುತ್ತದೆ. (ಪಕ್ಷ ಧರ್ಮತ್ವಂ) ii) ಹೇತು ಸಪಕ್ಷದಲ್ಲಿ (ದೃಷ್ಟಾಂತದಲ್ಲಿ) ಇರುತ್ತದೆ. (ಸಪಕ್ಷಸತ್ವಂ) iii) ಹೇತು ವಿಪಕ್ಷದಲ್ಲಿ ವಿರುದ್ಧ ಸ್ಥಳದಲ್ಲಿ ಇರುವದಿಲ್ಲ. (ವಿಪಕ್ಷಾತ್ ವ್ಯಾವೃತ್ತಿ) iv) ಅನುಮಾನವು ಪ್ರಮಾಣದಿಂದ ಬಾಧಿತವಾಗ ದಿದ್ದುದನ್ನೇ ವಿಷಯೀಕರಿಸುತ್ತದೆ. (ಅಬಾಧಿತ ವಿಷಯತ್ವಂ) v) ಅನುಮಾನವು ವಿರೋಧಿ ಅನುಮಾನರಹಿತವಿರುತ್ತದೆ. (ಅಸತ್ ಪ್ರತಿಪಕ್ಷತ್ವಂ) ಉದಾ : ಪರ್ವ ತವು ಬೆಂಕಿಯುಳ್ಳದ್ದಾಗಿದೆ. ಹೊಗೆಯುಳ್ಳದ್ದಾಗಿದ್ದರಿಂದ, ಅಡಿಗೆಯ ಮನೆಯಂತೆ. ಈ ಅನುಮಾನದಲ್ಲಿ ಹೊಗೆಯುಳ್ಳದ್ದಾಗಿದ್ದರಿಂದ 'ಧೂಮಾತ್' ಎಂಬುದು ಹೇತು, ಬೆಂಕಿಯಿರುವದಕ್ಕೆ ಕಾರಣ, ಈ ಹೇತು (ಹೊಗೆಯು) ಪಕ್ಷವಾದ ಪರ್ವತದಲ್ಲಿದೆ, ಸಪಕ್ಷ ಅಥವಾ ದೃಷ್ಟಾಂತವಾದ ಅಡಿಗೆಯ ಮನೆಯಲ್ಲಿ (ಮಹಾ ನಸ) ಇದೆ. ಆದರೆ ಹೊಗೆ ವಿಪಕ್ಷ ಅಥವಾ ವಿರುದ್ಧ ಸ್ಥಳವಾದ ನೀರಿನ ಮಡುವಿನಲ್ಲಿ (ಹ್ರದಃ) ಇಲ್ಲ. ಈ ಅನುಮಾನವು ಯಾವ ಪ್ರಮಾಣದಿಂದಲೂ ಬಾಧಿತವಾಗಿಲ್ಲ. ಮತ್ತು ಕೊನೆಯದಾಗಿ. ಪರ್ವತದಲ್ಲಿ ಬೆಂಕಿಯಿಲ್ಲ ಎಂದು ಸಾಧಿಸುವ ವಿರೋಧಿ ಅನುಮಾನವಿಲ್ಲ.

ಇದರಂತೆ ಆನಂದತೀರ್ಥರೆಂಬ ಪ್ರಮಾಣಕ್ಕೂ ಐದು ಅಂಗ ಅಥವಾ ರೂಪಗಳಿವೆ. ಹೇಗೆಂದರೆ– ಅವರು ಸ್ವಸಾಮರ್ಥ್ಯದಿಂದ ಸ್ವಪಕ್ಷವಾದ ಭಕ್ತರಲ್ಲಿ ಅನುಗ್ರಾಹಕರಾಗಿ ಅಥವಾ ಸೂತ್ರಕಾರರಿಗೆ ಸಮ್ಮತವಾದ ತಮ್ಮ ಸತ್ ಸಿದ್ಧಾಂತ

ದಲ್ಲಿ ನಿಯಮೇನ ಇದ್ದಾರೆ. ಇದರಂತೆ ಸಪಕ್ಷವಾದ ಯೋಗ್ಯ ಜನರಲ್ಲಿಯೂ ಅನುಗ್ರಾಹಕರಾಗಿ ಇದ್ದಾರೆ. ಅಥವಾ ನಮಗೆ ಸಮ್ಮತವಾದ ಪರವಾದಿಗಳ ಭೇದಸತ್ಯತ್ವ ಮುಂ ಪ್ರಮೇಯಗಳಲ್ಲಿಯೂ ಇದ್ದಾರೆ. ಅಥವಾ ತತ್ವಜ್ಞಾನವೇ ಸ್ವರೂಪವಾಗಿಯುಳ್ಳ ಹರಿಯೆಂಬ ಸಪಕ್ಷದಲ್ಲಿ ಅನುಗ್ರಾಹ್ಯರಾಗಿ ಇದ್ದಾರೆ. ಆದರೆ ವಿಪಕ್ಷವಾದ ದುರ್ಜನರಲ್ಲಿ ಅನುಗ್ರಾಹಕರಾಗಿರುವದಿಲ್ಲ. ಅಥವಾ ಜಿನಾದಿ ದುರಾಗಮಗಳಲ್ಲಿ ಸರ್ವಥಾ ಇರುವದಿಲ್ಲ. ಅವರಿಗೆ ಪ್ರಮಾಣಬಾಧಿತ ವಿಷಯ ದಲ್ಲಿ ಎಂದರೆ ಜಗನ್ಮಿಥ್ಯಾತ್ವ, ಜೀವಬ್ರಹ್ಮೈಕ್ಯ, ಮುಂ. ಗಳಲ್ಲಿ ಆಸಕ್ತಿ ಎಳ್ಳಷ್ಟೂ ಇಲ್ಲ. (ಸಕ್ತಿಃ ನೈವ) ಕೊನೆಯದಾಗಿ ಅವರ ಸಿದ್ಧಾಂತವನ್ನು ವಿರೋಧಿಸುವ ಸಬಲ ಪ್ರತಿಪಕ್ಷ ಅಥವಾ ಪ್ರತಿವಾದಿಗಳೇ ಇಲ್ಲ. ಪ್ರತಿಪಕ್ಷಯುಕ್ತಿ ಎಂದರೆ ಪ್ರತಿವಾದಿಯೋಗಃ

ಈ ಶ್ಲೋಕದಲ್ಲಿ ಅಡಕವಾದ ಅನುಮಾನ ಪ್ರಯೋಗ ಕೆಳಗಿನಂತಿದೆ. ಭಕ್ತವರ್ಗಃ ತತ್ವಜ್ಞಾನವಾನ್, ಅನುಗ್ರಾಹ್ಯತ್ವ–ಅನುಗ್ರಾಹಕತ್ವ–ಏತದನ್ಯತರ ಸಂಬಂಧೇನ ಶ್ರೀಮದಾಚಾರ್ಯವತ್ವಾತ್ ಶ್ರೀಹರಿವತ್.

**ಗಮನಿಸಿರಿ :** ೧) ಇಲ್ಲಿ ಪ್ರಸಕ್ತವಾದ ಅನ್ವಯವ್ಯತಿರೇಕಿ ಅನುಮಾನ ಸ್ವತಂತ್ರ ವಾಗಿ ಪ್ರಮಾಣವಲ್ಲ. ಅದಕ್ಕೆ ಪ್ರತ್ಯಕ್ಷ ಅಥವಾ ಆಗಮದ ಬೆಂಬಲವಿದ್ದರೆ ಮಾತ್ರ ಅದು ಪ್ರಮಾಣವಾಗುತ್ತದೆ. (ಅನುಸೃತ್ಯ ಮಾನಂ) ೨) ಆನಂದ ತೀರ್ಥರ ಜ್ಞಾನವು ಅತಿಶುದ್ಧ, ಈಶ್ವರನನ್ನು ಬಿಟ್ಟು ಉಳಿದ ವಿಷಯದಲ್ಲಿ ಆಲೋಚಿಸಿದರೆ, ಸರ್ವವಿಷಯಕ ಜ್ಞಾನವಿದೆ. ಪ್ರಲಯ ಕಾಲದಲ್ಲಿಯೂ ಅವರ ಜ್ಞಾನಕ್ಕೆ ತಿರೋಧಾನವಿಲ್ಲ. ಅವರು ಸ್ವತಃ ಪೂರ್ಣಪ್ರಜ್ಞರಿದ್ದು ಉಳಿದವರಿಗೆ ಜ್ಞಾನದಾತಾ ಆಗಿದ್ದಾರೆ. ಆದ್ದರಿಂದ ಅವರ ಅನುಗ್ರಹವನ್ನು ಸ್ವೋಚಿತ ಕರ್ಮಾನುಷ್ಠಾನ, ಭಕ್ತಿ, ವಿರಕ್ತಿ ಮತ್ತು ಶ್ರವಣ–ಮನನಾದಿಗಳಿಂದ ಪಡೆದರೆ, ಅವರು ನಿಶ್ಚಿತ ತತ್ವಜ್ಞಾನ ನೀಡುತ್ತಾರೆ. ಅಂತೆಯೇ ಶ್ರೀಮಜ್ಜಯತೀರ್ಥರು ತತ್ವನಿರ್ಣಯಕ್ಕಾಗಿ ಆನಂದತೀರ್ಥ ಮುನಿಗಳನ್ನು ಪ್ರಾರ್ಥಿಸಿದ್ದಾರೆ.

**ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ**
**ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।**
**ಸಕಲವಚನಚೇತೋದೇವತಾ ಭಾರತೀ ಸಾ**
**ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಮೇ ॥೪॥**

**ಅವತರಣಿಕೆ :** ಲಕ್ಷ್ಮೀ ದೇವಿಯ ನಂತರ ವಾಙ್ಮನೋನಿಯಾಮಕಳಾದ ಭಾರತೀ ದೇವಿಯನ್ನು (ವಾಯುಪತ್ನಿಯನ್ನು) ಪ್ರಾರ್ಥಿಸಲಾಗಿದೆ. ಲಕ್ಷ್ಮೀ ದೇವಿಯನ್ನು ಪ್ರತ್ಯೇಕ ನಮಸ್ಕರಿಸದೇ ಪತಿ ನಾರಾಯಣ ಸಹಿತವಾಗಿ ನಮಸ್ಕರಿಸಿದಂತೆ, ಇಲ್ಲಿ

ಭಾರತೀದೇವಿಯನ್ನು ಪತಿ ವಾಯು ಸಹಿತ ನಮಸ್ಕರಿಸುವಂತಿಲ್ಲ. ಏಕೆಂದರೆ ವಾಯುದೇವರು (ಮಧುಕರವಾದ ಶಾಸ್ತ್ರ ರಚಿಸಿದ) ಮಧ್ವರೂಪದಿಂದ ಅವತರಿಸಿ ಸನ್ಯಾಸಾಶ್ರಮ ಸ್ವೀಕರಿಸಿದ್ದಾರೆ. ಹೀಗಾಗಿ ಇಲ್ಲಿ ಭಾರತೀದೇವಿಗೆ ಪ್ರತ್ಯೇಕ ಪ್ರಾರ್ಥನೆಯಿದೆ.

**ಅನುವಾದ :** ಯಾರ ಅನುಗ್ರಹದಿಂದ (ಅನುಭಾವಾತ್) ಹುಟ್ಟು ಕಿವುಡ, ಹುಟ್ಟು ಮೂಕನು ಸಹ ವಾಗ್ಮಿಯಾಗುವನೋ, ಮಂದಬುದ್ಧಿಯುಳ್ಳವನು ದೊಡ್ಡ ಪಂಡಿತನಾಗುವನೋ, ಆ ಸಕಲ ವಾಙ್ಮನೋದೇವತೆಯಾದ ಭಾರತೀ ದೇವಿಯು ನನ್ನ ವಾಕ್ಕಿನಲ್ಲಿ ಮತ್ತು ಮನಸ್ಸಿನಲ್ಲಿ ಸನ್ನಿಧಾನವನ್ನಿಡಲಿ.

**ವಿವರಣೆ ;** ೧) ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ದೇವೀಂ ಸರಸ್ವತೀಂ ವ್ಯಾಸಂ ತತೋ ಗ್ರಂಥಮುದೀರಯೇ ಎಂಬ ಶಿಷ್ಟ ಪರಂಪರೆ ಗನುಸಾರವಾಗಿ ಇಲ್ಲಿ ಭಾರತೀದೇವಿಯನ್ನು ಪ್ರಾರ್ಥಿಸಲಾಗಿದೆ. ಗ್ರಂಥ ರಚನೆ ವಾಕ್‌ಚೇತೋವ್ಯಾಪಾರವಾದ್ದರಿಂದ ಆದಕ್ಕಭಿಮಾನಿಯಾದ ಭಾರತೀದೇವಿಯನ್ನು ಟೀಕಾಚಾರ್ಯರು ಪ್ರಾರ್ಥಿಸಿದ್ದಾರೆ.

೨) **ಏಡಮೂಕ :** ಮಾತನಾಡಲು ಮತ್ತು ಕೇಳಲು ಅಸಮರ್ಥನು. ಬಧಿ-'ರಶ್ಚಾಸೌ ಮೂಕಶ್ಚ' ಅಪಿ ಇದು ವ್ಯತಿರೇಕ ಸಮುಚ್ಚಾಯಕ ಅವ್ಯಯ. ಯಾರ ಅನುಗ್ರಹವಿದ್ದರೆ ಹುಟ್ಟು ಕಿವುಡ ಮೂಕನು ಮಾತನಾಡುವನೋ ಯಾರ ಅನು ಗ್ರಹವಿಲ್ಲದಿದ್ದರೆ ವಾಗ್ಮಿಯೂ ಮೂಕನಾಗುವನೋ ಎಂಬುದನ್ನು ಇಲ್ಲಿ ಅರಿಯ ಬೇಕು.

**ರಮಾನಿವಾಸೋಚಿತವಾಸಭೂಮಿಸ್ಸನ್ನ್ಯಾಯರತ್ನಾವಲಿಜನ್ಮಭೂಮಿಃ ।**
**ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾ-**
**ಮೃತಾಬ್ಧಿರ್ಭವತಾದ್ವಿಭೂತ್ಯೈ ॥೫॥**

**ಅವತರಣಿಕೆ :** ಪ್ರಾಚೀನ ಟೀಕಾಕಾರರಾದ ಪದ್ಮನಾಭತೀರ್ಥರನ್ನು ಟೀಕಾ ಚಾರ್ಯರು ಪ್ರಾರ್ಥಿಸುತ್ತಾರೆ.

**ಅನುವಾದ :** ಲಕ್ಷ್ಮೀದೇವಿಗೆ ವಾಸಸ್ಥಾನ ಎಂದರೆ ಆಶ್ರಯನಾದ (ರಮಾ ನಿವಾಸ) ನಾರಾಯಣನಿಗೆ ಯೋಗ್ಯ ವಾಸಸ್ಥಾನವಾದ, ಸನ್ನ್ಯಾಯ ರತ್ನಾವಲಿಗೆ ಜನ್ಮಭೂಮಿಯಾದ, ವೈರಾಗ್ಯವೇ, ಭಾಗ್ಯವಾಗಿಯುಳ್ಳ ಪದ್ಮನಾಭತೀರ್ಥರೆಂಬ ಅಮೃತ ಸಮುದ್ರವು ನನಗೆ (ಭಕ್ತಿ-ಜ್ಞಾನ-ವೈರಾಗ್ಯಾದಿ) ಸಂಪತ್ತನ್ನು ನೀಡಲಿ

**ವಿವರಣೆ :** ೧) ಶ್ರೀಪದ್ಮನಾಭತೀರ್ಥರು ಪ್ರಾಚೀನ ಟೀಕಾಕಾರರು. ಶ್ರೀಮಧ್ವಾ

ಚಾರ್ಯರ 'ಅನುವ್ಯಾಖ್ಯಾನ' ಗ್ರಂಥಕ್ಕೆ ಸನ್ನ್ಯಾಯರತ್ನಾವಲಿ ಎಂಬ ಟೀಕಾ ರಚಿಸಿದ ಮಹನೀಯರು. ಇಲ್ಲಿ ಅವರನ್ನು ಅಮೃತ ಸಮುದ್ರಕ್ಕೆ ಹೋಲಿಸಲಾಗಿದೆ. ಅಮೃತಸಮುದ್ರವು ಹೇಗೆ ಲಕ್ಷ್ಮೀದೇವಿಗೆ ಆಶ್ರಯನಾದ (ರಮಾನಿವಾಸ) ನಾರಾಯಣನಿಗೆ ವಾಸಸ್ಥಾನವಾಗಿದೆಯೋ ಅದರಂತೆ ಪದ್ಮನಾಭತೀರ್ಥರೆಂಬ ಸಮುದ್ರವು ಸನ್ನ್ಯಾಯ ರತ್ನಾವಲಿ ಗ್ರಂಥಕ್ಕೆ ಜನ್ಮಭೂಮಿಯಾಗಿದೆ. ಎಂದರೆ ಸನ್ನ್ಯಾಯ ರತ್ನಾವಲಿ ಎಂಬ ಗ್ರಂಥವನ್ನು ಪದ್ಮನಾಭತೀರ್ಥರು ರಚಿಸಿದ್ದಾರೆಂದು ತಾತ್ಪರ್ಯ. ಅಮೃತ ಸಮುದ್ರದ ಬಿಳಿಯ ಬಣ್ಣವೇ (ಶುಕ್ಲಂ) ವೈರಾಗ್ಯ, (ರಾಗ ಎಂದರೆ ಕೆಂಪುಬಣ್ಣ. ವಿರಾಗವೆಂದರೆ ಕೆಂಪುಬಣ್ಣಕ್ಕೆ ವಿರುದ್ಧವಾದ ಬಿಳಿಯ ಬಣ್ಣ) ಪದ್ಮನಾಭತೀರ್ಥರಿಗೆ ರಾಗರಹಿತವಾದ (ಎಂದರೆ ಆಸಕ್ತಿಯಿಲ್ಲದ) ವೈರಾಗ್ಯವೇ ಭಾಗ್ಯವಾಗಿತ್ತು.

೨) **ವಿಭೂತಿ :** ಭಕ್ತಿ, ಜ್ಞಾನ ಸಂಪತ್ತು. ಈ ಶ್ಲೋಕದಲ್ಲಿ ಪದ್ಮನಾಭತೀರ್ಥರಿಗಿರುವ ಮೂರು ವಿಶೇಷಣಗಳು ಅನುಕ್ರಮವಾಗಿ ಭಕ್ತಿ, ಜ್ಞಾನ, ವೈರಾಗ್ಯ ಸೂಚಿಸುತ್ತವೆ.

**ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ**
**ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ಮಮ ||೬||**

**ಅವತರಣಿಕೆ :** ತಮ್ಮ ಸಾಕ್ಷಾದ್ಗುರುಗಳಾದ ಶ್ರೀಮದಕ್ಷೋಭ್ಯತೀರ್ಥರಿಗೆ ಟೀಕಾಕೃತ್ಪಾದರು ನಮಸ್ಕಾರ ಮಾಡುತ್ತಾರೆ.

**ಅನುವಾದ :** ವ್ಯಾಕರಣ – ಮೀಮಾಂಸಾ – ನ್ಯಾಯಶಾಸ್ತ್ರಗಳಲ್ಲಿ ಬಲ್ಲಿದರಾದ ಎದುರಾಳಿಗಳ ಗರ್ವಚ್ಛೇದ ಮಾಡುವ ಶ್ರೀಮದಕ್ಷೋಭ್ಯತೀರ್ಥರನ್ನು ನಾನು ಪೂಜಿಸುತ್ತೇನೆ.

**ವಿವರಣೆ :** ೧) ಪದ– ಶಬ್ದದ ಅರ್ಥಜ್ಞಾನಕ್ಕೆ ಸಹಾಯಕವಾದ ವ್ಯಾಕರಣ ಪದ್ಯತೇ ಶಬ್ದಾರ್ಥ : ಅನೇನ ಇತಿ ಪದಂ ವ್ಯಾಕರಣಂ. ವಾಕ್ಯ – ವಾಕ್ಯಾರ್ಥಜ್ಞಾನಕ್ಕೆ ಉಪಾಯವಾದ ಮೀಮಾಂಸಾ ಶಾಸ್ತ್ರ. ಪ್ರಮಾಣ – ಪ್ರಮಾಣ ನಿರೂಪಕ, ತರ್ಕಶಾಸ್ತ್ರ, ನ್ಯಾಯಶಾಸ್ತ್ರ ಉಪತಿಷ್ಠೆ – ಸೇವಿಸುತ್ತೇನೆ. ಪೂಜಿಸುತ್ತೇನೆ ಸ್ಥಾ ಧಾತುವಿಗೆ ಉಪ ಎಂಬ ಉಪಸರ್ಗ–ಪರವಾದರೆ ಅದು ಆತ್ಮನೇ ಪದವಾಗುತ್ತದೆ. ೨) 'ಗುರೋರ್ನಾಮ ನ ಗೃಹ್ಣೀಯಾತ್ ಶಿಷ್ಯೋ ಭಾರ್ಯಾಪತೇರಪಿ' ಎಂಬ ಪ್ರಮಾಣವಿರುವಾಗ ಟೀಕಾರಾಯರು ತಮ್ಮ ಸಾಕ್ಷಾತ್ ಗುರುಗಳಾದ ಅಕ್ಷೋಭ್ಯತೀರ್ಥರ ಹೆಸರನ್ನು ಅದು ಹೇಗೆ ತೆಗೆದುಕೊಂಡರೆಂಬ ಆಕ್ಷೇಪಕ್ಕೆ ಸಮಾಧಾನ ಹೀಗಿದೆ. ಟೀಕಾರಾಯರು ಗುರುಗಳ ಹೆಸರನ್ನೇ ತೆಗೆದು

ಕೊಂಡಿಲ್ಲ. 'ಶ್ರೀಮದಕ್ಷೋಭ್ಯ ತೀರ್ಥಾಖ್ಯಾನ್' ಎಂಬುದರ ಅರ್ಥ ಹೀಗಿದೆ. ಶ್ರೀಮತಾ ಎಂದರೆ ಸಂಪತ್ತುಳ್ಳ ವಿಜಯನಗರ ಸಾಮ್ರಾಜ್ಯದಲ್ಲಿ ರಾಜಗುರು ಎಂಬ ಸಂಪತ್ತನ್ನು ಪಡೆದ ವಿದ್ಯಾರಣ್ಯರಿಂದ. ಅಕ್ಷೋಭ್ಯತೀರ್ಥಾಖ್ಯಾನ್ ಎಂದರೆ ವಿದ್ಯಾರಣ್ಯರೊಡನೆ ಜರುಗಿದ 'ತತ್ತ್ವಮಸಿ' ಎಂಬ ಶ್ರುತಿಯ ವಾಕ್ಯಾರ್ಥವಿಚಾರ ದಲ್ಲಿ (ವಿವಾದದಲ್ಲಿ) ಎಳ್ಳಷ್ಟೂ ಕ್ಷೋಭೆಗೊಳ್ಳದೆ ಆ ವಿದ್ಯಾರಣ್ಯರನ್ನೇ ಜಯಿಸಿದ ಮುನಿಗಳನ್ನು ಎಂದರ್ಥ.

**ಶ್ರೀಮದಾನಂದತೀರ್ಥಾರ್ಯರ್ನಸನ್ಮನಃಸರಸೀಭುವಿ ।**
**ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥೭॥**

**ಅವತರಣಿಕೆ :** ಹಿಂದಿನ ಆರು ಶ್ಲೋಕಗಳಿಂದ ಮಂಗಲ ಆಚರಿಸಿ, ಈಗ ಟೀಕಾಕೃತ್ಪಾದರು ತಾವು ಮಾಡಬಯಸುವದನ್ನು (ಸ್ವಚಿಕೀರ್ಷಿತಂ) ತಿಳಿಸುತ್ತಾರೆ.

**ಅನುವಾದ :** ಪೂಜ್ಯರಾದ (ಆರ್ಯ) ಶ್ರೀಮದಾನಂದತೀರ್ಥರ ನಿರ್ದುಷ್ಟ ಅಥವಾ ನಿರ್ಮಲ ಮನಸ್ಸೆಂಬ ಸರೋವರದಲ್ಲಿ ಹುಟ್ಟಿದ ಅನುವ್ಯಾಖ್ಯಾನ ವೆಂಬ ಕಮಲದಲ್ಲಿ ನನ್ನ ಮನಸ್ಸು ಭ್ರಮರದಂತೆ ಆಚರಿಸುತ್ತದೆ.

**ವಿವರಣೆ :** ೧) ಚಂಚರೀಕತಿ ಎಂದರೆ ಭ್ರಮರದಂತೆ ಆಚರಿಸುತ್ತದೆ. ಎಂದು ಅರ್ಥ. ಭ್ರಮರವು ಒಂದು ಹೂವಿನ ರಸವನ್ನು ಪೂರ್ಣವಾಗಿ ಹೀರಲು ಅಸಮರ್ಥವಾಗಿ ಅದನ್ನು ಮೊದಲು ಅಷ್ಟಕ್ಕೆ ಬಿಡುತ್ತದೆ. ಆದರೆ ಅದನ್ನು ಪೂರ್ಣ ಬಿಟ್ಟು ಬೇರೆಡೆ ಹೋಗಲೂ ಆಗದೆ ಪುನಃ ಪುನಃ ಆ ಹೂವಿನ ಸುತ್ತಲೂ ಸಂಚರಿಸುತ್ತ ಅದರಲ್ಲಿಯ ಮಕರಂದವನ್ನು ಮತ್ತೆ ಮತ್ತೆ ಸವಿಯುವಂತೆ ಟೀಕಾರಾಯರು ಅನುವ್ಯಾಖ್ಯಾನವೆಂಬ ಕಮಲದ ರಸಾಸ್ವಾದನೆಯನ್ನು ವಿವಿಧ ರೀತಿಯಿಂದ ಮಾಡುತ್ತ ಒಂದೊಂದು ಶ್ಲೋಕದ ಅರ್ಥವನ್ನು ಅನೇಕ ರೀತಿಯಿಂದ ಮಾಡುತ್ತಾರೆ. ಉದಾ : ಶ್ಲೋಕಗಳು : ೧, ೨೪, ೩೩, ೬೬ ಮುಂ.

೨) ಸರಸೀಭುವಿ – ಸರೋವರದಲ್ಲಿ (ಸರಸೀ) ಹುಟ್ಟಿದ, ಇದು 'ನಲಿನೇ' (ಕಮಲ) ಶಬ್ದಕ್ಕೆ ವಿಶೇಷಣವಾಗಿದೆ. ಆದರೆ ನಲಿನ ಶಬ್ದ ನಪುಂಸಕಲಿಂಗವಿರುವದರಿಂದ ಸರಸೀಭುನಿ (ನಲಿನೇ) ಎಂಬ ಪದಪ್ರಯೋಗವಿರಬೇಕು. (ಭು ಭುನೀ ಭೂನಿ ಎಂದು ನಪುಂಸಕದಲ್ಲಿ ಭೂ ಶಬ್ದ ನಡಿಸಬೇಕು) ಆದರೆ ಇಲ್ಲಿ ಭೂ ಶಬ್ದವನ್ನು 'ಭೂಃ ಭುವೌ ಭುವಃ' ಎಂದು ಪುಲ್ಲಿಂಗದಲ್ಲಿ ನಡೆಸಿ 'ಸರಸೀಭುವಿ ನಲಿನೇ' ಎಂಬ ಪದಪ್ರಯೋಗ ಅಸಾಧು ಎಂದು ಆಕ್ಷೇಪಿಸಕೂಡದು. ಏಕೆಂದರೆ ಇದು 'ಭಾಷಿತ ಪುಂಸ್ಕ ಪ್ರಯೋಗ' 'ತೃತೀಯಾದಿಷು ಭಾಷಿತಪುಂಸ್ಕಂ ಪುಂವತ್' ಎಂದು ಗಾಲವರ ಮತ. ಆದ್ದರಿಂದ ಟೀಕಾರಾಯರ ಪ್ರಯೋಗ ಸಾಧು ಎಂದು

ಶ್ರೀನಿವಾಸತೀರ್ಥರು ಸಮರ್ಥಿಸಿದ್ದಾರೆ, ಅಥವಾ ಯಾದವಾರ್ಯರು ನಿರೂಪಿಸಿದಂತೆ ನಲಿನ ಶಬ್ದವು ಕೆಲವೆಡೆ ಪುಲ್ಲಿಂಗದಲ್ಲಿಯೂ ಉಂಟು.

**ನ ಶಬ್ದಾಬ್ಧೌ ಗಾಢಾ ನಚ ನಿಗಮಚರ್ಚಾಸು ಚತುರಾ**
**ನಚ ನ್ಯಾಯೇ ಪ್ರೌಢಾ ನಚ ವಿದಿತವೇದ್ಯಾ ಅಪಿ ವಯಂ ।**
**ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ**
**ಪ್ರಪನ್ನಾ ಮಾನ್ಯಾಃಸ್ಮಃ ಕಿಮಪಿ ಚ ವದಂತೋಽಪಿ ಮಹತಾಂ** ||೬||

**ಅವತರಣಿಕೆ :** ಇಲ್ಲಿ ಟೀಕಾರಾಯರು ಸ್ವಾಹಂಕಾರ ಖಂಡನ ಮಾಡಿಕೊಂಡು ತಮ್ಮ ವ್ಯಾಖ್ಯಾನವು (ವಿಷಮ ಪದ ವಾಕ್ಯಾರ್ಥವಿವೃತಿ ಅಥವಾ ನ್ಯಾಯಸುಧಾ) ಕೇವಲ ಗುರುಮಧ್ವರ ಕೃಪಾಬಲದಿಂದಾಗಿರುವದಾಗಿ ಅತ್ಯಂತ ವಿನಯದಿಂದ ಹೇಳುತ್ತಾರೆ.

**ಅನುವಾದ :** ನಾವು ವ್ಯಾಕರಣವೆಂಬ ಸಮುದ್ರದಲ್ಲಿ ನಿಷ್ಣಾತರಲ್ಲಿ, ವೇದ ವಿಚಾರದಲ್ಲಿ ಚತುರರಲ್ಲ, ನ್ಯಾಯಶಾಸ್ತ್ರದಲ್ಲಿಯೂ ಪ್ರೌಢರಲ್ಲಿ, ತಿಳಿಯಬೇಕಾದು ದನ್ನೆಲ್ಲ ತಿಳಿದವರೂ ಅಲ್ಲ. ಅಥವಾ ನಾವು ವ್ಯಾಕರಣವೆಂಬ ಸಮುದ್ರದಲ್ಲಿ ನಿಷ್ಣಾತರಲ್ಲಿ ವೆಂದಲ್ಲ (ನಿಷ್ಣಾತರೇ); ವೇದವಿಚಾರದಲ್ಲಿ ತಿಳಿದವರಲ್ಲವೆಂದಲ್ಲ. (ತಿಳಿದವರೇ); ನ್ಯಾಯಶಾಸ್ತ್ರದಲ್ಲಿ ಪ್ರೌಢರಲ್ಲವೆಂದಲ್ಲ. (ಪ್ರೌಢರೇ); ತಿಳಿಯಬೇಕಾದುದನ್ನೆಲ್ಲ ತಿಳಿದವರಲ್ಲವೆಂದಲ್ಲ. (ತಿಳಿದವರೇ) ಅಥವಾಶಬ್ದಶಾಸ್ತ್ರವೆಂಬ ಸಮುದ್ರದಲ್ಲಿ ನಿಷ್ಣಾತರೆಂದು (ಇತಿ ಎಂದು ಅಧ್ಯಾಹಾರ) ಮಾನ್ಯರಾಗಿಲ್ಲ. ವೇದವಿಚಾರದಲ್ಲಿ ಚತುರರೆಂದು ಮಾನ್ಯರಾಗಿಲ್ಲ. ನ್ಯಾಯಶಾಸ್ತ್ರದಲ್ಲಿ ಪ್ರೌಢರೆಂದು ಮಾನ್ಯರಾಗಿಲ್ಲ. ತಿಳಿಯಬೇಕಾದುದನ್ನೆಲ್ಲ ತಿಳಿದವರೆಂದೂ ಮಾನ್ಯರಾಗಿಲ್ಲ. ಆದರೆ ಗುರುಗಳಾದ ಶ್ರೀಮತ್ಪೂರ್ಣಪ್ರಜ್ಞರ (ಶ್ರೀಮಧ್ವಾಚಾರ್ಯರ) ಅತ್ಯಂತ ಕರುಣಾ ಸರಣಿಯನ್ನು ಎಂದರೆ ಅವರ ಕರುಣಾ ಮಾರ್ಗವನ್ನು (ಸರಣಿಂ) ಹೊಂದಿದ್ದೇವೆ. ಅಂತೆಯೇ ಏನನ್ನೋ ಎಂದರೆ ಯುಕ್ತವನ್ನೋ ಅಯುಕ್ತವನ್ನೋ ಹೇಳುತ್ತಿದ್ದರೂ, ಮಹಾತ್ಮರಿಗೆ ಸಹ (ಮಹತಾಂ ಅಪಿ) ಮಾನ್ಯರಾಗಿದ್ದೇವೆ.

**ವಿವರಣೆ :** ೧) ಈ ಶ್ಲೋಕದ ಅನ್ವಯವನ್ನು ಅನುವಾದದಲ್ಲಿ ಸೂಚಿಸಿದಂತೆ ಮೂರು ರೀತಿಯಿಂದ ಮಾಡಬಹುದು. ೨) ಶ್ರೀಮಜ್ಜಯತೀರ್ಥರ ಮೇರು ಕೃತಿಯಾದ ಶ್ರೀಮನ್ನ್ಯಾಯಸುಧಾ ಗ್ರಂಥವು ವಿದ್ವನ್ಮಾನ್ಯವಾಗಿದೆ. ಇದಕ್ಕೆ ಕಾರಣ ಎಲ್ಲರಿಗೂ ಸ್ಥೂಲವಾಗಿ ಕಾಣುವ ವ್ಯಾಕರಣ ಕೌಶಲ್ಯ, ಮೀಮಾಂಸಾ ನೈಪುಣ್ಯ ನ್ಯಾಯಶಾಸ್ತ್ರ ಪಾಂಡಿತ್ಯ ಸರ್ವಥಾ ಅಲ್ಲವೆಂದು ಟೀಕಾಕೃತ್ಪಾದರು ಅತ್ಯಂತ

ವಿನಯದಿಂದ ಹೇಳಿದ್ದಾರೆ. ಆದರೆ ಕಾರಣವಿಲ್ಲದೆ ಕಾರ್ಯವಾದ ವ್ಯಾಖ್ಯಾನ ಹೇಗೆ ಎಂದು ಶಂಕಿಸಿ, ವ್ಯಾಖ್ಯಾನಕ್ಕೆ ವಿದ್ವನ್ಮಾನ್ಯತೆಗೆ ಅಲೌಕಿಕವಾದ ಗುರು ದೇವತಾಪ್ರಸಾದ. ಆಚಾರ್ಯಮಧ್ವರ ವಿಶೇಷ ಕೃಪೆ, ಅವರು ಹಾಕಿಕೊಟ್ಟ ಮಾರ್ಗದ ಅನುಸರಣೆಯೇ ಕಾರಣವೆಂದು ಅತಿನಮ್ರವಾಗಿ ಹೇಳಿದ್ದಾರೆ.

## ಅನುವ್ಯಾಖ್ಯಾನಂ :

**ನಾರಾಯಣಂ ನಿಖಿಲಪೂರ್ಣಗುಣೈಕದೇಹಂ**
**ನಿರ್ದೋಷಮಾಪ್ಯತಮಮಪ್ಯ ಖಿಲೈಃ ಸುವಾಕ್ಯೈಃ ।**
**ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ**
**ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥೧॥**

**ಅವತರಣಿಕೆ** – ಈ ಆರಂಭ ಶ್ಲೋಕದಲ್ಲಿ ಶ್ರೀಮದಾನಂದತೀರ್ಥರು ಮಂಗಲ ಆಚರಿಸಿದ್ದಾರೆ. ಆಚಾರ್ಯರು (ಶ್ರೀಮಧ್ವರು) ನಿತ್ಯಾಪರೋಕ್ಷಿಗಳು, ಸದಾ ಶ್ರೀಹರಿಯಲ್ಲಿ ನಿರತರು ಹಾಗೂ ಸ್ವತಃ ವಿಘ್ನರಹಿತರು. ಆದರೂ ಶಿಷ್ಯರ ವಿಘ್ನ ಪರಿಹಾರಕ್ಕಾಗಿ ಅನೂಚಾನವಾಗಿ ಬಂದ ಶಿಷ್ಟ ಪರಂಪರೆಗನುಸಾರವಾಗಿ, ಗ್ರಂಥದ ನಿರ್ವಿಘ್ನ ಪರಿಸಮಾಪ್ತಿ, ಪ್ರಸಿದ್ಧಿ ಮೊದಲಾದ ಮಂಗಲದ ಉದ್ದೇಶವನ್ನು ಶಿಷ್ಯರಿಗೆ ತಿಳಿಸಲು ನಾರಾಯಣನ ನತಿ ಸ್ತುತಿರೂಪ ಮಂಗಲಾಚರಣೆ ಮಾಡಿದ್ದಾರೆ. (ಮಂಗಲದ ವಿವರಣೆಗಾಗಿ ೮ ನೇ ಶ್ಲೋಕದಲ್ಲಿಯ ಮಂಗಲವಾದ ನೋಡಿರಿ.)

**ಅನುವಾದ :** ಸಕಲ ಪೂರ್ಣಗುಣಗಳೇ ದೇಹವಾಗಿಯುಳ್ಳ, ದೋಷವಿದೂರನಾದ, ಎಲ್ಲ ಸುವಾಕ್ಯಗಳಿಂದಲೂ ಮುಖ್ಯವಾಗಿ ಪ್ರತಿಪಾದಿಸಲ್ಪಡುವ, ಈ ಜಗತ್ತಿಗೆ ಜನ್ಮಾದಿಗಳನ್ನು ನೀಡುವ (ಎಂದರೆ ಜಗಜ್ಜನ್ಮಾದಿಕರ್ತನಾದ), ನಮಸ್ಕಾರ ಮಾಡಲು ಕಾರಣವಾದ ಎಲ್ಲ ಅಸಾಧಾರಣ ಧರ್ಮಗಳ ಮೂಲಕ ವಂದ್ಯನಾದ, ನನಗೆ ಯಾವಾಗಲೂ ಅತ್ಯಂತ ಪ್ರಿಯನಾದ ನಾರಾಯಣನಿಗೆ ಭಕ್ತಿಯಿಂದ ನಮಸ್ಕಾರ ಮಾಡುತ್ತೇನೆ.

**ವಿವರಣೆ** – ಈ ಶ್ಲೋಕಕ್ಕೆ ಟೀಕಾರಾಯರು ಏಳು ರೀತಿಯಿಂದ ವ್ಯಾಖ್ಯಾನ ಮಾಡಿದ್ದಾರೆ. ಅವುಗಳ ಸಾರಸಂಗ್ರಹ ರೂಪವಾದ ಶೀರ್ಷಿಕೆಗಳನ್ನು ಕೊಟ್ಟವರು ವಾಕ್ಯಾರ್ಥಚಂದ್ರಿಕಾ ಎಂಬ ಪ್ರೌಢ ಹಾಗೂ ವಿಶದ ಟಿಪ್ಪಣಿಕಾರರಾದ ಶ್ರೀವಿದ್ಯಾಧೀಶರು, **ಆ ಏಳು ಅರ್ಥಗಳನ್ನು** ಕೆಳಗೆ ನಿರೂಪಿಸಲಾಗಿದೆ.

೧) ನತಿಸ್ತುತಿ ರೂಪಮಂಗಲ ಪರತೆಯಾ. ನಮಸ್ಕಾರ ಮತ್ತು ಸ್ತೋತ್ರ ರೂಪಮಂಗಲ ಪರವಾದ ಅರ್ಥ. ಇದನ್ನು ಮೇಲಿನ ಅನುವಾದದಲ್ಲಿ ಕೊಡ

ಲಾಗಿದೆ. 'ಸನ್ನಮಾಮಿ' ಎಂದರೆ ಭಕ್ತ್ಯತಿಶಯದಿಂದ ನಮಸ್ಕಾರ ಮಾಡುತ್ತೇನೆ ಎಂದು ಅರ್ಥ. ನಾರಾಯಣನು ಗುಣಪೂರ್ಣನೆಂದು ಹೇಳಿದ್ದರಿಂದ ಅವನಲ್ಲಿ ಅಜ್ಞಾನ ಅಸ್ವಾತಂತ್ರ್ಯ ಮೊದಲಾದ ದೋಷಗಳಿಲ್ಲವೆಂದರ್ಥ. ಆದರೂ ಮುಂದೆ ನಿರ್ದೋಷಂ ಎಂದು ಹೇಳಿದ್ದು ಆರ್ಥಿಕ ಪುನರುಕ್ತಿ. ಇದರಂತೆ ಜನ್ಮಾದ್ಯಷ್ಟಕರ್ತನಾದ್ದರಿಂದ ನಾರಾಯಣನು ಗುಣಪೂರ್ಣನೂ ದೇಹವುಳ್ಳವನೂ ಎಂದು ತಿಳಿದುಬರುತ್ತದೆ. ಹೀಗಾಗಿ ಗುಣಪೂರ್ಣಂ ಗುಣೈಕದೇಹಂ ಎಂದು ಹೇಳಿದ್ದು ಆರ್ಥಿಕ ಪುನರುಕ್ತಿಯೇ. ಇದಲ್ಲದೆ ನಾರಾಯಣ ಶಬ್ದದ ಅರ್ಥವನ್ನೇ ಎಲ್ಲ ವಿಶೇಷಣಗಳು ವಿವರಿಸುವದರಿಂದಲೂ ಆರ್ಥಿಕ ಪುನರುಕ್ತಿ ಇದೆ. ಆದರೆ ಆರ್ಥಿಕ ಪುನರುಕ್ತಿ ಇಲ್ಲಿ ದೋಷವಲ್ಲ. ಏಕೆಂದರೆ ಸ್ತುತಿಪರ ಅರ್ಥದಲ್ಲಿ ಸ್ತುತಿಪದಗಳ ಉದ್ದೇಶವು ವಿಶೇಷ್ಯನಾದ ನಾರಾಯಣನ ಪ್ರಶಂಸೆ ಹಾಗೂ ತನ್ಮೂಲಕ ಅವನ ಪ್ರೀತಿಸಂಪಾದನೆಯಾಗಿದೆ.

೨) ನತಿ ಪ್ರಯೋಜಕ ಧರ್ಮಪರತಯಾ. ನಮಸ್ಕಾರ ಮಾಡಲಿಕ್ಕೆ ಕಾರಣವಾದ ಧರ್ಮಗಳ ಪರವಾಗಿ ಅರ್ಥ. ಇಲ್ಲ ನಾರಾಯಣನು ವಂದ್ಯನೇಕೆ ? ಉಳಿದ ದೇವತೆಗಳನ್ನು ಬಿಟ್ಟು ನಾರಾಯಣನಿಗೇನೇ ಏಕೆ ನಮಸ್ಕಾರ ? ಎಂಬ ಎರಡು ಪ್ರಶ್ನೆಗಳಿವೆ. ಈ ಶ್ಲೋಕದಲ್ಲಿ ನಾರಾಯಣನಿಗೆ ೬ ವಿಶೇಷಣಗಳಿದ್ದು, 'ಅಶೇಷವಿಶೇಷತೋಽಪಿ ವಂದ್ಯಂ' ಎಂಬ ವಿಶೇಷಣದಿಂದ ೧ನೇಯ ಪ್ರಶ್ನೆಗೆ ಹಾಗೂ ಉಳಿದ ೫ ವಿಶೇಷಣಗಳಿಂದ ೨ ನೇ ಪ್ರಶ್ನೆಗೆ ಉತ್ತರಿಸುತ್ತಾರೆ. ಹೇಗೆಂದರ, ವಿಶೇಷ ಎಂದರೆ ಅಸಾಧಾರಣ ಧರ್ಮ. (ವಿಶಿಷ್ಯತೇ ವಸ್ತು ಏಭಿಃ ಇತಿ ವಿಶೇಷಾಃ । ನಮಸ್ಕಾರ ಮಾಡಲಿಕ್ಕೆ ಬೇಕಾದ ಎಷ್ಟು ಧರ್ಮಗಳಿವೆಯೋ ಅವೆಲ್ಲವುಗಳಿಂದ ನಾರಾಯಣನು ವಂದ್ಯನಾಗಿದ್ದಾನೆ ಎಂದು ಅಭಿಪ್ರಾಯ. ಅಥವಾ ಅಶೇಷವಿಶೇಷ ಎಂದರೆ ಎಲ್ಲರಿಂದಲೂ ವಂದ್ಯರಾದ ರಮಾಬ್ರಹ್ಮಾದಿಗಳಿಗಿಂತಲೂ ವಿಶೇಷವಾದ ಸರ್ವೋತ್ತಮತ್ವದ ಮೂಲಕ ನಾರಾಯಣನು ವಂದ್ಯನೆಂದು ಅಭಿಪ್ರಾಯ. ಇನ್ನು ಎರಡನೆಯ ಪ್ರಶ್ನದ ಉತ್ತರ. ಜಗತ್ತಿನಲ್ಲಿ ವಿಶಿಷ್ಟ (ಉತ್ತಮ) ಅಧಿಕೃತ (ಗ್ರಂಥಪ್ರತಿಪಾದ್ಯ) ಮತ್ತು ಇಷ್ಟ (ಮನೋಭೀಷ್ಟ) ಎಂಬ ಮೂರು ಬಗೆಯ ದೇವತೆಗಳು ವಂದ್ಯರು. ನಾರಾಯಣನಾದರೋ ವಿಶಿಷ್ಟನೂ ಅಧಿಕೃತನೂ ಇಷ್ಟನೂ ಆಗಿದ್ದಾನೆ. ಹೇಗೆಂದರೆ, ನಾರಾಯಣನು ವಿಶಿಷ್ಟ ಅಥವಾ ಉತ್ತಮನು ಏಕೆಂದರೆ ಸಕಲಪೂರ್ಣಗುಣಗಳೇ ದೇಹವಾಗಿಯುಳ್ಳವ . ದೋಷ ವಿದೂರ, ಮತ್ತು ಜಗತ್ತಿಗೆ ಜನ್ಮಾದಿಗಳನ್ನು ನೀಡುವವ. ಅವನು ಅಧಿಕೃತ, ಏಕೆಂದರೆ ಸಕಲ ಸುವಾಕ್ಯಗಳಿಂದ ಪ್ರತಿಪಾದ್ಯ. ಅವನು ಇಷ್ಟನೂ ಆಗಿರುವನು. ಏಕೆಂದರೆ ಆಚಾರ್ಯರಿಗೆ ಸದಾ ಅತ್ಯಂತ ಪ್ರಿಯನಾಗಿದ್ದಾನೆ.

**ಜನ್ಮಾದ್ಯಷ್ಟಕರ್ತೃತ್ವ** – ಪರಮಾತ್ಮನು ಜಗತ್ತಿಗೆ ಜನ್ಮ, ಸ್ಥಿತಿ (ರಕ್ಷಣೆ) ಲಯ (ಸಂಹಾರ) ನಿಯಮನ–ಜ್ಞಾನ–ಅಜ್ಞಾನ–ಬಂಧ–ಮೋಕ್ಷ–ದಾತಾ ಎಂದರೆ ಜಗಜ್ಜನ್ಮಾದ್ಯಷ್ಟಕರ್ತಾ ಆಗಿದ್ದಾನೆ. ಇದು ಅವನ ಅಸಾಧಾರಣ ಲಕ್ಷಣ. ಇದಲ್ಲದೆ ಈ ಎಂಟರಲ್ಲಿಯ ಪ್ರತಿಯೊಂದು ಧರ್ಮವು ಪ್ರತ್ಯೇಕವಾಗಿಯೂ ಅವನ ಲಕ್ಷಣ. ಈ ಜನ್ಮಾದ್ಯಷ್ಟಕಗಳನ್ನು ಶಾಸ್ತ್ರದಲ್ಲಿ ನಿರೂಪಿಸಿದಂತೆ ಯಥಾಯೋಗ್ಯವಾಗಿ (ಯಥಾಸಂಭವಂ) ತಿಳಿಯಬೇಕು. ಸ್ಥೂಲವಾಗಿ ಹೇಳುವದಾದರೆ ಮೊದಲಿನ ನಾಲ್ಕು ಎಲ್ಲ ಚೇತನಾಚೇತನಾತ್ಮಕ ಪ್ರಪಂಚಕ್ಕೆ ಮತ್ತು ಕೊನೆಯ ನಾಲ್ಕು ಬ್ರಹ್ಮಾದಿಚೇತನರಿಗೆ ಅನ್ವಯಿಸುತ್ತವೆ. ಲಕ್ಷ್ಮೀದೇವಿಯಾದರೋ ನಿತ್ಯಮುಕ್ತಳು. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೇದರೆ ಜನ್ಮಾದಿಗಳು ಎಲ್ಲರಿಗೂ ಒಂದೇ ತೆರನಾಗಿಲ್ಲ. ಜನ್ಮದ ಬಗ್ಗೆ ಹೇಳುವದಾದರೆ ಜೀವರಿಗೆ ಜನ್ಮವೆಂದರೆ ದೇಹಸಂಬಂಧ ಮತ್ತು ಇಂದ್ರಿಯಾದಿಗಳ ಉಪಚಯ (ವೃದ್ಧಿ). ಜಡಪ್ರಕೃತಿಗೆ ವಿಕಾರ ಅಥವಾ ಪರಿಣಾಮವೇ ಜನನ. ಪ್ರಕೃತ್ಯಭಿಮಾನಿ ಲಕ್ಷ್ಮೀದೇವಿಗೆ ಸೃಷ್ಟಿಸಬೇಕೆಂಬ ಇಚ್ಛೆ ಹುಟ್ಟುವದೇ ಜನನ. ಆಕಾಶಕ್ಕೆ ಮೂರ್ತ ಪದಾರ್ಥಗಳ ಸಂಯೋಗ ಉತ್ಪತ್ತಿ. ನಿತ್ಯ ಪದಾರ್ಥಗಳಿಗೆ 'ಪರಾಧೀನ ವಿಶೇಷಾವಾಪ್ತಿ' ಯೇ ಜನ್ಮ. ಇದರಂತೆ ಸ್ಥಿತಿಯಲ್ಲಿಯೂ ವ್ಯತ್ಯಾಸವಿದೆ. ಜೀವರಿಗೆ ಅನ್ನಾದಿ ನೀಡುವದು ಸ್ಥಿತಿ ಅಥವಾ ರಕ್ಷಣೆ. ಉಳಿದ ನಿತ್ಯ ವಸ್ತುಗಳಿಗೆ ಉತ್ತರಕಾಲಸಂಬಂಧವೇ ಸ್ಥಿತಿ. ಸಂಹಾರವೂ ಒಂದೇ ವಿಧವಾಗಿಲ್ಲ. ಹುಟ್ಟಿದ ಜಡವಸ್ತುಗಳಿಗೆ ಧ್ವಂಸವೇ ಸಂಹಾರ. ಜೀವರ ಸಂಹಾರವೆಂದರೆ ಅವರ ದೇಹನಾಶ, ಅಥವಾ ದೇಹ ಲಯ, ಲಕ್ಷ್ಮೀದೇವಿಗೆ ಲಯವೆಂದರೆ ಪರಮಾತ್ಮನೊಂದಿಗೆ ಅತಿಸಮೀಪದಲ್ಲಿರುವದು (ಲಕ್ಷ್ಮೀದೇವಿಗಿರುವ ಜನ್ಮಾದಿಗಳಲ್ಲಿ ವಿಶೇಷವಿದೆ. ಅವಳಿಗೆ ಜನ್ಮವೆಂದರೆ ಪ್ರಾದುರ್ಭಾವ. ಸ್ಥಿತಿಯೆಂದರೆ ದೇಹನಾಶವಿಲ್ಲದೆ ಇರುವದು, ಲಯ ಎಂದರೆ ಭಗವಂತನ ಅತ್ಯಂತ ಸಾಮೀಪ್ಯ, ಭಗವಂತನ ಆಜ್ಞಾಪರಿಪಾಲನೆಯೇ ಅವಳಿಗಿರುವ ನಿಯಮನ. ಅವಳಿಗೆ ಭಗವಂತನನ್ನು ಬಿಟ್ಟು ಉಳಿದ ವಿಷಯಗಳ ಬಗ್ಗೆ ಆಲೋಚಿಸದಿದ್ದರೂ ಸರ್ವವಿಷಯ ಜ್ಞಾನವಿದೆ. ಇನ್ನು ಭಗವಂತನ ಬಗ್ಗೆಯೂ ಅವಳಿಗೆ ಯಥಾರ್ಥ ಜ್ಞಾನವೇ ಇದೆ. ಆದರೆ ಅವನ ಸ್ವರೂಪ ಮತ್ತು ಗುಣಗಳ ಸಂಪೂರ್ಣ ಜ್ಞಾನವಿಲ್ಲ. ಅಭಾವರೂಪ ಅಜ್ಞಾನವಿದೆ. "ಈಶ್ವರೇತು ಅಸಾರ್ವತ್ರಿಕಂ, ಅನ್ಯತ್ರ ಅನಾಲೋಚನೇ ಸರ್ವವಿಷಯಜ್ಞಾನಂ ಲಕ್ಷ್ಮೀಜ್ಞಾನಂ" ಲಕ್ಷ್ಮೀದೇವಿಗೆ ಬಂಧನವಿಲ್ಲ, ಭಗವಂತನು ಬಾಹುಗಳಿಂದ ನೀಡುವ ಆಲಿಂಗನವೇ ಅವಳಿಗಿರುವ ಬಂಧ).ಅವಳು ನಿತ್ಯ ಮುಕ್ತಳು.

೩) ವಸ್ತು ಸ್ವರೂಪ ನಿರ್ಧಾರಕ ಲಕ್ಷಣ ಪರತಯಾ, ಎಂದರೆ ವಸ್ತುವಿನ ಸ್ವರೂಪ ನಿರ್ಧರಿಸುವ ಲಕ್ಷಣ ಪರವಾದ ಅರ್ಥ. ವಸ್ತುವಿನ ಸ್ವರೂಪವು

ಅವರ ಲಕ್ಷಣಗಳಿಂದ ತಿಳಿಯುತ್ತದೆ. ಭಗವಂತನ ಲಕ್ಷಣಗಳು ಅನಂತ. ಇಲ್ಲಿ ೧೪ ಇವೆ. (೪) ವಸ್ತುಸ್ವರೂಪ ನಿರ್ಧಾರಕಪ್ರಮಾಣಪರತಯಾ ಎಂದರೆ ವಸ್ತುವಿನ ಸ್ವರೂಪ ನಿರ್ಧರಿಸುವ ಪ್ರಮಾಣಪರವಾದ ಅರ್ಥ....ನಾರಾಯಣನು ಸುವಾಕ್ಯಗಳಿಂದ ಎಂದರೆ ವೇದ, ಬ್ರಹ್ಮಸೂತ್ರ, ಭಾರತ, ಪಂಚರಾತ್ರ ಮೂಲರಾಮಾಯಣ ಮತ್ತು ಅವುಗಳಿಗೆ ಅನುಕೂಲಕರವಾದ ವಾಕ್ಯಗಳಿಂದ ತಿಳಿಯಲ್ಪಡುತ್ತಾನೆ.

(೫) ಬಾಧಕ ಪರಿಹಾರಪರತಯಾ – ಬಾಧಕ ಶಂಕಾ ಪರಿಹರಿಸುವ ಅರ್ಥ, ನಾರಾಯಣನಿಗೆ ದೇಹವಿದ್ದರೆ ಅವನಿಗೂ ನಮ್ಮಂತೆ ದುಃಖಾದಿಗಳಾಗಲಿ, ದೇಹವಿಲ್ಲದಿದ್ದರೆ ಅವನಿಗೆ ಜ್ಞಾನಾದಿಗಳಾಗುವದು ಹೇಗೆ ? ಎಂಬ ಶಂಕಾ ಪರಿಹರಿಸಲು 'ನಿಖಿಲ ಪೂರ್ಣಗುಣೈಕದೇಹಂ' ಎಂಬ ವಿಶೇಷಣವಿದೆ. ನಾರಾಯಣನಿಗೆ ದೇಹವಿದೆ. ಆದರೆ ಅದು ಅಪ್ರಾಕೃತ, ಜ್ಞಾನಾನಂದಾದಿಗುಣಗಳೇ ಅವನ ದೇಹ.

(೬) ವಿಶೇಷಣಾನಾಂ ನಾರಾಯಣ ಪದ ವ್ಯಾಖ್ಯಾನ ಪರತಯಾ. ವಿಶೇಷಣಗಳು ನಾರಾಯಣ ಶಬ್ದಾರ್ಥವನ್ನೇ ಪ್ರತಿಪಾದಿಸುತ್ತವೆ, ನಾರಾಯಣ ಶಬ್ದವು ಡಿತ್ಥ (ಗಿಡ್ಡ) ಶಬ್ದದಂತೆ ಸಾಂಕೇತಿಕವಲ್ಲ. ಘಟ–ಪಟ ಶಬ್ದಗಳಂತೆ ರೂಢವೂ ಅಲ್ಲ. ಆದರೆ ಅದು ಯೌಗಿಕ; ನಾರಾಯಣನ ಕೆಳಗಿನ ಧರ್ಮಗಳನ್ನು ಪ್ರತಿಪಾದಿಸುತ್ತದೆ.

(i) ಆರಾಃ ಎಂದರೆ ದೋಷಗಳು. ನಾರಾಃ ಎಂದರೆ ದೋಷವಿರುದ್ಧ ಗುಣಗಳು. ಅವುಗಳಿಗೆ ಆಶ್ರಯ (ಅಯನ)ನಾದ್ದರಿಂದ ನಾರಾಯಣ (ii) ದೋಷಗಳಿಗೆ ಆಶ್ರಯ (ಅಯನಂ) ಆಗದವ ಎಂದರೆ ನಿರ್ದೋಷ. (iii) ನರರಿಗೆ ಉಪಕಾರ ಮಾಡುವದರಿಂದ ನಾರಾಃ ಎಂದರೆ ವೇದಗಳು. ಅವುಗಳಿಗೆ ಆಶ್ರಯ ಎಂದರೆ ವೇದಪ್ರತಿಪಾದ್ಯ, (iv) ನಾರಂ ಎಂದರೆ ನರಸಂಬಂಧಿ ಜ್ಞಾನಾದಿ ನೀಡುವವ. ಅವುಗಳಿಗೆ ಆಶ್ರಯ. (v) ನಾರಂ ಎಂದರೆ ನರಸಮೂಹ, ಅವರಿಗೆ ನಮಸ್ಕಾರ ಮಾಡಲಿಕ್ಕೆ ಆಶ್ರಯ ನಾರಾಯಣ. (vi) ನಾರಂ ಎಂದರೆ ನರರ ಅಧಿಪತಿಯಾದ ಮುಖ್ಯವಾಯು, ಅವನಿಗೆ ಪರಮಪ್ರೀತ್ಯಾಸ್ಪದನಾಗಿ ಆಶ್ರಯ.

೭) ಶಾಸ್ತ್ರಾರ್ಥ ಸಂಕ್ಷೇಪ ಕಥನ ಪರತಯಾ. ಸಂಕ್ಷಿಪ್ತ ಶಾಸ್ತ್ರಾರ್ಥ ನಿರೂಪಣೆ, ಶ್ರೋತೃಗಳಿಗೆ ಶಾಸ್ತ್ರಾರ್ಥ ತಿಳಿಯಲು ಅನುಕೂಲವಾಗಲೆಂದು ಅದನ್ನು ಮೊದಲು ಸಂಕ್ಷಿಪ್ತದಲ್ಲಿ ಹೇಳುತ್ತಾರೆ.

೮) ಇಲ್ಲಿ ಬ್ರಹ್ಮಸೂತ್ರಗಳ ನಾಲ್ಕು ಅಧ್ಯಾಯಗಳ ಅರ್ಥ ಸೂಚಿತವಾಗಿದೆ. ನಾರಾಯಣನು ನಿಖಿಲಪೂರ್ಣಗುಣಂ ಮತ್ತು ನಿರ್ದೋಷಂ ಎಂದು ಹೇಳಿದ್ದರಿಂದ ಕ್ರಮವಾಗಿ ಮೊದಲಿನ ಎರಡು ಅಧ್ಯಾಯಗಳ ಅರ್ಥ ಸೂಚಿತವಾಗಿದೆ. 3ನೆಯ

ಸಾಧನಾಧ್ಯಾಯದ ಅರ್ಥವು 'ಅಶೇಷವಿಶೇಷತೋಽಪಿ ವಂದ್ಯಂ' ಎಂಬುದರಿಂದ ಸೂಚಿತವಾಗಿದೆ. ಅಶೇಷ ವಿಷಯ ವಿಶೇಷಗಳಾದ ರಾಗಾದಿಗಳನ್ನು ಬಿಟ್ಟು, ಅರ್ಥಾತ್ ವೈರಾಗ್ಯಾದಿ ಸಾಧನಗಳಿಂದ ಭಗವಂತನು ಜ್ಞೇಯನು. ನಾಲ್ಕನೆಯ ಫಲಾಧ್ಯಾಯದ ಅರ್ಥವು ಆಪ್ಯತಮಂ ಅಥವಾ ಉದ್ಭವಾದಿದಂ ಎಂಬುದರಿಂದ ಸೂಚಿತವಾಗಿದೆ. ಪರಮಾತ್ಮನನ್ನು ನಾವು ನಿತ್ಯದಲ್ಲಿ ಸುಷುಪ್ತಿಯಲ್ಲಿ ಎಂದರೆ ಗಾಢವಾಗಿ ಮಲಗಿದಾಗ ಹೊಂದುತ್ತೇವೆ. ಏಕೆಂದರೆ ಗಾಢ ನಿದ್ರೆಯಲ್ಲಿ ಪ್ರಾಜ್ಞ ನಾಮಕ ಪರಮಾತ್ಮನ ಆಲಿಂಗನವಿರುತ್ತದೆ. ಆದರೆ ಆದರಿಂದ ಪುರುಷಾರ್ಥ ದೊರೆಯಲಾರದು. ಶ್ವೇತದ್ವೀಪದಲ್ಲಿರುವ ಅವನ ವಿಶೇಷರೂಪಪ್ರಾಪ್ತಿಯಿಂದಲೇ ಮೋಕ್ಷ ಸಿದ್ಧಿಸುತ್ತದೆ. ಆದ್ದರಿಂದ ಈ ವಿಶಿಷ್ಟ ಪ್ರಾಪ್ತಿ ಸೂಚಿಸಲು ಆಪ್ಯತಮಂ ಎಂಬ ಶಬ್ದವಿದೆ. ತಮಪ್ರತ್ಯಯವು ಅತಿಶಯಾರ್ಥಸೂಚಕ. ಬ) ಚತುಃಸೂತ್ರಾರ್ಥ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ೧ನೆಯ ಸೂತ್ರಾರ್ಥ 'ಸದಾವಂದ್ಯಂ' ಎಂಬುದರಿಂದ ಸೂಚಿತವಾಗಿದೆ. ಜಿಜ್ಞಾಸಾ (ವಿಚಾರ) ಕೂಡ ನಮಸ್ಕಾರ ವಿಶೇಷವೇ. ಏಕೆಂದರೆ ನಮಸ್ಕಾರವೆಂದರೆ ನನಗಿಂತ ಇವನು ಉತ್ತಮ'ಎಂಬ ಭಾವನೆ. ಭಗವಂತನ ಬಗ್ಗೆ ಮಾಡುವ ವಿಚಾರದಲ್ಲಿಯೂ (ಜಿಜ್ಞಾಸಾ) ಅವನು ಸರ್ವೋತ್ತಮ ಎಂಬ ಭಾವನೆ ಇರುತ್ತದೆ. ೨ನೆಯ ಸೂತ್ರದ ಅರ್ಥ 'ಅಸ್ಯ ಉದ್ಭವಾದಿದಂ' ಎಂಬುದರಿಂದ ಸೂಚಿತವಾಗಿದೆ. ೩ನೆಯ ಮತ್ತು ೪ನೆಯ ಸೂತ್ರಗಳ ಅರ್ಥ 'ಅಖಿಲೈಃ ಸುವಾಕ್ಯೈಃ ಆಪ್ಯತಮಂ ಎಂಬುದರಿಂದ ಸೂಚಿತವಾಗುತ್ತದೆ. ಕ) ಶಾಸ್ತ್ರದ ಅನುಬಂಧ ಚತುಷ್ಟಯವೂ ಇಲ್ಲಿ ಸೂಚಿತವಾಗಿದೆ. ಶಾಸ್ತ್ರಕ್ಕೆ ವಿಷಯ ನಾರಾಯಣ. ಶಾಸ್ತ್ರದ ಪ್ರಯೋಜನವಾದ ಮೋಕ್ಷವು 'ಉದ್ಭವಾದಿದಂ' (ಜನ್ಮಾದಿನೀಡುವವ) ಎಂಬುದರಿಂದ ಸೂಚಿತವಾಗಿದೆ. ಮೋಕ್ಷ ಬಯಸುವ ಭಕ್ತರೇ ಅಧಿಕಾರಿಗಳು. ಭಕ್ತಿಯು 'ಸನ್ನಮಾಮಿ' ಎಂಬಲ್ಲಿಯ 'ಸಮ್' ಎಂಬ ಉಪಸರ್ಗದಿಂದ ಸೂಚಿತವಾಗಿದೆ. ವಿಷಯ....ಪ್ರಯೋಜನ....ಅಧಿಕಾರಿಗಳಲ್ಲಿ ಪರಸ್ಪರ ಸಂಬಂಧವೂ ಇದೆ.

**ಟೀಕು :** ಈ ಶ್ಲೋಕದಲ್ಲಿಯ 'ಸದಾ' ಶಬ್ದವನ್ನು ಎಲ್ಲ ವಿಶೇಷಣಗಳಿಗೆ ಅನ್ವಯಿಸುವದರಿಂದ ಅರ್ಥ ಸ್ವಾರಸ್ಯ ಹೆಚ್ಚುತ್ತದೆ, ಎಂದರೆ ನಾರಾಯಣನು ಸದಾಪೂರ್ಣ, ಸದಾಜನ್ಮಾದ್ಯಷ್ಟಕರ್ತಾ ಇತ್ಯಾದಿ ವಿಶೇಷಾರ್ಥ ದೊರೆಯುತ್ತದೆ.

**ತವೇವ ಶಾಸ್ತ್ರಪ್ರಭವಂ ಪ್ರಣಮ್ಯ**
**ಜಗದ್ಗುರೂಣಾಂ ಗುರುಮಂಜಸೈವ ।**
**ವಿಶೇಷತೋ ಮೇ ಪರಮಾಖ್ಯವಿದ್ಯಾ-**
**ವ್ಯಾಖ್ಯಾಂ ಕರೋಮ್ಯಸ್ಯಪಿ ಬಾಹನೇವ ||೨||**

**ಅವತರಣಿಕೆ** : ಕಾರ್ಯಾರಂಭದಲ್ಲಿ ಹರಿನಮಸ್ಕಾರದಂತೆ ಗುರುನಮಸ್ಕಾರವೂ

ಆವಶ್ಯ. ಹರಿಸ್ಮರಣೆ ವಿಪದ್ವಿನಾಶಕ, ಗುರುಸ್ಮರಣೆ ಸಮೃದ್ಧಿದಾಯಕ. ಆದ್ದ ರಿಂದ ಗ್ರಂಥಕರ್ತರು ಇಲ್ಲಿ ಗುರುಗಳಿಗೆ ನಮಸ್ಕಾರ ಮಾಡಿ, ಬ್ರಹ್ಮಮೀಮಾಂಸಾ ಶಾಸ್ತ್ರದ (ಬ್ರಹ್ಮಸೂತ್ರಗಳ) ವ್ಯಾಖ್ಯಾನ ಮಾಡುವದಾಗಿ ಪ್ರತಿಜ್ಞೆ ಮಾಡುತ್ತಾರೆ.

**ಅನುವಾದ :** ಬ್ರಹ್ಮಸೂತ್ರಾದಿ ಪೌರುಷೇಯ ಶಾಸ್ತ್ರ ರಚಿಸಿದ ಮತ್ತು ವೇದ ಶಾಸ್ತ್ರಕ್ಕೆ ಪ್ರಥಮ ಪ್ರವರ್ತಕರಾದ, ಜಗದ್ಗುರುಗಳಾದ ಬ್ರಹ್ಮಾದಿಗಳಿಗೂ ಗುರು ಗಳಾದ ಆ ನಾರಾಯಣನಿಗೇನೇ ಭಕ್ತಿಯಿಂದ ಪುನಃ ನಮಸ್ಕಾರ ಮಾಡಿ, ಪರವಿದ್ಯಾ ಎಂಬ ಹೆಸರುಳ್ಳ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ (ಬ್ರಹ್ಮಸೂತ್ರಗಳಿಗೆ) ನಾನೇ ಪುನಃ ವ್ಯಾಖ್ಯಾನ ಮಾಡುತ್ತೇನೆ.

**ವಿವರಣೆ :** i) ಶ್ರೀಮಧ್ವಾಚಾರ್ಯರಿಗೆ ದೇವತಾ ಮತ್ತು ಗುರು ನಾರಾಯಣನೇ ಆಗಿದ್ದಾನೆ. ಆದರೂ ಅವನಿಗೆ ಮೊದಲು ದೇವತಾ ನಿಮಿತ್ತದಿಂದ ಮತ್ತು ಈಗ ಗುರುನಿಮಿತ್ತದಿಂದ ಪ್ರತ್ಯೇಕವಾಗಿ ನಮಸ್ಕಾರ ಮಾಡಿದ್ದಾರೆ. (ಇದರಿಂದ ಎರಡು ನಿಮಿತ್ತಗಳು ಒಂದೆಡೆ ಸೇರಿದಾಗ ನೈಮಿತ್ತಿಕವನ್ನು ಲೋಪ ಮಾಡಬೇಕೆಂಬ ನಿಯಮವಿಲ್ಲ ಎಂದು ಸೂಚಿತವಾಗುತ್ತದೆ. ಉದಾ ; ದರ್ಶಅಮಾ ವಾಸ್ಯೆಯಂದು ಸಾಂವತ್ಸರಿಕ ಕಾಲಶ್ರಾದ್ಧ ಇದ್ದರೆ, ಕಾಲಶ್ರಾದ್ಧ ಮತ್ತು ದರ್ಶ ಶ್ರಾದ್ಧ ಎರಡನ್ನೂ ಪ್ರತ್ಯೇಕವಾಗಿ ಮಾಡಲಾಗುತ್ತದೆ.) ಅಥವಾ ಶಿಷ್ಯರಿಗೆ ದೇವತಾ ಮತ್ತು ಗುರು ಪ್ರತ್ಯೇಕ ಇರುವದರಿಂದ ಪ್ರತ್ಯೇಕ ನಮಸ್ಕಾರ ಸಮು ಚಿತ. ii) ಶಾಸ್ತ್ರ ಪ್ರಭವಂ : ವೇದಶಾಸ್ತ್ರವನ್ನು ಪ್ರಪ್ರಥಮವಾಗಿ ಪ್ರವರ್ತಿಸಿದ ಹಾಗೂ ಬ್ರಹ್ಮಸೂತ್ರಾದಿ ಶಾಸ್ತ್ರ ರಚಿಸಿದ. ಪ್ರಭವ : ಉತ್ಪದ್ಯತೇ, ಪ್ರಥಮಂ ಉಪಲಭ್ಯತೇ ವಾ ಯಿಸ್ಮಾತ್ ಸ: ಪ್ರಭವ: iii) ಗುರುಂ–ಆಚಾರ್ಯರಿಗೆ ನಾರಾ ಯಣನು ಮೂರು ವಿಧದಿಂದ ಗುರು. (ಅ) ಶಾಸ್ತ್ರ ಪ್ರಭವನಾಗಿ (ಬ) ಸಂಪ್ರ ದಾಯ ಪ್ರವರ್ತಕನಾಗಿ, (ಶಾಸ್ತ್ರ ಮೊದಲು ನಾರಾಯಣನಿಂದ ಬ್ರಹ್ಮಾದಿಗಳಿಗೆ ಉಪದೇಶಿಸಲ್ಪಟ್ಟಿತು. ಹಾಗೂ ಬ್ರಹ್ಮಾದಿಗಳು ಸಜ್ಜನರಿಗೆ ಉಪದೇಶಿಸಿದರು. ಇದರಿಂದಾಗಿ ಲೋಕಕ್ಕೆ ನಾರಾಯಣನೇ ಸಂಪ್ರದಾಯ ಪ್ರವರ್ತಕ.) (ಕ) ಸಾಕ್ಷಾತ್ ಗುರು. ಆಚಾರ್ಯರು ಬದರಿಯಲ್ಲಿ ಅನಂತನಾಮಕ ವೇದವ್ಯಾಸರಿಂದ ಮಹಾಭಾರತ, ಭಾಗವತಾದಿ ಪುರಾಣ, ಬ್ರಹ್ಮಸೂತ್ರ ಮುಂತಾದ ಸತ್‌ಶಾಸ್ತ್ರ ಶ್ರವಣಮಾಡಿದರೆಂದು ಸುಮಧ್ವ ವಿಜಯದಲ್ಲಿ ಹೇಳಲಾಗಿದೆ. ಇದಲ್ಲದೆ ನಾರಾ ಯಣನು ಜನಕ, ಪೋಷಕ, ವಿಘ್ನನಿವಾರಕ, ಮತ್ತು ಚಿತ್ತ ಪ್ರೇರಕನೂ ಆಗಿ ದ್ದಾನೆ. (iv) **ಅಹಮೇವ ;** ನಾನೇ ಬ್ರಹ್ಮ ಸೂತ್ರಕ್ಕೆ ವ್ಯಾಖ್ಯಾನ ಮಾಡುವೆ. ಇತರರಿಗೆ ಈ ಸಾಮರ್ಥ್ಯವಿಲ್ಲ. (v) ಪರಮಾಖ್ಯವಿದ್ಯಾಂ ; ಪರವಿದ್ಯಾ ಎಂಬ ಹೆಸರುಳ್ಳ ಬ್ರಹ್ಮಸೂತ್ರವನ್ನು. ಪರಮತ್ವಂ ಆಖ್ಯಾ (ವಿಶೇಷಣಂ) ಯಸ್ಯಾಃ ಸಾ. ಪರಮಾಖ್ಯಾ ಏವ ಪರವಿದ್ಯಾಖ್ಯಾ – ಕಾಶೀ ಟಿಪ್ಪಣಿ. ಅಥರ್ವಣೋಪನಿಷತ್ತಿನಲ್ಲಿ

'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾಚ' ಎಂದು ಪ್ರಸ್ತಾಪ ಇದೆ. ಎಂದರೆ ವಿದ್ಯೆ ಎರಡು ವಿಧ – ಪರವಿದ್ಯಾ ಮತ್ತು ಅಪರವಿದ್ಯಾ. ಅಪರ ವಿದ್ಯಾ ಎಂದರೆ ವೇದ ವೇದಾಂಗಗಳು. ಈ ಪ್ರಸ್ತಾಪದ ನಂತರ, ಅಥ ಪರಾ ಯಯಾ ತದಕ್ಷರ ಮಧಿಗಮ್ಯತೇ ಎಂದಿದೆ. ಎಂದರೆ ನಾಶರಹಿತ ಪರಮಾತ್ಮನ ಜ್ಞಾನ ಯಾವುದ ರಿಂದ ಆಗುತ್ತದೆಯೋ ಅದುವೇ ಪರ ವಿದ್ಯಾ. ಅದು ಬ್ರಹ್ಮಮೀಮಾಂಸಾ ಶಾಸ್ತ್ರ. ಹೆಚ್ಚಿನ ವಿವರಗಳಿಗಾಗಿ ಮುಂದಿನ ೩ ನೇ ಶ್ಲೋಕ ನೋಡಿರಿ.

vi) ವ್ಯಾಖ್ಯಾಂ ಕರೋಮಿ : ವ್ಯಾಖ್ಯಾನ ಮಾಡುತ್ತೇನೆ. ಇನ್ನು ಮುಂದೆ ವ್ಯಾಖ್ಯಾನ ಮಾಡಲಿದ್ದಾರೆ. ಆದರೂ ವರ್ತಮಾನ ಕಾಲದ ಪ್ರಯೋಗ ವರ್ತ ಮಾನ ಸಾಮೀಪ್ಯಾತ್ ವರ್ತಮಾನ ಪ್ರಯೋಗಃ ಎಂಬ ನಿಯಮವನ್ನಾಧರಿಸಿದೆ. ಅಥವಾ ಹಿಂದಿನ ಶ್ಲೋಕದಲ್ಲಿ ಸಂಕ್ಷಿಪ್ತ ಶಾಸ್ತ್ರಾರ್ಥ ನಿರೂಪಿತವಾದ್ದರಿಂದ, ವಿಸ್ತೃತ ವ್ಯಾಖ್ಯಾನ ಮಾಡುವುದಾಗಿ ಪ್ರತಿಜ್ಞೆ ಮಾಡಿದ್ದಾರೆ.

vii) ಆಕ್ಷೇಪ ಪರಿಹಾರ : ಈ ಗ್ರಂಥ ವ್ಯಾಖ್ಯಾನಕ್ಕೆ ಯೋಗ್ಯವಲ್ಲ ಎಂದು ಶಂಕಿಸಿ ಪರಿಹರಿಸುತ್ತಾರೆ. ಪೂರ್ವಪಕ್ಷ : ಈ ಗ್ರಂಥ ವ್ಯಾಖ್ಯಾನಕ್ಕೆ ಅರ್ಹವೇ ಅಲ್ಲ. ಏಕೆಂದರೆ ಇದರಲ್ಲಿ ಅ ಆ, ಇ, ಈ ಎಂಬ ವರ್ಣಮಾಲೆಯಂತೆ ಅರ್ಥ ವಿವಕ್ಷೆ ಇಲ್ಲ. ಏಕೆಂದರೆ ಅರ್ಥವಿವಕ್ಷೆ ಇದೆ ಎಂಬ ಬಗ್ಗೆ ಪ್ರಮಾಣವಿಲ್ಲ. ಬರೆಯ ಲ್ಪಟ್ಟ ಮಾತ್ರಕ್ಕೆ ಅದು ಪ್ರಮಾಣವಾಗಲಾರದು. ಬುದ್ಧಿವಂತರು ಬರೆದ ಬಗ್ಗೆ ನಿಶ್ಚಯವಿಲ್ಲ. ನಿಶ್ಚಯವಿದ್ದರೂ ವಿಪ್ರಲಂಭಕ್ರದಲ್ಲಿಯಂತೆ ಅರ್ಥವಿವಕ್ಷೆ ಇರ ಲಿಕ್ಕಿಲ್ಲ. ಅರ್ಥವಿವಕ್ಷೆ ಇದ್ದರೂ ಅದು ವಂಚಕನ ವಾಕ್ಯದಂತೆ ಅಪ್ರಮಾಣವಾಗಿರ ಬಹುದು. ಆದ್ದರಿಂದ ಈ ಗ್ರಂಥ ವ್ಯಾಖ್ಯಾನಕ್ಕೆ ಅರ್ಹವಲ್ಲ.

**ಸಿದ್ಧಾಂತ :** ಈ ಗ್ರಂಥ ವ್ಯಾಖ್ಯೇಯ ಎಂದರೆ ವ್ಯಾಖ್ಯಾನಕ್ಕೆ ಅರ್ಹವಾಗಿದೆ. ಏಕೆಂದರೆ ಈ ಗ್ರಂಥ ಪರಾ–ವಿದ್ಯಾ–ಶ್ರೇಷ್ಠಶಾಸ್ತ್ರ ಆಗಿದೆ. ಆಗಮದಿಂದ ಈ ಗ್ರಂಥ ಪ್ರಾಮಾಣ್ಯವುಳ್ಳದ್ದು ಎಂದು ತಿಳಿದು ಬರುತ್ತದೆ. ಅಲ್ಲದೆ ಇದರ ಅರ್ಥ ಗಹನವೂ ಆಗಿದೆ. ಉಳಿದವರಿಗೆ ವಿಶಿಷ್ಟವಾದ ವ್ಯಾಖ್ಯಾನ ಮಾಡುವ ಸಾಮರ್ಥ್ಯ ಇಲ್ಲವಾದ್ದರಿಂದ ಆಚಾರ್ಯರೇ ಪುನಃ ವ್ಯಾಖ್ಯಾನ ಮಾಡುತ್ತಾರೆ.

**ಸ್ವಾಬ್ಜಭೂರ್ಗತೋ ಹರಿರ್ವ್ಯಾಸೋ ನಿರಿಂಚಭವಪೂರ್ವಕೈಃ ॥**

**ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಮ್ ॥೩॥**

**ಅವತರಣಿಕೆ :** ಹಿಂದಿನ ೨ ನೇ ಶ್ಲೋಕದಲ್ಲಿ ನಾರಾಯಣನು ಶಾಸ್ತ್ರನಿರ್ಮಾ ಪಕ ಹಾಗೂ ಪರವಿದ್ಯಾ ಎಂದರೆ ಶ್ರೇಷ್ಠ ಬ್ರಹ್ಮಸೂತ್ರ ಎಂದು ಹೇಳಿದ್ದು ಅಯುಕ್ತವೆಂದು ಶಂಕಿಸಿ ಪರಿಹರಿಸುತ್ತಾರೆ.

**ಅನುವಾದ :** ಬ್ರಹ್ಮರುದ್ರಾದಿ ದೇವತೆಗಳಿಂದ ಪ್ರಾರ್ಥಿತನಾದ ಹರಿಯು

ವ್ಯಾಸರೂಪದಿಂದ ಅವತರಿಸಿ ಪರವಿದ್ಯಾ ಎಂಬ ಶ್ರೇಷ್ಠ ಶಾಸ್ತ್ರ ರಚಿಸಿದನು.

**ವಿವರಣೆ :** ಹಿಂದಿನ ೨ ನೇ ಶ್ಲೋಕದ ಮೇಲೆ ಕೆಳಗಿನ ನಾಲ್ಕು ಆಕ್ಷೇಪಗಳು ಬರುತ್ತವೆ. ನಾರಾಯಣನು ಶಾಸ್ತ್ರ ನಿರ್ಮಾಪಕ ಎಂದು ಹೇಳಿದರೆ, i) 'ವ್ಯಾಸೋಪಜ್ಞತಾ' – ಪ್ರಸಿದ್ಧಿ ವಿರೋಧ ಬರುತ್ತದೆ. ಎಂದರೆ ವ್ಯಾಸ ರಿಂದ ಮೊದಲು ಬ್ರಹ್ಮಸೂತ್ರ ಮುಂತಾದವು ತಿಳಿಯಲ್ಪಟ್ಟಿತು, ರಚಿಸಲ್ಪಟ್ಟಿತು. ಎಂಬ ಪ್ರಸಿದ್ಧಿ ವಿರೋಧ ಬರುತ್ತದೆ. ಏಕೆಂದರೆ ವೇದವ್ಯಾಸರು ಬ್ರಹ್ಮಸೂತ್ರ ಮಹಾಭಾರತ ರಚಿಸಿರುವದಾಗಿ ಪ್ರಸಿದ್ಧಿ ಇದೆ. ii) ಜನನ ವಿರೋಧ ಬರುತ್ತದೆ. ವೇದವ್ಯಾಸರು ಪರಾಶರರಿಂದ ಸತ್ಯವತಿಯಲ್ಲಿ ಜನಿಸಿದರು. ಅವರು ಪರಾಶರರ ಪುತ್ರರು ಎಂದು ಪ್ರಸಿದ್ಧಿ ಇದೆ. ಆದ್ದರಿಂದ ನಾರಾಯಣನೇ ವ್ಯಾಸ ಅಲ್ಲ. iii) ವೇದವ್ಯಾಸರೇ ನಾರಾಯಣ ಆಗಿದ್ದರೆ ಕೃತಕೃತ್ಯರಾದ ಅವರು ಶಾಸ್ತ್ರ ರಚಿಸಿದ್ದು ಅಸಂಭಾವಿತವೇ. iv) ಇನ್ನು ಪರವಿದ್ಯಾ ಎಂದರೆ ಶ್ರೇಷ್ಠ ಪ್ರಮಾಣಭೂತ ಶಾಸ್ತ್ರ ಎಂದು ಹಿಂದೆ ಹೇಳಿದ್ದು ಅಯುಕ್ತ ಏಕೆಂದರೆ ಪರ ವಿದ್ಯಾ ಎಂಬ ಹೆಸರಿನಿಂದ ಬ್ರಹ್ಮಸೂತ್ರಕ್ಕೆ ಶ್ರೇಷ್ಠ ಪ್ರಾಮಾಣ್ಯ ಸಿದ್ಧಿಸ ಲಾರದು. ಪರ ಮತ್ತು ವಿದ್ಯಾ ಶಬ್ದಗಳಿಗೆ ಬೇರೆ ಅರ್ಥಗಳೂ ಇವೆ. ಇದಲ್ಲದೆ ಬ್ರಹ್ಮಸೂತ್ರಗಳೇ ಪರವಿದ್ಯಾ ಎಂಬಲ್ಲಿ ನಿಯಾಮಕವಿಲ್ಲ.

ಮೇಲಿನ ಸಂದೇಹಗಳ ಪರಿಹಾರ ಕೆಳಗಿನಂತಿದೆ,

(i) (ii) ಹರಿ ಅಥವಾ ನಾರಾಯಣ ಹುಟ್ಟಿಲ್ಲ. ಆದರೆ ವ್ಯಾಸರೂಪದಿಂದ ಪ್ರಕಟನಾದ, ಅವತರಿಸಿದ (ಪ್ರಾದುರ್ಭೂತ) ಹಾಗೂ ಬ್ರಹ್ಮಸೂತ್ರ ಭಾರತ ಮುಂ. ರಚಿಸಿದ, (iii) ಕೃತಕೃತ್ಯರಾಗಿದ್ದರೂ ಸ್ವಪ್ರಯೋಜನ ಇಲ್ಲದಿದ್ದರೂ ವೇದವ್ಯಾಸರು ಶಾಸ್ತ್ರ ರಚಿಸಿದ್ದು ಯುಕ್ತವೇ. ಸಜ್ಜನರು ಪರರ ಮೇಲಿನ ದಯೆಯಿಂದ ಪರೋಪಕಾರ ಮಾಡಲು ಪ್ರವೃತ್ತರಾಗುತ್ತಾರೆ. ಅವರಿಂದ ಪ್ರಾರ್ಥಿತರಾದರಂತೂ ವಿಶೇಷವಾಗಿ ಪ್ರವೃತ್ತರಾಗುತ್ತಾರೆ. ಪ್ರಕೃತದಲ್ಲಿ ಪರಮ ದಯಾಳುಗಳಾದ ವೇದವ್ಯಾಸರು ಸಜ್ಜನರ ಮೇಲಿನ ಕೃಪೆಯಿಂದ, ಅಪರ ಪ್ರಯೋಜನವೇ ತಮ್ಮ ಪ್ರಯೋಜನವೆಂದು ಭಾವಿಸಿ, ಅದರಲ್ಲಿಯೂ ಬ್ರಹ್ಮರುದ್ರಾದಿಗಳಿಂದ ಪ್ರಾರ್ಥಿತರಾಗಿ ಬ್ರಹ್ಮ ಸೂತ್ರ ರಚಿಸಿದರು, ಅಂತೆಯೇ 'ಚಕ್ರೇ' ಎಂಬ ಆತ್ಮನೇ ಪದ ಪ್ರಯೋಗವಿದೆ. iv) ಹಿಂದಿನ ಶ್ಲೋಕದಲ್ಲಿ ವಿವರಿಸಿದಂತೆ, ಅಪರ ವಿದ್ಯಾ ಎಂದರೆ ವೇದವೇದಾಂಗ ಹಾಗೂ ಪರಾ ವಿದ್ಯಾ ಎಂದರೆ ನಾಶ ರಹಿತ ಪರಮಾತ್ಮನ ಜ್ಞಾನಕ್ಕೆ ಸಾಧನವಾದ ಅರ್ಥಾತ್ ಪರಮಾತ್ಮನ ಜ್ಞಾನ ಜನಕ ಶಾಸ್ತ್ರ. ಪರಾ ವಿದ್ಯಾ ಎಂಬಲ್ಲಿ ಎರಡು ಶಬ್ದಗಳಿವೆ. ಪರಾ ಎಂದರೆ ಇಲ್ಲಿ ಶ್ರೇಷ್ಠ ಉತ್ಕೃಷ್ಟ, (ಶತ್ರು, ಪರಮಾತ್ಮ ಎಂಬ ಅರ್ಥ ಇಲ್ಲಿ ಅಸಂಗತ)

ವಿದ್ಯಾ ಎಂದರೆ ಶಾಸ್ತ್ರ. ಅರ್ಥವಿವಕ್ಷೆ ಇಲ್ಲದ ವಿಷಹರ ಮಂತ್ರ ಮುಂ. ಬೇರೆ ಅರ್ಥ ಕೊಡುವದಿಲ್ಲ. ಏಕೆಂದರೆ—

(ಎ) ಉಪಸಪತ್ತಿನಲ್ಲಿ ಪ್ರಸಕ್ತವಾದದ್ದು ವೇದಾದಿ ಶಾಸ್ತ್ರ, ಆದ್ದರಿಂದ ವಿದ್ಯಾ ಎಂದರೆ ಶಾಸ್ತ್ರ ಎಂಬ ಅರ್ಥ ಪ್ರಕರಣದಿಂದ ತಿಳಿದುಬರುತ್ತದೆ.

(ಬಿ) ಅಪರಾ ವಿದ್ಯಾ ಎಂದರೆ ವೇದಶಾಸ್ತ್ರ ಎಂಬ ಅರ್ಥವಿರುವಾಗ ಅದಕ್ಕೆ ಪ್ರತಿಯೋಗಿಯಾದ ಪರಾ ವಿದ್ಯಾದಲ್ಲಿಯೂ ವಿದ್ಯಾ ಎಂದರೆ ಶಾಸ್ತ್ರ.

(ಸಿ) ಯೋಗ ಮತ್ತು ರೂಢಿಗಳಿಂದಲೂ ವಿದ್ಯಾ ಎಂದರೆ ಶಾಸ್ತ್ರ, 'ವೇತ್ತಿ ತತ್ತ್ವಂ ಶಿಷ್ಯಃ ಅನಯಾ ಇತಿ ವಿದ್ಯಾ: ಶಾಸ್ತಿ ತತ್ತ್ವಂ ಆಚಾರ್ಯ: ಅನಯಾ ಇತಿ ಶಾಸ್ತ್ರಂ. (ಡಿ) ಒಂದೇ ಪ್ರಕರಣದಲ್ಲಿ ಬಂದ ವಿದ್ಯಾ ಶಬ್ದಕ್ಕೆ ಶಾಸ್ತ್ರ ಎಂಬ ಒಂದೇ ಅರ್ಥ ಯುಕ್ತ, ಅಪರಾ ವಿದ್ಯಾ ಎಂದರೆ ವೇದಶಾಸ್ತ್ರ; ಪರಾ ವಿದ್ಯಾ ಎಂದರೆ ಬ್ರಹ್ಮಮೀಮಾಂಸಾ ಶಾಸ್ತ್ರ. ಇನ್ನು ಪರಾ ಎಂದರೆ ಶ್ರೇಷ್ಠ ಉತ್ಕೃಷ್ಟ ಉದಾ : ಪರಮಧಾರ್ಮಿಕ. ಒಟ್ಟಿನಲ್ಲಿ ಪರಾ ವಿದ್ಯಾ ಎಂದರೆ ಶ್ರೇಷ್ಠ ಶಾಸ್ತ್ರ. ವೇದಾನುಗ್ರಾಹಕ ಬ್ರಹ್ಮಸೂತ್ರಗಳೇ ಶ್ರೇಷ್ಠ ಶಾಸ್ತ್ರ. ಋಗಾದಿವೇದಗಳು ಅಪರಾ ವಿದ್ಯಾ; ಆದರೆ ಅವೇ ಬ್ರಹ್ಮಸೂತ್ರಗಳಿಂದ ಉಪ ಕೃತವಾಗಿ ವಿಷ್ಣುವಾಚಕವಾದಾಗ. ಪರಾ ವಿದ್ಯಾ ಆಗುತ್ತವೆ. (ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾ:) ಹೀಗೆ ವೇದಗಳಿಗೆ ಅನುಗ್ರಾಹಕ ಎಂದರೆ ಪರವಾದಿಗಳ ಕುಯುಕ್ತಿಯಿಂದ ವೇದಾರ್ಥ ಕುಂಠಿತವಾದಾಗ, ದುರ್ವಾದಿ ಗಳನ್ನು ಯುಕ್ತಿಯಿಂದ ಖಂಡಿಸಿ ವೇದಾರ್ಥ ಸುಗಮವಾಗಿ ವಿಷ್ಣುವಾಚಕತ್ವಕ್ಕೆ ಸಹಕಾರಿಯಾದ ಬ್ರಹ್ಮ ಸೂತ್ರಗಳು ಪರವಿದ್ಯಾ. ಕೇವಲ ಎಂದರೆ ವೇದ ಗಳಿಗೆ ಅನುಗ್ರಾಹಕವಾಗದೆ ಇರುವಾಗ ಬ್ರಹ್ಮಮೀಮಾಂಸಾ ಪರವಿದ್ಯಾ ಎನಿ ಸುವದಿಲ್ಲ. ಆದರೆ ಇಂತಹ ಪ್ರಸಂಗವೇ ಇಲ್ಲ.

**ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ ॥**
**ಯತಸ್ತದುದಿತಂ ಮಾನಮಜಾದಿಭ್ಯಸ್ತದರ್ಥತಃ ॥೪॥**

**ಅವತರಣಿಕೆ :** ಶಾಸ್ತ್ರ ಆರಂಭಿಸಬೇಕಾದರೆ ಮೊದಲು ಅದರ ಪ್ರಾಮಾಣ್ಯ ಸಿದ್ಧಿಸಬೇಕು. ಅಂತೆಯೇ ಹಿಂದಿನ ಶ್ಲೋಕದಲ್ಲಿ ಬ್ರಹ್ಮಸೂತ್ರ ಶ್ರೇಷ್ಠ ಪ್ರಮಾಣ ಎಂದು ಆಗಮದಿಂದ ಸಾಧಿಸಲಾಯಿತು. ಈಗ ಅನುಮಾನದಿಂದಲೂ ಅದನ್ನೇ ಸಾಧಿಸಲು ಗ್ರಂಥಕಾರರು ಪ್ರವೃತ್ತರಾಗುತ್ತಾರೆ,

**ಅನುವಾದ :** ವೇದವ್ಯಾಸರು ಜಗತ್ತಿಗೆ ಗುರುಗಳಾದ (ತತ್ವೋಪದೇಶಕರಾದ) ಬ್ರಹ್ಮಾದಿಗಳಿಗೂ ಗುರುಗಳಾಗಿದ್ದಾರೆ. ಮತ್ತು ಶಾಸ್ತ್ರಪ್ರವರ್ತಕರೂ ನಿರ್ವಾಪ

ಕರೂ ಆಗಿದ್ದಾರೆ. ಆದ್ದರಿಂದ ಬ್ರಹ್ಮಾದಿಗಳಿಗೆ ಮೋಕ್ಷಕ್ಕೋಸ್ಕರ (ತದರ್ಥತ:) ಹೇಳಲ್ಪಟ್ಟ ಶಾಸ್ತ್ರವು ಪ್ರಮಾಣ.

**ವಿವರಣೆ :** ಪರಿಮಳಾಚಾರ್ಯರು ಹೇಳಿದಂತೆ ಆರಂಭಣೀಯ ಸಂದೇಹ ಎರಡು ವಿಧ–ಪ್ರಾಮಾಣ್ಯ ಸಂದೇಹ ಮತ್ತು ವಿಷಯ ಪ್ರಯೋಜನಾದಿ ನಿಮಿತ್ತಕ ಸಂದೇಹ. ಎರಡನೆಯ ಸಂದೇಹವನ್ನು ಸೂತ್ರಕಾರರೇ ಪ್ರಥಮ ಸೂತ್ರದಲ್ಲಿ ಪರಿಹರಿಸಿದ್ದಾರೆ. ಆದ್ದರಿಂದ ಮೊದಲನೆಯ ಸಂದೇಹವನ್ನು ಪರಿಹರಿಸಲು, ಆಚಾರ್ಯರು ಬ್ರಹ್ಮಸೂತ್ರಪ್ರಾಮಾಣ್ಯವನ್ನು ಶ್ಲೋಕ ೩, ೪, ೫, ೬ ರಲ್ಲಿ ಸ್ಥಾಪಿಸುತ್ತಾರೆ. (i) ಗುರೂಣಾಂ ಗುರು: ಎಂದರೆ ಜಗತ್ತಿನಲ್ಲಿ ಗುರುಗಳೆಂದು ಪ್ರಸಿದ್ಧರಾದ ಬ್ರಹ್ಮ ರುದ್ರಾದಿಗಳಿಗೂ ವೇದವ್ಯಾಸರು ಗುರುಗಳು. ii) ಶಾಸ್ತ್ರಾಣಾಂ ಪ್ರಭವ : ೨ ನೇ ಶ್ಲೋಕದಲ್ಲಿ ನಿರೂಪಿಸಿದಂತೆ ಅಪೌರುಷೇಯ ವೇದಶಾಸ್ತ್ರದ ಪ್ರಥಮ ಪ್ರವರ್ತಕರು ಹಾಗೂ ಪೌರುಷೇಯವಾದ ಬ್ರಹ್ಮಸೂತ್ರ, ಮಹಾಭಾರತ ಮುಂ. ಶಾಸ್ತ್ರ ನಿರ್ಮಾಪಕರು ವೇದವ್ಯಾಸರು. ಅಥವಾ ಗುರೂಣಾಂ ಶಾಸ್ತ್ರಾಣಾಂ ಪ್ರಭವಃ ಅಥವಾ ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ ಎಂದು ಅನ್ವಯ ಮಾಡಬಹುದು. ಕೆಲವರು (ಪದ್ಮನಾಭತೀರ್ಥರು ಮುಂ.) ಈ ಶ್ಲೋಕದಿಂದ ಬ್ರಹ್ಮಸೂತ್ರ ಪ್ರಮಾಣವೆಂದು ನೇರವಾಗಿ ಸಾಧಿಸುತ್ತಾರೆ. ಅವರ ಪ್ರಕಾರ ಶ್ಲೋಕದ ಅರ್ಥ ಹೀಗಿದೆ. ಬಾದರಾಯಣರು (ವೇದವ್ಯಾಸರು) ಜಗದ್ಗುರುಗಳಾದ ಬ್ರಹ್ಮರುದ್ರಾದಿಗಳಿಗೂ ಗುರುಗಳು ಹಾಗೂ ಶಾಸ್ತ್ರನಿರ್ಮಾಪಕರು. ಆದ್ದರಿಂದ ಅವರು ಬ್ರಹ್ಮಾದಿಗಳಿಗೆ ಅವರ ಮೋಕ್ಷಕ್ಕೋಸ್ಕರ ಹೇಳಿದ ಈ ಶಾಸ್ತ್ರ ಪ್ರಮಾಣ. **ಟೀಕಾರಾಯರಾದರೋ** ಗುರೂಣಾಂ ಗುರುತ್ವ, ಶಾಸ್ತ್ರ ಪ್ರಭವತ್ವ, ಅಜಾದಿಭ್ಯಃ ತದುದಿತತ್ವ ಮತ್ತು ತದರ್ಥತಃ ಉದಿತತ್ವ ಹೇತುಗಳಿಂದ ವಕ್ತ್ರಾನುಕೂಲ್ಯ ಶ್ರೋತ್ರಾನುಕೂಲ್ಯ ಪ್ರಸಂಗಾನುಕೂಲ್ಯ ಸಾಧಿಸಿ ಮುಂದೆ ಆ ಅನುಕೂಲ್ಯಗಳಿಂದ ಆಪ್ತಿಯನ್ನೂ ತನ್ಮೂಲಕ ಶಾಸ್ತ್ರ ಪ್ರಾಮಾಣ್ಯವನ್ನೂ ಸಾಧಿಸುತ್ತಾರೆ. (ಮಾನಮಿತಿತು ಪರಮ ಸಾಧ್ಯನಿರ್ದೇಶಃ)

ವಕ್ತ್ರಾನುಕೂಲ್ಯವೆಂದರೆ ಹೇಳುವವನಲ್ಲಿರಬೇಕಾದ ಆವಶ್ಯಕ ಧರ್ಮಗಳು. ಇವು ಮೂರು i) ಹೇಳಬೇಕಾದ ವಿಷಯದ ಬಗ್ಗೆ ಸರಿಯಾದ ಜ್ಞಾನ (ವಿವಕ್ಷಿತಾರ್ಥ ತತ್ವಜ್ಞಾನ) ii) ಇಂದ್ರಿಯ ಸಾಮರ್ಥ್ಯ (ಕರಣಪಾಟವ) ಮತ್ತು iii) ಹೇಳಬೇಕೆಂಬ ಇಚ್ಛೆ (ವಿವಕ್ಷಾ). ಶ್ರೋತ್ರಾನುಕೂಲ್ಯವೆಂದರೆ ಕೇಳುವವನಲ್ಲಿರಬೇಕಾದ ಆವಶ್ಯಕ ಗುಣಗಳು. ಇವು ಎರಡು. ತತ್ವಜ್ಞಾನ ಯೋಗ್ಯತಾ ಮತ್ತು ಹೇಳುವವನ ಪ್ರೀತಿಗೆ ಪಾತ್ರವಾಗಿರುವದು. ಪ್ರಸಂಗಾನುಕೂಲ್ಯವೆಂದರೆ ಉಪದೇಶ ಪ್ರಸಂಗ ಸರಿಯಾಗಿರಬೇಕು. ಉಪದೇಶದ ಉದ್ದೇಶ ಈಡೇರಲು ಉಚಿತ ಪ್ರಸಂಗವಿರಬೇಕು.

ಪ್ರಕೃತದಲ್ಲಿ ಈ ಶಾಸ್ತ್ರಕ್ಕೆ ಮೂರೂ ಅನುಕೂಲತೆಗಳಿವೆ. ಬ್ರಹ್ಮಸೂತ್ರಗಳ ವಕ್ತಾ ಬಾದರಾಯಣರು (ವೇದವ್ಯಾಸರು) ಗುರುಗಳ ಗುರುಗಳೂ, ಶಾಸ್ತ್ರ ನಿರ್ಮಾಪಕರೂ ಇರುವದರಿಂದ ಅವರಲ್ಲಿ ವಿವಕ್ಷಿತಾರ್ಥ ಜ್ಞಾನವಿದೆ. ಶಾಸ್ತ್ರ ನಿರ್ಮಾಪಕರಾದ್ದರಿಂದ ಅವರಿಗೆ ಇಂದ್ರಿಯ ಸಾಮರ್ಥ್ಯವಿದೆ. ಬ್ರಹ್ಮಾದಿಗಳಿಗೆ ಉಪದೇಶಿಸಿದ್ದರಿಂದ ಅವರಿಗೆ ವಿವಕ್ಷಾ, ಹೇಳುವ ಇಚ್ಛೆ ಇದೆ ಎಂಬುದು ಸ್ಪಷ್ಟ. ಶಾಸ್ತ್ರ ಕೇಳುವ ಬ್ರಹ್ಮಾದಿಗಳು ಸ್ವತಃ ಜಗದ್ಗುರುಗಳಾದ್ದರಿಂದ ಅವರಲ್ಲಿ ತತ್ತ್ವ ಜ್ಞಾನ ಯೋಗ್ಯತೆ ಇದೆ. ಬ್ರಹ್ಮಾದಿ ದೇವತೆಗಳು ಭಗವಂತನ ಪ್ರೀತಿಗೆ ಪಾತ್ರ ರೆಂಬುದು ಸುಪ್ರಸಿದ್ಧವಿದೆ. ಕೊನೆಯದಾಗಿ ಈ ಶಾಸ್ತ್ರ ಅನುಕೂಲ ಪ್ರಸಂಗ ವುಳ್ಳದ್ದು ಏಕೆಂದರೆ ಶ್ರೋತೃಗಳಾದ ಬ್ರಹ್ಮಾದಿದೇವತೆಗಳ ಅಪೇಕ್ಷಿತ ಪ್ರಯೋಜನಕ್ಕಾಗಿ, ಎಂದರೆ ಮೋಕ್ಷಕ್ಕಾಗಿ ಉಪದೇಶಿಸಲ್ಪಟ್ಟಿದೆ. ಅನುವಾದಿಂದ ಪದ್ಮನಾಭತೀರ್ಥರಂತೆ, ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯವನ್ನು ನೇರವಾಗಿ ಸಾಧಿಸಿದರೆ, ೫ ನೇ ಶ್ಲೋಕದಲ್ಲಿಯ ಅಪ್ತವಾಕ್ಯತಯಾ ತೇನ ಮಾನಂ ಎಂಬುದರ ವಿರೋಧ ಬರುತ್ತದೆ. ಅಲ್ಲಿದೆ ದೃಷ್ಟಾಂತವಾದ ಭಾರತಕ್ಕೆ ಪ್ರಾಮಾಣ್ಯವಿರಲಿ, ಆದರೆ ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯ ಬೇಡ, ಏಕೆಂದರೆ, ವಕ್ತಾ ವಂಚಕನಿರಬಹುದು. ಎಂದು ಶಂಕಿಸಿದರೆ ಆ ಶಂಕಾ ಪರಿಹರಿಸಲು, ವಕ್ತಾ ವಂಚಕನಲ್ಲ, ಆಪ್ತ ಎಂದು ಸಾಧಿಸಬೇಕಾಗುತ್ತದೆ. ಹೀಗೆ ಕೊನೆಗೆ ಆಪ್ತತ್ವ ಸಾಧಿಸುವ ಬದಲು ಆಪ್ತಿಯನ್ನು ಮೊದಲು ಸಾಧಿಸುವದು ಸೂಕ್ತ.

**ವಕ್ತೃ ಶ್ರೋತೃ ಪ್ರಸಕ್ತೀನಾಂ ಯದಾಪ್ತಿರನುಕೂಲತಾ ।**
**ಆಪ್ತವಾಕ್ಯತಯಾ ತೇನ ಶ್ರುತಿ ಮೂಲತಯಾ ತಥಾ ॥೫॥**

**ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ ।**
**ದೃಶ್ಯತೇ ಬ್ರಹ್ಮಸೂತ್ರಾಣಾಮೇಕಧಾಽನ್ಯತ್ರ ಸರ್ವಶಃ ॥೬॥**

**ಅವತರಣಿಕೆ :** ಬ್ರಹ್ಮಸೂತ್ರ ಪ್ರಮಾಣವೆಂದು ಉಪಸಂಹಾರ ಮಾಡುತ್ತಾರೆ.

**ಅನುವಾದ :** ಎಲ್ಲಿ ವಕ್ತೃ – ಶ್ರೋತೃ ಪ್ರಸಂಗಗಳ ಅನುಕೂಲತೆ ಇದೆಯೋ (ಯತ್–ಯತ್ರ) ಅಲ್ಲಿ ಆಪ್ತಿ ಎಂದರೆ ಆಪ್ತ ವಾಕ್ಯತ್ವವಿರುತ್ತದೆ. ವಕ್ತಾದ್ಯಾನುಕೂಲ್ಯಗಳಿಂದ (ತೇನ) ಸಿದ್ಧವಾದ ಆಪ್ತವಾಕ್ಯದಿಂದ ಈ ಶಾಸ್ತ್ರವು ಪ್ರಮಾಣ (ಮಾನಂ – ಹಿಂದಿನ ಶ್ಲೋಕದ್ದು) ಮತ್ತು ಅದರಂತೆ ಶ್ರುತಿಸಂವಾದ ಹಾಗೂ ಯುಕ್ತಿ ಸಂವಾದ ಇರುವದರಿಂದಲೂ ಈ ಶಾಸ್ತ್ರವು ಪ್ರಮಾಣ (ಮಾನಂ) ಹೀಗೆ ಬ್ರಹ್ಮಸೂತ್ರಗಳಿಗೇನೇ ಪ್ರಾಮಾಣ್ಯವು ಮೂರು ವಿಧ ಇರುವದರಿಂದ ಆ ಪ್ರಾಮಾಣ್ಯ ಶ್ರೇಷ್ಠ. ಉಳಿದೆಡೆಯಲ್ಲಿ ಪ್ರಾಮಾಣ್ಯವು ಒಂದು ವಿಧ (ಮತ್ತು ಎರಡು ವಿಧ) ಕಂಡು ಬರುತ್ತದೆ.

**ವಿವರಣೆ** : ಇಲ್ಲಿಯು ಅಭಿಪ್ರಾಯ ಹೀಗಿದೆ.

i) ಈ ಶಾಸ್ತ್ರವು ಆಪ್ತವಾಕ್ಯ, ಏಕೆಂದರೆ ಅನುಕೂಲ ವಕ್ತಾ ಆದ ಬಾದರಾಯಣ ನಿಂದ ಅನುಕೂಲ ಬ್ರಹ್ಮಾದಿ ಶ್ರೋತೃಗಳಿಗೆ ಅವರ ಹಿತಸಾಧನದ ಸಲುವಾಗಿ ಉಪದಿಷ್ಟವಾಗಿದೆ. ಈ ವಿಷಯದಲ್ಲಿ ಭಾರತವು ದೃಷ್ಟಾಂತ. ii) ಈ ಶಾಸ್ತ್ರ ಪ್ರಮಾಣ, ಏಕೆಂದರೆ ಆಪ್ತವಾಕ್ಯವಾಗಿದೆ. ಇಲ್ಲಿಯೂ ಭಾರತವು ದೃಷ್ಟಾಂತ.

**ಟೀಪು :** ವಕ್ತೃ–ಶ್ರೋತೃ–ಪ್ರಸಂಗ ಹೀಗೆ ಮೂರು ಅನುಕೂಲತೆ ಗಳಿದ್ದರೇನೇ ಅದು ಆಪ್ತವಾಕ್ಯವೆನಿಸುತ್ತದೆ.

ಜೈನಾಗಮ ಆಪ್ತವಾಕ್ಯವಲ್ಲ, ಏಕೆಂದರೆ ಇಲ್ಲಿ ಅನುಕೂಲ ವಕ್ತಾ ಇಲ್ಲ. ಜಿನ ಯಥಾರ್ಥ ವಕ್ತಾ ಎಂದು ಸಿದ್ಧವಿಲ್ಲ. ಅನುಕೂಲ ಶ್ರೋತೃಗಳಿಲ್ಲದ್ದರಿಂದ ಬೌದ್ಧಾ ಗಮ ಆಪ್ತವಾಕ್ಯವಲ್ಲ. ಪ್ರಸಂಗಾನುಕೂಲ್ಯ ಇಲ್ಲವಾದ್ದರಿಂದ ಚೇಷ್ಟೆಯ ಮಾತು ಗಳು (ನರ್ಮವಾಕ್ಯ) ಆಪ್ತವಾಕ್ಯಗಳಲ್ಲ.

**ಆಪ್ತ ಎಂದರೆ ಯಾರು ?** ಹೇಳಬೇಕಾದ ವಿಷಯದ ಸರಿಯಾದ ಜ್ಞಾನ, ಇಂದ್ರಿಯ ಸಾಮರ್ಥ್ಯ, ಹೇಳಬೇಕೆಂಬ ಇಚ್ಛೆ ಮತ್ತು ಅವಿಪ್ರಲಿಪ್ಸಾ (ನಿರ್ವಂಚನ ಬುದ್ಧಿ) ಇವುಗಳಿಗೆ ಆಪ್ತಿ ಎನ್ನುವರು. ಈ ಧರ್ಮಗಳುಳ್ಳವನು ಆಪ್ತ, ಇದ ಲ್ಲದೆ ನಿರ್ದೋಷಃ ಆಪ್ತಃ–ದೋಷರಹಿತನು ಆಪ್ತ ಮತ್ತು ಪ್ರಮಿತಸ್ಯ ಏವ ವಕ್ತಾ ಆಪ್ತಃ (ಪ್ರಮಾಣ ಪ್ರಮಿತ ವಿಷಯವನ್ನೇ ಹೇಳುವವ ಆಪ್ತ) ಎಂಬ ಲಕ್ಷಣ ಗಳೂ ಗ್ರಾಹ್ಯವಾಗಿವೆ.

**ಟೀಪು :** ಮೇಲಿನ ನಿರೂಪಣೆಯಿಂದ ವಕ್ತ್ರಾನುಕೂಲ್ಯ ಆಪ್ತಿಯ ಒಂದು ಭಾಗವೆಂದು ತಿಳಿದುಬರುತ್ತದೆ. ವಕ್ತ್ರಾನುಕೂಲ್ಯದಲ್ಲಿ ವಿವಕ್ಷಿತಾರ್ಥ ತತ್ವಜ್ಞಾನ, ಕರಣಪಾಟವ ವಿವಕ್ಷಾ ಎಂಬ ೩ ಧರ್ಮಗಳು ಸೇರಿವೆ. ಆಪ್ತಿಯಲ್ಲಿ ಈ ಮೂರು ಧರ್ಮಗಳಲ್ಲದೆ ಅವಿಪ್ರಲಿಪ್ಸಾ (ನಿರ್ವಂಚನ ಬುದ್ಧಿ) ಎಂಬ ನಾಲ್ಕನೆಯ ಧರ್ಮವೂ ಇದೆ. ಈ ನಿರ್ವಂಚನಾ ಬುದ್ಧಿ ಅನುಕೂಲ ಶ್ರೋತಾ ಮತ್ತು ಅನುಕೂಲ ಪ್ರಸಂಗ ಗಳನ್ನು ಅವಲಂಬಿಸಿದೆ.

**ಗಮನಿಸಿರಿ :** ೧) ಪ್ರಾಮಾಣ್ಯಂ ಸ್ವತಃ ಎಂದೇ ಬಾದರಾಯಣರ ಮತ. ಆದರೂ ಅಪ್ರಾಮಾಣ್ಯ ಶಂಕಾ ಪರಿಹರಿಸಲು ಆಪ್ತಿಯ ಮೂಲಕ ಬ್ರಹ್ಮ ಸೂತ್ರಕ್ಕೆ ಪ್ರಾಮಾಣ್ಯ ಸ್ಥಾಪಿಸಿದ್ದಾರೆ.

೨) ಬ್ರಹ್ಮಸೂತ್ರಗಳಿಗೆ ಆಪ್ತಿ ಮೂಲಕ ಪ್ರಾಮಾಣ್ಯವನ್ನು ಸಾಧಿಸಿದ ನಂತರ ಅವುಗಳಿಗೆ ಶ್ರುತಿ ಸಂವಾದ ಮತ್ತು ಯುಕ್ತಿ ಸಂವಾದಗಳಿಂದಲೂ ಪ್ರಾಮಾಣ್ಯ ವಿದೆ ಎಂದು ನಿರೂಪಿಸಲಾಗಿದೆ. ಶ್ರುತಿ ಮತ್ತು ಯುಕ್ತಿ ಸಂವಾದ ಎಂದರೆ ಶ್ರುತಿ ಮತ್ತು ಯುಕ್ತಿಗಳನ್ನು ನೋಡಿ ಬ್ರಹ್ಮಸೂತ್ರ ರಚಿಸಲಾಗಿದೆ ಎಂದು ಅರ್ಥವಲ್ಲ;

ಆದರೆ ಜ್ಞಾನನಿಧಿ ಮತ್ತು ಸರ್ವಜ್ಞರಾದ ಬಾದರಾಯಣರು ಸ್ವಬುದ್ಧಿಯಿಂದ ರಚಿಸಿದ ಬ್ರಹ್ಮಸೂತ್ರಗಳಿಗೆ ಶ್ರುತಿ ಮತ್ತು ಯುಕ್ತಿ ಸಂವಾದವಿರುವದೇ ಅಭಿಪ್ರಾಯ.

**ಬ್ರಹ್ಮಸೂತ್ರ ಶಬ್ದಾರ್ಥ :** ಬ್ರಹ್ಮ ಎಂದರೆ ವೇದ ಅಥವಾ ವೇದಪ್ರತಿಪಾದ್ಯ ಪರಬ್ರಹ್ಮ. ಆ ಪರಬ್ರಹ್ಮ ವಿಷಯಕ ಸೂತ್ರಗಳು ಎಂದು ಅರ್ಥ. ಎಂದರೆ ಸಕಲ ವೇದ ಪ್ರತಿಪಾದ್ಯನಾದ ವಿಷ್ಣುವಿನ (ಪರಬ್ರಹ್ಮನ) ಸ್ವರೂಪವನ್ನು ಲಕ್ಷಣ ಮತ್ತು ಪ್ರಮಾಣಗಳಿಂದ ನಿರ್ಣಯಿಸುವ ಸೂತ್ರಗಳು ಎಂದು ಅಭಿಪ್ರಾಯ. ಇನ್ನು ಕೆಲವೆಡೆ ಬ್ರಹ್ಮಸೂತ್ರಗಳಿಗೆ ಶಾರೀರಿಕ ಸೂತ್ರಗಳು ಎಂದೂ ಹೇಳಲಾಗಿದೆ. ಶಾರೀರಿಕ ಸೂತ್ರಗಳು ಎಂದರೆ ಶರೀರದಲ್ಲಿರುವ ಪರಮಾತ್ಮನ ಸ್ವರೂಪ ನಿರ್ಣಯಿಸುವ ಸೂತ್ರಗಳು. ಶರೀರದಲ್ಲಿರುವ ಜೀವನ ಬಗ್ಗೆ ಇರುವ ಸೂತ್ರಗಳು ಎಂಬ ಶಂಕರಾಚಾರ್ಯರ ಅರ್ಥ ಸರ್ವಥಾಗ್ರಾಹ್ಯವಲ್ಲ, ಏಕೆಂದರೆ ಈ ಅರ್ಥ ಬ್ರಹ್ಮಸೂತ್ರ ಶಬ್ದಾರ್ಥಕ್ಕೆ ವಿರುದ್ಧವಾಗಿದೆ.

**ಪ್ರಾಮಾಣ್ಯಂ ತ್ರಿವಿಧಂ ಮಹತ್:** ತಂದೆಯ ವಾಕ್ಯ ಪ್ರಮಾಣ ಏಕೆಂದರೆ ತಂದೆ ಆಪ್ತ. ಆದ್ದರಿಂದ ಆಪ್ತಿ ಮೂಲಕ ತಂದೆಯ ವಾಕ್ಯ ಪ್ರಮಾಣ. ಮನ್ವಾದಿ ವಾಕ್ಯಗಳಲ್ಲಿ ಆಪ್ತಿ ಮೂಲಕ ಮತ್ತು ಶ್ರುತಿ ಮೂಲಕ ಹೀಗೆ ಎರಡು ವಿಧದ ಪ್ರಾಮಾಣ್ಯವಿದೆ. ಬ್ರಹ್ಮಸೂತ್ರಗಳಿಗಾದರೋ ನಿರವಧಿಕ ಮಹಾ ಆಪ್ತಿ ಮೂಲಕ ಮತ್ತು ನಿರವಧಿಕ ಮಹಾ ಶ್ರುತಿಸಂವಾದ ಹಾಗೂ ಯುಕ್ತಿ ಸಂವಾದ ಮೂಲಕ ಎಂದರೆ ಮೂರು ಬಗೆಯ ಮಹತ್ ಪ್ರಾಮಾಣ್ಯವಿದೆ, ಇದಲ್ಲದೆ ಬ್ರಹ್ಮಸೂತ್ರಗಳ ವಿಷಯ ಮಹಾನ್ ನಾರಾಯಣ, ಮತ್ತು ಪ್ರಯೋಜನ ಮಹತ್ತಾದ ಶಾಶ್ವತ ಸುಖರೂಪ ಮೋಕ್ಷ, ಆದ್ದರಿಂದ ಬ್ರಹ್ಮಸೂತ್ರಗಳ ಪ್ರಾಮಾಣ್ಯವು 'ತ್ರಿವಿಧಂ ಮಹತ್' ಆಗಿದೆ.

**ಪ್ರವೃತ್ತಿ :** ಪ್ರಮಾಣವೆಂದ ಮಾತ್ರಕ್ಕೆ ಅದರಲ್ಲಿ ಮನುಷ್ಯನಿಗೆ ಪ್ರವೃತ್ತಿ ಹುಟ್ಟುವದಿಲ್ಲ. ಆದರೆ ಆ ವಿಷಯ ನಮಗೆ ಇಷ್ಟವಾಗಿದ್ದು ಪ್ರಮಾಣವೆಂದು ಪ್ರಮಿತವಾದಾಗ ಮಾತ್ರ ಅದರಲ್ಲಿ ನಿರಾತಂಕ ಪ್ರವೃತ್ತಿ ಹುಟ್ಟುತ್ತದೆ. ಪ್ರಾಮಾಣ್ಯವನ್ನು ಎಷ್ಟೆಷ್ಟು ಹೆಚ್ಚು ಪ್ರಮಾಣಗಳಿಂದ ನಿಶ್ಚಯಿಸುವೆವೋ ಅಷ್ಟಷ್ಟು ಶೀಘ್ರ ನಿಃಶಂಕ ಪ್ರವೃತ್ತಿ ಹುಟ್ಟುತ್ತದೆ.

**ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ ।**
**ಸ್ವಯಂ ಕೃತಾಪಿ ತದ್‌ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ ॥೬॥**

**ಅವತರಣಿಕೆ :** ಬ್ರಹ್ಮಸೂತ್ರಗಳು ಪರಾ ವಿದ್ಯಾ ಎಂದು ಶ್ರುತಿಯಲ್ಲಿ ಹೇಳಿದ್ದರಿಂದ

ಹಾಗೂ ಇದಕ್ಕೆ ತ್ರಿವಿಧ ಪ್ರಾಮಾಣ್ಯ ಇರುವದರಿಂದ, ಇದುವೇ ಅತ್ಯಂತ ಪ್ರಮಾಣ, ಬೇರೊಂದಲ್ಲ ಎಂದು ಉಪಸಂಹಾರ ಮಾಡುತ್ತಾರೆ.

**ಅನುವಾದ :** ಆದ್ದರಿಂದ ಬ್ರಹ್ಮಸೂತ್ರದಂತೆ ಶ್ರೇಷ್ಠ ಪ್ರಮಾಣಭೂತವಾದ ಬೇರೊಂದು ಶಾಸ್ತ್ರವಿಲ್ಲ ಎಂದು (ಪ್ರಾಮಾಣಿಕರು) ಒಪ್ಪಿದ್ದಾರೆ. ಬ್ರಹ್ಮಸೂತ್ರದ ವ್ಯಾಖ್ಯಾನವನ್ನು ನಾವೇ ಸ್ವತಃ (ಭಾಷ್ಯರೂಪದಿಂದ) ಮಾಡಿದ್ದರೂ ಅದರ ಅರ್ಥ ಸ್ಪಷ್ಟವಾಗುವದಕ್ಕೋಸ್ಕರ ಪುನಃ ನಮ್ಮಿಂದ ಆ ಸೂತ್ರಗಳ ವ್ಯಾಖ್ಯಾನವು ಈ ಗ್ರಂಥದಲ್ಲಿ ಮಾಡಲ್ಪಡುತ್ತದೆ.

**ವಿವರಣೆ :** ಬ್ರಹ್ಮಸೂತ್ರ ಶ್ರೇಷ್ಠ ಶಾಸ್ತ್ರವೆಂದರೆ ಶ್ರೇಷ್ಠ ನಿರ್ಣಾಯಕ ಶಾಸ್ತ್ರ. ವಿಚಾರ್ಯ ಅಥವಾ ನಿರ್ಣೇಯ ಶಾಸ್ತ್ರಗಳಲ್ಲಿ ಭಾರತ ಶ್ರೇಷ್ಠ. ಇನ್ನು ನಿರ್ಣಾಯಕ ಶಾಸ್ತ್ರವೇ ನಿರ್ಣೇಯ ಶಾಸ್ತ್ರಕ್ಕಿಂತ ಶ್ರೇಷ್ಠ.
ಸ್ಪಷ್ಟೀಕರಣ ಅನೇಕ ವಿಧವಾಗಿದೆ. ಸಂಕ್ಷೇಪದ ವಿಸ್ತಾರ, ವಿಸ್ತಾರದ ಸಂಕ್ಷೇಪ, ಅಲ್ಲಿ ಹೇಳದಿದ್ದುದನ್ನು ಹೊಸದಾಗಿ ಹೇಳುವದು, ಅಲ್ಲಲ್ಲಿ ಹೇಳಿದ್ದನ್ನು ಸಂಗ್ರಹಿಸಿ ಹೇಳುವದು, ಎಲ್ಲಿಯೋ ಹೇಳಿದ್ದನ್ನು ಉಪಪಾದನ ಮಾಡುವದು, ಪರರ ಅಪವ್ಯಾಖ್ಯಾನದ ಖಂಡನೆ ಮುಂ. ಉದಾಹರಣಾರ್ಥವಾಗಿ ಭಾಷ್ಯದ ಆದ್ಯಪದ್ಯದ ವಿವರಣೆ ಇಲ್ಲಿ ಮೊದಲಿನ ಮೂರು ಶ್ಲೋಕಗಳಲ್ಲಿದೆ.

**ತತ್ರ ಕಾರಾಥ ಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ।**
**ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ॥೮॥**

**ಅವತರಣಿಕೆ :** ಮಂಗಲಾಚರಣ ಇಲ್ಲವಾದ್ದರಿಂದ ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನ ಮಾಡುವದು ಅಯುಕ್ತ ಎಂಬ ಆಕ್ಷೇಪವನ್ನು ಪರಿಹರಿಸುತ್ತಾರೆ. ಪ್ರಥಮ ಸೂತ್ರದ ಪ್ರಾರಂಭದಲ್ಲಿಯೇ ಓಂ ಮತ್ತು ಅಥ ಶಬ್ದಗಳಿಂದ ಸೂತ್ರಕಾರರು ಮಂಗಲ ಆಚರಿಸಿದ್ದಾರೆ ಎಂದು ಆಚಾರ್ಯರು ತಿಳಿಸುತ್ತಾರೆ.

**ಅನುವಾದ :** ಓಂ ಮತ್ತು ಅಥ ಶಬ್ದಗಳನ್ನು ಕ್ರಮವಾಗಿ ಮೊದಲು (ಮೂಲತ್ವಂ ಕ್ರಮೇಣ ಆದಿತ್ವಂ) ಪ್ರಯೋಗಿಸುತ್ತಾರೆ. ಇವು ಪ್ರಥಮ ಸೂತ್ರದ ಅವಯವವೆಂದೂ ಸರ್ವಶಾಸ್ತ್ರದ ಅಂಗವೆಂದೂ ಸೂತ್ರಕಾರರಿಂದ ಅಂಗೀಕರಿಸಲ್ಪಟ್ಟಿದೆ. ಎಲ್ಲ ಸೂತ್ರಗಳಿಗೆ ಅನುಗತವಾಗಿರುವದರಿಂದ ಓಂಕಾರವನ್ನು ಪ್ರತ್ಯೇಕ (ಪೃಥಕ್) ಎಂದರೆ ಓಮಥಾತೋ ಎಂದು ಸಂಧಿ ಮಾಡದೆ, ಎಲ್ಲ ಸೂತ್ರಕಾರರು (ಜೈಮಿನಿ-ಶೇಷ-ಪೈಲ ಮುಂ.) ಉಚ್ಚರಿಸುತ್ತಾರೆ.

**ವಿವರಣೆ. ಮಂಗಲವಾದ :** ಮಂಗಲ ಎಂದರೆ ಇಷ್ಟದೇವತೆಯನ್ನುದ್ದೇಶಿಸಿ, ಮಾಡುವ ನಮಸ್ಕಾರ ಅಥವಾ ಸ್ತೋತ್ರ. ಇದು ಕಾಯಿಕ, ವಾಚನಿಕ ಅಥವಾ ಮಾನಸಿಕ ಇರಬಹುದು. ಮಂಗಲದ ಉದ್ದೇಶ ನಿರ್ವಿಘ್ನದಿಂದ ಪರಿಸಮಾಪ್ತಿ

ಪ್ರಸಿದ್ಧಿ, ಮುಂ. ಅಂತೆಯೇ ಕೈಕೊಂಡ ಕೆಲಸ ನಿರಾತಂಕವಾಗಿ ಮುಗಿಯಲೆಂದು ಎಲ್ಲರೂ ಕೆಲಸದ ಆರಂಭಕ್ಕೆ. ಅದರಂತೆ ಶಾಸ್ತ್ರದ ಆದಿಯಲ್ಲಿ ಮಂಗಲ ಆಚರಿಸುವದುಂಟು,

**ಆಕ್ಷೇಪ ಪರಿಹಾರ :** ಆದರೆ ಮಂಗಲ ಮಾಡದಿದ್ದರೂ ಮೇಘದೂತ, ಕಿರಣಾವಲಿ ಮೊದಲಾದ ಗ್ರಂಥಗಳು ಮುಗಿದಿವೆ. ಮತ್ತು ಮಂಗಲ ಮಾಡಿದ ಕಾದಂಬರಿ ಮೊದಲಾದ ಗ್ರಂಥಗಳು ಮುಗಿದಿಲ್ಲ ಎಂಬ ಎರಡು ಆಕ್ಷೇಪಗಳು ಅಯುಕ್ತ. ಮಂಗಲ ಮಾಡದಿದ್ದರೂ ಗ್ರಂಥ ಮುಗಿದಿದ್ದರೆ, ಗ್ರಂಥಕಾರರು ಕಾಯಿಕ ಅಥವಾ ಮಾನಸಿಕ ಮಂಗಲ ಮಾಡಿರಬಹುದು. ಅಥವಾ ಬೇರೊಂದು ಅದೃಷ್ಟಮೂಲಕ ಗ್ರಂಥ ಮುಗಿದಿರಬಹುದು. ಕಾರ್ಯ ಕಾರಣಭಾವವು ಶ್ರುತಿಯಿಂದ ನಿಶ್ಚಿತವಿರುವಾಗ, ಕಾರಣವಿಲ್ಲದಲೆ ಕಾರ್ಯ ಕಂಡು ಬಂದರೆ, ಆ ಕಾರ್ಯಕ್ಕೆ ಬೇರೊಂದು ಕಾರಣ ಕಲ್ಪಿಸಬೇಕು. ಪ್ರಸ್ತುತ ಕಾರಣತ್ವವನ್ನು ನಿರಾಕರಿಸಲಾಗದು. ಇನ್ನು ಕಾರಣವಿದ್ದರೂ ಕಾರ್ಯ ಆಗದಿದ್ದರೆ, ಅದಕ್ಕೆ ಕರ್ತನ ದೋಷ, ಪ್ರಬಲ ಅದೃಷ್ಟ ಮುಂ. ಪ್ರತಿಬಂಧಗಳಿವೆಯೆಂದು ತಿಳಿಯಬೇಕು, ಉದಾ– ಅಗ್ನಿಸ್ತಂಭನ ವಿದ್ಯೆ ಅರಿತವನಿಗೆ ಬೆಂಕಿಯಿಂದ ಗಾಯಗಳಾಗದಿದ್ದರೆ, ಗಾಯಕ್ಕೆ ಅಗ್ನಿ ಕಾರಣವಲ್ಲ ಎಂದು ಹೇಳಲಾಗದು.

ಮಂಗಲ ಆಚರಿಸಬೇಕೆಂದು ಸ್ಪಷ್ಟ ಶ್ರುತಿ ಅಥವಾ ಸ್ಮೃತಿ ವಚನಗಳಿಲ್ಲ. ಆದರೆ ಅನೂಚಾನವಾಗಿ ಬಂದ ಶಿಷ್ಟ ಪರಂಪರೆಯಿಂದ ಮಂಗಲವು ಶ್ರುತಿವಿಹಿತ ಎಂದು ಅರಿಯಬೇಕು. ಸಮಾಪ್ತಿಕಾಮಃ ಮಂಗಲಂ ಆಚರೇತ್ ಎಂಬ ಶ್ರುತಿ ಇರಬೇಕೆಂದು ಊಹಿಸಲಾಗುತ್ತದೆ, ವಿಘ್ನಗಳಿದ್ದ ಬಗ್ಗೆ ನಿಶ್ಚಯ ಇಲ್ಲದಿದ್ದರೂ ಸಂಭವನೀಯ ದೋಷ ಪರಿಹರಿಸಲು ಮಂಗಲ ಆಚರಿಸಲಾಗುತ್ತದೆ. ಪ್ರಕೃತದಲ್ಲಿ ಸೂತ್ರಕಾರರು ಮಂಗಲ ಮಾಡಿಲ್ಲವೆಂಬ ವಾದ ಅಯುಕ್ತ, ಸೂತ್ರಕಾರರು ಮಂಗಲ ಆಚರಿಸಿದ್ದಾರೆ; ಹಾಗೂ ಅದನ್ನು ಗ್ರಂಥದಲ್ಲಿಯೂ ಸೇರಿಸಿದ್ದಾರೆ. ಪ್ರಥಮ ಸೂತ್ರದ ಪ್ರಾರಂಭದಲ್ಲಿದ್ದ ಓಂ ಮತ್ತು ಅಥ ಶಬ್ದಗಳಿಂದ ಮಂಗಲ ಮಾಡಲಾಗಿದೆ. ಇವೆರಡೂ ಶಬ್ದಗಳು ಮಂಗಲಕರವೆಂದು ಪ್ರಮಾಣವಿದೆ. ತೇನ ಮಂಗಲಿಕೌ ಉಭೌ : ಓಂ ಮತ್ತು ಅಥ ಈ ಎರಡು ಶಬ್ದಗಳು ಒಂದಕ್ಕೆ ಬ್ರಹ್ಮದೇವರ ಕಂಠ ಶೀಳಿ ಹೊರಬಂದವು, ಆದ್ದರಿಂದ ಅವೆರಡೂ ಮಂಗಲಕರ. ಇದಲ್ಲದೆ ಓಂಕಾರವು ಅನಿಷ್ಟನಿವಾರಕವೂ ಆಗಿದೆ, ಎಂದರೆ ಓಂಕಾರ ಉಚ್ಚರಿಸುವದರಿಂದ ಅನಿಷ್ಟಗಳನ್ನು ದಾಟಬಹುದು.

**ಪೂರ್ವಪಕ್ಷ :** ಓಂ ಮತ್ತು ಅಥ ಶಬ್ದಗಳಿಂದ ವಿಘ್ನನಿವಾರಣೆ ಮುಂ. ಆಗುವದಾದರೆ, ಪ್ರಥಮ ಸೂತ್ರದಲ್ಲಿ ಅಧಿಕಾರ ಹಾಗೂ ವಿಷಯವಾಚಕ ಶಬ್ದಗಳೇ

ಉಳಿಯುವದಿಲ್ಲ. ಹೀಗಾಗಿ ಪ್ರಥಮ ಸೂತ್ರ ನ್ಯೂನವಾಗುವದು. **ಶಾಸ್ತ್ರಕ್ಕೆ** ವಿಷಯ ಅಧಿಕಾರಿ ಇಲ್ಲದಿದ್ದರೆ ಅದು ಆರಂಭಣೀಯವೇ ಅಲ್ಲ.

**ಸಿದ್ಧಾಂತ :** ಪ್ರಥಮ ಸೂತ್ರದ ಓಂ ಮತ್ತು ಅಥ ಶಬ್ದಗಳು ವಿಷಯ ಮತ್ತು ಅಧಿಕಾರ ನಿರೂಪಕವಾಗಿವೆ. ಆದ್ದರಿಂದ ಇವು ಆ ಸೂತ್ರದ ಅವಯವಗಳೇ. ಸೂತ್ರದಲ್ಲಿ ಇವೆರಡಕ್ಕೂ ಅನ್ವಯವಿದೆ. ಇದಲ್ಲದೆ ಶಂಖ-ವೀಣಾ–ವೇಣು ಧ್ವನಿಯಂತೆ ಇವು ಶ್ರವಣ ಮಾತ್ರದಿಂದ ಮಂಗಲಕರವೂ ಆಗಿವೆ. ಬೇರೆಯವರಿಗಾಗಿ ತರುವ ತುಂಬಿದ ಕೊಡವನ್ನು ಎದುರಿನಲ್ಲಿ ನೋಡುವದರಿಂದ ಮಂಗಲವಾಗುವಂತೆ, ಪ್ರಥಮ ಸೂತ್ರದ ಓಂ ಮತ್ತು ಅಥ ಶಬ್ದಗಳನ್ನು ಶ್ರವಣ ಮಾಡುವದರಿಂದಲೇ ಮಂಗಲವಾಗುತ್ತದೆ. ಈ ಎರಡು ಶಬ್ದಗಳು ಪ್ರಥಮ ಸೂತ್ರದಲ್ಲಿ ಅಧಿಕಾರ–ವಿಷಯ ಜ್ಞಾಪಕವಾಗಿಯೂ, ಸಮಸ್ತಶಾಸ್ತ್ರಕ್ಕೆ ನಿರ್ವಿಘ್ನ ಪರಿಸಮಾಪ್ತಿ ಮತ್ತು ಮಂಗಲಕಾರಕವಾಗಿಯೂ ಸೂತ್ರಕಾರರಿಂದ ಬಳಸಲ್ಪಟ್ಟಿವೆ. ಓಂಕಾರದ ಉಚ್ಚಾರದಿಂದ ಅನಿಷ್ಟರಾಶಿಯನ್ನು ದಾಟುವದರಿಂದ, ಅದಕ್ಕೆ ತಾರ ಎಂದು ಹೆಸರಿದೆ.

## ಓಂಕಾರದ ಅಧಿಕರಣ :

**ಆಕ್ಷೇಪ :** ಓಂಕಾರವು ಪ್ರಥಮ ಸೂತ್ರದ ಪ್ರಾರಂಭದಲ್ಲಿ ಇಲ್ಲವೇ ಇಲ್ಲ. ಶಿಷ್ಟರು ಪ್ರತ್ಯಕ್ಷವಾಗಿ ಪ್ರಥಮ ಸೂತ್ರದ ಪ್ರಾರಂಭಕ್ಕೆ ಉಚ್ಚರಿಸುವ ಓಂಕಾರವು ಅಧ್ಯಯನದ ನಿಯಮವಿದ್ದಂತೆ ಇದೆ. ಅಧ್ಯಯನ ಮಾಡುವಾಗ ಪೂರ್ವಾಭಿಮುಖವಾಗಿ ಕೂಡಬೇಕು ಎಂಬ ನಿಯಮವಿರುವಂತೆ, ಪ್ರಥಮ ಸೂತ್ರದ ಪ್ರಾರಂಭಕ್ಕೆ ಓಂ ಎಂದು ಉಚ್ಚರಿಸುವದೂ ಒಂದು ನಿಯಮ.

**ಪರಿಹಾರ :** ಓಂಕಾರವು ಪ್ರಥಮ ಸೂತ್ರದ ಅವಯವವೇ. ಎಲ್ಲ ಸೂತ್ರಕಾರರು ಓಂಕಾರವನ್ನು ಸಂಧಿ ಮಾಡದೆ ಉಚ್ಚರಿಸುತ್ತಾರೆ. ಇದರ ಉದ್ದೇಶವೆಂದರೆ ಪ್ರಥಮ ಸೂತ್ರದ ಓಂಕಾರವನ್ನು ಮುಂದಿನ ಎಲ್ಲ ಸೂತ್ರಗಳಿಗೆ ಅನುಗತ ಮಾಡಬೇಕು. ಓಮಥಾತೋ ಎಂದು ಸಂಧಿ ಮಾಡಿದರೆ, ಓಂಕಾರವು ಪ್ರಥಮ ಸೂತ್ರದ ಅವಯವ ಮಾತ್ರ ಎಂದು ಆಗುತ್ತಿತ್ತು. ಆದರೆ ಸಂಧಿ ಮಾಡದೆ ಪ್ರತ್ಯೇಕ ಉಚ್ಚರಿಸುವದರಿಂದ ಓಂಕಾರವನ್ನು ಎಲ್ಲ ಸೂತ್ರಗಳಿಗೆ ಅನುಗತ ಮಾಡಬೇಕು. ಎಲ್ಲ ಬ್ರಹ್ಮಸೂತ್ರಗಳು ಅವಾಂತರ ವೇದವಿದ್ಯೆಗಳಾಗಿವೆ. ಅವುಗಳ ಫಲಸಿದ್ಧಿಗಾಗಿ ಆದ್ಯಂತದಲ್ಲಿ ಓಂಕಾರ ಉಚ್ಚರಿಸಬೇಕು. ಏಕೆಂದರೆ ಪ್ರಾರಂಭದಲ್ಲಿ ಓಂಕಾರ ಉಚ್ಚರಿಸದಿದ್ದರೆ ವಿದ್ಯೆಯ ಫಲ ಸೋರಿ ಹೋಗುತ್ತದೆ. ಕೊನೆಯಲ್ಲಿ ಉಚ್ಚರಿಸದಿದ್ದರೆ ಅದು ನಾಶವಾಗುತ್ತದೆ ಎಂಬ ವಚನವಿದೆ.

**ಸಾರಾಂಶ :** ಎ) ಎಲ್ಲ ಸೂತ್ರಗಳು ಅವಾಂತರ ವೇದವಿದ್ಯೆಗಳು. ಅವು

ಫಲಿಸಲು ಆದ್ಯಂತದಲ್ಲಿ ಓಂಕಾರ ಉಚ್ಚರಿಸಲಾಗುತ್ತದೆ. ಎಲ್ಲ ಸೂತ್ರಗಳಲ್ಲಿ ಓಂಕಾರ ಸೇರಿಸಿದರೆ ಗೌರವ ದೋಷ ಬರುತ್ತದೆ. ಆದ್ದರಿಂದ ಪ್ರಥಮ ಸೂತ್ರದಲ್ಲಿ ಮಾತ್ರ ಓಂಕಾರವನ್ನು ಸಂಧಿ ಮಾಡದೆ ಸೇರಿಸಲಾಗಿದೆ.

ಬಿ) ಓಂಕಾರಕ್ಕೆ ಪ್ರಥಮ ಸೂತ್ರದಲ್ಲಿ ದೃಷ್ಟ ಪ್ರಯೋಜನ ಮತ್ತು ಅದೃಷ್ಟ ಪ್ರಯೋಜನ ಎಂಬ ಎರಡು ಪ್ರಯೋಜನಗಳಿವೆ. ದೃಷ್ಟ ಪ್ರಯೋಜನವೆಂದರೆ ಅದು ವಿಷಯ ಸೂಚಕವಾಗಿದ್ದು, ಸೂತ್ರದಲ್ಲಿ ಇದಕ್ಕೆ ಅನ್ವಯವಿದೆ. ಅದೃಷ್ಟ ಪ್ರಯೋಜನವೆಂದರೆ ನಿರ್ವಿಘ್ನ ಪರಿಸಮಾಪ್ತಿ ಹಾಗೂ ಪುಣ್ಯ ಸಂಪಾದನೆ.

ಸಿ) 2 ರಿಂದ 564 ಸೂತ್ರಗಳಲ್ಲಿ ಅನುಗತವಾದ ಓಂಕಾರಕ್ಕೆ ನಿರ್ವಿಘ್ನ ಪರಿಸಮಾಪ್ತಿ, ಪುಣ್ಯ ಸಂಪಾದನೆ ಮುಂ. ಅದೃಷ್ಟ ಪ್ರಯೋಜನ ಮಾತ್ರ ಇದೆ.

**ಇತ್ಯುಪೋದ್ಘಾತಃ (ಇಲ್ಲಿಗೆ ಉಪೋದ್ಘಾತ ಮುಗಿಯಿತು.)**



## || ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ||

ಈ ಪ್ರಥಮ ಸೂತ್ರದ ವಿವೇಚನವನ್ನು ಆರಂಭಿಸುವ ಮೊದಲು ಟೀಕಾರಾಯರು ಪ್ರಥಮ ಸೂತ್ರದಲ್ಲಿಯೇ ಪ್ರವೃತ್ತಿ ಹೇಗೆ ಎಂಬುದನ್ನು ಚರ್ಚಿಸುತ್ತಾರೆ.

ಪ್ರಯೋಜನವಿಲ್ಲದೆ ಯಾರೂ ಯಾವ ಕೆಲಸದಲ್ಲಿಯೂ ಪ್ರವೃತ್ತರಾಗುವದಿಲ್ಲ. ಪ್ರಯೋಜನಂ ಅನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ. ಆದ್ದರಿಂದ ಶಾಸ್ತ್ರದಲ್ಲಿ ಪ್ರವೃತ್ತವಾಗಲು ಅದರ ಪ್ರಯೋಜನ ನಿರ್ಧಾರ ಅಗತ್ಯ. ಇಲ್ಲಿಯ ಸಮಸ್ಯೆ ಹೀಗಿದೆ. ಬ್ರಹ್ಮಜ್ಞಾನ ಮೋಕ್ಷಕ್ಕೆ ಕಾರಣ ಎಂಬ ಪ್ರಯೋಜನ ನಿಶ್ಚಯವು ಪ್ರಥಮ ಸೂತ್ರದಲ್ಲಿ ಪ್ರವೃತ್ತವಾದ ನಂತರ ಆಗುತ್ತದೆ. ಆದರೆ ಪ್ರಯೋಜನ ನಿಶ್ಚಯವಾಗದೆ ಪ್ರವೃತ್ತಿ ಹುಟ್ಟುವದಿಲ್ಲ. ಹೀಗೆ ಪ್ರವೃತ್ತಿ-ಪ್ರಯೋಜನಗಳ ನಡುವೆ ಅನ್ಯೋನ್ಯಾಶ್ರಯ ದೋಷ ತಲೆದೋರುತ್ತದೆ. ಈ ದೋಷವನ್ನು ಕೆಲವು ದಾರ್ಶನಿಕರು ಪರಿಹರಿಸಿದ್ದಾರೆ. ಆದರೆ ಅವು ಅಸಮಂಜಸವೆಂದು ತೋರಿಸಿ ನಿಜವಾದ ಪರಿಹಾರವನ್ನು ಟೀಕಾರಾಯರು ನಿರೂಪಿಸುತ್ತಾರೆ. ಪ್ರವೃತ್ತಿಯು ಮನೋವ್ಯಾಪಾರವಷ್ಟೇ ; ಆದ್ದರಿಂದ ಈ ಸಂದರ್ಭದಲ್ಲಿ ಟೀಕಾರಾಯರು ಮನೋವೃತ್ತಿಯನ್ನು ವಿಶ್ಲೇಷಿಸಿದ್ದಾರೆ. ಚಿತ್ತವೃತ್ತಿಯು ಅನುಭವ (ಜ್ಞಾನ) ಇಚ್ಛಾ ಮತ್ತು ಪ್ರಯತ್ನ (Cognition, affect, Conation ಎಂದು ಮೂರು ವಿಧ. ಅವರಲ್ಲಿ ಜ್ಞಾನ ಮತ್ತು ಫಲೇಚ್ಛಾ ಪ್ರವೃತ್ತಿ ಎನಿಸುವ

ದಿಲ್ಲ. ಆದರೆ ಅಭೀಷ್ಟವಾದ ಮೋಕ್ಷರೂಪ ಪುರುಷಾರ್ಥ ಸಾಧನೆಯ ಬಗ್ಗೆ ಇಚ್ಛೆ ಮತ್ತು ಪ್ರಯತ್ನಗಳು ಪ್ರವೃತ್ತಿ ಎನಿಸುತ್ತವೆ. (ಸಾಧನಗೋಚರೌ ಇಚ್ಛಾ ಪ್ರಯತ್ನೌ) ಏಕೆಂದರೆ ಇವುಗಳಿಂದ ಶಾಸ್ತ್ರದಲ್ಲಿ ಪ್ರವೃತ್ತಿ ಉಂಟಾ ಗುತ್ತದೆ.

ತಾರ್ಕಿಕರು ಹೇಳುವ ಪರಿಹಾರ : ಸೂತ್ರಕಾರರು ಆಪ್ತರೆಂದು ತಿಳಿದವರು ಅವ ರಲ್ಲಿ ವಿಶ್ವಾಸವಿಟ್ಟು ಅವರು ಹೇಳಿದ ಪ್ರಯೋಜನ ತಮಗೆ ಸಮ್ಮತವಾಗಿದ್ದರೆ ಶಾಸ್ತ್ರದಲ್ಲಿ ಪ್ರವೃತ್ತರಾಗುತ್ತಾರೆ. ಎಂದು **ತಾರ್ಕಿಕರು** ಹೇಳುತ್ತಾರೆ. ಬೇರೆ ಯವರು ಹೇಳುವ ಸಮಾಧಾನ ಹೀಗಿದೆ, ಒಕ್ಕಲುತನದಲ್ಲಿ ಬೆಳೆ ಬರುವ ನಿಶ್ಚಯ ವಿಲ್ಲದಿದ್ದರೂ ಸಂದೇಹದಿಂದ ಪ್ರವೃತ್ತವಾಗುವಂತೆ ಶಾಸ್ತ್ರದಲ್ಲಿ ಸಂದೇಹದಿಂದ ಪ್ರವೃತ್ತಿ ಹುಟ್ಟುತ್ತದೆ. ಆದರೆ ಪ್ರಯೋಜನ ಮೊದಲಾದವುಗಳ ನಿರೂಪಣೆ ಸಾರ್ಥಕವೇ. ಏಕೆಂದರೆ ಪ್ರಯೋಜನ ನಿರೂಪಿಸದಿದ್ದರೆ ಅನೇಕ ಅನರ್ಥ ಕಲ್ಪಿಸಿ ಅಧಿಕಾರಿ ಪ್ರವೃತ್ತನಾಗಲಿಕ್ಕಿಲ್ಲ.. ಪ್ರಕೃತದಲ್ಲಿ ಈ ಬ್ರಹ್ಮ ಮೀಮಾಂಸಾ ಶಾಸ್ತ್ರ (ಬ್ರಹ್ಮಸೂತ್ರ) ಕಾಗೆಯ ಹಲ್ಲಿನ ಪರೀಕ್ಷೆಯಂತೆ ಪ್ರಯೋಜನರಹಿತವೋ ಹಿಮಾಲಯದ ತುದಿಯಲ್ಲಿಯ ಸಂಜೀವಿನಿ ಪಡೆಯುವಂತೆ ಅಶಕ್ಯಸಾಧನವೋ ಆರ್ಯಾವರ್ತನಿವಾಸಿಗೆ ಸೋದರಮಾವನ (ಮಾತುಲ) ಮಗಳ ವಿವಾಹದ ಉಪ ದೇಶದಂತೆ ಸಮ್ಮತವಲ್ಲದ ಪ್ರಯೋಜನವುಳ್ಳದ್ದೋ ಅಥವಾ ನೀರಡಿಸಿದವನಿಗೆ ಗಂಗಾತಟದಲ್ಲಿ ಭಾವಿ ತೋಡುವ ಉಪದೇಶದಂತೆ ಚಿಕ್ಕ ಉಪಾಯ ಬಿಟ್ಟು ಅತಿ ದೊಡ್ಡ ಉಪಾಯವುಳ್ಳದ್ದೋ ಎಂದು ಅನೇಕ ವಿಕಲ್ಪ ಮಾಡಿಕೊಂಡು ಪ್ರವೃತ್ತನಾಗದಿರಬಹುದು ಆದರೆ ಈ ಎರಡೂ ಪರಿಹಾರಗಳು ಅಯುಕ್ತ. ಆಪ್ತ ವಾಕ್ಯವೆಂದು ಪ್ರಯೋಜನ ನಿರೂಪಿಸಿದರೆ ಬ್ರಹ್ಮಮೀಮಾಂಸಾ ಆಗಮವಾ ಗುತ್ತದೆ. ಮತ್ತು ಅದು ಯುಕ್ತಿ ಶಾಸ್ತ್ರ ಎಂಬುದಕ್ಕೆ ಹಾನಿಯಾಗುತ್ತದೆ. ಇನ್ನು ಎರಡನೆಯ ಪರಿಹಾರವೂ ಅಸಮಂಜಸ. ಸಂದೇಹದಿಂದ ಪ್ರವೃತ್ತಿ ಎಂಬುದು ಅತಿಸ್ಥೂಲ. (ಅತಿ ಸ್ಥವೀಯಃ) ಏಕೆಂದರೆ ಪ್ರಯೋಜನ ನಿಶ್ಚಯ ವಿಲ್ಲದೇ ಐಹಿಕ ಸುಖಭೋಗ ತೊರೆದು ಸಂದೇಹದಿಂದ ಮಹಾಪ್ರಯಾಸ ಸಾಧ್ಯ ವಾದ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಯಾರೂ ಪ್ರವೃತ್ತರಾಗುವದಿಲ್ಲ.

ನಿಜವಾದ ಪರಿಹಾರವೆಂದರೆ, ಪ್ರಥಮ ಸೂತ್ರವು ಕೇವಲ ಪ್ರಯೋಜನಾದಿ ಗಳನ್ನು ಆಗಮದಂತೆ ಉಪದೇಶಿಸುವದಿಲ್ಲ. ಆದರೆ ಶ್ರುತ್ಯುಕ್ತ ಪ್ರಯೋಜನಾದಿ ಗಳನ್ನು ಯುಕ್ತಿಗಳಿಂದ ಸಾಧಿಸುತ್ತದೆ. (ಶ್ರೌತ ಪ್ರಯೋಜನಾದೇಃ ನ್ಯಾಯೇನ ಉಪಪಾದನಾರ್ಥಂ) ಇದರ ಅಭಿಪ್ರಾಯವೆಂದರೆ ಬ್ರಹ್ಮಜ್ಞಾನ ಮೋಕ್ಷಕ್ಕೆ ಕಾರಣ ಎಂಬುದು ಬ್ರಹ್ಮಸೂತ್ರದಲ್ಲಿ ಪ್ರವೃತ್ತವಾಗುವ ಮೊದಲೇ ವೇದಾದಿ ಗಳಿಂದ ಸಿದ್ಧವಾಗಿರುತ್ತದೆ. ಇದನ್ನೇ ಸೂತ್ರವು ಯುಕ್ತಿಗಳಿಂದ ಪ್ರತಿಪಾದಿಸು

ತ್ತದೆ. ಸೂತ್ರಕಾರರು ಆಪ್ತರೆಂದು ಹೇಳಿದ್ದು ಯುಕ್ತಿಗೆ ಸಹಾಯಕ. ಹೀಗೆ ಪ್ರಥಮ ಸೂತ್ರವು ಶ್ರುತ್ಯುಕ್ತ ಪ್ರಯೋಜನವನ್ನು ಯುಕ್ತಿಯಿಂದ ಪ್ರತಿಪಾದಿಸುತ್ತದೆ. ಆದ್ದರಿಂದ ಅದು ಶ್ರುತ್ಯರ್ಥ ನಿರ್ಣಾಯಕ ನ್ಯಾಯಗ್ರಥನಾತ್ಮಕ ಮೀಮಾಂಸಾ ಶಾಸ್ತ್ರದ ಭಾಗವೇ.'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವೇದವಾಕ್ಯದಂತೆ, ಪ್ರಥಮ ಸೂತ್ರವು ಶಾಸ್ತ್ರದ ಮತ್ತು ತನ್ನ ಆರಂಭಣೀಯತ್ವವನ್ನು ಪ್ರತಿಪಾದಿಸುತ್ತದೆ. ಒಟ್ಟಿನಲ್ಲಿ **ಶ್ರೀ ವಿದ್ಯಾಧೀಶರು** ನಿರೂಪಿಸಿದಂತೆ, ಪ್ರಥಮ ಸೂತ್ರವು ಶಾಸ್ತ್ರದ ಉಪೋದ್ಘಾತವಾಗಿದೆ. ಏಕೆಂದರೆ ಪ್ರವೃತ್ತಿಗೆ ಕಾರಣವಾದ ಪ್ರಯೋಜನ ಮೊದಲಾದವನ್ನು ಪ್ರತಿಪಾದಿಸುತ್ತದೆ. ಜೊತೆಗೆ ಅದು ಶಾಸ್ತ್ರದಲ್ಲಿಯೂ ಸೇರಿಕೊಂಡಿದೆ (ಶಾಸ್ತ್ರಾಂತರ್ಗತ) ಏಕೆಂದರೆ ಶ್ರುತ್ಯುಕ್ತ ಪ್ರಯೋಜನಾದಿಗಳನ್ನು ಯುಕ್ತಿಯಿಂದ ನಿರ್ಣಯಿಸುತ್ತದೆ.

**ಓತತ್ವವಾಚೀ ಹ್ಯೋಂಕಾರಃ ವಕ್ತ್ಯಸೌ ತದ್ಗುಣೋತತಾಂ ||೯.ಅ.||**

**ಅವತರಣಿಕೆ** : ಇಲ್ಲಿಂದ ಬ್ರಹ್ಮಸೂತ್ರದ ವ್ಯಾಖ್ಯಾನ ಆರಂಭವಾಗುತ್ತದೆ. ವಿಷಯ ಪ್ರಯೋಜನ ಮೊದಲಾದ ಅನುಬಂಧ ಚತುಷ್ಟಯ ಇಲ್ಲವಾದ್ದರಿಂದ ಶಾಸ್ತ್ರವು ಆರಂಭಣೀಯವೇ ಅಲ್ಲ. ಆದ್ದರಿಂದ ಜಿಜ್ಞಾಸಾ (ವಿಚಾರ) ಕೂಡುವದಿಲ್ಲ ಎಂದು ಶಂಕಿಸಿದರೆ ಅದು ಅಯುಕ್ತವೆಂದು ಉತ್ತರಿಸುತ್ತಾರೆ. ನಾರಾಯಣನೇ ಶಾಸ್ತ್ರದ ವಿಷಯ. ಆವನು ಗುಣಪೂರ್ಣನೆಂದು ಓಂಕಾರ ಹೇಳುತ್ತದೆ.

**ಅನುವಾದ** ; ಓಂಕಾರವು 'ಗತ ಅಥವಾ ಪ್ರವಿಷ್ಟ' ಎಂಬ ಅರ್ಥವುಳ್ಳದ್ದಾದುದರಿಂದ (ಹಿ–ಹೇತ್ವರ್ಥೇ) ಅದು ವಿಚಾರ್ಯನಾದ ಬ್ರಹ್ಮನ ಗುಣಪೂರ್ಣತ್ವವನ್ನು ಹೇಳುತ್ತದೆ. ಅವನು ಆನಂದಾದಿ ಅನಂತ ಗುಣಗಳನ್ನು ಹೊಂದಿದವನು ಅಥವಾ ಆನಂದಾದಿ ಅನಂತ ಗುಣಗಳಿಂದ ಪ್ರವಿಷ್ಟನು

**ವಿವರಣೆ :** ಪರರಿಗೆ ಬರಬಹುದಾದ ಸಂಶಯಗಳನ್ನು (ಸಂಭಾವಿತ ಸಂಶಯ) ಸೂತ್ರಕಾರರೇ ಮಾಡಿಕೊಂಡು ಅವುಗಳನ್ನು ಪರಿಹರಿಸುತ್ತಾರೆ.

**ಪೂರ್ವಪಕ್ಷ**

ಈ ಶಾಸ್ತ್ರಕ್ಕ ವಿಷಯ–ಪ್ರಯೋಜನ-ಅಧಿಕಾರಿ-ಪರಸ್ಪರ ಸಂಬಂಧ ಎಂಬ ಅನುಬಂಧ ಚತುಷ್ಟಯ ಇಲ್ಲವಾದ್ದರಿಂದ ಬ್ರಹ್ಮಜಿಜ್ಞಾಸಾ (ಬ್ರಹ್ಮವಿಷಯಕ ವಿಚಾರ)ಕೂಡುವದಿಲ್ಲ.ಆದ್ದರಿಂದ ಬ್ರಹ್ಮಜಿಜ್ಞಾಸಾ ಮಾಡಕೂಡದು.(ನ ಕರ್ತವ್ಯಾ) ಮತ್ತು ವಿಚಾರಕ್ಕೆ ಸಾಧನವಾದ ಯುಕ್ತ್ಯಾತ್ಮಕ ಬ್ರಹ್ಮಮೀಮಾಂಸಾ ಶಾಸ್ತ್ರ ಆರಂಭಣೀಯವೇ ಅಲ್ಲ. ಈ ಶಾಸ್ತ್ರಕ್ಕೆ ವಿಷಯ ಪ್ರಯೋಜನಾದಿಗಳು ಇಲ್ಲ ಎಂಬುದನ್ನು ಕೆಳಗೆ ನಿರೂಪಿಸಲಾಗಿದೆ.

**ವಿಷಯ** : ಈ ಶಾಸ್ತ್ರಕ್ಕೆ ವಿಷಯವು ಜಡ,ಆತ್ಮಾ, ಪರಾತ್ಮಾ ಅಥವಾ ಈಶ್ವರ ಆಗಬೇಕು.ಆದರೆ ಇವಾವೂ ವಿಷಯವಾಗಲಾರವು ಹೇಗೆಂದರೆ, ಅ) ಹುಲ್ಲು ಮೊದಲಾದ

ಜಡಪದಾರ್ಥವು ಬ್ರಹ್ಮಸೂತ್ರಕ್ಕೆ ವಿಷಯವಾಗಲಾರದು. ಏಕೆಂದರೆ ಅದು ಪ್ರತ್ಯಕ್ಷದಿಂದ ನಿಶ್ಚಿತವಾಗಿ ತಿಳಿಯಲ್ಪಡುತ್ತದೆ. ಶಾಸ್ತ್ರಕ್ಕೆ ವಿಷಯ ಆಗಬೇಕಾದರೆ ಅದರ ಬಗ್ಗೆ ಸಂಶಯ ಇರಬೇಕು. (ಸಂಧಿಗ್ಧೋ ಹಿ ವಿಷಯೋ ಭವತಿ) ಆದ್ದರಿಂದ ಜಡ(ಅನಾತ್ಮಾ) ವಿಷಯವಾಗಲಾರದು. (ಬ) ಆತ್ಮಾ (ಜೀವ) ವಿಷಯವಾಗಲಾರ; ಏಕೆಂದರೆ ದೇಹೇಂದ್ರಿಯಸಂಘಾತ ಬಿಟ್ಟು ಪ್ರತ್ಯೇಕ ಜೀವನಿಲ್ಲ. ಇನ್ನು ದೇಹಭಿನ್ನ ಆತ್ಮನಿದ್ದರೂ ಅವನ ಬಗ್ಗೆ 'ನಾನು ಮಾಡುತ್ತೇನೆ ತಿನ್ನುತ್ತೇನೆ, ನಾನು ದುಃಖೀ ಮೊದಲಾದ ನಿಶ್ಚಿತ ಜ್ಞಾನವಿದೆ. ಅಲ್ಲದೆ ಅವನ ಜ್ಞಾನದಿಂದ ಇಷ್ಟ ಪ್ರಾಪ್ತಿ, ಅನಿಷ್ಟ ಪರಿಹಾರ ಆಗಿಲ್ಲ. ಇನ್ನು ಈ ಆತ್ಮನ ಬಗ್ಗೆ ನಿಶ್ಚಯವಿದ್ದರೂ ಶ್ರುತ್ಯುಕ್ತ ಆತ್ಮ ದೋಷರಹಿತನಾದ್ದರಿಂದ ಅವನ ಬಗ್ಗೆ ವಿಚಾರ ಕೂಡುತ್ತವೆ ಎಂದು ಹೇಳಕೂಡದು. ಹಾಗಾದಲ್ಲಿ ಪ್ರಬಲ ಪ್ರತ್ಯಕ್ಷಕ್ಕೆ ವಿರೋಧ ಬರುವದರಿಂದ ಆತ್ಮ ನಿರವದ್ಯ, ದೋಷ ರಹಿತ ಎಂಬ ಶಾಸ್ತ್ರವಚನ ಕವಲೆತ್ತಿನ ನುಡಿಯಂತೆ (ಜರದ್ಗವ-ವಾಕ್ಯ) ಅಭಾಸ ವಾಗುತ್ತದೆ. (ಕ) ಪರಾತ್ಮಾ (ಪರರ ಜೀವ) ವಿಷಯವಲ್ಲ. ಏಕಂದರೆ ಅವನು, ಉಸಿರಾಟ, ಕೈಕಾಲು ಚಾಚುವದು ಮೊದಲಾದವುಗಳಿಂದ (ಪ್ರಾಣಾದಿಚೇಷ್ಟಾ) ತಿಳಿಯಲ್ಪಡುತ್ತಾನೆ. (ಡ) ಕೊನೆಯದಾಗಿ ಈಶ್ವರನೂ ವಿಷಯವಾಗಲಾರನು. ಏಕೆಂದರೆ ಈಶ್ವರನೇ ಇಲ್ಲ. ಇದ್ದರೂ ಅವನು ಜೀವನಿಂದ ಅಭಿನ್ನ, ಜೀವ ಸ್ವಪ್ರಕಾಶನಾದ್ದರಿಂದ ವಿಷಯವಾಗಲಾರ. ಜೀವಭಿನ್ನ ಈಶ್ವರನನ್ನು ಒಪ್ಪಿದರೂ ಅವನು ಜ್ಞಾನ ವಿಷಯನಲ್ಲ. ಏಕೆಂದರೆ ಅವನು ಪ್ರಮಾಣಪ್ರಮಿತನೋ ಅಲ್ಲವೋ ಎಂದು ಕೇಳುತ್ತೇವೆ. ಪ್ರಮಾಣಪ್ರಮಿತನಾದರೆ ಆ ಪ್ರಮಾಣ ಯಾವುದು ? ಕಣ್ಣಿಗೆ ಕಾಣು ವದಿಲ್ಲವಾದ್ದರಿಂದ ಪ್ರತ್ಯಕ್ಷವು ಈಶ್ವರನನ್ನು ತಿಳಿಸುವದಿಲ್ಲ. ಅನುಮಾನವೂ ಅವನನ್ನು ತಿಳಿಸಲಾರದು. ಏಕೆಂದರೆ ಈಶ್ವರನೊಡನೆ ನಿಯತ ಸಂಬಂಧವುಳ್ಳ ಹೇತು ಇಲ್ಲ. ಶಬ್ದವೇ ಅಪ್ರಮಾಣವಾದ್ದರಿಂದ ಆಗಮವೂ ಈಶ್ವರನನ್ನು ತಿಳಿಸಲಾರದು. ಮೇಲಾಗಿ ಆಗಮವು ಕಾರ್ಯನಿಷ್ಠವಾದ್ದರಿಂದ ಸಿದ್ಧನಾದ ಈಶ್ವರನನ್ನು ಬೋಧಿಸಲಾರದು. ಇದಲ್ಲದೆ ವೇದವೇ ಅಪ್ರಮಾಣ. ಅದರಲ್ಲಿ ಅನೃತತ್ವ ವ್ಯಾಘಾತ, ಪುನರುಕ್ತಿ ಮೊದಲಾದ ದೋಷಗಳಿವೆ. ಇನ್ನು ಈಶ್ವರನು ಪ್ರಮಾಣಪ್ರಮಿತ ಆಗದಿದ್ದರೆ, ಅವನು ಬುದ್ಧಿಗೆ ನಿಲುಕುವುದಿಲ್ಲವಾದ್ದರಿಂದ ವಿಷಯವಾಗಲಾರನು.

**ಪ್ರಯೋಜನ:** ಜಡಜ್ಞಾನ ಶಾಸ್ತ್ರದ ಪ್ರಯೋಜನವಲ್ಲ. ಏಕೆಂದರೆ ಅದರಿಂದ ಯಾವ ಪುರುಷಾರ್ಥವೂ ದೊರೆಯುವುದಿಲ್ಲ. ಜೀವಜ್ಞಾನವೂ ಪ್ರಯೋಜನವಲ್ಲ ಅನಾದಿ ಕಾಲದಿಂದ ಜೀವಜ್ಞಾನವಿದ್ದರೂ ಅದರಿಂದ ಇಷ್ಟಪ್ರಾಪ್ತಿ, ಅನಿಷ್ಟ ನಿವೃತ್ತಿರೂಪ ಪ್ರಯೋಜನ ದೊರೆತಿಲ್ಲ. ಆದ್ದರಿಂದ ಪರಿಶೇಷದಿಂದ ಈಶ್ವರಜ್ಞಾನ ಪ್ರಯೋಜನ ವೆಂದು ಹೇಳಬೇಕು. ಆದರೆ ಅದೂ ಕೂಡುವದಿಲ್ಲ. ಹೇಗೆಂದರೆ ಈಶ್ವರ ಜ್ಞಾನದಿಂದ ಆಗುವ ಪ್ರಯೋಜನ ಯಾವುದು ? ಅಭ್ಯುದಯವೋ, ಮುಕ್ತಿಯೋ?

ಅಭ್ಯುದಯವು ಧರ್ಮಾಚರಣೆ ಮೊದಲಾದ ಚಿಕ್ಕ ಉಪಾಯದಿಂದ ಸಾಧ್ಯ. ಹಾಗೂ ಮುಕ್ತಿಯು ಯಜ್ಞಾದಿ ಕರ್ಮಗಳಿಂದ,ಸೋಮಪಾನದಿಂದ ಶಕ್ಯ. ಇನ್ನು ಮೋಕ್ಷವೇ ಶಾಸ್ತ್ರದ ಪ್ರಯೋಜನ, ಫಲ ಎಂಬುದು ಕೂಡುವುದಿಲ್ಲ. ಹೇಗೆಂದರೆ ಲೋಕದಲ್ಲಿ ಸಂಗೀತ ಶಾಸ್ತ್ರದ ವಿಚಾರದಿಂದ ಸಂಗೀತ ಜ್ಞಾನ, ರಾಗಾದಿಗಳ ಜ್ಞಾನವಾಗುತ್ತದೆ. ಅದರಂತೆ ಬ್ರಹ್ಮ ವಿಷಯಕ ವಿಚಾರದಿಂದ ಬ್ರಹ್ಮಜ್ಞಾನ ಆಗುತ್ತದೆ. ಮೋಕ್ಷಫಲ ದೊರೆಯಲಾರದು. ಇನ್ನು ಜಿಜ್ಞಾಸಾದಿಂದ ಜ್ಞಾನ, ಜ್ಞಾನದಿಂದ ಮುಕ್ತಿ ಎಂದು ಹೇಳುವದೂ ಅಯುಕ್ತ ಏಕೆಂದರೆ ಮುಕ್ತಿಯು ಸುಲಭವಾಗಿ ಕರ್ಮಜನ್ಯ ಜ್ಞಾನದಿಂದ ದೊರೆಯುತ್ತದೆ. ಆದಕ್ಕಾಗಿ ಕಠಿಣವಾದ, ಪರಿಶ್ರಮಕರವಾದ ಬ್ರಹ್ಮಜಿಜ್ಞಾಸಾ ಏಕೆ ? ಕೊನೆಯದಾಗಿ ಜಿಜ್ಞಾಸಾದಿಂದ ಜ್ಞಾನ. ಜ್ಞಾನದಿಂದ ಪ್ರಸಾದ, ಪ್ರಸಾದದಿಂದ ಮುಕ್ತಿ ಎಂಬ ವಾದವೂ ಅಯುಕ್ತ. ಜ್ಞಾನದಿಂದ ಅಜ್ಞಾನ ಮಾತ್ರ ನಿವೃತ್ತವಾಗುತ್ತದೆ. ಅದರಿಂದ ಪ್ರಭು ಪ್ರಸಾದ ದೊರೆಯಲಾರದು. ಕರ್ಮ ಮತ್ತು ಭಕ್ತಿಗಳಿಂದ ಪ್ರಸಾದ ದೊರೆಯುವ ಬಗ್ಗೆ ಪ್ರಮಾಣವಚನಗಳಿವೆ. ಉದಾ : ತತ್ಕರ್ಮ ಹರಿತೋಷಂ ಮತ್ । ಭಕ್ತ್ಯಾ ತುಷ್ಟಿಂ ಅಭ್ಯೇತಿ ಮುಂ. ಆದ್ದರಿಂದ ಸಂಸಾರ ನಿವೃತ್ತಿಗಾಗಿ ಪರಮಾತ್ಮನ ಪ್ರಸಾದ, ಜ್ಞಾನ, ಜಿಜ್ಞಾಸಾ ಏಕೆ ? ಒಟ್ಟಿನಲ್ಲಿ ಶಾಸ್ತ್ರಕ್ಕೆ ಪ್ರಯೋಜನವೇ ಇಲ್ಲವಾದ್ದರಿಂದ, ಜಿಜ್ಞಾಸಾ ಕೂಡುವದಿಲ್ಲ,

**ಅಧಿಕಾರಿ :** ಫಲ ಬಯಸುವವನೇ ಅಧಿಕಾರಿ. (ತದಿಚ್ಛುಃ ಅಧಿಕಾರೀ) ಫಲವೇ (ಪ್ರಯೋಜನ) ಸಿದ್ಧವಾಗಿಲ್ಲ. ಆದ್ದರಿಂದ ಫಲಾಪೇಕ್ಷಿ ಅಥವಾ ಅಧಿಕಾರಿಯೂ ಇಲ್ಲ.

**ಸಂಬಂಧ :** ವಿಷಯ–ಪ್ರಯೋಜನ ಅಧಿಕಾರ ಇದ್ದರೆ ಪರಸ್ಪರ ಸಂಬಂಧ ಕೂಡುತ್ತದೆ. ವಿಷಯಾದಿಗಳೇ ಇಲ್ಲವಾದ್ದರಿಂದ ಸಂಬಂಧವೂ ಇಲ್ಲ. ಹೀಗೆ ಶಾಸ್ತ್ರವನ್ನು ಆರಂಭಿಸಲು ಬೇಕಾದ ವಿಷಯ ಪ್ರಯೋಜನಾದಿ, ಅನುಬಂಧ ಚತುಷ್ಟಯ ಇಲ್ಲವಾದ್ದರಿಂದ ಜಿಜ್ಞಾಸಾ (ವಿಚಾರ) ಕೂಡುವದಿಲ್ಲ. ಹಾಗೂ ಶಾಸ್ತ್ರ ಆರಂಭಣೆಯುವೇ ಅಲ್ಲ.

### ಸಿದ್ಧಾಂತ

ನಿನ್ನ ವಾದ ಯುಕ್ತ. ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ (ಬ್ರಹ್ಮಸೂತ್ರಗಳಿಗೆ) ಜೀವ ಮತ್ತು ಜಡ ವಿಷಯ ಆಗದಿದ್ದರೂ ಜೀವ ಜಡಗಳಿಂದ ಅತ್ಯಂತ ಭಿನ್ನನೂ ಗುಣ ಪೂರ್ಣನೂ ಆದ ಈಶ್ವರನು ವಿಷಯ ಆಗಿದ್ದಾನೆ. ಇದನ್ನು ತಿಳಿಸಲು ಸೂತ್ರಕಾರರು ಪ್ರಥಮ ಸೂತ್ರದಲ್ಲಿ ಓಂ ಮತ್ತು ಬ್ರಹ್ಮ ಶಬ್ದ ಪ್ರಯೋಗಿಸಿದ್ದಾರೆ. ಇದಲ್ಲದೆ ಶಾಸ್ತ್ರಕ್ಕೆ ಪ್ರಯೋಜನ ಮತ್ತು ಅಧಿಕಾರಿ ಉಂಟು. ವಿಷಯ–ಪ್ರಯೋಜನ–ಅಧಿಕಾರಿ ಈ ಮೂರರಲ್ಲಿ ಪರಸ್ಪರ ಸಂಬಂಧವೂ ಇದೆ. ವಿವರ ಹೀಗಿದೆ.

**ವಿವರಣೆ** : ಶ್ರುತಿಯಲ್ಲಿ ಓಂ ಮತ್ತು ಬ್ರಹ್ಮ ಶಬ್ದಗಳು ಜಿಜ್ಞಾಸ್ಯನಲ್ಲಿ (ಬ್ರಹ್ಮನಲ್ಲಿ) ಪ್ರಯೋಗಿಸಲ್ಪಟ್ಟಿವೆ. "ಓಮಿತ್ಯೇತದಕ್ಷರಂ ಉದ್ಗೀಥಂ ಉಪಾಸೀತ" "ತದ್ವಿಜಿಜ್ಞಾಸಸ್ವ ತದ್‌ಬ್ರಹ್ಮ।" ಓಂ ಮತ್ತು ಬ್ರಹ್ಮ ಶಬ್ದಗಳು ಜೀವ ಮತ್ತು ಜಡಗಳಿಂದ ಅತ್ಯಂತ ವಿಲಕ್ಷಣನಾದ ಈಶ್ವರನನ್ನು ಬೋಧಿಸುತ್ತವೆ. ಅವನೇ ಶಾಸ್ತ್ರಕ್ಕೆ ವಿಷಯ. ಓಂಕಾರವು ಪರಬ್ರಹ್ಮನ ಆನಂದಾದಿ ಅನಂತ ಗುಣಪೂರ್ಣತ್ವವನ್ನು ಹೇಳುತ್ತದೆ. (ವಕ್ತಿ ಅಸೌ ತದ್ಗುಣೋತ್ಕರಾಂ) ಬ್ರಹ್ಮ ಶಬ್ದವು ಬೃಹ್–ವೃದ್ಧೌ ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಬಹಳ ಗುಣಗಳಿರುವದರಿಂದ ಇವನಿಗೆ ಬ್ರಹ್ಮ ಎನ್ನುತ್ತಾರೆ. ಓಂ ಮತ್ತು ಬ್ರಹ್ಮ ಶಬ್ದಗಳು ಯೌಗಿಕ. ಅವುಗಳ ಅರ್ಥವೇ ಗುಣಪೂರ್ಣತ್ವ. ಆದ್ದರಿಂದ ಅವು ಜಿಜ್ಞಾಸ್ಯ ಬ್ರಹ್ಮನು (ನಾರಾಯಣ) ಅನಂತಗುಣಪೂರ್ಣನೆಂದು ಪ್ರತಿಪಾದಿಸುತ್ತವೆ. ಪುನರುಕ್ತಿ ದೋಷ ಪರಿಹರಿಸಲು ಓಂಕಾರವು ಯೌಗಿಕ ಮತ್ತು ಬ್ರಹ್ಮ ಶಬ್ದವು ರೂಢ ಎಂದು ತಿಳಿಯಬೇಕು.

ಇನ್ನು ಈಶ್ವರನು ಪ್ರಮಿತನೋ ಅಲ್ಲವೋ ಎಂಬ ವಿಕಲ್ಪಕ್ಕೆ ಪ್ರಮಿತನೆಂದೇ ಉತ್ತರ. ಅವನು ವೇದದಿಂದ, ಬ್ರಹ್ಮಸೂತ್ರಗಳಿಂದ ಅನುಗ್ರಹೀತ (ಉಪಕೃತ) ವಾದ ವೇದದಿಂದ ತಿಳಿಯಲ್ಪಡುತ್ತಾನೆ ಎಂದು ಉತ್ತರ. ಮೋಕ್ಷವೇ ಶಾಸ್ತ್ರದ ಪ್ರಯೋಜನ. ಮೋಕ್ಷಾಪೇಕ್ಷಿಯೇ ಅಧಿಕಾರಿ. ವಿಷಯ–ಪ್ರಯೋಜನ–ಅಧಿಕಾರಿ ಇವುಗಳಲ್ಲಿ ಪರಸ್ಪರ ಸಂಬಂಧವೂ ಇದೆ. ಹೀಗೆ ಅನುಬಂಧ ಚತುಷ್ಟಯ ಇರುವದರಿಂದ ಬ್ರಹ್ಮಜಿಜ್ಞಾಸಾ ಕೂಡುತ್ತದೆ. ಆದ್ದರಿಂದ ಬ್ರಹ್ಮನ ಬಗ್ಗೆ ವಿಚಾರ ಮಾಡಬೇಕು. ಬ್ರಹ್ಮಜಿಜ್ಞಾಸಾ ಕರ್ತವ್ಯಾ ಮತ್ತು ಶಾಸ್ತ್ರವು ಆರಂಭಣೀಯ.

**ಸ ಏವ ಬ್ರಹ್ಮಶಬ್ದಾರ್ಥಃ ನಾರಾಯಣಪದೋದಿತಃ ॥೯॥**
**ಸ ಏವ ಭರ್ಗಶಬ್ದಾರ್ಥೋ ವ್ಯಾಹೃತೀನಾಂ ಚ ಭೂಮತಃ ।**
**ಭಾವನಾಚ್ಚೈವ ಸುತ್ವಾಚ್ಚ ಸೋಽಯಂ ಪುರುಷ ಇತ್ಯಪಿ ॥೧೦॥**
**ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ ॥೧೧॥**

**ಅವತರಣಿಕೆ** : ಓಂಕಾರ ಮತ್ತು ಬ್ರಹ್ಮ ಶಬ್ದಗಳಿಂದ ಜಿಜ್ಞಾಸ್ಯ ವಸ್ತು–ಜೀವ–ಜಡ–ವಿಲಕ್ಷಣ ಎಂದು ಸಿದ್ಧಿಸುತ್ತದೆ. ಆದರಿಂದ ಈಶ್ವರನಿಗೆ ಬರುವದೇನು ಎಂಬ ಆಕ್ಷೇಪದ ಸಮಾಧಾನವನ್ನು ಇಲ್ಲಿ ಮಾಡುತ್ತಾರೆ. ಓಂಕಾರ ಶಬ್ದಾರ್ಥವಾದ ಗುಣಪೂರ್ಣತ್ವವೇ ಬ್ರಹ್ಮ ವ್ಯಾಹೃತಿ,ಗಾಯತ್ರಿ ಪುರುಷಸೂಕ್ತ ಹಾಗೂ ಸರ್ವವೇದಗಳ ಅರ್ಥವಾಗಿದೆ. ಓಂಕಾರ ಪ್ರತಿಪಾದ್ಯನಾದ ನಾರಾಯಣನೇ ಸಕಲ ವೇದಗಳಿಂದ ಪ್ರತಿಪಾದ್ಯನು. ಅವನೇ ಜಿಜ್ಞಾಸಾಕ್ಕೆ ವಿಷಯ ಎಂದು ವಿಧಿಸಲ್ಪಟ್ಟಿದ್ದಾನೆ.

**ಅನುವಾದ** : ಓಂಕಾರ ಶಬ್ದಾರ್ಥವೇ (ಎಂದರೆ ಗುಣಪೂರ್ಣತ್ವವೇ) ಬ್ರಹ್ಮ

ಶಬ್ದದ ಅರ್ಥ. ಅದೇ (ಗುಣಪೂರ್ಣತ್ವ) ನಾರಾಯಣ ಶಬ್ದದಿಂದ ಹೇಳಲ್ಪಡುತ್ತದೆ. ಓಂಕಾರ ಶಬ್ದಾರ್ಥನಾದ ನಾರಾಯಣನೇ, ಪೂರ್ಣತ್ವ; ಜಗಮತ್ಪಾದನೆ ಸುಖಿತ್ವ ಮೂಲಕ ಕ್ರಮವಾಗಿ ಭೂಃ-ಭುವಃ-ಸ್ವಃ ಎಂಬ ವ್ಯಾಹೃತಿಗಳ ಅರ್ಥ, ಎಂದರೆ ವ್ಯಾಹೃತಿಯಿಂದ ಪ್ರತಿಪಾದ್ಯನು ನಾರಾಯಣನೆಂದು ಭಾವ. ಆವನೇ ಗಾಯತ್ರಿಯಲ್ಲಿಯು ಭರ್ಗ ಶಬ್ದಾರ್ಥ ಮತ್ತು ಪುರುಷಸೂಕ್ತದ ಪುರುಷ ಶಬ್ದದಿಂದ ಪ್ರತಿಪಾದ್ಯನು. ಅವನೇ ಸರ್ವವೇದ ಪ್ರತಿಪಾದ್ಯ. (ಕಾರ್ಯ-ಆದಿಗಳಲ್ಲಿ) ಈ ನಾರಾಯಣನು ವಿಚಾರಕ್ಕೆ ವಿಷಯವಾಗಿ (ಜಿಜ್ಞಾಸ್ಯಃ) ವಿಧಿಸಲ್ಪಲ್ಪಟ್ಟಿದ್ದಾನೆ.

**ವಿವರಣೆ :** ಓಂ, ಬ್ರಹ್ಮ ಮತ್ತು ನಾರಾಯಣ ಶಬ್ದಗಳು ಗುಣಪೂರ್ಣತ್ವವನ್ನೇ ಹೇಳುತ್ತವೆ. ಗುಣಪೂರ್ಣ ನಾರಾಯಣನೇ ವ್ಯಾಹೃತಿ, ಗಾಯತ್ರಿ, ಪುರುಷಸೂಕ್ತ ಮತ್ತು ಸಕಲ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಎಂದರೆ ಓಂಕಾರದ ವ್ಯಾಖ್ಯಾನ ವ್ಯಾಹೃತಿ, ವ್ಯಾಹೃತಿಯ ವ್ಯಾಖ್ಯಾನ ಗಾಯತ್ರೀ, ಗಾಯತ್ರಿಯ ವ್ಯಾಖ್ಯಾನ ಪುರುಷಸೂಕ್ತ, ಪುರುಷಸೂಕ್ತದ ವ್ಯಾಖ್ಯಾನ ಸಕಲ ವೇದಗಳು. ನಾರಾಯಣ ಶಬ್ದದಿಂದ ಉಪಲಕ್ಷಣಯಾ-ಆತ್ಮಾ-ಅನಂತ-ಈಶ್ವರ-ವಿಷ್ಣು ಮೊದಲಾದ ಶಬ್ದಗಳನ್ನೂ ತೆಗೆದುಕೊಳ್ಳಬೇಕು. ಏಕೆಂದರೆ ಆ ಶಬ್ದಗಳನ್ನೂ ಶ್ರುತಿಗಳಲ್ಲಿ ಜಿಜ್ಞಾಸ್ಯ ವಸ್ತುವಿನಲ್ಲಿ ಬಳಸಿದ್ದಾರೆ. ಎಂದರೆ ಜಿಜ್ಞಾಸ್ಯ ಬ್ರಹ್ಮನೇ ನಾರಾಯಣ, ವಿಷ್ಣು ಮೊದಲಾದ ನಾಮಗಳಿಂದ ವಾಚ್ಯ, ಹೆಸರಿನಲ್ಲೇನಿದೆ ?

**ಓಂ ;** ಅಧ್ಯಯನ-ಪ್ರವಚನ-ಯಜ್ಞ ಯಾಗಾದಿಗಳ ಪ್ರಾರಂಭದಲ್ಲಿ ಎಲ್ಲರೂ ಉಚ್ಚರಿಸುವ ಓಂಕಾರವು ಶ್ರವಣ ಮಾತ್ರದಿಂದ ಮಂಗಲಕರವಾಗಿದೆ. ಬ್ರಹ್ಮನ ಕಂಠವನ್ನು ಭೇದಿಸಿ ಮೊದಲು ಹೊರಬಿದ್ದ ಓಂಕಾರಕ್ಕೆ ಶಬ್ದರಾಶಿಯಲ್ಲಿ ಸ್ವರೂಪತಃ ಆಧಿಕ್ಯವಿದೆ. ಅದು ಪರಮಾತ್ಮನ-ನಿರವಧಿಕ-ಅನಂತ ಕಲ್ಯಾಣ ಗುಣ ವಾಚಕವಾಗಿದೆ. ಓಂ ಶಬ್ದವು ಅವ್ (೧ ಪ.) ಧಾತುವಿನಿಂದ ಉತ್ಪನ್ನವಾಗಿದೆ. ಅವ ಧಾತುವಿಗೆ ರಕ್ಷಣ-ಗತಿ-ಪ್ರವೇಶ ಮೊದಲಾದ ಅನೇಕ ಅರ್ಥಗಳಿವೆ. ಇಲ್ಲಿ ಗತಿ ಅಥವಾ ಪ್ರವೇಶ ಎಂಬ ಅರ್ಥ. ಓಂ ಎಂದರೆ ಆನಂದಾದಿ ಅನಂತ ಗುಣಗಳನ್ನು ಹೊಂದಿದ ಅಥವಾ ಆನಂದಾದಿ ಅನಂತಗುಣಗಳಿಂದ ಪ್ರವಿಷ್ಟನಾದ ಭಗವಾನ್ ಈಶ್ವರ ಅಥವಾ ನಾರಾಯಣ. ಅದು ಭಗವಂತನ ಗುಣಪೂರ್ಣತ್ವವನ್ನು ಹೇಳುತ್ತದೆ. ಓಂ ಶಬ್ದವು ಮುಖ್ಯನಾಗಿ ಅ, ಉ, ಮ ಕೂಡಿ ಆಗಿದೆ. ಅ ಎಂದರೆ ಅಧಿಕ, ಪೂರ್ಣ; ಉ ಎಂದರೆ ಉತ್ಕೃಷ್ಟ; ಮ ಇದು ಸುಖ ಎಂಬ ಅರ್ಥದಲ್ಲಿದೆ.

**ವ್ಯಾಹೃತಿಗಳು :** ಭೂಃ, ಭುವಃ; ಸ್ವಃ ಈ ಮೂರು ವ್ಯಾಹೃತಿಗಳು. ಇವು ಕ್ರಮವಾಗಿ ಓಂಕಾರದಲ್ಲಿ ಅಡಕವಾದ ಅ, ಉ, ಮಗಳ ಅರ್ಥವನ್ನು ವಿವರಿಸುತ್ತವೆ.

ಭೂಃ ಎಂದರೆ ಪೂರ್ಣ (ಭೂಮಾ = ಪೂರ್ಣತ್ವಂ. ಭೂಃ), ಭುವಃ ಎಂದರೆ ಜಗತ್ತನ್ನು ಸೃಷ್ಟಿಸಿದವ, ಎಂದರೆ ಉತ್ಕೃಷ್ಟ ಭಗವಂತ. (ಭಾವನಾತ್, ಜಗತಃ ಉತ್ಪಾದನಾತ್ ಭುವಃ) ಅಥವಾ ಐಶ್ವರ್ಯದಿಂದ ಶ್ರೇಷ್ಠನಾದ ಭಗವಂತ. (ಭೂತಿವರಃ) ಸ್ವಃ ಎಂದರೆ ಸುಖ. ಹೀಗೆ ಪೂರ್ಣನೂ ಐಶ್ವರ್ಯದಿಂದ ಶ್ರೇಷ್ಠನೂ ಅನಂತಸುಖಿವುಳ್ಳವನೂ ಆದ ಭಗವಂತನೇ ವ್ಯಾಹೃತಿಯಿಂದ ಪ್ರತಿಪಾದ್ಯನು. (ಪೂರ್ಣಃ ಭೂತಿವರಃ ಅನಂತಸುಖಃ)

**ಗಾಯತ್ರಿ** : 'ವೇದಮಾತಾ ತು ಗಾಯತ್ರೀ' ಎಂದು ಪ್ರಸಿದ್ಧವಾದ ಗಾಯತ್ರಿ ಮಂತ್ರವು ವ್ಯಾಹೃತಿಯ ವ್ಯಾಖ್ಯಾನ, ಆ ಮಂತ್ರ ಹೀಗಿದೆ. "ಓಂ ಭೂರ್ಭುವಃ ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್ ॥" ಇದರ ಅರ್ಥ ಹೀಗಿದೆ. ಓಂಕಾರ ವಾಚ್ಯನಾದ, ಗುಣ ಪೂರ್ಣನಾದ (ಭೂಃ), ಜಗದುತ್ಪಾದಕನಾದ, ಅಂತೆಯೇ ಉತ್ಕೃಷ್ಟನಾದ (ಭುವಃ) ಅತ್ಯಂತ ಸುಖಿಯಾದ (ಸ್ವಃ) ಯಾವ ಪರಮಾತ್ಮನು ನಮ್ಮ ಬುದ್ಧಿ (ಮತ್ತು ಕರ್ಮ) ಪ್ರಚೋದಿಸುವನೋ (ಯಃ ನಃ ಧಿಯಃ ಪ್ರಚೋದಯಾತ್) ಆ ಜನ್ಮಾದಿ ಕರ್ತನಾದ (ಸವಿತುಃ) ಕ್ರೀಡಾದಿಗುಣ ವಿಶಿಷ್ಟನಾದ (ದೇವಸ್ಯ), ಭಕ್ತರಿಂದ ಭಜ ನೀಯನಾದ (ವರೇಣ್ಯಂ) ಭಗವಂತನ ಜಗತ್ಪೋಷಣ ಧಾರಣತ್ವವನ್ನು (ಭರ್ಗಃ– ಭರಣ–ಗಮನ ಯೋಗಾತ್) ಧ್ಯಾನ ಮಾಡೋಣ (ಧೀಮಹಿ).

**ಪುರುಷಸೂಕ್ತ** : ಗಾಯತ್ರಿಯ ಅರ್ಥವೇ ಪುರುಷಸೂಕ್ತ, ಅದು ವಿಷ್ಣುವಾಚಕ. ಇದರಲ್ಲಿ ಬರುವ ಪುರುಷನೆಂದರೆ ಪಶು ಅಥವಾ ಸುವರ್ಣಾಂಡದಿಂದ ಹುಟ್ಟಿದ ಚತುರ್ಮುಖ ಬ್ರಹ್ಮ (ಹಿರಣ್ಯಗರ್ಭ) ಅಲ್ಲ; ಆದರೆ ಪರಮಾತ್ಮಾ ಎಂದು ಅರ್ಥ. ಪುರುಷ ಶಬ್ದದ ಯೌಗಿಕಾರ್ಥವೆಂದರೆ ಎಲ್ಲ ದೇಹಗಳಲ್ಲಿ(ಪೂರ್ಷು) ನಿಯಾಮಕತ್ವೇನ ಇರುವ ಪರಮಾತ್ಮ ಅಥವಾ ನಾರಾಯಣ.

**ವೇದಗಳು** : ವೇದಾಃ ಪುರುಷಸೂಕ್ತಗಾಃ ಎಂದರೆ ವೇದಗಳು ಪುರುಷಸೂಕ್ತದ ವ್ಯಾಖ್ಯಾನ. ಪುರುಷಸೂಕ್ತದಿಂದ ಪ್ರತಿಪಾದ್ಯನಾದ ನಾರಾಯಣನೇ ಸಕಲ ವೇದಾರ್ಥ. ಪರಮಾತ್ಮನನ್ನು ತಿಳಿಸುವದರಿಂದ ವೇದ ಎನ್ನುವರು. 'ವೇದಯಂತಿ ಇತಿ ವೇದಾಃ'

ಹೀಗೆ ಸಕಲ ವೇದಪ್ರತಿಪಾದ್ಯನಾದ ನಾರಾಯಣನೇ ಬ್ರಹ್ಮಸೂತ್ರಗಳಿಗೆ ವಿಷಯ. ಆದ್ದರಿಂದ ಅವನು ವಿಚಾರಕ್ಕೆ ವಿಷಯವಾಗಿ ವಿಧಿಸಲ್ಪಟ್ಟಿದ್ದಾನೆ.

**ಟೀಪು** : ವೇದಗಳಿಗೆ ಪರಮಾತ್ಮನನ್ನು ತಿಳಿಸುವ ಸಾಮರ್ಥ್ಯವಿದೆ. ಆದರೆ ಅದು ಕುವಾದಿಗಳ ಕುಯುಕ್ತಿಯಿಂದ ಕುಂಠಿತವಾಗುವದರಿಂದ ವೇದಾರ್ಥ ಸರಿಯಾಗಿ ಆಗುವದಿಲ್ಲ. ಆದ್ದರಿಂದ ವೇದಕ್ಕೆ ಸಹಕಾರಿಯಾದ (ಇತಿ ಕರ್ತವ್ಯತಾ) ಬ್ರಹ್ಮ ಸೂತ್ರಗಳ ಉಪಕಾರ ಪಡೆದು ವೇದಾರ್ಥ ಅರಿಯಬೇಕು. ಬ್ರಹ್ಮಸೂತ್ರಗಳೆಂದರೆ ವೇದಾರ್ಥ ನಿರ್ಣಾಯಕ ಸೂತ್ರಗಳು. ಸಕಲ ವೇದಪ್ರತಿಪಾದ್ಯನಾದ ಪರಬ್ರಹ್ಮನ (ವಿಷ್ಣು, ನಾರಾಯಣನ) ಸ್ವರೂಪವನ್ನು ನಿರ್ಣಯಿಸುವ ಸೂತ್ರಗಳು.

**'ಜ್ಞಾನೀ ಪ್ರಿಯತಮೋ ಮೇ' ತಂ ವಿದ್ವಾನೇವ ಚಾಮೃತಃ ||೧೧||**
**ವೃಣುತೇ ಯಂ ತೇನ ಲಭ್ಯಃ ಇತ್ಯಾದ್ಯುಕ್ತಿಬಲೇನ ಹಿ |**
**ಜಿಜ್ಞಾಸೋತ್ಥಜ್ಞಾನಜಾತ್ ತತ್ ಪ್ರಸಾದಾದೇವ ಮುಚ್ಯತೇ ||೧೨||**

**ಅವತರಣಿಕೆ :** ಪ್ರಥಮ ಸೂತ್ರದ 'ಅತಃ' ಶಬ್ದದ ವ್ಯಾಖ್ಯಾನವನ್ನು ಆರಂಭಿಸುತ್ತಾರೆ. ಮೋಕ್ಷವೇ ಪ್ರಯೋಜನ. ಅದು ಭಗವಂತನ ಪ್ರಸಾದದಿಂದ ಮಾತ್ರ ದೊರೆಯುವದೆಂದು ನಿರೂಪಿಸುತ್ತಾರೆ.

**ಅನುವಾದ :** ಜ್ಞಾನಿಯು ನನಗೆ (ಭಗವಂತನಿಗೆ) ಅತ್ಯಂತ ಪ್ರಿಯ (ಏಕೆಂದರೆ ಅವನು ಜ್ಞಾನದಿಂದ ನನ್ನನ್ನು ಧರಿಸುತ್ತಾನೆ). (ಪುರುಷಸೂಕ್ತೋಕ್ತ) ಭಗವಂತನನ್ನು ತಿಳಿದವನೇ ಮುಕ್ತನಾಗುತ್ತಾನೆ. 'ಇವನು ನನ್ನ ಭಕ್ತ' ಎಂದು ಯಾರನ್ನು ಭಗವಂತನು ಸ್ವೀಕರಿಸುವನೋ, ಅವನಿಂದಲೇ ಭಗವಂತನು ಪ್ರಾಪ್ಯನು. ಈ ಮೊದಲಾದ ವಚನಗಳ ಬಲದಿಂದ (ತಿಳಿದು ಬರುವದೇನೆಂದರೆ) ಜಿಜ್ಞಾಸೆಯಿಂದ ಹುಟ್ಟಿದ ಜ್ಞಾನದಿಂದ ಉತ್ಪನ್ನವಾದ ಭಗವಂತನ ಪ್ರಸಾದದಿಂದಲೇ ಜೀವನು ಸಂಸಾರದಿಂದ ಮುಕ್ತನಾಗುತ್ತಾನೆ. ಆದ್ದರಿಂದ ಬ್ರಹ್ಮವಿಷಯಕ ವಿಚಾರವನ್ನು ಮಾಡಬೇಕು. 'ಬ್ರಹ್ಮಜಿಜ್ಞಾಸಾ ಕರ್ತವ್ಯಾ'.

**ವಿವರಣೆ ;** (i) ಜ್ಞಾನೀ ಪ್ರಿಯತಮೋ ಮೇ (ಭಾಗವತ ಏಕಾದಶ ಸ್ಕಂದ) ಜ್ಞಾನಿಯು ಭಗವಂತನಿಗೆ ಪ್ರಿಯ. ಏಕೆಂದರೆ ಆ ಜ್ಞಾನಿಯು ಭಗವಂತನನ್ನು ಸದಾ ಧರಿಸಿರುತ್ತಾನೆ. ಎಂದರೆ ಅವನು ಯಾವಾಗಲೂ ಭಗವದ್ವಿಷಯಕ ಜ್ಞಾನದಲ್ಲಿ ನಿರತನಾಗಿರುತ್ತಾನೆ. (ii) ತಮೇವಂ ವಿದ್ವಾನ್ ಅಮೃತಃ ಇಹ ಭವತಿ ನಾನ್ಯಃ ಪಂಥಾಃ ಅಯನಾಯ ವಿದ್ಯತೇ" (ತೈತ್ತಿರೀಯ ಆರಣ್ಯಕ) ಆ ಪರಮಾತ್ಮನನ್ನು ಈ ರೀತಿಯಾಗಿ (ಏವಂ) ತಿಳಿದುಕೊಂಡವನು ಅಮೃತನಾಗುತ್ತಾನೆ ಎಂದರೆ ಮುಕ್ತನಾಗುತ್ತಾನೆ. ಪುರುಷಸೂಕ್ತದಲ್ಲಿ ಹೇಳಿದಂತೆ ಸಹಸ್ರಶೀರ್ಷತ್ವಾದಿ ಮಹಾಮಹಿಮೋಪೇತನನ್ನಾಗಿ ತಿಳಿದವನು ಜ್ಞಾನಿ. (iii) ಯಮೇವ ಏಷ ವೃಣುತೇ ತೇನ ಲಭ್ಯಃ (ಕಾಠಕೋಪನಿಷತ್) ವೃಣುತೇ ಎಂದರೆ ಸ್ವೀಕರಿಸುತ್ತಾನೆ ಎಂದು ಅರ್ಥ. ಆ ಭಕ್ತನಿಗೆ ಭಗವಂತನು ತನ್ನ ಸ್ವರೂಪವನ್ನು (ಅಥವಾ ಜೀವನ ನಿಜರೂಪವನ್ನು) ಪ್ರಕಟಗೊಳಿಸುತ್ತಾನೆ. (iv) ಇತ್ಯಾದಿ, ಆದಿ ಪದದಿಂದ ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ, ಮಂತವ್ಯಃ ನಿದಿಧ್ಯಾಸಿತವ್ಯಃ, ಎಂಬ ಬೃಹದಾರಣ್ಯಕ ಉಪನಿಷತ್ತಿನ ವಾಕ್ಯ ತೆಗೆದುಕೊಳ್ಳಬೇಕು. ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು; ಇದಕ್ಕಾಗಿ ಅವನ ಬಗ್ಗೆ ಶ್ರವಣ–ಮನನ–ಧ್ಯಾನ ಮಾಡಬೇಕು ಎಂದು ಶ್ರುತ್ಯರ್ಥ. (v) **ಜಿಜ್ಞಾಸಾ**–ತಿಳಿದುಕೊಳ್ಳುವ ಇಚ್ಛೆ ಎಂಬ ಅರ್ಥ ಇಲ್ಲಿ ಅಸಂಗತ. ಜಿಜ್ಞಾಸಾ ಎಂದರೆ ಜ್ಞಾನೇಚ್ಛೆಗಳ ನಡುವೆ ಇರುವ

ವಿಚಾರ. ಮೊದಲು ಇಚ್ಛೆ ನಂತರ ವಿಚಾರ. ವಿಚಾರದಿಂದ ಜ್ಞಾನ ಹುಟ್ಟುತ್ತದೆ. **ಪ್ರಸಾದ :** ಪ್ರಸಾದ ಎಂದರೆ ಭಗವಂತನ ಇಚ್ಛಾವಿಶೇಷ. ಈ ಭಕ್ತನನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡುವೆ ಎಂಬ ಭಗವಂತನ ಇಚ್ಛಾವಿಶೇಷ. ಈ ಪ್ರಸಾದವು ಭಗವಂತನ ಜ್ಞಾನದಿಂದಲೇ ಆಗುತ್ತದೆ. ಕರ್ಮಾದಿಗಳು ಅಂತಃ ಕರಣ ಶುದ್ಧಿದ್ವಾರಾ ಜ್ಞಾನಕ್ಕೆ ಸಹಾಯಕವಾಗಿವೆ. ಜೀವರನ್ನು ಸಂಸಾರಬಂಧ ದಿಂದ ಕಟ್ಟುವವನು ಹಾಗೂ ಆದರಿಂದ ಅವರನ್ನು ಬಿಡುಗಡೆ ಮಾಡುವವನ ಭಗವಂತನೇ ಆಗಿರುವದರಿಂದ **ಭಗವಂತನೇ ಸಾಕ್ಷಾತ್ ಮೋಕ್ಷಸಾಧನ.**

ಟೀಕಾರಾಯರು ವಿವರಿಸಿದಂತೆ, ಸಾಧನವು ಸಿದ್ಧ, ಅಸಿದ್ಧ ಎಂದು ಎರಡು ವಿಧ. ಅಸಿದ್ಧವಾದುದನ್ನು ಹೊಸದಾಗಿ ಹುಟ್ಟಿಸಬೇಕು. ಉದಾ : ಯಜ್ಞ–ಯಾಗಾದಿಗಳಿಂದ ಅಪೂರ್ವ ಉತ್ಪನ್ನವಾಗುತ್ತದೆ. ಸಿದ್ಧ ಸಾಧನವನ್ನು ವ್ಯಾಪಾರ ಯುಕ್ತವನ್ನಾಗಿ ಮಾಡಬೇಕು. ಉದಾ : ಕೊಡ್ಲಿಯನ್ನು ಮೇಲೆ ಕೆಳಗೆ ಎತ್ತಿ, ಕಟ್ಟಿಗೆ ಕಡಿಯುವದು. ಭಗವಂತನಾದರೋ ಸಿದ್ಧಸಾಧನ ಆಗಿದ್ದಾನೆ. ಆದ್ದರಿಂದ ಅವನನ್ನು ವ್ಯಾಪಾರಯುಕ್ತನನ್ನಾಗಿ ಮಾಡಬೇಕು. ವ್ಯಾಪಾರವೆಂದರೆ ಅವನ ಪ್ರಸನ್ನತೆ. ಪ್ರಸನ್ನವಾಗಲು ಅವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಆದರೆ ಅವ್ಯಕ್ತ ಸ್ವಭಾವವುಳ್ಳ ಭಗವಂತನು ಸಹಸ್ರಾರು ಪ್ರಯತ್ನಗಳಿಂದಲೂ ಪ್ರತ್ಯಕ್ಷನಾಗುವದಿಲ್ಲ: ಒಲಿದರೆ, ಅನುಗ್ರಹಿಸಿದರೆ ಮಾತ್ರ ಪ್ರತ್ಯಕ್ಷನಾಗುತ್ತಾನೆ. ಪ್ರತ್ಯಕ್ಷನಾದರೆ ಅಚಿಂತ್ಯ ಅದ್ಭುತ ಶಕ್ತಿಯಿಂದ ತನ್ನನ್ನೇ ತೋರಿಸುತ್ತಾನೆ. ಹೀಗೆ ದರ್ಶನಕ್ಕೆ, ಸಾಕ್ಷಾತ್ಕಾರಕ್ಕೆ ಸಾಧನ ಅನುಗ್ರಹವು. ಅದು ತಮಗೆ ಉಚಿತವಾದ ಭಗವಂತನ ಗುಣೋಪಾಸನೆ ಯಿಂದ ದೊರೆಯುತ್ತದೆ. ನಿಯತ ಗುರುಗಳು ಉಪದೇಶಿಸಿದ ಸ್ವಯೋಗ್ಯವಾದ ಭಗವಂತನ ಬಿಂಬವನ್ನು ನಿರುತರವಾಗಿ ವೈರಾಗ್ಯ ಮತ್ತು ಭಕ್ತಿಯಿಂದ ಉಪಾಸಿ ಸುವದರಿಂದ ಭಗವಂತನ ಸಾಕ್ಷಾತ್ಕಾರ ಆಗುತ್ತದೆ. ಈ ಉಪಾಸನೆ ಅಥವಾ ಧ್ಯಾನ, ಶ್ರವಣ ಮತ್ತು ಮನನವಿಲ್ಲದೆ ಆಗಲಾರದು. ಶ್ರವಣವೆಂದರೆ ಗುರುಗಳು ಉಪದೇಶಿಸಿದ ವಾಕ್ಯಾರ್ಥ ಗ್ರಹಣ. ಶ್ರವಣದಿಂದ ಅಜ್ಞಾನ ಹೋಗಿ ಜ್ಞಾನ ದೊರೆಯುತ್ತದೆ. ಮನನವೆಂದರೆ ಗುರೂಪದಿಷ್ಟ ವಾಕ್ಯಾರ್ಥವನ್ನು ಚಿಂತನೆ ಮಾಡುವದು. ಮನನದಿಂದ ಸಂಶಯ ವಿಪರ್ಯಯಗಳು ಹೋಗಿ ನಿಶ್ಚಿತ ತತ್ವಜ್ಞಾನ ಉಂಟಾಗುತ್ತದೆ. ನಂತರ ಉಪಾಸನೆ ಅಥವಾ ಧ್ಯಾನ ಮಾಡಬೇಕು. ಭಗವಂತನ ಸ್ವಯೋಗ್ಯ ಬಿಂಬಮೂರ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಅದನ್ನು ಮನಸಾ ನೋಡುವದೇ (ಮನಸಾ ಅವಲೋಕನಂ) ಧ್ಯಾನ. ಒಟ್ಟಿನಲ್ಲಿ ಭಗವಂತನ ಸಾಕ್ಷಾತ್ಕಾರಕ್ಕೆ ಶ್ರವಣ, ಮನನ ಮತ್ತು ಭಕ್ತಿಪೂರ್ವಕ ನಿರಂತರ ಧ್ಯಾನ ಅವಶ್ಯಕ. ತತ್ವಜ್ಞಾನಕ್ಕಾಗಿ ಬ್ರಹ್ಮವಿಷಯಕ ವಿಚಾರವು ಅತ್ಯವಶ್ಯ. ಅಂತೆಯೇ ಸೂತ್ರ ಕಾರರು 'ಬ್ರಹ್ಮ ಜಿಜ್ಞಾಸಾ ಕರ್ತವ್ಯಾ' (ಬ್ರಹ್ಮವಿಷಯಕ ವಿಚಾರ ಮಾಡಬೇಕು)

ಎಂದು ವಿಧಿಸಿದ್ದಾರೆ.

ಧ್ಯಾನವನ್ನು ಭಕ್ತಿಪೂರ್ವಕ ಮಾಡಬೇಕೆಂದು ಮೇಲೆ ವಿವರಿಸಲಾಗಿದೆ. ಭಕ್ತಿಯೆಂದರೆ ಭಗವಂತನಲ್ಲಿ, ಅವನ ಮಹಿಮಾ ಜ್ಞಾನ ಪೂರ್ವಕವಾಗಿ ಮಾಡುವ ಸುಧೃಢ ಸ್ನೇಹ. ಇದನ್ನೇ ಟೀಕಾರಾಯರು ವಿವರವಾಗಿ ಹೀಗೆ ಹೇಳಿದ್ದಾರೆ. ಅಪರಿಮಿತ ಅನಂತ ನಿರ್ದುಷ್ಟ ಕಲ್ಯಾಣ ಗುಣಪೂರ್ಣನು ಭಗವಂತನು ಎಂಬ ಜ್ಞಾನಪೂರ್ವಕವಾದ, ತಾನು ತನ್ನವರು ಮೊದಲಾದ ಸಮಸ್ತ ವಸ್ತುಗಳಿಗಿಂತ ಅನೇಕ ಪಟ್ಟು ಅಧಿಕವಾದ, ಸಹಸ್ರಾರು ವಿಘ್ನಗಳಿಂದಲೂ ಕುಂಠಿತವಾಗದ ನಿರಂತರ ಪ್ರೇಮ ಪ್ರವಾಹವೇ ಪರಮೇಶ್ವರನ ಭಕ್ತಿ ಎನಿಸುತ್ತದೆ.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥೧೨॥**
**ನರ್ತೇ ತ್ವತ್‌ಕ್ರಿಯತೇ ಕಿಂಚಿತಿತ್ಯಾದೇರ್ನ ಹರಿಂ ವಿನಾ ।**
**ಜ್ಞಾನಸ್ವಭಾವತೋಽಪಿ ಸ್ಯಾನ್ಮುಕ್ತಿಃ ಕಸ್ಯಾಪಿ ಹಿ ಕ್ವಚಿತ್ ॥೧೪॥**

**ಅವತರಣಿಕೆ :** ಮೋಕ್ಷವು ಜ್ಞಾನ ಸ್ವಭಾವದಿಂದ ದೊರೆಯುವದಿಲ್ಲ. ಆದರೆ ಭಗವಂತನ ಅನುಗ್ರಹ (ಪ್ರಸಾದ)ದಿಂದ ಮಾತ್ರ ಎಂದು ಇಲ್ಲಿ ವಿವರಿಸುತ್ತಾರೆ.

**ಅನುವಾದ :** ಪ್ರಕೃತ್ಯಾದಿ ತತ್ವ (ದ್ರವ್ಯ), ಧರ್ಮಾಧರ್ಮಗಳು (ಕರ್ಮ) ಕಾಲ, ಪ್ರಕೃತ್ಯಾದಿಗಳ ಪರಿಣಾಮ (ಸ್ವಭಾವ) ಮತ್ತು ಇವುಗಳಿಗೆ ಅಭಿಮಾನಿ ಜೀವರು (ರಮಾ ಬ್ರಹ್ಮಾದಿಗಳು)-ಇವರೆಲ್ಲ ಭಗವಂತನ ಅನುಗ್ರಹದಿಂದ ಮಾತ್ರ ಇರುತ್ತಾರೆ. ಮತ್ತು ಅವನು ಉಪೇಕ್ಷಿಸಿದರೆ ಉಳಿಯುವದಿಲ್ಲ. ನಿನ್ನನ್ನು ಬಿಟ್ಟು (ಎಂದರೆ ನಿನ್ನ ಪ್ರೇರಣೆಯಿಲ್ಲದೆ) ಯಾವ ಕೆಲಸವೂ ಮಾಡಲ್ಪಡುವದಿಲ್ಲ, ಈ ಮೊದಲಾದ ಆಗಮ ವಾಕ್ಯಗಳಿಂದ ಶ್ರೀಹರಿ (ವಿಷ್ಣು ಅಥವಾ ನಾರಾಯಣ) ಇಲ್ಲದೆ, ಜ್ಞಾನ ಸ್ವಭಾವದಿಂದಲೇ ಎಲ್ಲಿಯೂ ಯಾರಿಗೂ ಮುಕ್ತಿಯು ದೊರೆಯಲಾರದು.

**ವಿವರಣೆ :** (i) ದೀಪದಿಂದ ಕತ್ತಲೆ ಹೋಗುತ್ತದೆ. ಕತ್ತಲೆ ನಿವಾರಣೆ ದೀಪದ ಸ್ವಭಾವ. ಅದಕ್ಕಾಗಿ ಪ್ರಭು ಪ್ರಸಾದ ಬೇಕಿಲ್ಲ. ಅದರಂತೆ ಜ್ಞಾನಸ್ವಭಾವದಿಂದಲೇ ಮುಕ್ತಿ ಎಂದು ತಾರ್ಕಿಕರು ವಾದಿಸುತ್ತಾರೆ. ತಮ್ಮ ವಾದವನ್ನು, ಮಂಡಿಸಲು "ದುಃಖ-ಜನ್ಮ-ಪ್ರವೃತ್ತಿ-ದೋಷ (ರಾಗದ್ವೇಷ) ಮಿಥ್ಯಾಜ್ಞಾನಾನಾಂ **ಉತ್ತರೋತ್ತರಾಪಾಯೇ ತದನಂತರಾಪಾಯಾತ್ ಅಪವರ್ಗಃ**"ಎಂಬ ಗೌತಮ ನ್ಯಾಯ ಸೂತ್ರವನ್ನು ಉದಾಹರಿಸುತ್ತಾರೆ. ಇದರ ಅರ್ಥವೆಂದರೆ ದುಃಖ-ಜನ್ಮ-ಪ್ರವೃತ್ತಿ-ರಾಗಾದಿ ದ್ವೇಷ, ಮಿಥ್ಯಾಜ್ಞಾನ ಇವುಗಳಲ್ಲಿ ಕೊನೆ ಕೊನೆಯವು ಹೋಗಲಾಗಿ, ಅದಕ್ಕಿಂತ ಮೊದಲಿನವು ಹೊರಟು ಹೋಗುವದರಿಂದ ಅಪವರ್ಗ (ಮುಕ್ತಿ)

ಆಗುತ್ತದೆ. ಈ ರೀತಿ ತಾರ್ಕಿಕರು ಆಕ್ಷೇಪಿಸಿದರೆ, ಅದು ಅಯುಕ್ತ, ಶ್ರೀಹರಿಯಿಲ್ಲದೆ ಅವನ ಪ್ರೇರಣೆ ಇಲ್ಲದೆ ಯಾವ ಕೆಲಸವೂ ಆಗುವದಿಲ್ಲ. ಅವನ ಪ್ರಸಾದ ಬಿಟ್ಟು ಕೇವಲ ಜ್ಞಾನ ಸ್ವಭಾವದಿಂದಲೇ ಮುಕ್ತಿ ಯಾರಿಗೂ ಎಲ್ಲಿಯೂ ಆಗಲಾರದೆಂದು ಆಚಾರ್ಯರು ಈ ಶ್ಲೋಕದಿಂದ ಪ್ರತಿಪಾದಿಸುತ್ತಾರೆ. ii) ಇನ್ನು ಜೀವನ ಸಂಸಾರಬಂಧ ಕೇವಲ ಅಜ್ಞಾನ ಮೂಲಕವಾಗಿದ್ದರೆ ಜ್ಞಾನದಿಂದ ಅಜ್ಞಾನ ನಿವೃತ್ತಿಯಾಗಿ ಸಂಸಾರದಿಂದ ವಿಮೋಚನೆ ಜೀವನಿಗೆ ಆಗಬಹುದಿತ್ತು. ಆದರೆ ವಸ್ತುಸ್ಥಿತಿ ಹೀಗಿಲ್ಲ. ಸಂಸಾರಬಂಧವು ಅನಾದಿಯಾದರೂ ಅದು ಭಗವದಧೀನವೆಂದು ಶ್ರುತಿ–ಸ್ಮೃತಿ–ಇತಿಹಾಸ–ಪುರಾಣಾದಿಗಳಲ್ಲಿ ನಿರೂಪಿತವಾಗಿದೆ. ಬಂಧಕ್ಕೆ ಈಶ್ವರೇಚ್ಛಾ ಪ್ರಥಮ ಕಾರಣ ಹಾಗೂ ಪ್ರಕೃತಿ ಎರಡನೇ ಕಾರಣವೆಂದು ಭಾಗವತ ತಾತ್ಪರ್ಯದಲ್ಲಿ ಹೇಳಲಾಗಿದೆ. (3ನೇ ಸ್ಕಂಧ, 9ನೆಯ ಅಧ್ಯಾಯ) ಟೀಕಾಚಾರ್ಯರು ನಿರೂಪಿಸಿದಂತೆ, ಪರಮೇಶ್ವರನೇ ತನ್ನ ಅಧೀನವಾದ ಹಾಗೂ ಪ್ರಕೃತ್ಯಂಶಗಳಿಂದೊಡಗೂಡಿದ ಅವಿದ್ಯೆಯಿಂದ ಮತ್ತು ತನ್ನ ಅಚಿಂತ್ಯಾದ್ಭುತ ಶಕ್ತಿಯಿಂದ, ಜೀವಸ್ವರೂಪವನ್ನೇ ಅದು ಸ್ವಪ್ರಕಾಶವಾಗಿದ್ದರೂ ಸಹ ಆವರಿಸುತ್ತಾನೆ. ಮುಂದೆ ಅವಿದ್ಯೆಗೆ ಮಹತ್ತತ್ವ ಅಹಂಕಾರ ತತ್ವಗಳ ಸಂಯೋಜನೆಯಾಗುತ್ತದೆ. ಇದರಿಂದಾಗಿ ವಸ್ತುತಃ ಜೀವರಲ್ಲಿ ಸ್ವತಂತ್ರವಾಗಿ ಇಲ್ಲದಿರುವ ಕರ್ತೃತ್ವ–ಭೋಕ್ತೃತ್ವ–ಸ್ವಾತಂತ್ರ್ಯ ಕಾರಕಫಲ ಸ್ವಾಮಿತ್ವವನ್ನು (ಎಂದರೆ ಇಂದ್ರಿಯ ಮತ್ತು ತತ್ಫಲಸ್ವಾಮಿತ್ವ) ತೋರಿಸಿ, ಆ ಭ್ರಮದಿಂದ ರಾಗಾದಿಗಳನ್ನು ಹುಟ್ಟಿಸಿ,ಅವುಗಳ ಮುಖಾಂತರ ಜೀವರಿಗೆ ದುಃಖಾನುಭವ ಉಂಟು ಮಾಡುತ್ತಾನೆ. ಆದ್ದರಿಂದ ಸಂಸಾರಬಂಧ ನಿವೃತ್ತಿಗಾಗಿ, ಅವಿದ್ಯಾವರಣ ಹಾಕಿದ ಭಗವಂತನಿಗೇನೇ ಮೊರೆ ಹೋಗಬೇಕು. ಅನಾದಿಯಾದ ಅವಿದ್ಯಾವರಣ ತೊಲಗಿಸಲು ಅದನ್ನು ಹಾಕಿದ ಭಗವಂತನ ಪ್ರಸಾದ ಅತ್ಯವಶ್ಯ. (iii) ಪ್ರಸಾದ ವಾದವು ಅಸೂತ್ರಿತವಲ್ಲ. ಪ್ರಸಾದವು ಸೂತ್ರದ ಆಕ್ಷಿಪ್ತ ಅರ್ಥ, ಶಾಸ್ತ್ರದ ಪ್ರಯೋಜನ ಮುಕ್ತಿ ಎಂದು ಪ್ರಥಮ ಸೂತ್ರದಲ್ಲಿ ನಿರೂಪಿತವಾಗಿದೆ. ಆದರೆ ಈ ಮೋಕ್ಷವು ಭಗವಂತನ ಪ್ರಸಾದ ಬಿಟ್ಟು ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದ ಪ್ರಸಾದವು ಸೂತ್ರದ ಆಕ್ಷಿಪ್ತ ಅರ್ಥ, ಪ್ರಸಾದವು ಸೂತ್ರಕಾರರಿಗೆ ಸಮ್ಮತವೇ ಆದ ಅರ್ಥ ಎಂಬುದು ಓಂ ತದಭಿಧ್ಯಾನಾತ್ತು ತಿರೋಹಿತಂ ತತೋಹ್ಯಸ್ಯ ಬಂಧವಿಪರ್ಯಯೌ ಓಂ (III–2–5) ಎಂಬ ಸೂತ್ರದಿಂದ ತಿಳಿದು ಬರುತ್ತದೆ. ಈ ಸೂತ್ರದ ಅರ್ಥವೆಂದರೆ ಈಶ್ವರನ ಇಚ್ಛೆಯಿಂದಲೇ ಸ್ವಪ್ನ ನಿವೃತ್ತವಾಗುತ್ತದೆ. ಏಕೆಂದರೆ ಜೀವನ ಬಂಧ ಮತ್ತು ಮೋಕ್ಷ ಈಶ್ವರನಿಂದಲೇ, ಎಂದರೆ ಸಂಸಾರ ಬಂಧ ಮತ್ತು ಮುಕ್ತಿಗೆ ಈಶ್ವರನೇ ಕಾರಣ ಎಂದು ಅಭಿಪ್ರಾಯ. ಹೀಗಾಗಿ ಮುಕ್ತಿ ದೊರೆಯಲು ಮುಕ್ತಿಕಾರಣನಾದ ಭಗವಂತನ ಪ್ರಸಾದ ಅತ್ಯವಶ್ಯ.

**ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ |**
**ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ||೧೫||**

**ಅವತರಣಿಕೆ :** ಜ್ಞಾನ, ಮೋಕ್ಷ ಮತ್ತು ಮೋಕ್ಷದಲ್ಲಿಯ ಆನಂದ ನೀಡುವ ವನು ಭಗವಂತನೇ. ಆದ್ದರಿಂದ ಅವನ ಅನುಗ್ರಹ, ಪ್ರಸಾದ ಅವಶ್ಯ ಎಂದು ಪ್ರಸಾದವಾದವ ಉಪಸಂಹಾರ ಮಾಡುತ್ತಾರೆ.

**ಅನುವಾದ :** ವಿಷ್ಣು ಅಥವಾ ಹರಿಯು ಜ್ಞಾನವಿಲ್ಲದವರಿಗೆ ಜ್ಞಾನ ನೀಡು ತ್ತಾನೆ. ಜ್ಞಾನಿಗಳಿಗೆ ಮೋಕ್ಷ ದಯಪಾಲಿಸುತ್ತಾನೆ ಮತ್ತು ಮುಕ್ತರಿಗೆ ಆನಂದ ಕೊಡುವವನೂ ಜನಾರ್ದನ ಶಬ್ದ ವಾಚ್ಯನಾದ ಆ ವಿಷ್ಣುವೇ(ನಾರಾಯಣನೇ)

**ವಿವರಣೆ :** ಹಿಂದೆ ನಿರೂಪಿಸಿದ ಗೌತಮ ನ್ಯಾಯಸೂತ್ರದ ಪ್ರಕಾರ, ತತ್ವ ಜ್ಞಾನವಾದೊಡನೆ. ಮಿಥ್ಯಾಜ್ಞಾನ ನಿವೃತ್ತವಾಗುತ್ತದೆ ಇದರಿಂದ ರಾಗಾದಿ ದೋಷಗಳು ಹೋಗುತ್ತವೆ. ಹೀಗಾಗಿ ರಾಗಾದಿಗಳಿಂದ ಆಗುವ ಪ್ರವೃತ್ತಿ ಕರ್ಮಗಳು ಹುಟ್ಟುವದಿಲ್ಲ, ಕರ್ಮಗಳಿಲ್ಲವೆಂದ ಬಳಿಕ ಕರ್ಮದಿಂದಾಗುವ ಮುಂದಿನ ಜನ್ಮಗಳಿಲ್ಲ. ಜನ್ಮಗಳೇ ಇಲ್ಲವಾದರೆ ಸಂಸಾರಬಂಧ ನಾಶಿಸುತ್ತದೆ. ದುಃಖ ನಿವೃ ತ್ತಿಯೇ ಮೋಕ್ಷ. ಹೀಗೆ ಜ್ಞಾನದಿಂದಲೇ ಮೋಕ್ಷ ಎನ್ನುವ ತಾರ್ಕಿಕರ ವಾದ ಅಸಂಗತ ಎಂಬುದನ್ನು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಬಂಧ. ಅನಾದಿ ಯಾವರೂ ಅನು ಭಗವಂತನ ಪ್ರಸಾದದಿಂದ ಮಾತ್ರ ನಾಶವಾಗುತ್ತದೆ. ನಾಶದ ಪ್ರಕಾರವೆಂದರೆ ಸ್ವರೂಪ ಧ್ವಂಸ,

ಸಂಸಾರಬಂಧ ಕೇವಲ ಅವಿದ್ಯೆಯಿಂದ, ಅವಿದ್ಯಾವರಣದಿಂದ ಆಗಿಲ್ಲ. ಮೇಲೆ ಹೇಳಿದಂತೆ ಪರಮೇಶ್ವರನ ಶಕ್ತಿಯೇ ಜೀವ ಸ್ವರೂಪದ ಮುಖ್ಯ ಆವರಣ. ಅವಿದ್ಯೆ ಕೇವಲ ನಿಮಿತ್ತ. ಜ್ಞಾನದಿಂದ ಅವಿದ್ಯೆ ನಾಶವಾದರೂ ಈಶ್ವರನು ತನ್ನ ಬಂಧಕ ಶಕ್ತಿಯನ್ನು ಬಿಡಿಸುವವರೆಗೆ, ಜೀವನಿಗೆ ತನ್ನ ಸ್ವರೂಪಭೂತ ಆನಂದದ ಅಭಿವ್ಯಕ್ತಿ ಆಗುವದಿಲ್ಲ. ಈ ಪ್ರಮೇಯದ ವಿವರ ಹೀಗಿದೆ. ಪ್ರತಿಯೊಬ್ಬ ಜೀವನಿಗೆ ಅನಾದಿಯಾದ **ಜೀವಾಚ್ಛಾದಿಕಾ** ಮತ್ತು **ಪರಮಾಚ್ಛಾದಿಕಾ** ಎಂಬ ಎರಡು ಅನಾದಿ ಅವಿದ್ಯಾವರಣ ಇವೆ. ಇವುಗಳಿಂದ ಅನುಕ್ರಮವಾಗಿ ಜೀವನಿಗೆ ತನ್ನ ಸ್ವರೂಪ ಹಾಗೂ ಅಂತರ್ಯಾಮಿ ಭಗವಂತನ ಜ್ಞಾನವಾಗುವದಿಲ್ಲ. ಈ ಎರಡು ಅವಿದ್ಯಾ ಆವರಣಗಳು ಹೊರಟು ಹೋದ ನಂತರವೇ ಸ್ವಸ್ವರೂಪ ಪ್ರಕಟವಾಗಿ ಸಮೀಚೀನ ಜ್ಞಾನ ಆಗುತ್ತದೆ. ಪರಮಾತ್ಮ ನಾದರೋ ಪ್ರಸನ್ನನಾದ ಬಳಿಕ ಜೀವಾಚ್ಛಾದಿಕಾ (ಅಥವಾ ಸ್ವಗುಣಾಚ್ಛಾದಿಕಾ)

ಆವರಣವನ್ನು ನಾಶಗೊಳಿಸಿ (ಹತ್ವಾ) ಪರಮಾಚ್ಛಾದಿಕಾವನ್ನು ಸರಿಸಿ (ವ್ಯಾಘಟಿ ವಿಘಟನ ಮಾಡಿ) ಆ ಜೀವರಿಗೆ ಯೋಗ್ಯವಾದ ಪೂರ್ಣಾನಂದವನ್ನು ಪ್ರಕಟಗೊಳಿಸಿ, ಮೋಕ್ಷ ನೀಡುತ್ತಾನೆ. ಒಟ್ಟಿನಲ್ಲಿ ಜೀವನನ್ನು ಭವಪಾಶದಿಂದ ಕಟ್ಟಿದ ಭಗವಂತನು ಪ್ರಸನ್ನನಾದಾಗ ಮಾತ್ರ ಎಲ್ಲ ದುಃಖಗಳು ಹೊರಟು ಹೋಗಿ ನಿತ್ಯಾನಂದರೂಪ ಮುಕ್ತಿ ದೊರೆಯುತ್ತದೆ.

ಇನ್ನು ಪರೋಕ್ಷ ಅಥವಾ ಅಪರೋಕ್ಷ ಜ್ಞಾನವಾದೊಡನೆ ಮೋಕ್ಷವಾಗುವದು ಎಲ್ಲಿಯೂ ಕಂಡಿಲ್ಲ. ಮತ್ತು ಶಾಸ್ತ್ರದಲ್ಲಿಯೂ ಹೇಳಿಲ್ಲ. ಹೀಗಾಗುವದಾದರೆ, ಭಗವಂತನ ಸಾಕ್ಷಾತ್ಕಾರವಾದೊಡನೆ ಮೋಕ್ಷ ದೊರೆಯುವದಾದರೆ, ಭಗವಂತನನ್ನು ಪ್ರತ್ಯಕ್ಷೀಕರಿಸಿಕೊಂಡ ವಾಮದೇವಾದಿ ಅಪರೋಕ್ಷ ಜ್ಞಾನಿಗಳು ಮಾಡಿದ ಬ್ರಹ್ಮೋಪದೇಶಗಳು ಗಾಳಿಯ ಮಾತಿನಂತೆ ಅಥವಾ ಗಾಳೀ ದೆವ್ವದಂತೆ ವ್ಯರ್ಥ ಆಗಬೇಕಾದೀತು.(ವಾತಪುತ್ರೀಯಾಃ ಸ್ಯುಃ)ಆದರೆ ಅಪರೋಕ್ಷ ಜ್ಞಾನಿಗಳ ಉಪದೇಶ ವ್ಯರ್ಥವಲ್ಲ. ಲೋಕದಲ್ಲಿ ಭಾಗವತ ಧರ್ಮಪ್ರವೃತ್ತಿಗೆ ಅವು ಅವಶ್ಯ. ಒಟ್ಟಿನಲ್ಲಿ, ಭಗವಂತನು ಪ್ರಸನ್ನನಾದಾಗ ಮಾತ್ರ ಮೋಕ್ಷ ದೊರೆಯುತ್ತದೆ. ಎಂದರೆ ಭಗವಂತನ ಪ್ರಸಾದದಿಂದಲೇ ಮೋಕ್ಷ ಎಂದು ತಾತ್ಪರ್ಯ.



## "ಅತಃ" ಶಬ್ದದ ಎರಡನೆಯ ಅರ್ಥ - ಬಂಧ ಸತ್ಯವಾದ್ದರಿಂದ

**ಶ್ಲೋಕ :** **ಇತ್ಯುಕ್ತೇರ್ಬಂಧಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ ||೧೬||**

**ಪೀಠಿಕೆ :** ಈ ವರೆಗೆ ನಿರೂಪಿಸಿದ ಸೂತ್ರ ವ್ಯಾಖ್ಯಾನದ ಪರಿಶುದ್ಧಿಗಾಗಿ, ಎಂದರೆ ಬ್ರಹ್ಮನ ಬಗ್ಗೆ ವಿಚಾರ ಮಾಡುವದರಿಂದ ಉಂಟಾಗುವ ಜ್ಞಾನದಿಂದ ದೊರೆಯುವ ಭಗವಂತನ ಪ್ರಸಾದದಿಂದಲೇ ಮುಕ್ತಿ, ಎಂಬ ಸಿದ್ಧಾಂತವು ಶ್ರೋತೃಗಳ ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯುವದಕ್ಕೋಸ್ಕರ ಆಚಾರ್ಯ ಮಧ್ವರು ಪರರ ಅಪವ್ಯಾಖ್ಯಾನವನ್ನು ಖಂಡಿಸಲು ಆರಂಭಿಸುತ್ತಾರೆ. ಮಾಯಾವಾದಿಗಳ ಪ್ರಕಾರ ಬಂಧವು, ಸಂಸಾರಬಂಧವು ಮಿಥ್ಯಾ, ಶಿಂಪಿನಲ್ಲಿ ಬೆಳ್ಳಿಯನ್ನು ಆರೋಪಿಸುವಂತೆ ಬ್ರಹ್ಮನಲ್ಲಿ ಜಗತ್ತನ್ನು ಆರೋಪಿಸಲಾಗಿದೆ. ಆರೋಪಿತ ಬೆಳ್ಳಿ ಸುಳ್ಳು ಇರುವಂತೆ ಜಗತ್ತು ಮತ್ತು ಜಗತ್ತಿನಲ್ಲಿ ಸೇರಿದ "ನಾನು ಮಾಡುತ್ತೇನೆ, ತಿನ್ನುತ್ತೇನೆ"

ಎಂಬ ಕರ್ತೃತ್ವಾದಿಗಳು, ರಾಗ ದ್ವೇಷಾದಿಗಳು, ವಿಹಿತ ಹಾಗೂ ನಿಷಿದ್ಧ ಕ್ರಿಯೆಗಳು. ಕರ್ತೃತ್ವಾದಿ ಕಾರಕಗಳು ಮತ್ತು ಐಹಿಕ ಪಾರಮಾರ್ಥಿಕ ಫಲರೂಪ ಲಕ್ಷಣವುಳ್ಳ ಸಂಸಾರ ಬಂಧವು ಮಿಥ್ಯಾ (ಸುಳ್ಳು), ಅಜ್ಞಾನಕಲ್ಪಿತ ಎಂದು ಶಂಕರಾಚಾರ್ಯರು ತಮ್ಮ ಭಾಷ್ಯದ ಆರಂಭದಲ್ಲಿ "ಅಧ್ಯಾಸ ಭಾಷ್ಯದಲ್ಲಿ" ವರ್ಣಿಸಿದ್ದಾರೆ. ಈ ಮಿಥ್ಯಾಭೂತ ಬಂಧದ ನಿವೃತ್ತಿಯು, ಅರ್ಥಾತ್ ಮೋಕ್ಷವು ಜೀವ ಬ್ರಹ್ಮರ ಐಕ್ಯಜ್ಞಾನದಿಂದ ಆಗುತ್ತದೆಂದು ಅವರು ಹೇಳುತ್ತಾರೆ. "ಅತಸ್ಮಿನ್ ತದ್ಬುದ್ಧಿಃ ಇದಿತಿ ಪ್ರತ್ಯಯಃ. ಅಧ್ಯಾಸಃ" ಉದಾ :– ಬೆಳ್ಳಿಯಲ್ಲದ ಶಿಂಪಿನಲ್ಲಿ ಬೆಳ್ಳಿ ಎಂಬ ತಿಳುವಳಿಕೆ ಅಧ್ಯಾಸ

ಈ ಅಧ್ಯಾಸವಾದ ಸೂತ್ರಕಾರರಿಗೆ ಸಮ್ಮತವಿಲ್ಲ ಎಂದು ಮಧ್ವಾಚಾರ್ಯರ ಮತ, ಮಾಧ್ವವಾದಿಗಳಾದರೋ ಬಂಧ ಮಿಥ್ಯಾತ್ವವನ್ನು, ಅಧ್ಯಾಸ ಭಾಷ್ಯವನ್ನು ಸಮರ್ಥಿಸುತ್ತಾರೆ. ಸೂತ್ರಾರ್ಥ ಎರಡು ವಿಧ – ಶ್ರೌತಾರ್ಥ, ಆರ್ಥಿಕಾರ್ಥ. ಶ್ರೌತಾರ್ಥ ಎಂದರೆ ಶ್ರುತಿಯಿಂದ, ಶ್ರುತಿ ಮಹಿಮೆಯಿಂದ, ವಾಕ್ಯ ಶ್ರವಣದಿಂದ ದೊರೆತ ಅರ್ಥ, ಆರ್ಥಿಕಾರ್ಥ ಎಂದರೆ ಶಬ್ದ ಸಾಮರ್ಥ್ಯದಿಂದ, ಅರ್ಥವಶಾತ್ ದೊರೆತ ಅರ್ಥ. (Implied meaning) ಅಧ್ಯಾಸ ಭಾಷ್ಯವು ಸೂತ್ರದ ಆರ್ಥಿಕ ಅರ್ಥವಾದುದರಿಂದ ಅತ್ಯಂತ ಸಮಂಜಸವೆಂದು ಮೂರು ಸಂಗತಿಗಳಿಂದ (ಸಂಗತಿ ತ್ರಯೋಕ್ತ್ಯಾ) ಸಮರ್ಥಿಸುತ್ತಾರೆ. ಹೇಗೆಂದರೆ,

ಅ) **ಪ್ರಯೋಜನಾಕ್ಷಿಪ್ತ** (ಸೂತ್ರದ ಪ್ರಯೋಜನದಿಂದ ಬಂಧ ಮಿಥ್ಯಾತ್ವವು ಆಕ್ಷಿಪ್ತವಾಗಿದೆ.) "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದ ಶ್ರೌತಾರ್ಥವೆಂದರೆ ಬ್ರಹ್ಮಜ್ಞಾನಕ್ಕಾಗಿ ವೇದಾಂತ ವಿಚಾರವು ಮಾಡಲ್ಪಡಬೇಕು. ಆದರೆ ಬ್ರಹ್ಮಜ್ಞಾನವು ಸ್ವತಃ ಪುರುಷಾರ್ಥವಲ್ಲ. ಆದ್ದರಿಂದ ಅದು ಶಾಸ್ತ್ರದ ಪ್ರಯೋಜನವಾಗಲಾರದು. ಹೀಗಾಗಿ ಬ್ರಹ್ಮಜ್ಞಾನದಿಂದ ದೊರೆಯುವ ಮೋಕ್ಷವು ಶಾಸ್ತ್ರದ ಪ್ರಯೋಜನವೆಂದು ಹೇಳಬೇಕು. ಎಂದರೆ ಮೋಕ್ಷಸಾಧನವಾದ ಬ್ರಹ್ಮಜ್ಞಾನಕ್ಕೋಸ್ಕರ, ಬ್ರಹ್ಮವಿಷಯಕ ವಿಚಾರವು ಮಾಡಲ್ಪಡಬೇಕು ಎಂಬುದು ಸೂತ್ರದ ಆರ್ಥಿಕ ಅರ್ಥ. ಇನ್ನು ಮೋಕ್ಷವೆಂದರೆ "ಅನರ್ಥಹೇತು ನಿಬರ್ಹಣಂ ಎಂದರೆ ಅನರ್ಥ ಮತ್ತು ಅದರ ಕಾರಣಗಳನ್ನು ನಾಶಪಡಿಸುವುದು, ಅನರ್ಥವೆಂದರೆ "ನಾನು ಮಾಡುತ್ತೇನೆ ತಿನ್ನುತ್ತೇನೆ" ಎಂಬ ಕರ್ತೃತ್ವಾದಿಗಳು. ಈ ಅನರ್ಥ ನಿವಾರಣೆಯಾಗುವದು ಜ್ಞಾನದಿಂದ, ಬ್ರಹ್ಮಜ್ಞಾನದಿಂದ. ಆದರೆ ಜ್ಞಾನದಿಂದ ಸತ್ಯವಾದುದು, ನಿವೃತ್ತವಾಗುವುದಿಲ್ಲ. "ಜ್ಞಾನದಿಂದ ನಿವೃತ್ತವಾಗುವುದು ಅಜ್ಞಾನ ಅಥವಾ ಅಜ್ಞಾನಕಾರ್ಯ." ಆದ್ದರಿಂದ ಜ್ಞಾನದಿಂದ ನಿವೃತ್ತವಾಗುವ ಕರ್ತೃತ್ವಾದಿ ಬಂಧ, ಸಂಸಾರ ಬಂಧ ಸತ್ಯವಾಗಲಾರವು. ಹೀಗಾಗಿ ಬಂಧ ಮಿಥ್ಯಾ ಅಥವಾ ಅಜ್ಞಾನ ಕಲ್ಪಿತ. (ಅವಿದ್ಯಾ ಹೇತುಕಂ) ಬ್ರಹ್ಮಜ್ಞಾನವು

ಅನರ್ಥನಾಶಕವೆಂದು ತಿಳಿಸುವ ಸೂತ್ರಕಾರರೇ ಕರ್ತೃತ್ವಾದಿ ಅನರ್ಥ, ಸಂಸಾರ ಬಂಧ, ಅವಿದ್ಯಾ ಮೂಲಕ, ಅರ್ಥಾತ್ ಮಿಥ್ಯಾ ಎಂದು ತೋರಿಸುತ್ತಾರೆ. (ಅವಿದ್ಯಾ ಹೇತುಕವು).

ಬ) **ವಿಷಯಾಕ್ಷಿಪ್ತ :** ಸೂತ್ರದ ವಿಷಯದಿಂದ ಬಂಧ ಮಿಥ್ಯಾತ್ವವು ಆಕ್ಷಿಪ್ತ ವಾಗಿದೆ. ಸೂತ್ರಕ್ಕೆ ವಿಷಯ ಬ್ರಹ್ಮ. ಬ್ರಹ್ಮ ಎಂದರೆ ಜೀವ. ಜೀವನ ಬಗ್ಗೆ "ನಾನು ಮಾಡುತ್ತೇನೆ, ತಿನ್ನುತ್ತೇನೆ" ಎಂಬ ನಿಶ್ಚಯಾತ್ಮಕ ಜ್ಞಾನವಿರುವದರಿಂದ ಅವನು ವಿಷಯವಾಗಲಾರನು. ಸಂದಿಗ್ಧವಾದುದು ಮಾತ್ರ ವಿಷಯವಾಗುತ್ತದೆ. ಆದರೆ ಶಾಸ್ತ್ರಕ್ಕೆ ವಿಷಯು ಬ್ರಹ್ಮನೆಂದು ಸರ್ವಸಮ್ಮತವಾದ್ದರಿಂದ, ಬ್ರಹ್ಮವಿಷಯ ವಾಗುದದಕ್ಕೋಸ್ಕರ ಪಾರಮಾರ್ಥಿಕ ಬ್ರಹ್ಮ ನಿಷ್ಕ್ರಿಯ, ನಿಷ್ಕಲ ಎಂದೂ "ನಾನು ಮಾಡುತ್ತೇನೆ, ತಿನ್ನುತ್ತೇನೆ" ಮುಂತಾದ ಪ್ರತೀತಿ ಅವಿದ್ಯಾಕಲ್ಪಿತ, ಭ್ರಮಾತ್ಮಕ, ಮಿಥ್ಯಾ ಎಂದೂ ಹೇಳಬೇಕು.

ಕ) **ಉಪೋದ್ಘಾತಕೀ ಸಂಗತಿ :** ಉಪೋದ್ಘಾತದಲ್ಲಿ ಮುಂದೆ ಪ್ರತಿಪಾದಿಸಲಿರುವ ವಿಷಯಸಾರವನ್ನು ನಿರೂಪಿಸಲಾಗುತ್ತದೆ. ಪ್ರಕೃತದಲ್ಲಿ ಅಧ್ಯಾಸ ಭಾಷ್ಯವು ಶಾಸ್ತ್ರದ ಉಪೋದ್ಘಾತವಾಗಿದೆ. ಶಾಸ್ತ್ರದ ತಾತ್ಪರ್ಯವೆಂದರೆ (ಐದಂಪರ್ಯಂ) ಜೀವ ಬ್ರಹ್ಮರ ಐಕ್ಯಜ್ಞಾನ. ಜೀವನ ನಿಜಸ್ವರೂಪ ಕೇವಲ ಸುಖರೂಪ, ಜ್ಞಾನರೂಪ (ಸುಖೈಕತಾನ, ಸದಾತ್ಮ, ಕೂಟಸ್ಥ, ಚೈತನ್ಯೈಕ ರಸ). ಸಂಸಾರಿ ಜೀವನಾದರೋ ದುಃಖಿಯಾಗಿದ್ದಾನೆ. ಆದ್ದರಿಂದ ಪಾರಮಾರ್ಥಿಕ ಮತ್ತು ವ್ಯಾವಹಾರಿಕಗಳ ನಡುವಿನ ವಿರೋಧ ಪರಿಹರಿಸಲು ಶಾಸ್ತ್ರವಾಕ್ಯ "ಜರದ್ಗವ" ವಾಕ್ಯದಂತೆ (ಕವಲೆತ್ತಿನ ನುಡಿ ಯಂತೆ) ನಿರರ್ಥಕ ಎಂಬ ದೋಷ ಪರಿಹರಿಸಲು. ಶಾಸ್ತ್ರದಲ್ಲಿ ಬುದ್ಧಿವಂತರಿಗೆ ಪ್ರವೃತ್ತಿ ಹುಟ್ಟಿಸಲು ಜೀವರಿಗೆ ಸಂಸಾರಾವಸ್ಥೆಯಲ್ಲಿ ತೋರುವ ಸುಖ ದುಃಖಾ ದಿಗಳ ಬಂಧ, ಕರ್ತೃತ್ವಾದಿ ಬಂಧ ಮಿಥ್ಯಾ, ಅಜ್ಞಾನಕಲ್ಪಿತ ಎಂದು ಅಧ್ಯಾಸ ಭಾಷ್ಯದಲ್ಲಿ ಹೇಳಲಾಗಿದೆ.

**ಅವತರಣಿಕೆ :** ಬಂಧ ಮಿಥ್ಯಾ ಎಂಬುದನ್ನು ನಿರಾಕರಿಸುತ್ತಾರೆ.

**ಅನುವಾದ :** "ಅಜ್ಞಾನಾಂ ಜ್ಞಾನದೋ ವಿಷ್ಣುಃ" ಅಥವಾ ಮುಕ್ತಿಯು ಭಗವಂತನ ಪ್ರಸಾದದಿಂದ ಮಾತ್ರ ಸಾಧ್ಯ ಎಂದು ಹೇಳಿದ್ದರಿಂದ ಮುಕ್ತಿಯು "ಸಂಸಾರಬಂಧ ಮಿಥ್ಯಾ" ಎಂಬುದನ್ನು ಅಪೇಕ್ಷಿಸುವದೇ ಇಲ್ಲ.

**ವಿವರಣೆ :** (ಅ) ಶಾಸ್ತ್ರದ ಪ್ರಯೋಜನವಾದ ಮುಕ್ತಿ ಸಿದ್ಧಿಸಲು ಸಂಸಾರ ಬಂಧ ಮಿಥ್ಯಾ ಇರಬೇಕಿಲ್ಲ. ಸಂಸಾರ ಬಂಧ ಸತ್ಯವಾದರೂ ಮುಕ್ತಿಯು ಬೇರೆ ರೀತಿಯಿಂದ ಎಂದರೆ ಪರಮೇಶ್ವರನ ಪ್ರಸಾದದಿಂದಲೇ ಕೂಡುತ್ತದೆ. ಹಿಂದೆ ಹೇಳಿದಂತೆ ವಿಷ್ಣು ಅಜ್ಞರಿಗೆ ಜ್ಞಾನವನ್ನೂ, ಜ್ಞಾನಿಗಳಿಗೆ ಮೋಕ್ಷವನ್ನೂ, ಮುಕ್ತರಿಗೆ ಆನಂದವನ್ನೂ ನೀಡುತ್ತಾನೆ. ಅವನೇ ಬಂಧಕ ಹಾಗೂ ಬಂಧ

ವಿಮೋಚಕ. ರಾಜನ ಪ್ರಸಾದದಿಂದ ಸತ್ಯವಾದ ಬೇಡಿಗಳು ನಿವೃತ್ತವಾಗುವಂತೆ, ಗರುಡಧ್ಯಾನದಿಂದ ಸತ್ಯವಾದ ವಿಷ ನಿವೃತ್ತವಾಗುವಂತೆ, ಸಮುದ್ರದ ಸೇತು ದರ್ಶನದಿಂದ ಸತ್ಯವಾದ ಬ್ರಹ್ಮಹತ್ಯಾ ಪಾಪ ನಿವೃತ್ತವಾಗುವಂತೆ, ವಿಷ್ಣುವಿನ ಪ್ರಸಾದದಿಂದ ಸತ್ಯವಾದ ಸಂಸಾರಬಂಧ ನಿವೃತ್ತವಾಗುತ್ತದೆ. ಬ್ರಹ್ಮಜ್ಞಾನವು ಜೀವನ ಬಂಧವನ್ನು ಬಿಡಿಸುತ್ತದೆ ಎಂಬ ಸೂತ್ರಕಾರರ ಹೇಳಿಕೆ (ಉಕ್ತಿ) ಬಂಧ ಮಿಥ್ಯಾತ್ವವನ್ನು ಅಪೇಕ್ಷಿಸುವದಿಲ್ಲ, (ಬ) "ನೈವಮುಕ್ತಿಃ" ಎಂಬುದನ್ನು "ನ ಏವಂ ಉಕ್ತಿಃ" ಎಂದು ಸಂಧಿ ಬಿಡಿಸಬೇಕು. ಶಾಸ್ತ್ರಕ್ಕೆ ಬ್ರಹ್ಮ ವಿಷಯವಾಗುವವಕ್ಕೋಸ್ಕರ ಸಂಸಾರಬಂಧ ಮಿಥ್ಯಾ ಆಗಬೇಕಿಲ್ಲ. ಜೀವನು ಬ್ರಹ್ಮನೆಂದು ವೇದ ಹೇಳುವದಿಲ್ಲ ಎಂಬುದನ್ನು ಆಚಾರ್ಯರು ಮುಂದೆ 35ನೇಯ ಶ್ಲೋಕದಲ್ಲಿ ನಿರೂಪಿಸುವರು. (ಕ) ಇಲ್ಲಿಯೂ ಹಿಂದಿನಂತೆ "ನ ಏವಂ ಉಕ್ತಿಃ" ಎಂದು ಸಂಧಿ ಬಿಡಿಸಬೇಕು. "ಓಂ ತತ್ತು ಸಮನ್ವಯಾತ್ ಓಂ" ಎಂಬ 4ನೇ ಸೂತ್ರದಲ್ಲಿ ಹೇಳಿದಂತೆ, ಸಕಲ ಜಗತ್ತಿಗೆ ಜನ್ಮಾದಿ ಕರ್ತಾ ಎಂಬ ಲಕ್ಷಣವುಳ್ಳ, ಜೀವ ಜಡ ಪ್ರಪಂಚಕ್ಕಿಂತ ಅತ್ಯಂತ ವಿಲಕ್ಷಣನಾದ ಪರಬ್ರಹ್ಮನೇ (ನಾರಾಯಣ, ವಿಷ್ಣು) ಸಕಲ ವೇದ ಪ್ರತಿಪಾದ್ಯ ಎಂಬ ಉಕ್ತಿಯು, ಬಂಧ ಮಿಥ್ಯಾತ್ವವನ್ನು ಅಪೇಕ್ಷಿಸುವದಿಲ್ಲ ಎಂದು ಶ್ಲೋಕದ ಭಾವ. ಶಾಸ್ತ್ರದ ಸಾರ ಜೀವ ಬ್ರಹ್ಮರ ಐಕ್ಯವಲ್ಲ. ಆದರೆ ವಿಷ್ಣುವಿನ ಸರ್ವೋತ್ತಮತ್ವ, ಗುಣ–ಪೂರ್ಣತ್ವ, ದೋಷವಿದೂರತ್ವ, ಸಕಲ ವೇದ ಪ್ರತಿಪಾದ್ಯತ್ವ ಮುಂ.

**ಮಿಥ್ಯಾತ್ವಮಪಿ ಬಂಧಸ್ಯ ನ ಪ್ರತ್ಯಕ್ಷವಿರೋಧತಃ ||೧೬||**

**ಅವತರಣಿಕೆ ;** ಸಂಸಾರಬಂಧ ಮಿಥ್ಯಾ ಎಂಬ ವಾದದ ಖಂಡನೆಯನ್ನು ಮುಂದುವರಿಸುತ್ತಾರೆ.

**ಅನುವಾದ :** ಪ್ರತ್ಯಕ್ಷದ ವಿರೋಧವಿರುವದರಿಂದ ಬಂಧ ಸುಳ್ಳು ಅಲ್ಲ.

**ನಿವರಣೆ :** ಬಂಧ ಮಿಥ್ಯಾತ್ವವು "ನಾನು ಮಾಡುತ್ತೇನೆ, ತಿನ್ನುತ್ತೇನೆ, ನಾನು ದುಃಖಿ" ಎಂಬ ಪ್ರತ್ಯಕ್ಷಕ್ಕೆ ವಿರೋಧಿಯಾಗಿದೆ. ಮುಕ್ತಿಯು ಬಂಧ ಮಿಥ್ಯಾತ್ವವನ್ನು ಅಪೇಕ್ಷಿಸುವದಿಲ್ಲ. ಇಷ್ಟೇ ಅಲ್ಲ, ಬಂಧ ಮಿಥ್ಯಾತ್ವವು ಇಲ್ಲವೇ ಇಲ್ಲ. ಹೀಗೆ ಪ್ರತ್ಯಕ್ಷದ ವಿರೋಧ ಬರುವದರಿಂದಲೂ ಬಂಧ ಸುಳ್ಳು ಅಲ್ಲ.

ಸೂತ್ರದ ಪ್ರಯೋಜನ ಮತ್ತು ವಿಷಯ ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದ ಬಂಧವು ಮಿಥ್ಯಾ ಎಂದು ಮಾಯಾವಾದಿಗಳು **ಅರ್ಥಾಪತ್ತಿ** ಪ್ರಮಾಣದಿಂದ ಹೇಳುತ್ತಾರೆ. ಇದರ ಉದಾಹರಣೆ ಎಂದರೆ, ಪುಷ್ಟನಾದ ದೇವದತ್ತನು ಹಗಲು ಊಟ ಮಾಡುವದಿಲ್ಲ ಎಂಬ ಹೇಳಿಕೆಯಿಂದ ಅವನು ರಾತ್ರಿ ಊಟ ಮಾಡುತ್ತಾನೆ ಎಂದು ಊಹಿಸಲಾಗುತ್ತದೆ. ದೇವದತ್ತನು ರಸಾಯನಾದಿ ಸೇವಿಸಿಲ್ಲ ಎಂದು ಗೊತ್ತಿದ್ದ ಮನುಷ್ಯನಿಗೆ ಆತನ ಪುಷ್ಟತೆ

ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದ ರಾತ್ರಿ ಭೋಜನವು ಅರ್ಥಾಪತ್ತಿ ಪ್ರಮಾಣದಿಂದ ಆಕ್ಷಿಪ್ತವಾದ ಅರ್ಥ. ಇದರಲ್ಲಿ ಅಡಕವಾದ ಅಂಶಗಳು ನಾಲ್ಕು. (i & ii) ಪುಷ್ಟತನವು (ಆಕ್ಷೇಪಕ) ಪ್ರಮಾಣಪ್ರಮಿತ ಇರಬೇಕು ಮತ್ತು ಬೇರೆ ರೀತಿಯಿಂದ ಅದು ಕೂಡಬಾರದು. (ಅನುಪಪದ್ಯಮಾನತ್ವಂ). (iii & iv) ರಾತ್ರಿ ಭೋಜನವು (ಆಕ್ಷೇಪ್ಯ) ಉಪಪಾದಕವಾಗಿದ್ದು ಪ್ರಮಾಣಕ್ಕೆ ಅವಿರುದ್ಧ ವಿರಬೇಕು.

ಪ್ರಕೃತದಲ್ಲಿ ಮುಕ್ತಿಯು ಬೇರೆ ರೀತಿಯಿಂದ ಎಂದರೆ ಈಶ್ವರನ ಪ್ರಸಾದ ದಿಂದ ಕೂಡುತ್ತದೆ ಎಂದು ಈ ಮೊದಲು ಹೇಳಲಾಗಿತ್ತು. ಈಗ ಆ ಬಂಧ ಮಿಥ್ಯಾತ್ವವು ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾಗಿದೆ ಎಂದು ಹೇಳುತ್ತಾರೆ. ಹೀಗೆ ಬಾಧವು ಸುಳ್ಳು ಎಂಬುದನ್ನು ಸಾಧಿಸಲು ಮಾಯಾವಾದಿಯು ಬಳಸಿದ ಅರ್ಥಾಪತ್ತಿ ಪ್ರಮಾಣವು ದೋಷಯುಕ್ತವಾಗಿರುವದರಿಂದ ಬಂಧಮಿಥ್ಯಾತ್ವವು ಯುಕ್ತವಲ್ಲ.

**ಮಿಥ್ಯಾತ್ವಂ ಯದಿ ದುಃಖಾದೇಃ ತದ್ವಾಕ್ಯಸ್ಯಾಗ್ರತೋ ಭವೇತ್ (೧೭೪)**

**ಅವತರಣಿಕೆ :** ಭೇದವನ್ನು ಗ್ರಹಿಸುವ ಪ್ರತ್ಯಕ್ಷವು ಅತತ್ವಾವೇದಕ, ಅಪ್ರಮಾಣ ಎಂಬ ಮಾಯಾವಾದಿಗಳ ಪೂರ್ವಪಕ್ಷವನ್ನು ಇಲ್ಲಿ ನಿರಾಕರಿಸಲಾಗುತ್ತದೆ,

**ಅನುವಾದ :** ದುಃಖಾದಿಬಂಧ ಮಿಥ್ಯಾ ಆದರೆ ಆ ಬಂಧ ಮಿಥ್ಯಾ ಎಂದು ಸಾಧಿಸುವ "ನೇಹ ನಾನಾಸ್ತಿ ಕಿಂಚನ" ಎಂಬ ಶ್ರುತಿಗೆ ಮೊದಲು ಮಿಥ್ಯಾತ್ವವು ಬರಲಿ ಎಂದರೆ ಆ ಶ್ರುತಿ ಮೊದಲು ಸುಳ್ಳಾಗಲಿ ಎಂದು ಭಾವ,

**ವಿವರಣೆ ;** ಶ್ರುತಿ ಸ್ಮೃತಿ ಮೊದಲಾದವುಗಳಲ್ಲಿ ಆತ್ಮತತ್ವವು ಆನಂದಚೈತನ್ಯೈಕ ರಸ, ಉಪಾಧಿರಹಿತ, ಉದಾಸೀನ, ಅದ್ವಿತೀಯ ಮೊದಲಾಗಿ ವರ್ಣಿಸಲ್ಪಟ್ಟಿವೆ. ಆದರೆ ಆತ್ಮ ಪರಿಚ್ಛಿನ್ನ, ದುಃಖಾದಿ ಗ್ರಸ್ತ ಎಂದು ಗೋಚರಿಸುವ ಪ್ರತ್ಯಕ್ಷವು ಶ್ರುತಿಗೆ ವಿರುದ್ಧವಾದ್ದರಿಂದ, ಕೊಳೆತ ಕುಂಬಳಕಾಯಿಯಂತೆ ವ್ಯರ್ಥ, ಅಪ್ರ ಮಾಣ. ಆತ್ಮತತ್ವವು ಪ್ರತ್ಯಕ್ಷದಲ್ಲಿ ವಿಪರೀತಾಕಾರವಾಗಿ ತೋರಲಿಕ್ಕೆ ಮುಖ್ಯ ಕಾರಣವೆಂದರೆ ಅವಿದ್ಯೆ. ಅನಾದಿ ಅನಿರ್ವಚನೀಯ ಅವಿದ್ಯೆಯು, ಚೈತನ್ಯಕ್ಕೆ ಸ್ವಾಭಾವಿಕವಾಗಿ ಇರುವ ಜ್ಞಾನಾನಂದಾತ್ಮಕ ಅನುಭವವನ್ನು ಪ್ರತಿಬಂಧಿಸಿ ಜೀವ ಭಾವವನ್ನು ಆಪಾದಿಸುತ್ತದೆ. [ ಅವಿದ್ಯೆಯು ವಿದ್ಯಾ–ಕರ್ಮ–ಸ್ಮೃತಿ–ಸಂಸ್ಕಾ ರಾದಿಗಳಿಗೆ ಆಶ್ರಯ. ಅವಿದ್ಯೆಯ ಪರಿಣಾಮ ವಿಶೇಷವೇ ಅಹಂಕಾರ. ಅದು ಚೈತನ್ಯದಿಂದ ಭಿನ್ನವಾದರೂ ಅದರಿಂದ ಮಿಥ್ಯಾಭೂತ ಕರ್ತೃತ್ವಾದಿ ಧರ್ಮಗಳು ಆತ್ಮನಿಗೆ ತೋರುತ್ತವೆ ]

ಮಾಯಾವಾದಿಯ ಈ ವಾದ ಅಯುಕ್ತವೆಂದು ಆಚಾರ್ಯರು ಖಂಡಿಸಿ ದ್ದಾರೆ. ಈ ವಾದವು ಬಾಲಮನೋಹರವಾಗಿದೆ ಎಂದು ಟೀಕಾರಾಯರು

ಮೂದಲಿಸಿದ್ದಾರೆ, ಈ ವಾದವು ಮುಖ್ಯವಾಗಿ "ನೇಹ ನಾನಾಸ್ತಿ ಕಿಂಚನ" ಇಲ್ಲಿ ಭೇದವಿಲ್ಲ ಎಂಬ ಶ್ರುತಿಯನ್ನು ಅವಲಂಬಿಸಿದೆ. ಆದರೆ ಈ ಶ್ರುತಿ ಐಕ್ಯ ಬೋಧಕ ಮತ್ತು ಬಂಧಮಿಥ್ಯಾ ಎಂಬುದಕ್ಕೆ ಸಾಧಕವಲ್ಲ. ಹೇಗೆಂದರೆ ಭೇದವೇ ಇಲ್ಲ ಎಂಬ ಶ್ರುತಿಯ ಆಪಾತತಃ (apparent)ಅರ್ಥ ಗ್ರಾಹ್ಯವಲ್ಲ. ಏಕೆಂದರೆ ಶ್ರುತ್ಯರ್ಥವನ್ನು ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ನಿರ್ಧರಿಸಬೇಕು. ಈ ಲಿಂಗಗಳಲ್ಲಿ ಯುಕ್ತಿ ಮುಖ್ಯ. ಯುಕ್ತಿಯಿಂದ ಶ್ರುತ್ಯರ್ಥ ವಿಚಾರಿಸುವಾ. ಬ್ರಹ್ಮವೊಂದೇ ಸತ್ಯ. ಬ್ರಹ್ಮಬಿಟ್ಟು ಉಳಿದುದೆಲ್ಲ ಮಿಥ್ಯಾ ಎಂದು ಪೂರ್ವ ಪಕ್ಷಿಯ ಸಿದ್ಧಾಂತ. ಅದಕ್ಕನುಗುಣವಾಗಿ "ನೇಹ ನಾನಾಸ್ತಿ" ಎಂಬ ಶ್ರುತಿ ಆತ್ಮಭಿನ್ನವಾದ್ದರಿಂದ ಮಿಥ್ಯಾ ಆಗುತ್ತದೆ ಎಂದರೆ ದುಃಖಾದಿಗಳು ಮಿಥ್ಯಾ ಎಂದು ಸಾಧಿಸುವ "ನೇಹ ನಾನಾಸ್ತಿ ಶ್ರುತಿ"ಗೇನೇ ಮೊದಲು ಮಿಥ್ಯಾತ್ವ ಬರುತ್ತದೆ. ಆದರೆ ಸುಳ್ಳು ಏನನ್ನೂ ಸಾಧಿಸಲಾಗದು. ಉದಾ—'ಬಂಜೆಯ ಮಗನ ಮಾತು.' ಆದ್ದರಿಂದ ಸುಳ್ಳಾದ ಈ ಶ್ರುತಿಯಿಂದ ದುಃಖಾದಿಬಂಧ ಮಿಥ್ಯಾ ಎಂಬುದಾಗಲಿ, ಪ್ರತ್ಯಕ್ಷ ಅಪ್ರಮಾಣವೆಂದಾಗಲಿ ಸಿದ್ಧಿಸುವದಿಲ್ಲ.

**ಅಗ್ರತಃ ಶಬ್ದದ ಔಚಿತ್ಯ :** "ನೇಹ ನಾನಾಸ್ತಿ" ಶ್ರುತಿಯಿಂದ ಆತ್ಮಾತಿರಿಕ್ತ ವಾದ ಜಗತ್ತು, ದುಃಖ ಮುಂತಾದವು ಮಿಥ್ಯಾ ಎಂದು ಒಂದೇ ಜ್ಞಾನ ಹುಟ್ಟುವದರಿಂದ ಅಗ್ರತಃ — ಮೊದಲು, ಎಂಬುದು ಹೇಗೆ ಎಂಬ ಆಕ್ಷೇಪ ಬರುತ್ತದೆ. ಈ ಆಕ್ಷೇಪ ನಿಜ, ಎಲ್ಲ ಮಿಥ್ಯಾ ಎಂಬ ಜ್ಞಾನ ಒಂದೇ ಸಲ ಬಂದರೂ ಅದರ ಪ್ರಾಮಾಣ್ಯವನ್ನು ನಿರ್ಧರಿಸಲು ಪರೀಕ್ಷಕರು ಮೊದಲು ಈ ಶ್ರುತಿವಾಕ್ಯ ಮಿಥ್ಯಾ ಎಂದೂ, ನಂತರ ಜಗತ್ತು ಮತ್ತು ದುಃಖಾದಿಗಳು ಮಿಥ್ಯಾ ಎಂದು ಸ್ವಬುದ್ಧಿಯಿಂದ ವಿವೇಚಿಸುತ್ತಾರೆ. ಆದ್ದರಿಂದ ಅಗ್ರತಃ ಎಂದು ಆಚಾರ್ಯರು ಪ್ರಯೋಗಿಸಿದ್ದು ಸಾರ್ಥಕ.

**ಟೀಪು :** (i) "ನೇಹ ನಾನಾಸ್ತಿ ಕಿಂಚನ" ಎಂಬ ಶ್ರುತಿಯು ಪ್ರಮಾಣವೇ. ಆದರೆ ಮಾಯಾವಾದಿಗಳ ಈ ಶ್ರುತಿಯ ಅರ್ಥವಿವೇಚನೆ ಅಯುಕ್ತವಾಗಿವೆ ಎಂದು ಆಚಾರ್ಯರ ಅಭಿಪ್ರಾಯ. ಬ್ರಹ್ಮನಲ್ಲಿ ಅವಯವ ಭೇದ, ಗುಣಭೇದ, ಕ್ರಿಯಾಭೇದ, ಅವತಾರಭೇದ ಮುಂ. ಇಲ್ಲ ಎಂದು ಶ್ರುತಿಯ ತಾತ್ಪರ್ಯ. (ii) ಸಿದ್ಧಾಂತಿಗಳ ಪ್ರಕಾರ ಬಂಧವು, ಸಂಸಾರ ಬಂಧವು ಸತ್ಯ. ಸೂತ್ರದಲ್ಲಿಯ ಅತಃ ಶಬ್ದದ ಎರಡನೇ ಅರ್ಥವೆಂದರೆ ಬಂಧವು ಸತ್ಯವಾದ್ದರಿಂದ. (ಬಂಧಸ್ಯ ಸತ್ಯತ್ವಾತ್) ಈ ಬಂಧವು ಜೀವನಿಗೆ ಅಜ್ಞಾನ ಮೂಲಕ ಬಂದಿದೆ, (ಪ್ರಮಾದಾತ್ಮಕತ್ವಾತ್ ಬಂಧಸ್ಯ). ಜೀವನಲ್ಲಿ ಭಗವದಧೀನವಾದ ಕರ್ತೃತ್ವಾದಿಗಳುಂಟು. ಆದರ ಭಗವದಧೀನವಾದುದನ್ನು ತನ್ನದೆಂದೇ ತಿಳಿಯುವದು, ತಾನೇ ಸ್ವತಂತ್ರ ಎಂದು ಭಾವಿಸುವದು ಅಜ್ಞಾನ, ಭ್ರಮ.

**ಮಿಥ್ಯಾಯೋಃ ಸಾಧಕತ್ವಂ ಚ ನ ಸಿದ್ಧಂ ಪ್ರತಿವಾದಿನಃ ||೧೭||**

**ಅವತರಣಿಕೆ :** ಮಿಥ್ಯಾತ್ವವು "ನೇಹನಾನಾಸ್ತಿ" ಶ್ರುತಿಗೆ ಬಂದರೂ ಸುಳ್ಳಾದ ಆ ಶ್ರುತಿಯು "ಬಂಧವು ಮಿಥ್ಯಾ" ಎಂದು ಸಾಧಿಸುತ್ತದೆ ಎಂಬ ಮಾಯಾವಾದಿಗಳ ಮತವನ್ನು ಖಂಡಿಸುತ್ತಾರೆ.

**ಅನುವಾದ :** ಸುಳ್ಳಾದುದಕ್ಕೆ ಸಾಧಕತ್ವವು ಪ್ರತಿವಾದಿಗೆ ಎಂದರೆ, ತತ್ವವಾದಿಗೆ ಸಿದ್ಧಾಂತಿಗೆ ಸಮ್ಮತವಿಲ್ಲ.

**ವಿವರಣೆ :** ಸ್ವತಃ ಅಸ್ತಿತ್ವ ವಸ್ತು ಯಾವದೇ ಧರ್ಮವಿಲ್ಲದ ಸುಳ್ಳಾದ ವಸ್ತು ಬಂಜೆಯ ಮಗನ ವಾಕ್ಯದಂತೆ ಏನನ್ನೂ ಸಾಧಿಸಲಾರದು ಎಂದು ಸಯುಕ್ತಿಕವಾಗಿ ಇಲ್ಲಿ ಪ್ರತಿಪಾದಿಸಲಾಗಿದೆ. ಸುಳ್ಳಾದುದಕ್ಕೆ ಸಾಧಕತ್ವವನ್ನು ನಾವು ಒಪ್ಪಿಲ್ಲ.

**ಮಿಥ್ಯಾಯೋಃ ಎಂಬ ಪ್ರಯೋಗ ಹೇಗೆ ? :** ಮಿಥ್ಯಾ ಎಂಬುದು ಅವ್ಯಯ. ಆದ್ದರಿಂದ ಮಿಥ್ಯಾಯೋಃ ಎಂಬ ರೂಪ ಆಗುವದಿಲ್ಲ ಎಂದು ಆಕ್ಷೇಪ ಬಂದರೆ ಅದನ್ನು ಹೀಗೆ ಪರಿಹರಿಸಬಹುದು. ಮಿಥ್ಯಾಯೋಃ ಎಂಬ ಪದವನ್ನು ಮಿಥ್ಯಾ ಯೋಃ ಎಂದು ಒಡೆಯಬೇಕು. ಯಾವ ಶ್ರುತಿ ವಾಕ್ಯಗಳು ಮಿಥ್ಯಾ ಇರುವವೋ ಅವುಗಳಿಗೆ ಸಾಧಕತ್ವ ಇಲ್ಲವೆಂದು ಅರ್ಥ. ಅಥವಾ ಮಿಥ್ಯಾಯೋಃ ಎಂಬುದನ್ನು ಚಿರೇಣ ಚಿರಾತ್ ಎಂಬಂತೆ ವಿಭಕ್ತಿ ಪ್ರತಿರೂಪಕ (ವಿಭಕ್ತಿ ಸದೃಶ) ಎಂದು ತಿಳಿಯಬೇಕು. ಅಥವಾ ಮೃಷಾ ಎಂಬಂತೆ ಮಿಥ್ಯಾ ಎಂಬುದು ಸುಳ್ಳು ಮಾತನಾಡುವ ಸ್ತ್ರೀಯ ಹೆಸರು ಎಂದು ಇಟ್ಟುಕೊಳ್ಳಬಹುದು.

**ತಚ್ಚ ಮಿಥ್ಯಾಪ್ರಮಾಣೇನ ಸಹಾ ವಾ ಸಾಧ್ಯತೇ ತ್ವಯಾ**
**ಸಹಾ ಚೇತ್ ದ್ವೈತಸಿದ್ಧಿಃ ಸ್ಯಾತ್, ನ ಸಿದ್ಧಂ ಚಾನ್ಯಸಾಧನಂ ||೧೮||**

**ಅವತರಣಿಕೆ :** ಸುರಭಿ ಚಂದನಂ ಎಂಬಂತೆ ಮಿಥ್ಯಾತ್ವ –ಸಾಧಕತ್ವ ಹೀಗೆ ಉಭಯ ವಿಶಿಷ್ಟ ಸಮಾಹಾರಾತ್ಮಕ ಜ್ಞಾನ ಪ್ರಮಾಣ ಎಂದು ಪೂರ್ವಪಕ್ಷಿಯು ವಾದಿಸಿದರೆ ಅದು ಅಯುಕ್ತವೆಂದು ಹೇಳುತ್ತಾರೆ.

**ಅನುವಾದ :** "ಸುಳ್ಳಾದುದು ಸಾಧಕ" ಎಂಬುದನ್ನು ನೀನು ಸುಳ್ಳು ಪ್ರಮಾಣದಿಂದ ಸಾಧಿಸುವಿಯಾ, ಅಥವಾ ಸತ್ಯಪ್ರಮಾಣದಿಂದ ಸಾಧಿಸುವಿಯಾ ಎಂದು ಕೇಳುತ್ತೇವೆ. ಸತ್ಯಪ್ರಮಾಣದಿಂದ ಸಾಧಿಸುವದಾದರೆ ದ್ವೈತ ಸಿದ್ಧಿಸುತ್ತದೆ (ಏಕೆಂದರೆ ಬ್ರಹ್ಮ ಒಂದು ಸತ್ಯ ಮತ್ತು ಪ್ರಮಾಣವೊಂದು ಸತ್ಯ, ಹೀಗೆ ಎರಡು ಸತ್ಯಗಳಾಗುತ್ತವೆ.) ಸುಳ್ಳು ಪ್ರಮಾಣದಿಂದ ಸಾಧಿಸುವದಾದರೆ ಆ ಮಿಥ್ಯಾ ಪ್ರಮಾಣಕ್ಕೆ ಸಾಧಕತ್ವವು ಇದೆ ಎಂದು ನೀನು ಹೇಳುವದು ಸಿದ್ಧಾಂತಿಗಳಾದ ನಮಗೆ ಸಮ್ಮತವಿಲ್ಲ. (ನ ಸಿದ್ಧಂ).

**ವಿವರಣೆ : i)** ಮಿಥ್ಯಾ ಭೂತವಾದರೂ ಸಾಧಕವಾಗುತ್ತದೆ ಎಂಬುದನ್ನು ಪೂರ್ವಪಕ್ಷಿಯು ಸುರಭಿ ಚಂದನಂ ಎಂಬ ದೃಷ್ಟಾಂತದಿಂದ ಸಮರ್ಥಿಸುತ್ತಾನೆ. ಹೇಗೆಂದರೆ, ಘ್ರಾಣೇಂದ್ರಿಯದಿಂದ ಚಂದನವು ಸುರಭಿ ಎಂದರೆ ಚಂದನ ಕಟ್ಟಿಗೆ ಸುವಾಸನೆಯುಳ್ಳದ್ದು ಎಂಬ ಜ್ಞಾನವಾಗುತ್ತದೆ. ಈ ಜ್ಞಾನಸಂಸ್ಕಾರ ಹುಟ್ಟಿದ ನಂತರ ಚಂದನವನ್ನು ಕಣ್ಣಿನಿಂದ ನೋಡಿದೊಡನೆ "ಚಂದನಂ ಸುರಭಿ" ಎಂಬ ವಿಶಿಷ್ಟ ಜ್ಞಾನವು ಹುಟ್ಟುತ್ತದೆ. ಇದರಂತೆ ಕಣ್ಣಿನಿಂದ ವಸ್ತುಗಳ ರೂಪ ಜ್ಞಾನವಾಗುತ್ತದೆ ಎಂದರೆ ಪ್ರತ್ಯಕ್ಷವು ಸಾಧಕ ಎಂಬ ಜ್ಞಾನವು ಹುಟ್ಟುತ್ತದೆ. ಮುಂದೆ "ನೇಹ ನಾನಾಸ್ತಿ" ಶ್ರುತಿ ಬಲದಿಂದ ಪ್ರತ್ಯಕ್ಷ ಮಿಥ್ಯಾ ಎಂಬ ಜ್ಞಾನ ಹುಟ್ಟುತ್ತದೆ. ಆದರೆ ಪ್ರತ್ಯಕ್ಷ ಸಾಧಕ ಎಂಬ ಸಂಸ್ಕಾರ ಇದ್ದೇ ಇದೆ. ಹೀಗಾಗಿ ಮಿಥ್ಯಾ ಭೂತವಾದ ಪ್ರತ್ಯಕ್ಷಾದಿಗಳು ಸಾಧಕ ಎಂಬ ವಿಶಿಷ್ಟ ಜ್ಞಾನ ಹುಟ್ಟುತ್ತದೆ. ಎಂದರೆ, ಮಿಥ್ಯಾತ್ವ-ಸಾಧಕತ್ವ ಹೀಗೆ ಉಭಯ ವಿಶಿಷ್ಟ ಜ್ಞಾನ ಹುಟ್ಟುತ್ತದೆ. ಈ ರೀತಿ ಬರುವ ಪೂರ್ವಪಕ್ಷಿಯ ವಾದದ ನಿರಾಕರಣೆ ಈ ಶ್ಲೋಕದಲ್ಲಿದೆ.

ಮಾಯಾವಾದಿಯು ಹೇಳಿದ ಪ್ರಮಾಣದ್ವಯ "ಸಮಾಹಾರ" ಪ್ರಮಾಣವು ಸತ್ಯ ಆದರೆ ಅದ್ವೈತ ಹಾನಿಯಾಗುತ್ತದೆ. ಏಕೆಂದರೆ ಬ್ರಹ್ಮ ಮತ್ತು ಈ ಸಮಾಹಾರಾತ್ಮಕ ಪ್ರಮಾಣ ಹೀಗೆ ಎರಡು ಸತ್ಯವಾಗುತ್ತವೆ. ಇನ್ನು ಈ ಪ್ರಮಾಣ ಮಿಥ್ಯಾ ಆದರೆ ಅದರ ಸಾಧಕತ್ವವು ಸಿದ್ಧಾಂತಿಗೆ ಸಮ್ಮತವಿಲ್ಲ. [ನೇಹ ನಾನಾಸ್ತಿ ಎಂಬ ಶ್ರುತಿ ಸುಳ್ಳಾದರೆ ಅದು ಏನನ್ನೂ ಸಾಧಿಸಲಾರದು ಎಂಬ ಸಿದ್ಧಾಂತಿಗಳ ತರ್ಕವು ಆಭಾಸಕವೆಂದು ಮಾಯಾವಾದಿ ವಾದಿಸುತ್ತಾನೆ ಸ್ವಪ್ನಗಳು ಸುಳ್ಳಾದರೂ ಅವು ಶುಭಾಶುಭ ಸೂಚಕವಾಗಿವೆ. ಅದರಂತೆ ರೇಖೆಗಳಲ್ಲಿ ಆರೋಪಿತ ವರ್ಣಗಳು, ವರ್ಣಗಳಲ್ಲಿಯ ದೀರ್ಘತ್ವ ಮತ್ತು ಮಿಥ್ಯಾಭೂತ ಪ್ರತಿಬಿಂಬ ಕಾರ್ಯಕಾರಿಯಾಗಿವೆ. ಇದೇ ರೀತಿ ಸೂರ್ಯನಲ್ಲಿ ವಸ್ತುತಃ ಇಲ್ಲದ ಆದರೆ ತೋರುವ ಛಿದ್ರಗಳು (ಸವಿತೃ-ಸುಷಿರ ದರ್ಶನಂ) ಆರು ತಿಂಗಳೊಳಗೆ ಮರಣ ಸಂಭವಿಸುವ ಸೂಚಕವಾಗಿವೆ. ಹೀಗೆ ಸುಳ್ಳು ಪದಾರ್ಥ ಮತ್ತು ಅದರ ಅಸಾಧಕತ್ವಗಳಲ್ಲಿ (ಆಪಾದಕ ಆಪಾದ್ಯಗಳಲ್ಲಿ) ವ್ಯಾಪ್ತಿ ಇಲ್ಲವಾದ್ದರಿಂದ ಸಿದ್ಧಾಂತಿಗಳ ತರ್ಕದ ಮೂಲವೇ ಶಿಥಿಲವಾಗಿ ಅದು ಆಭಾಸ ತರ್ಕ ಎಂದು ಮಾಯಾವಾದಿ ಪ್ರತಿಪಾದಿಸುತ್ತಾನೆ. ಆದರೆ ಈ ವಾದದಲ್ಲಿ ಹುರುಳಿಲ್ಲ ಎಂದು ಸಯುಕ್ತಿಕವಾಗಿ ಸಾಧಿಸುತ್ತಾರೆ. ಮಾಯಾವಾದಿಯು ಉದಾಹರಿಸಿದ ದೃಷ್ಟಾಂತಗಳು ಸುಳ್ಳು ವಸ್ತುಗಳ ಬಗ್ಗೆ ಸರ್ವಥಾ ಇರುವದಿಲ್ಲ. ಏಕೆಂದರೆ ಸ್ವಪ್ನ ಪದಾರ್ಥಗಳು ಸತ್ಯವೇ. ವರ್ಣಗಳು ರೇಖೆಗಳಲ್ಲಿ ಸಂಕೇತಿತವಾಗಿವೆ. ಅವು ಅರ್ಥವನ್ನು ತಂದು ಕೊಡುತ್ತವೆ. ಸ್ವರಗಳಲ್ಲಿಯ ದೀರ್ಘತ್ವವು ಧ್ವನಿಯಲ್ಲಿಯಂತೆ ಸ್ವಾಭಾವಿಕವೇ. ಇದರಂತೆ ಪ್ರತಿಬಿಂಬ ಸತ್ಯವೇ

ಆಗಿದೆ ಸೂರ್ಯನಲ್ಲಿ ತೋರಿದ ಛಿದ್ರಗಳು ಮರಣಕ್ಕೆ ಕಾರಣವಲ್ಲ. , ಆದರೆ ಛಿದ್ರಜ್ಞಾನ ಮರಣಕ್ಕೆ ಕಾರಣ. ಉದಾ : ಸರ್ಪಭ್ರಮದಲ್ಲಿ (ಹಗ್ಗನೋಡಿ ಹಾವು ಎಂಬಲ್ಲಿ) ಸರ್ಪಜ್ಞಾನವೇ ಓಡಿಹೋಗಲಿಕ್ಕೆ ಕಾರಣವಾಗುತ್ತದೆ. ಆದ್ದರಿಂದ "ನೇಹ ನಾನಾಸ್ತಿ" ಶ್ರುತಿ ಸುಳ್ಳಾದರೆ ಅದು ಏನನ್ನೂ ಸಾಧಿಸಲಾರದು ಎಂದು ನಾವು ಹೇಳಿದ್ದು ಸುಸ್ಥಿತವಾಗಿದೆ. ಸತ್ಯವಾದುದೇ ಸಾಧಕ.]

**ಸಾಧಕತ್ವಂ ಸತಸ್ತೇನ ಸಾಕ್ಷಿಣಾ ಸಿದ್ಧಿಮಿಚ್ಛತಾ ಸ್ವೀಕೃತಂ ಹಿ**
**ಅವಿಶೇಷಸ್ಯ ಸಾಧ್ಯಾ ಸಾಧಕತಾ ಪುನಃ ........................||೧೯||**
**ತಚ್ಚಾವಿಶೇಷಮಾನೇನ ಸಾಧ್ಯಮಿತ್ಯನವಸ್ಥಿತಿಃ ||೨೦೮||**

**ಅವತರಣಿಕೆ :** ಮಿಥ್ಯಾಭೂತವಾದುದಕ್ಕೆ ಸಾಧಕತ್ವವಿದೆ ಎಂದು ಪೂರ್ವಪಕ್ಷಿಯೂ ಇಲ್ಲವೆಂದು ಸಿದ್ಧಾಂತಿಯೂ ವಾದಿಸುತ್ತಾರೆ. ಹೀಗೆ ಪ್ರಾರಂಭದಲ್ಲಿಯೇ ಬುದ್ಧಿ ಕಲುಷಿತವಾದಾಗ ವಾದ ವಿವಾದ ನಡೆಯುವದು ಹೇಗೆ ? ಆದ್ದರಿಂದ ಪ್ರಮಾಣ ಸತ್ಯ ಅಥವಾ ಅಸತ್ಯ ಎಂಬುದನ್ನು ಪರಿಶೀಲಿಸದೆ, ವಿಚಾರ ಆರಂಭವಾಗಲಿ, ಕಥಾರಂಭವಾಗಲಿ ಎಂಬ ಮಾಯಾವಾದಿಯ ವಾದಸರಣಿ ಅಗ್ರಾಹ್ಯವೆಂದೂ ಅವನೇ ಸತ್ಯಕ್ಕೆ ಸಾಧಕತ್ವವನ್ನು ಒಪ್ಪಿರುವದಾಗಿಯೂ ಇಲ್ಲಿ ಹೇಳಲಾಗಿದೆ.

**ಅನುವಾದ :** ಸತ್ಯಪ್ರಮಾಣಕ್ಕೆ ಸಾಧಕತ್ವವಿದೆ ಎಂಬುವನ್ನು ಭಾವರೂಪ ಅಜ್ಞಾನವು ಸಾಕ್ಷಿಯಿಂದ ಸಿದ್ಧಿಸುತ್ತದೆ ಎಂಬಲ್ಲಿ ಮಾಯಾವಾದಿ ಒಪ್ಪಿಕೊಂಡಿದ್ದಾನೆ. ಆದರೆ ನಿರ್ವಿಶೇಷ ಸಾಕ್ಷಿಗೆ ಸಾಧಕತ್ವವಿದೆ ಎಂಬುದನ್ನು ಮಾಯಾವಾದಿಯು ಪರರನ್ನು ಕುರಿತು ಇನ್ನೂ ಸಾಧಿಸಬೇಕು (ಸಾಧ್ಯಾ). ಇನ್ನು ನಿರ್ವಿಶೇಷ ಸಾಕ್ಷಿಗೆ ಸಾಧಕತ್ವವಿದೆ ಎಂಬುದನ್ನು ನಿರ್ವಿಶೇಷ ಪ್ರಮಾಣದಿಂದ ಸಾಧಿಸುವದಾದರೆ ಅನವಸ್ಥಾ ದೋಷ ಬರುತ್ತದೆ.

**ವಿವರಣೆ :** ಪ್ರಮಾಣದ ಸತ್ಯಾಸತ್ಯವನ್ನು ಪರಿಶೀಲಿಸದೆ ವಿಚಾರ ಸಾಗಲಿ ಎಂಬ ಪೂರ್ವಪಕ್ಷಿಯ ಸೂಚನೆ ಅಗ್ರಾಹ್ಯವೇ. ಏಕೆಂದರೆ ಸತ್ಯಕ್ಕೆ ಸಾಧಕತ್ವವನ್ನು ಮಾಯಾವಾದಿ ಒಪ್ಪಿದ್ದಾನೆ. ಭಾವರೂಪ ಅಜ್ಞಾನವು ಅಹಂ ಅಜ್ಞಃ ಎಂಬುದು ಸಾಕ್ಷಿ ಪ್ರತ್ಯಕ್ಷವೇದ್ಯ ಎಂದು ಅವನು ಹೇಳಿದ್ದಾನೆ. ನಾವೂ ಕೂಡ ಸಾಕ್ಷಿ ಪ್ರತ್ಯಕ್ಷದಿಂದಲೇ ದುಃಖಾದಿ ಬಂಧವು ಸತ್ಯವೆಂದು ಹೇಳುತ್ತೇವೆ. ಈ ರೀತಿ ಉಭಯವಾದಿ ಸಮ್ಮತವಾದ ಸಾಕ್ಷಿಪ್ರತ್ಯಕ್ಷವೆಂಬ ಸತ್ಯ ಪ್ರಮಾಣವಿರುವಾಗ ಅದನ್ನು ಆಧರಿಸಿ ವಿಚಾರ ನಡೆಯಬೇಕು.

ಇನ್ನು ವಿಚಾರ ಮಾಡಿದಲ್ಲಿ ಮಾಯಾವಾದಿಯ ಮತದ ಪ್ರಕಾರ ಭಾವ ರೂಪ ಅಜ್ಞಾನವು ಸಾಕ್ಷಿಯಿಂದ ಸಿದ್ಧಿಸಲಾರದು. ಏಕೆಂದರೆ ಸಾಕ್ಷಿಯಲ್ಲಿ ಯಾವ

ಧರ್ಮವೂ (ವಿಶೇಷ) ಇಲ್ಲ. ಅದು ನಿರ್ವಿಶೇಷ ಎಂದು ಅವನು ಒಪ್ಪಿದ್ದಾನೆ. ನಿರ್ವಿಶೇಷಕ್ಕೆ ಸಾಧಕತ್ವವಿದೆ ಎಂಬುದನ್ನು ಪರರನ್ನು ಕುರಿತು ಅವನು ಮೊದಲು ಸಿದ್ಧಮಾಡಬೇಕು. ನಂತರ ನಿರ್ವಿಶೇಷ ಸಾಕ್ಷಿಯಿಂದ ಭಾವರೂಪ ಅಜ್ಞಾನ ಸಿದ್ಧಿಸುವದು.

ನಿರ್ವಿಶೇಷವು ಸಾಧಕವೆಂಬುದನ್ನು ಮಾಯಾವಾದಿಯು ಸಾಧಿಸುವದಾದರೆ ಅದನ್ನು ಯಾವ ಪ್ರಮಾಣದಿಂದ ಸಾಧಿಸುತ್ತಾನೆ ? ಸವಿಶೇಷ ಪ್ರಮಾಣದಿಂದಲೋ? ನಿರ್ವಿಶೇಷ ಪ್ರಮಾಣದಿಂದಲೋ ? ಸವಿಶೇಷ ಪ್ರಮಾಣದಿಂದ ಸಾಧಿಸಲು ಬರುವದಿಲ್ಲ. ಏಕೆಂದರೆ ಅವನ ಪ್ರಕಾರ ಸವಿಶೇಷ ಪ್ರಮಾಣವು ಆತ್ಮಾತಿರಿಕ್ತವಾದುದರಿಂದ ಮಿಥ್ಯಾ. ಮಿಥ್ಯಾಭೂತವಾದುದು ಏನನ್ನೂ ಸಾಧಿಸಲಾರದೆಂದು ಈ ಮೊದಲೇ ತತ್ತ್ವವಾದಿ ಹೇಳಿದ್ದಾನೆ.

ನಿರ್ವಿಶೇಷವು ಸಾಧಕವೆಂಬುದನ್ನು ನಿರ್ವಿಶೇಷ ಪ್ರಮಾಣದಿಂದ ಸಾಧಿಸುವದಾದರೆ, ಆ ನಿರ್ವಿಶೇಷ ಪ್ರಮಾಣ ಯಾವುದು ? ಸಾಕ್ಷಿಯೋ ? ಸಾಕ್ಷಿಭಿನ್ನವೊ ? ಸಾಕ್ಷಿಯಾದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಸಾಕ್ಷಿಗೆ ಸಾಧಕತ್ವ ಸಿದ್ಧಿಸಿದರೆ ನಿರ್ವಿಶೇಷಕ್ಕೆ ಸಾಧಕತ್ವ ಸಿದ್ಧಿಸುತ್ತದೆ ಮತ್ತು ನಿರ್ವಿಶೇಷಕ್ಕೆ ಸಾಧಕತ್ವವು ಸಿದ್ಧಿಸಿದರೆ ಸಾಕ್ಷಿಗೆ ಸಾಧಕತ್ವವು ಸಿದ್ಧಿಸುತ್ತದೆ.

ಇನ್ನು ನಿರ್ವಿಶೇಷ ಪ್ರಮಾಣವು ಸಾಕ್ಷಿಭಿನ್ನವಾಗಲಾರದು. ಏಕೆಂದರೆ ಸಾಕ್ಷಿಭಿನ್ನವಾದ ನಿರ್ವಿಶೇಷ ಇಲ್ಲವೇ ಇಲ್ಲ. ಅದು ಇನ್ನೊಂದು ನಿರ್ವಿಶೇಷದಿಂದ ಗ್ರಹಿಸಲ್ಪಟ್ಟರೆ, ಅದು ಏತರಿಂದ ಗ್ರಹಿಸಲ್ಪಡುತ್ತದೆ? ಇನ್ನೊಂದರಿಂದ ಎಂದರೆ ಅದು ಏತರಿಂದ, ಹೀಗೆ ಅನವಸ್ಥಾ ದೋಷ ಬರುತ್ತದೆ.

**ಅನಂಗೀಕುರ್ವತಾಂ ವಿಶ್ವಸತ್ಯತಾಂ ತನ್ನ ವಾದಿತಾ**
**ತಸ್ಮಾತ್ ವ್ಯವಹೃತಿಃ ಸರ್ವಾ ಸತ್ಯೇತ್ಯೇವ ವ್ಯವಸ್ಥಿತಾ ।**
**ವ್ಯಾವಹಾರಿಕಮೇತಸ್ಮಾತ್ ಸತ್ಯಮಿತ್ಯೇವ ಚಾಗತಂ ॥೨೧॥**

**ಅವತರಣಿಕೆ** : 17ನೇ ಶ್ಲೋಕದಲ್ಲಿ ಪ್ರಾರಂಭ ಮಾಡಿದ ಖಂಡನೆಯನ್ನು ಉಪಸಂಹಾರ ಮಾಡುತ್ತಾರೆ.

**ಅನುವಾದ** : ಸುಳ್ಳಿಗೆ ಸಾಧಕತ್ವವಿಲ್ಲವಾದ್ದರಿಂದ (ತತ್ =ತಸ್ಮಾತ್) ಜಗತ್ತು ಸತ್ಯವಲ್ಲ, ಮಿಥ್ಯಾ ಎಂದು ಪ್ರತಿಪಾದಿಸುವ ಸುಳ್ಳಾದ "ನೇಹನಾನಾಸ್ತಿ" ಮೊದಲಾದ ವಾಕ್ಯಗಳಿಗೆ ಸಾಧಕತ್ವ ಬರಲಾರದು. (ವಾದಿತಾ–ಸಾಧಕತಾ). ಅಥವಾ ಸುಳ್ಳಿಗೆ ಸಾಧಕತ್ವವಿಲ್ಲವಾದ್ದರಿಂದ ಜಗತ್ತಿಗೆ ಸತ್ಯತ್ವವನ್ನು ಒಪ್ಪದ ಚಾರ್ವಾಕ–ಬೌದ್ಧ–ಮಾಯಾವಾದಿಗಳು "ಕಥಕ" ಆಗದಿರಲಿ. (ವಾದಿತಾ =ಕಥಕತಾ) ಆದ್ದರಿಂದ ಕಥಾಂಗವಾದ ಪ್ರಮಾಣಾದಿಗಳು (ವ್ಯವಹೃತಿಃ) ಸತ್ಯವೆಂದೇ

ವ್ಯವಸ್ಥಿತವಾಗುತ್ತವೆ. ಮತ್ತು ವ್ಯವಹಾರ ವಿಷಯ ಕೂಡ (ವ್ಯಾವಹಾರಿಕಂ ಅಪಿ) ಎಂದರೆ ದುಃಖಾದಿ ಬಾಧ ಮತ್ತು ಜಗತ್ತು ಸತ್ಯವೆಂದೇ ಸಿದ್ಧವಾಯಿತು.

**ವಿವರಣೆ :** ಇಲ್ಲಿ ವಾದಿತಾ ಶಬ್ದಕ್ಕೆ i) ಸಾಧಕತಾ ಮತ್ತು ii) ಕಥಕತಾ ಎಂದು ಎರಡು ಅರ್ಥಗಳಿವೆ, (i) ವಾದಿತಾ = ಸಾಧಕತಾ. ಮಾಯಾವಾದಿಗಳ ಪ್ರಕಾರ ಪರಬ್ರಹ್ಮ ಅಥವಾ ಆತ್ಮವೊಂದೇ ಸತ್ಯ ಉಳಿದುವೆಲ್ಲ ಮಿಥ್ಯಾ. ಆದ್ದರಿಂದ, ಆತ್ಮಾತಿರಿಕ್ತವಾದ "ನೇಹ ನಾನಾಸ್ತಿ" ಮೊದಲಾದ ಶ್ರುತಿಯು ಮಿಥಾ ಆಗುತ್ತದೆ. ಸುಳ್ಳಿಗೆ ಸಾಧಕತ್ವವಿಲ್ಲ. ಆದ್ದರಿಂದ ಸುಳ್ಳಾದ ನೇಹ ನಾನಾಸ್ತಿ ಶ್ರುತಿಯು ಏನನ್ನೂ ಸಾಧಿಸಲಾರದು. ಎಂದರೆ ಅದ್ವೈತಿಗಳು ಹೇಳುವಂತೆ ಈ ಶ್ರುತಿಯಿಂದ ಭೇದದ (ನಾನಾ) ನಿರಾಕರಣೆ ಮತ್ತು ತನ್ಮೂಲಕ ಜಗನ್ಮಿಥ್ಯಾತ್ವ ಸಿದ್ಧಿಸಲಾರದು ಎಂಬ ಅನಿಷ್ಟ ಪ್ರಸಂಗ ಮಾಯಾವಾದಿಗಳಿಗೆ ಬರುತ್ತದೆ. (ii) ವಾದಿತಾ = ಕಥಕತಾ. ಮಾಯಾವಾದಿಗಳಿಗೆ ಇನ್ನೊಂದು ಅನಿಷ್ಟ ಪ್ರಸಂಗವೂ ಬರುತ್ತದೆಂದು ನಿರೂಪಿಸುತ್ತಾರೆ. ಆತ್ಮಬಿಟ್ಟು ಉಳಿದುದೆಲ್ಲ ಸುಳ್ಳಾದರೆ ಆತ್ಮಾತಿರಿಕ್ತವಾದ ಪ್ರಮಾಣಗಳೂ ಸುಳ್ಳಾಗುತ್ತವೆ. ಇದರಿಂದಾಗಿ ಪ್ರಮಾಣಗಳಿಂದ ನಡೆಯುವ ವಾಗ್ ವ್ಯವಹಾರ (ವಾದಕಥೆ, ಚರ್ಚೆ. ಕಥಾ, ವಾದವಿವಾದ) ನಡೆಯದೆ ಹೋಗಲಿ. ಹೀಗಾಗಿ ಮಾಯಾವಾದಿ (ಚಾರ್ವಾಕ–ಬೌದ್ಧ ಮು.) ವಾದಿ ಆಗದೆ ಹೋಗಲಿ ಎಂಬ ಇನ್ನೊಂದು ಅನಿಷ್ಟ ಪ್ರಸಂಗ ಬರುತ್ತದೆ. ಪರನಿಗಾದರೋ ವಾದಿ ಆಗುವ ಅಭಿಮಾನವಿದೆ. ಆದ್ದರಿಂದ ಅನಿಷ್ಟ ಪ್ರಸಂಗ ಪರಿಹರಿಸಲು ಅವನು ಪ್ರಮಾಣಾದಿಗಳು ಸತ್ಯವೆಂದು ಒಪ್ಪಬೇಕಾಗುತ್ತದೆ. ಪ್ರಮಾಣಗಳು ಸತ್ಯವಾದರೆ, ವ್ಯವಹಾರ ವಿಷಯವಾದ ಸಂಸಾರ ಬಂಧ, ದುಃಖಾದಿಗಳು ಸತ್ಯವಾಗುತ್ತವೆ.

## ಕಥಕವಾದ

**ಪೀಠಿಕೆ :** ವಿದ್ವಾಂಸರು ನಡೆಸುವ ಚರ್ಚೆಗೆ, ವಾದವಿವಾದಕ್ಕೆ, ವಿದ್ವದ್ಗೋಷ್ಠಿಗೆ, ವಾದಕಥೆಗೆ, ವಾಗ್ವ್ಯವಹಾರಕ್ಕೆ ಕಥಾ ಎನ್ನುವರು (ಕಥಾ ನಾಮ ಅನೇಕ ವಿದ್ವತ್ ಕರ್ತೃಕ ವಿಚಾರಗೋಚರ–ವಾಗ್ವ್ಯವಹಾರ :) ಸಾಮಾನ್ಯವಾಗಿ ಇದರಲ್ಲಿ ಸಭಾಪತಿ, ಪ್ರಾಶ್ನಿಕರು (Referees) ವಾದಿಪ್ರತಿವಾದಿಗಳು ಮತ್ತು ಸಭಿಕರು ಇರುತ್ತಾರೆ. ಕಥೆಯನ್ನು ಆರಂಭಿಸುವ ವಾದಿ ಪ್ರತಿವಾದಿಗಳಿಗೆ ಕಥಕರೆಂದು ಕರೆಯುತ್ತಾರೆ. ವಾದ-ಜಲ್ಪ–ವಿತಂಡವೆಂದು ಕಥಾ ಮೂರು ವಿಧವಾಗಿದೆ. ತತ್ವನಿರ್ಣಯವಾಗಬೇಕೆಂಬ ಉದ್ದೇಶದಿಂದ ಗುರು ಶಿಷ್ಯರಲ್ಲಿ ಅಥವಾ ಸಜ್ಜನರಲ್ಲಿ ನಡೆಯುವ ವಾದ ವಿವಾದಕ್ಕೆ **"ವಾದ"** ಎನ್ನುತ್ತಾರೆ. (ತತ್ವ ಬುಭುತ್ಸು ಕಥಾ). ಇದರಲ್ಲಿ ಸಭಾಪತಿ ಮತ್ತು ಪ್ರಾಶ್ನಿಕರು ಇರುವ ಅವಶ್ಯಕತೆ ಇಲ್ಲ. ಏಕೆಂದರೆ ಈ ವಾದದಲ್ಲಿ ಚರ್ಚೆಯು ತತ್ವ ನಿರ್ಣಯಕ್ಕಾಗಿ ಸೌಹಾರ್ದದಿಂದ ನಡೆಯುತ್ತದೆ. ಜಯಾ

ಪಜಯ, ದ್ರವ್ಯಾದಿ ಸಂಪಾದನೆ ಮೊದಲಾದವುಗಳ ಪ್ರಸಕ್ತಿಯೇ ಇಲ್ಲಿ ಇರುವದಿಲ್ಲ. **"ಜಲ್ಪ"** ಎಂದರೆ ಖ್ಯಾತಿ (ಪ್ರಸಿದ್ಧಿ), ಲಾಭ, ಪೂಜಾ, ಸ್ಪರ್ಧೆ ಮೂಲಕ ಸಜ್ಜನರಲ್ಲಿಯೇ ನಡೆಯುವ ವಾದ ವಿವಾದ ಅಥವಾ ಚರ್ಚೆ. (ಸ್ವಪಕ್ಷ ಸಾಧನೋಪೇತ ವಿಜಿಗೀಷುಕಥಾ) ಇದರಲ್ಲಿ ಸಭಾಪತಿ ಮತ್ತು ಪ್ರಾಶ್ನಿಕರು ಇರಲೇಬೇಕು. ಸಜ್ಜನರು ಮತ್ತು ಅಸಜ್ಜನರ ನಡುವೆ ನಡೆಯುವ ವಾದ ವಿವಾದಕ್ಕೆ **"ವಿತಂಡ"** ಎನ್ನುವರು. ಇದರಲ್ಲಿ ತತ್ವವನ್ನು ಬಚ್ಚಿಡಲಾಗುತ್ತದೆ. ಜಯಾಪಜಯ, ಪರದೂಷಣ, ಪಣಕ್ಕಿಟ್ಟ ದ್ರವ್ಯ ಸಂಪಾದನೆ ಇವೇ ಇದರ ಮುಖ್ಯ ಗುರಿ. (ಸ್ವಪಕ್ಷ ಸಾಧನಹೀನ–ವಿಜಗೀಷು ಕಥಾ) ಇಲ್ಲಿ ಜಯಾಪಜಯ ನಿರ್ಧರಿಸಲು ಸಭಾಪತಿ ಸಭಿಕರು ಮತ್ತು ಪ್ರಾಶ್ನಿಕರು ಇರಲೇಬೇಕು. ಕಥಾವಲ್ಲಿಯ ಪ್ರಾಶ್ನಿಕರು ವಿಷ್ಣುಭಕ್ತರೂ, ರಾಗದ್ವೇಷರಹಿತರೂ, ಸರ್ವವಿದ್ಯಾ ವಿಶಾರದರೂ ಇರಬೇಕು. ಇವರು ಯಾವಾಗಲೂ ವಿಷಯ ಸಂಖ್ಯೆಯಲ್ಲಿರುತ್ತಾರೆ. ಮತ್ತು ಸಭಾಪತಿಗೆ ಸೂಕ್ತ ನಿರ್ಣಯ ಕೈಕೊಳ್ಳಲು ನೆರವಾಗುತ್ತಾರೆ.

ವಾದಕಥೆ ನಡೆಯುವದು ಮುಖ್ಯವಾಗಿ ಪ್ರಮಾಣಗಳ ಆಧಾರದಿಂದ. ಈ ಪ್ರಮಾಣಗಳು ಸತ್ಯವಿದ್ದರೆ ಮಾತ್ರ ಕಥೆ ನಡೆಯುತ್ತದೆ. ಇಲ್ಲವಾದರೆ ಇಲ್ಲ. ಎಂದು ಶ್ರೀಮದಾಚಾರ್ಯರ ಸ್ಪಷ್ಟ ಅಭಿಪ್ರಾಯ. ಮಾಯಾವಾದಿಗಳಾದರೋ ಪ್ರಮಾಣಗಳು ಆತ್ಮಾರಿಕ್ತವಾದ್ದರಿಂದ ಸತ್ಯವೆಂದು ಒಪ್ಪುವದಿಲ್ಲ. ಆದ್ದರಿಂದ ಅವರಿಗೆ ಕಥಾಧಿಕಾರ ಇರದೇ ಹೋಗಲಿ, ಅವರು ಕಥಕರಾಗದೇ ಹೋಗಲಿ(ವಾದಿತಾ ನ ಸ್ಯಾತ್) ಎಂದು ಅನಿಷ್ಟ ಆಪಾದಿಸಲಾಗಿದೆ.

## ಪೂರ್ವಪಕ್ಷ

ಆದರೆ ಖಂಡನಖಂಡಖಾದ್ಯಕಾರನಾದ ಶ್ರೀಹರ್ಷನು ಕಥಾಂಗಭೂತ ಪ್ರಮಾಣಗಳು ಸತ್ಯವಿರಬೇಕಿಲ್ಲ ಎಂದು ವಾದಿಸುತ್ತಾನೆ. ಪ್ರಮಾಣಗಳು ಸತ್ಯವೆಂದು ಏಕೆ ಒಪ್ಪಬೇಕು ? (ಕಸ್ಯ ಹೇತೋಃ) ಎಂದು ಪ್ರಶ್ನಿಸಿಕೊಂಡು ನಾಲ್ಕು ವಿಕಲ್ಪ ಮಾಡುತ್ತಾನೆ.

**ವಿಕಲ್ಪ (I)** ವಾಗ್‌ವ್ಯವಹಾರ ಮತ್ತು ಪ್ರಮಾಣಗಳ ಸತ್ಯತ್ವಾಂಗೀಕಾರ ಇವುಗಳ ನಡುವೆ ವ್ಯಾಪ್ತಿ ಇದೆಯೋ (ಎಂದರೆ ಇವೆರಡು ಯಾವಾಗಲೂ ಕೂಡಿಕೊಂಡೇ ಇರುತ್ತವೆಯೋ )?

**ವಿಕಲ್ಪ (II)** ಪ್ರಮಾಣಾದಿಗಳು ಸತ್ಯವೆಂದು ಒಪ್ಪುವದು ವಾಗ್‌ವ್ಯವಹಾರಕ್ಕೆ ಕಾರಣವೋ ?

**ವಿಕಲ್ಪ (III)** ಪ್ರಮಾಣಾದಿಗಳು ಸತ್ಯವೆಂದು ಒಪ್ಪುವುದು ಲೋಕ ವ್ಯವಹಾರದಿಂದ ಸಿದ್ಧಿಸುವದೋ ?

**ವಿಕಲ್ಪ (IV)** ಪ್ರಮಾಣಾದಿಗಳ ಸತ್ಯತೆಯನ್ನು ಒಪ್ಪದಿದ್ದರೆ ತತ್ವನಿರ್ಣಯ

ವಿಜಯಾದಿಗಳ ನಿರ್ಧಾರವಾಗದೆ ಉನ್ಮತ್ತನಿಗೆ ವಿಜಯಾದಿ ಫಲ ದೊರೆಯುವ ಅತಿ ಪ್ರಸಂಗ (ಅವ್ಯವಸ್ಥೆ) ಬರುವದೋ, ಎಂದರೆ ಈ ಅತಿಪ್ರಸಂಗ ಪರಿಹರಿಸಲು ಪ್ರಮಾಣಾದಿಗಳು ಸತ್ಯವೆಂದು ಒಪ್ಪಬೇಕೋ ?

ಈ ನಾಲ್ಕೂ ವಿಕಲ್ಪಗಳು ಕೂಡುವದಿಲ್ಲವಾದ್ದರಿಂದ ಪ್ರಮಾಣಗಳ ಸತ್ಯತ್ವ ವನ್ನು ಒಪ್ಪಬೇಕಿಲ್ಲ ಎಂದು ಶ್ರೀಹರ್ಷನು ತೀರ್ಮಾನಿಸುತ್ತಾನೆ. ಹೇಗೆಂದರೆ–

ವಿಕಲ್ಪ (1) (ವ್ಯಾಪ್ತಿ ವಿಕಲ್ಪ) "ಮಾಯಾವಾದಿಯ ವ್ಯವಹಾರವು ಪ್ರಮಾಣಾದಿ ಗಳ ಸತ್ಯತೆಯನ್ನು ಒಪ್ಪಿಯೇ ಹೊರಟಿದೆ. ಏಕೆಂದರೆ ಅದು ಒಂದು ವಾಗ್ ವ್ಯವಹಾರವಾಗಿದೆ. ಭಾಟ್ಟ ಮೀಮಾಂಸಕರ ವ್ಯವಹಾರದಂತೆ"— ಎಂದು ನೀವು ಅನುಮಾನ ಪ್ರಯೋಗ ಮಾಡುತ್ತೀರಿ. ಇಲ್ಲಿ ವಾಗ್ ವ್ಯವಹಾರವೆಂದರೆ ಯಾವ ವ್ಯವಹಾರ ? (ಅ) ಎಲ್ಲ ವ್ಯವಹಾರವೋ ? ಅಥವಾ (ಬ) ಸ್ವಪಕ್ಷಸಾಧಕ– ಪರಪಕ್ಷದೂಷಕ (ಸಾಧನ ಬಾಧನ ಕ್ಷಮ) ವ್ಯವಹಾರವೋ ?

(ಅ) ಎಲ್ಲ ವ್ಯವಹಾರವೆಂದು ನಿಮಗೆ ಹೇಳಲಿಕ್ಕಾಗದು. ಹಾಗೆ ಹೇಳಿ ದರೆ ಆದರಿಂದ ನಿಮ್ಮ ಮೇಲಿನ ಅನುಮಾನದ ವ್ಯಾಪ್ತಿಗೆ (ಎಲ್ಲೆಲ್ಲಿ ವಾದಕಥೆ ಇದೆಯೋ ಅಲ್ಲಲ್ಲಿ ಪ್ರಮಾಣಾದಿಗಳನ್ನು ಸತ್ಯವೆಂದು ಒಪ್ಪಲಾಗಿದೆ ಎಂಬ ವ್ಯಾಪ್ತಿಗೆ) ವ್ಯಭಿಚಾರ ದೋಷ ಬರುತ್ತದೆ. ಏಕೆಂದರೆ ಅನುಮಾನಾದಿ ಪ್ರಮಾಣಗಳನ್ನು ಒಪ್ಪದ ಚಾರ್ವಾಕ, (ಜಗತ್ತು ಸುಳ್ಳೆಂದು ಹೇಳುವದರಿಂದ) ಪ್ರಮಾಣ ಸತ್ಯತ್ವ ವನ್ನು ಒಪ್ಪದ ಮಾಧ್ಯಮಿಕ ಬೌದ್ಧರೊಡನೆ ವಾದಕಥೆ ನಡೆಯುವದು ಪ್ರತ್ಯಕ್ಷ ಕಂಡಿದೆ. (ಬ) ಸಾಧನ ಬಾಧನ ಕ್ಷಮ ವ್ಯವಹಾರವೂ ಅಲ್ಲ. ಇಲ್ಲಿಯೂ ಬಾಧ ದೋಷ ಹಾಗೆಯೇ ಉಳಿಯುತ್ತದೆ. (ಬಾಧ-ತಾದವಸ್ಥ್ಯಾತ್) ಮೂಲತಃ ನನ್ನ ವ್ಯವಹಾರವು ಸಾಧನ ಸಮರ್ಥವೆಂಬ ಅಂಶವೇ ನಿಮಗೆ ಸಮ್ಮತವಿಲ್ಲ. (ಹೇ ತುಶ್ಚ ತವ ಅಸಿದ್ಧಃ) ಏಕೆಂದರೆ ನಾನು ಜಗತ್ತು ಸುಳ್ಳು ಎನ್ನುತ್ತೇನೆ. ಆದ್ದರಿಂದ ಸಾಧನ ಬಾಧನ ಸಮರ್ಥವೆಂಬ ಹೇತುವಿನ ಅಂಶ ಅಸಿದ್ಧವೆಂದು ಸಾಧಿಸಲು ನೀವು ಕೆಳಗಿನಂತೆ ವ್ಯತಿರೇಕ ಅನುಮಾನ ಪ್ರಯೋಗ ಮಾಡುತ್ತೀರಿ "ಮಾಯಾ ವಾದಿಯ ವಾಗ್ ವ್ಯವಹಾರವು ಸಾಧನ ಸಮರ್ಥವಾಗಿಲ್ಲ. ಏಕೆಂದರೆ ಅದು ಪ್ರಮಾಣ ಸತ್ಯತ್ವವನ್ನು ಅಂಗೀಕರಿಸಿ ಹೊರಟಿಲ್ಲ" ಎಂದರೆ ಈ ನಿಮ್ಮ ಅನು ಮಾನವು ದೋಷಯುಕ್ತವಾಗಿದೆ. ಸದ್ವಚನಾಭಾಸವು ಇಲ್ಲಿ ಉಪಾಧಿಯಾಗಿದೆ. ಏಕೆಂದರೆ ಪ್ರಮಾಣ ಸತ್ಯತ್ವವನ್ನು ಒಪ್ಪದ ನನ್ನೊಡನೆ ನಿಮ್ಮಿಂದ ವಾದ ವಿವಾದ ನಡೆಯುತ್ತದೆ. ಇನ್ನು ಪ್ರಮಾಣ ಸತ್ಯತ್ವವನ್ನು ಒಪ್ಪಿದ ನೈಯಾಯಿಕರಲ್ಲಿಯೂ ಮಂಡನ–ಖಂಡನಗಳು ನಡೆಯುತ್ತವೆ. ಆದ್ದರಿಂದ ವಾಗ್‌ವ್ಯವಹಾರವು ಸಾಧನ ಸಮರ್ಥವಾಗಲು ಪ್ರಮಾಣ ಸತ್ಯತ್ವಾಂಗೀಕಾರ ಕಾರಣವಲ್ಲ. ಆದರೆ ಸದ್ವಚನಾ ಭಾಸಗಳಂ ಎಂದರೆ ಸದ್ವಚನಗಳಂತೆ ತೋರುವ, ಆದರೆ ನಿಜವಾಗಿ ದುಷ್ಟವಿರುವ

ವಚನಗಳೇ ಕಾರಣ. (ಸತ್ಯವಚನಾಭಾಸಯೋಗಿತ್ವಂ ಉಪಾಧಿಃ).

**ಶಂಕಾ :** ಪ್ರಮಾಣಗಳು ಸತ್ಯವಿರದಿದ್ದರೆ ಅವುಗಳ ಕಾರ್ಯವಾದ, ಧರ್ಮಿಯಾದ ವಾಗ್‌ವ್ಯವಹಾರ ಹೇಗೆ ಸಿದ್ಧಿಸುತ್ತದೆ ? ಮತ್ತು ದೂಷಣಾದಿ ವ್ಯವಸ್ಥೆ ಹೇಗೆ?

**ಶ್ರೀಹರ್ಷ :** ಪ್ರಮಾಣಾದಿಗಳು ಅಸತ್ಯವೆಂದು ಒಪ್ಪಿ ವಾದಕಥೆಯನ್ನಾರಂಭಿಸ ಬೇಕೆಂದು ನಾವು ಹೇಳುವದಿಲ್ಲ. (ನ ಬ್ರೂಮೋ ವಯಂ) ಆದರೆ ಪ್ರಮಾಣ ಗಳ ಸತ್ಯಾಸತ್ಯತೆಯ ಬಗ್ಗೆ ಉದಾಸೀನರಾಗಿದ್ದುಕೊಂಡು ವಾದಕಥೆ ನಡೆಯಬೇಕು. ನಿಮ್ಮ (ಶಂಕಾಕಾರನ) ಶಂಕೆ ಎಂತಹ ಚರ್ಚೆಯ ಬಗ್ಗೆ ಇದೆ ? ಇಲ್ಲಿ ಮೂರು ಪಕ್ಷಗಳಿವೆ. (i) ಉಭಯವಾದಿಗಳು ಪ್ರಮಾಣ ಸತ್ಯತ್ವವನ್ನು ಒಪ್ಪಿ ನಡೆಸಿದ ಚರ್ಚೆ. ಇಲ್ಲಿ ಪ್ರಮಾಣಗಳು ಸತ್ಯವಿರದಿದ್ದರೆ ಎಂಬ ಶಂಕೆಗೆ ಅವಕಾಶವೇ ಇಲ್ಲ. ಇಬ್ಬರೂ ಪ್ರಮಾಣ ಸತ್ಯವೆಂದು ಒಪ್ಪಿದ್ದಾರೆ. (ii) ಉಭಯ ವಾದಿಗಳು ಪ್ರಮಾಣಗಳು ಅಸತ್ಯವೆಂದು ಒಪ್ಪಿ ನಡೆಸಿದ ಚರ್ಚೆ. ಇಲ್ಲಿಯೂ ನಿಮ್ಮ ಶಂಕೆ ಅಯುಕ್ತ. ಏಕೆಂದರೆ ಇಬ್ಬರೂ ಪ್ರಮಾಣ ಸತ್ಯವೆಂದು ಒಪ್ಪಿಲ್ಲ ವಾದ್ದರಿಂದ ಪರಸ್ಪರರು ಈ ಬಗ್ಗೆ ದೂಷಿಸುವಂತಿಲ್ಲ. (iii) ಪ್ರಮಾಣಾದಿ ಗಳು ಸತ್ಯವೆಂದು ಒಬ್ಬ ವಾದಿ, ಅವು ಅಸತ್ಯವೆಂದು ಇನ್ನೊಬ್ಬನು ಒಪ್ಪಿ ನಡೆಸಿದ ಚರ್ಚೆ. ಇಲ್ಲಿಯೂ ನಿಮ್ಮ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ಪ್ರಮಾಣಾದಿ ಗಳ ಸತ್ಯತೆಯ ಬಗ್ಗೆ ಉದಾಸೀನವಾಗಿ ಪ್ರಕೃತ ಕಥೆ ನಡೆದಂತೆ ಬೇರೊಂದು ಕಥೆಯನ್ನು ಸಹ ಪ್ರಮಾಣಾದಿಗಳ ಸತ್ಯತೆಯನ್ನು ಒಪ್ಪದಿದ್ದರೂ ನಡೆಸಲು ಬರುತ್ತದೆ. (ತಥೈವ ಕಥಾಂತರಪ್ರಸಕ್ತೇ : ಈ ವಾಕ್ಯಕ್ಕೆ ಬೇರೆ ಬೇರೆ ಟಿಪ್ಪಣಿ ಕಾರರು ಬೇರೆ ಬೇರೆ ಅರ್ಥ ನಿರೂಪಿಸಿದ್ದಾರೆ. ಮೇಲಿನ ಅರ್ಥ ಸುಲಭ.)

**ಶಂಕಾ :** ಮೇಲಿನ ಶಂಕೆ ಪ್ರತಿವಾದಿಯ ಬಗ್ಗೆ ಇಲ್ಲ. ಆದರೆ ಶಿಷ್ಯರನ್ನು ಉದ್ದೇಶಿಸಿ ಇದೆ. ಪ್ರಮಾಣಾದಿಗಳ ಸತ್ಯತ್ವವನ್ನು ಒಪ್ಪದ ಚಾರ್ವಾಕ ಮೊದ ಲಾದವರಿಗೆ ವಾದಕಥೆಯಲ್ಲಿ ಅಧಿಕಾರವಿಲ್ಲವೆಂದು ಶಿಷ್ಯರಿಗೆ ತಿಳಿಸಲು ಈ ಆಕ್ಷೇಪವಿದೆ.

**ಶ್ರೀಹರ್ಷ :** ಇದೂ ಅಯುಕ್ತವೇ. ಶಿಷ್ಯರಿಗೆ ಈ ದೋಷ ತಿಳಿಸಲು ಅದು ಹೇಗೆ ಸಾಧ್ಯ ? ಚಾರ್ವಾಕ ಮೊದಲಾದವರಿಗೆ ವಾದಕಥೆಯಲ್ಲಿ ಪ್ರವೇಶವಿದ್ದರೆ ಚರ್ಚೆ ಆರಂಭವಾದ ಬಳಿಕ ಅವರಿಗೆ ಚರ್ಚೆಯಲ್ಲಿ ಅಧಿಕಾರವಿಲ್ಲವೆಂಬುದು ಅಸಂಭವನೀಯ. ಇನ್ನು ಅವರಿಗೆ ವಾದಕಥೆಯಲ್ಲಿ ಪ್ರವೇಶ ನಿರಾಕರಿಸಿದರೆ ಕಥಾಬಾಹಿರರಾದ ಅವರಿಗೆ ನಿಗ್ರಹಾದಿ ದೋಷಗಳು ಬರುವದು ಅಶಕ್ಯ, ಇದರಿಂದಾಗಿ ಆ ದೋಷಗಳನ್ನು ಶಿಷ್ಯರಿಗೆ ತಿಳಿಸಲು ಆಗುವದಿಲ್ಲ.

**ವಿಕಲ್ಪ (II)** (ಹೇತು ಅಥವಾ ಕಾರಣ ವಿಕಲ್ಪ) ವಾದಕಥೆಯು ಕಾರ್ಯವಾದ್ದ ರಿಂದ ತನ್ನ ಕಾರಣವಾದ ಪ್ರಮಾಣ ಸತ್ಯತ್ವದ ಅಂಗೀಕಾರವನ್ನು ತಿಳಿಸುತ್ತದೆ ಎಂಬ ವಿಕಲ್ಪವೂ ಅಯುಕ್ತ. ಪ್ರಮಾಣಗಳ ಸತ್ಯತ್ವವನ್ನು ಒಪ್ಪುವದು ವಾದ

ಕಥೆಯು ಕಾರಣವೇ ಅಲ್ಲ. ಒಂದು ವೇಳೆ ಇದು ಕಾರಣವಾಗಿದ್ದರೆ ಪ್ರಮಾಣಾದಿಗಳ ಸತ್ಯತ್ವವನ್ನು ಒಪ್ಪದ ಚಾರ್ವಾಕ ಮೊದಲಾದವರೊಡನೆ ವಾದ ಕಥೆ ನಡೆಯದಿರುವ ಪ್ರಸಂಗ ಬರುತ್ತದೆ.

**ಶಂಕಾ :** ಪ್ರಮಾಣಾದಿಗಳಂತೂ ವಾದಕಥೆಗೆ ಕಾರಣವೆಂದು ನಿಮಗೂ ಸಮ್ಮತ. ಕಾರಣವಾದ್ದರಿಂದ ಅವು ಸತ್ಯ. ಏಕೆಂದರೆ ಕಾರಣವು ಕಾರ್ಯಕ್ಕಿಂತ ಮೊದಲು ಇರಲೇಬೇಕು.

**ಶ್ರೀಹರ್ಷ :** ಹೀಗೆ ಹೇಳಕೂಡದು (ಮೈವಂ). ವಾದಕಥೆ ಆರಂಭವಾಗುವ ಮೊದಲು ತತ್ವನಿರ್ಣಯ–ಜಯಾಪಜಯ ಮುಂ. ಅಭೀಷ್ಟ ಸಿದ್ಧಿಗಾಗಿ ಉಭಯ ವಾದಿಗಳು ಕೆಲವು ಆವಶ್ಯಕ ನಿಯಮ (ಸಮಯ ಬಂಧ) ಮಾಡಿಕೊಳ್ಳುತ್ತಾರೆ, ಉದಾ : ಪ್ರಮಾಣ ಮತ್ತು ತರ್ಕಗಳಿಂದ ವ್ಯವಹರಿಸಬೇಕು. ಹೀಗೆ ಸಮಯ ಬಂಧವಾದನಂತರ ಕಥೆ ಆರಂಭವಾಗುತ್ತದೆ. ನಂತರ ಪ್ರಮಾಣಗಳನ್ನು ಉದಾಹರಿಸಲಾಗುತ್ತದೆ. ಆದರೆ ಸಮಯಬಂಧದಲ್ಲಿ ಪ್ರಮಾಣಾದಿಗಳು ಸತ್ಯವೆಂದು ಒಪ್ಪಬೇಕು ಎಂಬುದನ್ನು ಸೇರಿಸುವದು ಉಚಿತವಲ್ಲ. ಏಕೆಂದರೆ ಪ್ರಮಾಣ ಸತ್ಯವೆಂದು ಒಪ್ಪದಿದ್ದ ಚಾರ್ವಾಕರೊಡನೆ ವಾದಕಥೆ ನಡೆಯುವದು ಕಂಡಿದೆ. ಇನ್ನು ನಿಮ್ಮಂತೆ ಪ್ರಮಾಣ ಸತ್ಯತ್ವವನ್ನು ಒಪ್ಪಿದರೂ ಪ್ರಮಾಣ ಮತ್ತು ತರ್ಕಗಳಿಂದ ವ್ಯವಹರಿಸಬೇಕು ಎಂಬ ನಿಯಮವಂತೂ ಆವಶ್ಯಕ. ಎರಡನ್ನೂ ನಿಯಮಗಳಲ್ಲಿ ಸೇರಿಸಿದರೆ ಕಲ್ಪನಾ ಗೌರವ ದೋಷ ಬರುತ್ತದೆ. ಆದ್ದರಿಂದ ಪ್ರಮಾಣ ಸತ್ಯವೆಂದು ಒಪ್ಪದೆ ಕೇವಲ ನಿಯಮಬಂಧದಿಂದ ವಾದಕಥೆ ನಡೆಯುತ್ತದೆ. ಹಾಗೂ ಅದರಿಂದ ತತ್ವನಿರ್ಣಯ ವಿಜಯಾದಿಗಳ ನಿರ್ಣಯವಾಗುತ್ತದೆ.

**ವಿಕಲ್ಪ (III) :** ಘಟ ಪಟಾದಿಗಳು ಲೋಕ ವ್ಯವಹಾರದಿಂದ ಸಿದ್ಧಿಸುವಂತೆ, ಲೋಕ ವ್ಯವಹಾರದಿಂದ ಸಿದ್ಧಿಸುವ ಪ್ರಮಾಣಾದಿಗಳ ಸತ್ಯತ್ವವನ್ನು ಒಪ್ಪಬೇಕು ಎಂಬ ವಿಕಲ್ಪವೂ ಅಯುಕ್ತ. ಈ ಪ್ರಮಾಣಾದಿಗಳ ಸತ್ಯತ್ವವು ಯಾವ ಬಗೆಯ ವ್ಯವಹಾರದಿಂದ ಸಿದ್ಧಿಸುತ್ತದೆ ? ಪ್ರಮಾಣ ವ್ಯವಹಾರದಿಂದಲೋ ? ಪಾಮರ ವ್ಯವಹಾರದಿಂದಲೋ ? (ಅ) ಪ್ರಮಾಣ ವ್ಯವಹಾರವಲ್ಲ. ಏಕೆಂದರೆ ಈ ವ್ಯವಹಾರವು ವಿಚಾರಪೂರ್ವಕ ನಡೆಯುತ್ತದೆ. ವಿಚಾರಕ್ಕಾಗಿ ಕೆಲವೊಂದು ನಿಯಮಗಳನ್ನು ಮಾಡಿಕೊಳ್ಳುವದು ಅವಶ್ಯ. ಹಿಂದೆ ಹೇಳಿದಂತೆ ಈ ನಿಯಮಗಳಲ್ಲಿ ಪ್ರಮಾಣ ಸತ್ಯತ್ವವನ್ನು ಸೇರಿಸಬೇಕಾಗಿಲ್ಲ, (ಬ) ಇನ್ನು ಪಾಮರ ವ್ಯವಹಾರದಿಂದಲೂ ಪ್ರಮಾಣ ಸತ್ಯತ್ವವನ್ನು ಒಪ್ಪಬೇಕಿಲ್ಲ. ಪಾಮರರೆಂದರೆ ಶಾಸ್ತ್ರದ ಸಂಸ್ಕಾರವಿಲ್ಲದವರು. ಶಾಸ್ತ್ರ ಅರಿಯದವರು. ಇವರಾದರೋ "ನಾನು ಸ್ಥೂಲ" ಮೊದಲಾದ ಶಬ್ದ ಪ್ರಯೋಗಗಳಿಂದ ಶರೀರವೇ ಆತ್ಮವೆಂದು ವ್ಯವಹರಿಸುತ್ತಾರೆ. ಅವರ ಈ ವ್ಯವಹಾರದಿಂದ ಶರೀರ–ಆತ್ಮೈಕ್ಯ ಒಪ್ಪುವ ಅನಿಷ್ಟ ಪ್ರಸಂಗ

ಬರುತ್ತವೆ, ಇದನ್ನು ತಪ್ಪಿಸಲು ಶರೀರ ಆತ್ಮೈಕ್ಯವು ವಿಚಾರದಿಂದ ಬಾಧಿತ ವಾಗುವವರಿಂದ ಇದನ್ನು ಒಪ್ಪಲಾಗದು ಎಂದು ಹೇಳಬೇಕು. ಎಂದರೆ ಯಾವದೇ ಪ್ರಮೇಯವು ವಿಚಾರದಿಂದ ಸಿದ್ಧಿಸುತ್ತದೆಯೇ ಹೊರತು ಲೋಕವ್ಯವಹಾರ ದಿಂದಲ್ಲ. ಆದ್ದರಿಂದ ಲೋಕವ್ಯವಹಾರದಿಂದ ಪ್ರಮಾಣವನ್ನು ಸತ್ಯವೆಂದು ಒಪ್ಪಬೇಕೆಂಬುದು ಸಿದ್ಧಿಸುವದಿಲ್ಲ.

**ವಿಕಲ್ಪ (IV) :** ಫಲಾತಿಪ್ರಸಂಗ ನಿವಾರಿಸಲು ಪ್ರಮಾಣ ಸತ್ಯತ್ವ ಒಪ್ಪ ಬೇಕೆಂಬ ವಿಕಲ್ಪ. ಈ ವಿಕಲ್ಪವೂ ಅಯುಕ್ತ. ವಾದವಿವಾದಕ್ಕೆ ಉಭಯವಾದಿ ಗಳು ಸಮಯಬಂಧ ಮಾಡಿಕೊಳ್ಳುವರಷ್ಟೇ. ಇದರಿಂದಲೇ ಕಥೆಯ ಫಲವಾದ ತತ್ವನಿರ್ಣಯ ಅಥವಾ ಜಯಾಪಜಯಗಳ ನಿರ್ಧಾರವಾಗುತ್ತದೆ. ಆದ್ದರಿಂದ ಯಾವ ಅತಿ ಪ್ರಸಂಗವೂ ಬರುವದಿಲ್ಲ. ಹೀಗಾಗಿ ವಿಜಯಾದಿಗಳ ಅತಿಪ್ರಸಂಗ ಪರಿಹರಿಸಲು ಪ್ರಮಾಣಾದಿಗಳ ಸತ್ಯತ್ವವನ್ನು ಒಪ್ಪಬೇಕಿಲ್ಲ;

ಒಟ್ಟಿನಲ್ಲಿ ವಾದ ಕಥೆ ನಡೆಯಲಿಕ್ಕೆ ಪ್ರಮಾಣಾದಿಗಳನ್ನು ಸತ್ಯವೆಂದು ಒಪ್ಪಬೇಕಾಗಿಲ್ಲ. ಆದ್ದರಿಂದ ವಿಶ್ವ ಸತ್ಯತ್ವವನ್ನು, ಪ್ರಮಾಣಾದಿಗಳ ಸತ್ಯತ್ವ ವನ್ನು ಒಪ್ಪದ ಮಾಯಾವಾದಿಯು ಕಥಕ ಆಗದೇ ಹೋಗಲಿ. (ತನ್ನವಾದಿತಾ) ಎಂದು ನೀವು ಆಪಾದಿಸಿದ್ದು ಅಯುಕ್ತ.

## ಸಿದ್ಧಾಂತ

**ಸಿದ್ಧಾಂತಿ :** ನೀನು ಮಾಡಿದ ನಾಲ್ಕೂ ವಿಕಲ್ಪಗಳ ದೂಷಣವು ಕೇವಲ ಆಭಾಸ. ಅದರಲ್ಲಿ ಹುರುಳಿಲ್ಲ. ಆದ್ದರಿಂದ ಪ್ರಮಾಣಾದಿಗಳೆಲ್ಲ ಸತ್ಯವೆಂದೇ ವ್ಯವಸ್ಥಿತ ವಾಗುತ್ತದೆ. ವ್ಯವಹೃತಿಃ ಸರ್ವಾ ಸತ್ಯಾ (ಶ್ಲೋಕ 21) ಎಂಬ ಶ್ರೀ ಮಧ್ವಾ ಚಾರ್ಯರ ವಚನದಿಂದ ನಾಲ್ಕೂ ವಿಕಲ್ಪಗಳು ನಿರಾಕೃತವಾದವೆಂದು ತಿಳಿಯ ಬೇಕು. ( ತದೇತತ್ ಸರ್ವಂ ಅನೇನ ಅಪಹಸಿತಂ ವೇದಿತವ್ಯಂ– ಸುಧಾ ) ಹೇಗೆಂದರೆ –

**ವಿಕಲ್ಪ (I) :** (ವ್ಯಾಪ್ತಿ ವಿಕಲ್ಪ) "ಎಲ್ಲೆಲ್ಲಿ ವಾದಕಥೆ ಇದೆಯೋ ಅಲ್ಲಲ್ಲಿ ಪ್ರಮಾಣಾದಿಗಳನ್ನು ಸತ್ಯವೆಂದು ಒಪ್ಪಲಾಗಿದೆ" ಎಂಬ ವ್ಯಾಪ್ತಿಗೆ (ಪ್ರಮಾಣ ಸತ್ಯತ್ವವನ್ನು ಒಪ್ಪದ) ಚಾರ್ವಾಕನ ವಾದಕಥೆಯಲ್ಲಿ ನೀನು ವ್ಯಭಿಚಾರದೋಷ ಹೇಳಿದ್ದಿ. ಆದರೆ ಇದು ಅಯುಕ್ತ. ಏಕೆಂದರೆ ನಾವು ಅನುಮಾನವನ್ನೇ ಪ್ರಯೋಗಿಸಿಲ್ಲ. ಮಾಯಾವಾದಿಯನ್ನು ನಿರಾಕರಿಸುವ ಪ್ರಸಂಗದಲ್ಲಿ, ಚಾರ್ವಾಕ ಮೊದಲಾದವರಿಗೆ "ನೀವು ಪ್ರಮಾಣವನ್ನು ಸತ್ಯವೆಂದು ಒಪ್ಪದಿದ್ದರೆ ವಾದಿಯಾಗ ಲಾರಿರಿ" ಎಂದು ಅನಿಷ್ಟ ಆಪಾದನೆ (ತರ್ಕ) ಮಾಡಲಾಗಿದೆ. ಪ್ರಮಾಣಾದಿಗಳು ಸತ್ಯವಿರದಿದ್ದರೆ ಅವು ಸಾಧಕವಲ್ಲ. ಅಸತ್ಯವಾದುದಕ್ಕೆ ಸಾಧಕತ್ವವು ಪ್ರಮಾಣ ಬಾಧಿತವಾಗಿದೆ. ಪ್ರಮಾಣ ಬಾಧವು ತರ್ಕಕ್ಕೆ ಹೇಗೆ ದೂಷಣ ? ಆಪಾದನೆಗೆ

ಅದು ಅಲಂಕಾರವೇ.

ಇಷ್ಟು ಸಾಧನ-ಬಾಧನ-ಕ್ಷಮ ವ್ಯವಹಾರದ ಬಗ್ಗೆ ನೀನು ಮಾಡಿದ ಬಾಧದೋಷವೂ ಇದರಿಂದಲೇ ಪರಿಹೃತವಾಗುತ್ತದೆ. ನಾವು ಮೇಲೆ ಹೇಳಿದಂತೆ ಅನುಮಾನವನ್ನೇ ಪ್ರಯೋಗಿಸಿಲ್ಲವಾದ್ದರಿಂದ ನೀನು ಎತ್ತಿದ ಬಾಧದೋಷ ಅಯುಕ್ತ, ಇದಲ್ಲದೆ (ಕಿಂಚ) ನೀನು ಹೇಳಿದ ಉಪಾಧಿಯು (ಸದ್ವಚನಾಭಾಸ) ಹಿಂದೆ ಉಲ್ಲೇಖಿಸಿದ ವ್ಯತಿರೇಕಾನುಮಾನದ ಹೇತುವಿನಿಂದ (ಪ್ರಮಾಣಾದಿ ಸತ್ಯಾಭ್ಯುಪಗಮರಹಿತತ್ವಂ) ಭಿನ್ನವಲ್ಲ; ಎರಡೂ ಒಂದೇ, ಹೇಗೆಂದರೆ— ಪ್ರಮಾಣಾದಿಗಳು ಸತ್ಯವಲ್ಲವೆಂದು ಒಪ್ಪಿದರೆ ಅವು ಅಸತ್ಯವೆಂದೇ ಒಪ್ಪಿದಂತೆ. ಅಸತ್ಯವಾದರೆ ಅವುಗಳ ಸ್ವರೂಪವೇ ಅಸಿದ್ಧವಾಗುತ್ತದೆ. ಈ ಸ್ವರೂಪಾಸಿದ್ಧಿಯು ನೀನು ಹೇಳಿದ ಸದ್ವಚನಾಭಾಸ ಉಪಾಧಿಯ ಲಕ್ಷಣವೇ ಆಗಿದೆ. ಹೀಗೆ ಹೇತು (ಸಾಧನ) ಮತ್ತು ಉಪಾಧಿ ಅಭಿನ್ನವಾದ್ದರಿಂದ ಉಪಾಧಿಯ ಲಕ್ಷಣವಾದ "ಸಾಧನ ಅವ್ಯಾಪಕತ್ವವು" ನಿನ್ನ ಉಪಾಧಿಗೆ ಬರುವದಿಲ್ಲ. ಆದ್ದರಿಂದ ನೀನು ಹೇಳಿದ ಸದ್ವಚನಾಭಾಸವು ಉಪಾಧಿಯೇ ಆಗಲಾರದು,

ಪ್ರಮಾಣಾದಿಗಳು ಸತ್ಯ ಅಥವಾ ಅಸತ್ಯವೆಂಬಲ್ಲಿ ಉದಾಸೀನವಾಗಿದ್ದುಕೊಂಡು ವಾದಕಥೆ ನಡೆಯಬೇಕೆಂದು ನೀನು ಹೇಳಿದ್ದು ಅಯುಕ್ತ. ಏಕೆಂದರೆ ಪ್ರಮಾಣಾದಿಗಳು ಬುದ್ಧಿಯಲ್ಲಿ ಸತ್ಯ ಅಥವಾ ಅಸತ್ಯವೆಂದೇ ಗೋಚರವಾಗುತ್ತವೆ. ಉದಾಸೀನವಾಗಿ ಪ್ರಮಾಣಗಳನ್ನು ಒಪ್ಪುವದು ಅಸಂಗತ.

ವಾದಕಥೆ ಆರಂಭವಾದ ಬಳಿಕ "ಪ್ರಮಾಣ ಸತ್ಯತ್ವವನ್ನು ಒಪ್ಪದಿದ್ದರೆ ವಾದಿಯಾಗಲಾರಿ" ಎಂಬ ದೋಷಾರೋಪಣೆ ಎಂತಹ ವಾದಕಥೆಯ ಬಗ್ಗೆ ಎಂದು ವಿಕಲ್ಪಿಸಿದ್ದೀ. ಅದಕ್ಕೆ ಉತ್ತರವಿಷ್ಟೇ. ಯಾರು ಪ್ರಮಾಣಾದಿಗಳನ್ನು ಅಸತ್ಯವೆಂದು ಒಪ್ಪುವರೋ ಅಥವಾ ಯಾರು ಅವು ಸತ್ಯವೆಂದು ತಿಳಿದರೂ ಉದಾಸೀನರಾಗಿರುವರೋ ಅವರು ವಾದಿಗಳಾಗಲಾರರು ಎಂದು ನಮ್ಮ ಆಪಾದನೆ,

ಪ್ರಮಾಣ ಸತ್ಯವೆಂದು ಒಪ್ಪದಿದ್ದರೂ ವಿಶ್ವಮಿಥ್ಯಾತ್ವದ ಬಗ್ಗೆ ವಾದಕಥೆ ನಡೆವಂತೆ ಉಳಿದ ವಾದಕಥೆಗಳೂ ನಡೆಯಲಿ. (ಕಥಾಂತರ ಪ್ರಸಕ್ತಿ) ಎಂದು ವಾದಿಸಿ ನೀನು ವ್ಯಾಘಾತಾದಿ ದೋಷ ಹೇಳಿದ್ದಿ. ಇವೆಲ್ಲ ಇದರಿಂದಲೇ ನಿರಾಕೃತವಾಗುತ್ತವೆ. ಏಕೆಂದರೆ ವಾದಕಥೆಯನ್ನಾರಂಭಿಸಲು, ಪ್ರಮಾಣ ಸತ್ಯವೆಂದು ಒಪ್ಪುವದು ಕಾರಣವೆಂದು ನಾವು ಹೇಳುವದೇ ಇಲ್ಲ. ಆದರೆ ಹೇಗೋ ವಾದಕಥೆ ಆರಂಭವಾದ ಬಳಿಕ, ಪ್ರಮಾಣಸತ್ಯತ್ವವನ್ನು ಒಪ್ಪದಿದ್ದರೆ ವಾದಕಥೆಯೇ ಆರಂಭವಾಗದಂಥ ಪ್ರಸಂಗ ಬರುತ್ತದೆ" ಎಂಬ ಭಯ (ದಂಡ) ತೋರಿಸಿ ಆತನಿಂದ ಪ್ರಮಾಣ ಸತ್ಯತ್ವವನ್ನು ಒಪ್ಪಿಸುತ್ತೇವೆ.

ಪ್ರಮಾಣಗಳ ಸತ್ಯತ್ವವನ್ನು ಒಪ್ಪದಿದ್ದವನಿಗೆ ವಾದದಲ್ಲಿ ಅಧಿಕಾರವೇ ಇಲ್ಲ.

ಹೀಗಾಗಿ ಧರ್ಮಿಯಾದ ವಾದವ್ಯವಹಾರವೇ ಸಿದ್ಧಿಸುವದಿಲ್ಲ ಎಂದು ಮೊದಲಾಗಿ ನಾವು ಶಂಕಿಸಿದ್ದು ಶಿಷ್ಯರಿಗೆ ಆ ದೋಷ ತಿಳಿಸುವಕ್ಕೋಸ್ಕರವಿದೆ. ಇದು ಯುಕ್ತವೇ, ಹೇಗೆಂದರೆ ಚಾರ್ವಾಕನಿಗೂ ಕಥಾಪ್ರವೇಶ ಒಪ್ಪಿಕೊಂಡು ಅವನು ವಾದಕಥೆಯಲ್ಲಿ ಪ್ರವೃತ್ತನಾದ ಬಳಿಕ, ಆ ವಾದಕಥೆಯು ಬಲದಿಂದ, ಅದಕ್ಕೆ ಕಾರಣವಾದ ಪ್ರಮಾಣ ಸತ್ಯತ್ವವನ್ನು ಅವನು ಅವಶ್ಯವಾಗಿ ಒಪ್ಪಬೇಕಾಗುತ್ತದೆ.

**ವಿಕಲ್ಪ (II) :** (ಹೇತು ಅಥವಾ ಕಾರಣ ವಿಕಲ್ಪ) ಪ್ರಮಾಣಾದಿಗಳನ್ನು ಸತ್ಯವೆಂದು ಒಪ್ಪುವದು ವಾದಕಥೆಗೆ ಕಾರಣವೆಂದು ನಾವು ಹೇಳುವದೇ ಇಲ್ಲ. ಆದ್ದರಿಂದ ಅವುಗಳನ್ನು ಸತ್ಯವೆಂದು ಒಪ್ಪದವರೊಡನೆ ವಾದಕಥೆ ನಡೆಯದೇ ಹೋಗಲಿ (ನ ನಿಷ್ಪದ್ಯೇತ) ಎಂದು ನೀನು ಆಪಾದಿಸಿದ್ದು ಅಯುಕ್ತ. ಪ್ರಮಾಣ ಮತ್ತು ತರ್ಕಗಳೇ ವಾದಕಥೆಗೆ ಕಾರಣವೆಂದು ನಾವೂ ನಿನ್ನಂತೆ ಒಪ್ಪುತ್ತೇವೆ. ಆದರೆ ಪ್ರಮಾಣಗಳು ಅಸತ್ಯವಾದರೆ ವಾದಕಥೆ ಕೂಡುವದಿಲ್ಲವಾದ್ದರಿಂದ ಅವು ಸತ್ಯವೆಂದು ಒಪ್ಪಬೇಕೆಂದು ನಮ್ಮ ಅಭಿಪ್ರಾಯ. ವಾದಕಥೆ ಆರಂಭವಾಗುವ ಮೊದಲು ಉಭಯವಾದಿ ಸಮ್ಮತವಾದ ಕೆಲವು ನಿಯಮ (ಸಮಯ ಬಂಧ) ಇರಬೇಕು. ಮತ್ತು ಅವುಗಳಲ್ಲಿ ಪ್ರಮಾಣ ಮತ್ತು ತರ್ಕಗಳಿಂದ ವ್ಯವಹರಿಸಬೇಕೆಂಬ ನಿಯಮವು ಇರಬೇಕೆಂದು ನೀವು ಹೇಳಿದ್ದು ನಮಗೂ ಸಮ್ಮತವೇ. ಹೀಗಿರುವಾಗ ಪ್ರಮಾಣಾದಿಗಳ ಸತ್ಯತ್ವವನ್ನು ಒಪ್ಪದ ಚಾರ್ವಾಕರೊಡನೆ ವಾದಕಥೆಯು ನಡೆಯದಿರುವ ಪ್ರಸಂಗ ಬರುತ್ತದೆಂದು ನೀನು ಆಪಾದಿಸಿದ್ದು ಅಯುಕ್ತ. ಪ್ರಮಾಣ ಸತ್ಯತ್ವ ಒಪ್ಪುವದು ವಾದಕಥೆಗೆ ಕಾರಣವೆಂದು ಹೇಳುವವರಿಗೆ ಮಾತ್ರ ಈ ದೋಷ ಹೇಳಬಹುದು. ನಾವಾದರೋ ಹಾಗೆ ಹೇಳುವದಿಲ್ಲವಾದ್ದರಿಂದ ಈ ದೋಷ ನಮಗೆ ಬರುವದಿಲ್ಲ. ಇನ್ನು ಪ್ರಮಾಣ ಸತ್ಯತ್ವವನ್ನು ಒಪ್ಪಿದರೂ "ಪ್ರಮಾಣ ಮತ್ತು ತರ್ಕಗಳಿಂದ ವ್ಯವಹರಿಸಬೇಕು" ಎಂಬ ನಿಯಮವನ್ನು ಸಮಯ ಬಂಧದಲ್ಲಿ ಸೇರಿಸುವದರಿಂದ ಕಲ್ಪನಾ ಗೌರವದೋಷ ಬರುವದಾಗಿ ನೀನ್ನು ಹೇಳಿದ್ದಿ. ಇಲ್ಲಿ ನಾವು ಕೇಳುತ್ತೇವೆ. (i) ಪ್ರಮಾಣಾದಿಗಳನ್ನು ಸತ್ಯವೆಂದು ಒಪ್ಪಿದ ಮಾತ್ರಕ್ಕೆ ಕಲ್ಪನಾ ಗೌರವದೋಷ ಬರುತ್ತದೆಯೋ ? ಅಥವಾ (ii) ಪ್ರಮಾಣಾದಿಗಳ ಸತ್ಯತ್ವ ಒಪ್ಪುವದು ವಾದಕಥೆಗೆ ಕಾರಣವೆಂದು ಅದನ್ನೂ ಕಾರಣಕೋಟಿಯಲ್ಲಿ ಸೇರಿಸುವವರಿಂದ ಕಲ್ಪನಾ ಗೌರವದೋಷ ಬರುವದೋ ? (i)ನೇ ಪಕ್ಷ ಅಯುಕ್ತ. ಏಕೆಂದರೆ ವಾದಕಥೆಗೆ ಕಾರಣವಾದುದು ಪ್ರಮಾಣಾದಿಗಳ ಸತ್ಯತ್ವವಿಲ್ಲದೆ ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದ ಪ್ರಮಾಣ ಸತ್ಯತ್ವ ಒಪ್ಪುವದು ಪ್ರಮಾಣ ಪ್ರಮಿತವಾಗಿದೆ. ಆದ್ದರಿಂದ ಅದನ್ನು ಪರೀಕ್ಷಕರು ಅಂಗೀಕರಿಸಬೇಕು (ii) ಎರಡನೇ ಪಕ್ಷವು ನಮಗೆ ಸಮ್ಮತವೇ. ಎರಡನ್ನೂ ನಿಯಮಗಳಲ್ಲಿ ಸೇರಿಸಿದಕ್ಕೆ ಕಲ್ಪನಾ ಗೌರವದೋಷ ಬರುವದು ನಿಜ. ಅಂತೆಯೇ ಸಮಯ ಬಂಧದಲ್ಲಿ ಪ್ರಮಾಣ

ಸತ್ಯತ್ವವನ್ನು ಸೇರಿಸಬೇಕೆಂದು ನಾವು ಹೇಳುವುದೇ ಇಲ್ಲ.

**ವಿಕಲ್ಪ III :** (ಪ್ರಮಾಣ ಸತ್ಯತ್ವ ಲೋಕ ವ್ಯವಹಾರ ಸಿದ್ಧವೆಂಬ ವಿಕಲ್ಪ) ಪ್ರಮಾಣ ಸತ್ಯತ್ವವು ಯಾವ ಬಗೆಯ ಲೋಕ ವ್ಯವಹಾರದಿಂದ ಸಿದ್ಧಿಸುತ್ತದೆಂದ ಪ್ರಶ್ನಿಸಿದ್ದೀ. ಪ್ರಮಾಣವ್ಯವಹಾರದಿಂದ ಎಂದು ಉತ್ತರಿಸುತ್ತೇವೆ. ಈ ವಿಷಯದಲ್ಲಿ ನೀನು ಎತ್ತಿದ ಆಕ್ಷೇಪಗಳನ್ನು ಪ್ರಾಯಃ ದೂಷಿಸಿದಂತಾಗಿದೆ ಹಿಂದೆ ನಿರೂಪಿಸಿದಂತೆ ವಾದಕಥೆ ಹೇಗೋ ಆರಂಭವಾದ ಬಳಿಕ, ಪ್ರಮಾಣ ಸತ್ಯ ವೆಂದು ಒಪ್ಪದಿದ್ದರೆ, ವಾದಕಥೆಯೇ ಆರಂಭವಾಗದ ಅತಿ ಪ್ರಸಂಗ ಬರುತ್ತದೆಂಬ ಭಯ ತೋರಿಸಿ ವಾದಿಯಿಂದ ಪ್ರಮಾಣ ಸತ್ಯತ್ವವನ್ನು ಒಪ್ಪಿಸುತ್ತೇವೆ. ಇದಲ್ಲದೆ ಪ್ರಮಾಣ ಸತ್ಯತ್ವವು ಪಾಮರ ವ್ಯವಹಾರದಿಂದಲೂ ಸಿದ್ಧಿಸುತ್ತದೆ, ಅವರು ಪ್ರಮಾಣಗಳು ಸತ್ಯವೆಂದು ತಿಳಿಯುತ್ತಾರೆ. ಇನ್ನು ಅಜ್ಞರು ದೇಹವೇ ಆತ್ಮವೆಂದು ವ್ಯವಹರಿಸುವದರಿಂದ ದೇಹಾತ್ಮೈಕ್ಯವನ್ನು ಸ್ವೀಕರಿಸುವ ಪ್ರಸಂಗ ಬರುತ್ತದೆಂದು ಆಕ್ಷೇಪಿಸಿದರೆ, ಅದು ವಿಚಾರಬಾಧಿತವಾಗುವದರಿಂದ ಸ್ವೀಕಾರಾರ್ಹವಲ್ಲವೆಂದು ಉತ್ತರಿಸುತ್ತೇವೆ.

**ವಿಕಲ್ಪ IV :** ಫಲಾತಿಪ್ರಸಂಗ ನಿವಾರಿಸಲು ಪ್ರಮಾಣ ಸತ್ಯವೆಂದು ಒಪ್ಪಬೇಕೆಂಬ ವಿಕಲ್ಪ. ಈ ಬಗ್ಗೆ ನೀನು ಹೇಳಿದ ದೋಷ ಇದರಿಂದಲೇ ಪರಿಹೃತವಾಗುತ್ತದೆ. ಏಕೆಂದರೆ ಕಥಾಫಲವಾದ ತತ್ವನಿರ್ಣಯ –ವಿಜಯ ಮುಂತಾದವುಗಳಿಗೆ ಪ್ರಮಾಣ ಗಳನ್ನು ಸತ್ಯವೆಂದು ಒಪ್ಪುವದು ಕಾರಣವೆಂದು ನಾವು ಹೇಳುವದೇ ಇಲ್ಲ, ಆದರೆ ಪ್ರಮಾಣಾದಿಗಳೇ ವಾದಕಥೆಗೆ ಮತ್ತು ಕಥಾಫಲಕ್ಕೆ ಕಾರಣ. ಈ ಪ್ರಮಾಣಗಳು ಅಸತ್ಯವಾದರೆ ಕಾರಣತ್ವ ಕೂಡುವದಿಲ್ಲವಾದ್ದರಿಂದ ಪ್ರಮಾಣಾ ದಿಗಳ ಸತ್ಯತ್ವವನ್ನು ಅವಶ್ಯವಾಗಿ ಒಪ್ಪಬೇಕು.

**ವ್ಯವಹಾರಸತಶ್ಚಾಪಿ ಸಾಧಕತ್ವಂ ತು ಪೂರ್ವವತ್ ॥೨೨೮॥**

**ಅವತರಣಿಕೆ :** ಪ್ರಮಾಣ ಅಸತ್ಯವಲ್ಲ. ವ್ಯಾವಹಾರಿಕ ಸತ್ಯ ಎಂದರೂ ಹಿಂದೆ ಆಪಾದಿಸಿದ ಅನಿಷ್ಟ ಪ್ರಸಂಗ (ಎಂದರೆ ಮಾಯಾವಾದಿ ಕಥಕನಾಗದೆ ಹೋಗಲಿ) ತಪ್ಪುವದಿಲ್ಲ,

**ಅನುವಾದ :** ವ್ಯಾವಹಾರಿಕ ಸತ್ಯತ್ವಕ್ಕೆ ಸಾಧಕತ್ವವಿದೆ ಎಂಬುದು ಮೊದಲಿ ನಂತೆ ಎಂದರೆ ಅಸತ್ಯಕ್ಕೆ ಸಾಧಕತ್ವವಿಲ್ಲ ಎಂಬಂತೆ, ಪ್ರತಿವಾದಿಗೆ ಸಮ್ಮತವಿಲ್ಲ.

**ವಿವರಣೆ :** ವ್ಯಾವಹಾರಿಕ ಸತ್ಯ ನಿಜವಾಗಿ ಸತ್ಯವೇ ಆಗಿದ್ದರೆ ಅದು ಸಿದ್ಧಾಂತಿಗೆ ಸಮ್ಮತ ಮತ್ತು ಇಷ್ಟ. ಇನ್ನು ಅದು ಸುಳ್ಳಾಗಿದ್ದರೆ ಹಿಂದೆ ಹೇಳಿದಂತೆ, ಅದಕ್ಕೆ ಸಾಧಕತ್ವವಿಲ್ಲ. ಎಂದರೆ ವ್ಯಾವಹಾರಿಕ ಸತ್ಯ ಪ್ರಮಾಣಕ್ಕೂ ಸಾಧಕತ್ವವನ್ನು ಸಿದ್ಧಾಂತಿ ಒಪ್ಪಿಲ್ಲ.

ಮಾಯವಾದಿಗಳು ಸತ್ಯವನ್ನು ಮುಖ್ಯ ಮತ್ತು ಅಮುಖ್ಯ ಎಂದು ಎರಡು ಪ್ರಕಾರವಾಗಿ ವಿಂಗಡಿಸುತ್ತಾರೆ, ಮುಖ್ಯ ಸತ್ಯವೆಂದರೆ ಯಾವ ಪ್ರಕಾರದಿಂದಲ ಬ

ಬಾಧ ಹೊಂದದೆ ಇರುವವು, ಪರಬ್ರಹ್ಮನೊಬ್ಬನೇ ಮುಖ್ಯ ಅಥವಾ ಪಾರ ಮಾರ್ಥಿಕ ಸತ್ಯ. ಅಮುಖ್ಯ ಸತ್ಯವೆಂದರೆ ಅದರ ಪ್ರತೀತಿ ಮಾತ್ರ ಸತ್ಯ. ಸತ್ಯೇನ ಪ್ರತೀತಿ ಮಾತ್ರ ಉಳ್ಳದ್ದು. ವಾಸ್ತವವಾಗಿ ಅದು ಸತ್ಯವಲ್ಲ. ಉದಾಹರಣಾರ್ಥವಾಗಿ ವಿಷಕ್ಕೆ ಅಮೃತ ಎಂದು ಪ್ರತೀತಿ ಇದ್ದ ಮಾತ್ರಕ್ಕೆ ಅದು ಅಮೃತವಾಗುವದಿಲ್ಲ. ಬಿಸಿಲುಗುದುರೆಯಲ್ಲಿ ನೀರೆಂದು ಪ್ರತೀತಿಯಿದ್ದ ಮಾತ್ರಕ್ಕೆ ಅದು ನೀರಾಗುವದಿಲ್ಲ. ಆದರಂತೆ ಸತ್ಯ ಎಂದು ಪ್ರತೀತಿ ಇರುವದ ರಿಂದ ಅದು ಸತ್ಯವಾಗಲಾರದು. ಈ ಅಮುಖ್ಯ ಸತ್ಯವು ಮಾಯೋಪಾಧಿಕ, ಅವಿದ್ಯೋಪಾಧಿಕ ಎಂದು ಎರಡು ವಿಧ. ಮಾಯಾ ಈಶ್ವರನನ್ನು ಆಶ್ರಯಿಸಿ ಪರರನ್ನು ಮೋಹಗೊಳಿಸುತ್ತದೆ. ಅವಿದ್ಯೆಯು ಜೀವರನ್ನಾಶ್ರಯಿಸಿ, ಅವರನ್ನೇ ಮೋಹಗೊಳಿಸುತ್ತವೆ. ಮಾಯೋಪಾಧಿಕ ಸತ್ಯವೆಂದರೆ ಅಂಬರಾದಿ ಸಕಲ ಪ್ರಪಂಚ. ಬ್ರಹ್ಮಜ್ಞಾನವಾಗುವವರೆಗೆ ಇದು ಬಾಧಿತವಾಗುವದಿಲ್ಲ; ಆದ್ದರಿಂದ ಇದರ ಬಗ್ಗೆ ಕೊಡಕೊಳ್ಳುವ ವ್ಯವಹಾರ ನಡೆಯುತ್ತದೆ. ಹೀಗೆ ವ್ಯವಹಾರ ನಿರ್ವಾಹಕ ವಾದ್ದರಿಂದ ಇದಕ್ಕೆ ವ್ಯಾವಹಾರಿಕ ಸತ್ಯ ಎನ್ನುವರು. ಅವಿದ್ಯೋಪಾಧಿಕ ಸತ್ಯ ವೆಂದರೆ ಶುಕ್ತಿರಜತ, ಶಿಂಪಿನಲ್ಲಿ ತೋರುವ ಬೆಳ್ಳಿ; ಇದಕ್ಕೆ ಪ್ರಾತೀತಿಕ, ಪ್ರಾತಿ ಭಾಸಿಕ ಸತ್ಯ ಎನ್ನುವರು. ಬೇಗ ಬಾಧ ಹೊಂದುವದರಿಂದ ಇದರ ಕೊಡ ಕೊಳ್ಳುವ ವ್ಯವಹಾರ ನಡೆಯುವದಿಲ್ಲ.

**ಸಿದ್ಧಾಂತಿ :** ಇಲ್ಲಿ ಹೀಗೆ ಕೇಳುತ್ತೇವೆ. (1) ಸತ್ಯವೆಂದರೆ ಪಾರಮಾರ್ಥಿಕ ಸತ್ಯ. ಅಸತ್ಯವು ದೀರ್ಘಕಾಲೀನ ಬಾಧ ಮತ್ತು ಆಶುಬಾಧ ಮೂಲಕ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಸತ್ಯವೆಂದು ಎರಡು ಅವಾಂತರ ಭೇದವುಳ್ಳದ್ದೋ ? (2) ಇನ್ನು ಸತ್ಯದಲ್ಲಿಯೇ ಪಾರಮಾರ್ಥಿಕ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಸತ್ಯ ಎಂದು ಮೂರು ಅವಾಂತರ ಭೇದಗಳಿವೆಯೋ ?

ಇಲ್ಲಿ ಒಂದನೆಯ ವಿಕಲ್ಪವನ್ನು ನಿರಾಕರಿಸಲಾಗಿದೆ. ಸುಳ್ಳಿಗೆ ಸಾಧಕತ್ವವು ಸಮ್ಮತವಿಲ್ಲದಿರುವಂತೆ ವ್ಯಾವಹಾರಿಕ ಸತ್ಯ ಪ್ರಮಾಣಕ್ಕೂ ಸಾಧಕತ್ವವು ಸಿದ್ಧಾಂತಿಗೆ ಸಮ್ಮತವಿಲ್ಲ. ಎರಡನೆಯ ವಿಕಲ್ಪವನ್ನು ಮುಂದಿನ ಶ್ಲೋಕದಲ್ಲಿ ನಿರಾಕರಿಸ ಲಾಗುವದು.

**ಸತ್ ತ್ರೈವಿಧ್ಯಂ ಚ ಮಾನೇನ ಸಿಧ್ಯೇತ್ ಕೇನೇತಿ ಪೃಚ್ಛ್ಯತೇ ॥೨೨॥**
**ತಸ್ಯಾಪ್ಯುಕ್ತಪ್ರಕಾರೇಣ ನೈವ ಸಿದ್ಧಿಃ ಕಥಂಚನ ।**
**ವೈಲಕ್ಷಣ್ಯಂ ಸದಸತೋರಪ್ಯೇತೇನ ನಿಷಿಧ್ಯತೇ ॥೨೩॥**

**ಅವತರಣಿಕೆ ;** ಸತ್ ತ್ರೈವಿಧ್ಯವೆಂದರೆ ಸತ್ಯದಲ್ಲಿಯೇ ಮೂರು ಪ್ರಕಾರ ಎಂಬ ಹಿಂದಿನ ಎರಡನೆಯ ವಿಕಲ್ಪವನ್ನು ಇಲ್ಲಿ ನಿರಾಕರಿಸುತ್ತಾರೆ.

**ಅನುವಾದ :** ಪಾರಮಾರ್ಥಿಕ, ವ್ಯಾವಹಾರಿಕ, ಪ್ರಾತಿಭಾಸಿಕ ಎಂಬ ಮೂರು ಬಗೆಯ ಸತ್ಯಗಳು ಯಾವ ಪ್ರಮಾಣದಿಂದ ಸಿದ್ಧಿಸುತ್ತವೆ ಎಂದು ಪ್ರಶ್ನಿಸುತ್ತೇವೆ. ಹಿಂದೆ ಹೇಳಿದಂತೆ ಎಂದರೆ ಸುಳ್ಳಿಗೆ ಸಾಧಕತ್ವವಿಲ್ಲ ಎಂಬಂತೆ ಯಾವ ಪ್ರಕಾರ ದಿಂದಲೂ ಮೂರು ಬಗೆಯ ಸತ್ಯತ್ವ ಸಿದ್ಧಿಸುವುದಿಲ್ಲ. ಇದರಿಂದ ಎಂದರೆ ಪ್ರಮಾಣ ವಿಕಲ್ಪ ನಿರಾಸದಿಂದ ಜಗತ್ತು ಸದಸದ್ವಿಲಕ್ಷಣ ಎಂಬುದೂ ನಿರಾಕೃತ ವಾಗುತ್ತದೆ.

**ವಿವರಣೆ :** (ಅ) ಸತ್ಯದಲ್ಲಿ ಪಾರಮಾರ್ಥಿಕ ಸತ್ಯ, ವ್ಯಾವಹಾರಿಕ ಸತ್ಯ, ಪ್ರಾತಿ ಭಾಸಿಕ ಸತ್ಯ ಎಂಬ ಮೂರು ಅವಾಂತರ ಪ್ರಕಾರಗಳಿವೆ ಎಂಬುದು ಯಾವ ಬಗೆಯ ಪ್ರಮಾಣದಿಂದ ಸಿದ್ಧಿಸುತ್ತದೆ ಎಂದು ಕೇಳುತ್ತೇವೆ. ಸುಳ್ಳಿಗೆ ಸಾಧಕತ್ವ ವಿಲ್ಲ ಎಂದು ಹಿಂದೆ ವಿವರಿಸಿದ ರೀತಿಯಂತೆ ಮೂರು ಬಗೆಯ ಸತ್ಯಗಳು ಯಾವ ರೀತಿಯಿಂದಲೂ ಕೂಡುವದಿಲ್ಲ. ಹೇಗೆಂದರೆ (i) ಸತ್ಯದ ಮೂರು ಪ್ರಕಾರ (ತ್ರೈವಿಧ್ಯ) ಆತ್ಮ ಭಿನ್ನ ಪಾರಮಾರ್ಥಿಕ ಸತ್ಯ ಪ್ರಮಾಣದಿಂದ ಸಿದ್ಧಿಸಲಾರದು. ಏಕೆಂದರೆ ಇದರಿಂದ ದ್ವೈತ ಒಪ್ಪಿದಂತಾಗುತ್ತದೆ, (ಆತ್ಮವೊಂದು ಸತ್ಯ, ಪ್ರಮಾಣ ವೊಂದು ಸತ್ಯ) (ii) ಆತ್ಮಸ್ವರೂಪವಾದ ಸತ್ಯಪ್ರಮಾಣದಿಂದಲೂ ಸತ್ಯ ತ್ರೈವಿಧ್ಯ ಸಿದ್ಧಿಸುವದಿಲ್ಲ. ಏಕೆಂದರೆ ಆತ್ಮ ನಿರ್ವಿಶೇಷ, ನಿರ್ಧರ್ಮಕ; ಅದು ಸಾಧಕವೇ ಆಗಲಾರದು. (iii) ಮೂರು ಬಗೆಯ ಸತ್ಯಗಳು ವ್ಯಾವಹಾರಿಕ ಮತ್ತು ಪ್ರಾತೀತಿಕ (ಪ್ರಾತಿಭಾಸಿಕ) ಪ್ರಮಾಣಗಳಿಂದ ಸಿದ್ಧಿಸುವದಿಲ್ಲ. ಏಕೆಂದರೆ ಇವುಗಳ ಸ್ವರೂಪವೇ ಇನ್ನೂ ಸಿದ್ಧಿಸಿಲ್ಲ. (ಬ) ಜಗತ್ತು ಅನಿರ್ವಚನೀಯ ಅಥವಾ ಸದಸದ್ವಿಲಕ್ಷಣ ಎಂದು ಮಾಯಾವಾದಿಯು ಪ್ರತಿಪಾದಿಸುತ್ತಾನೆ. ಹೇಗೆಂದರೆ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಸತ್ಯ ಎಂಬ ಅವಾಂತರ ಭೇದ ವುಳ್ಳ ಅಮುಖ್ಯ ಸತ್ಯವು ಅನಿರ್ವಚನೀಯ ಅಥವಾ ಸದಸದ್ವಿಲಕ್ಷಣವಾಗಿದೆ. ಆದ್ದರಿಂದ ವ್ಯಾವಹಾರಿಕವಾದ ಜಗತ್ತು ಸದಸದಿಲಕ್ಷಣ. ಸದ್ವಿಲಕ್ಷಣವಾದ್ದ ರಿಂದ ಜಗತ್ತು ಮಿಥ್ಯಾ ಎಂದು ಶ್ರುತಿ ಹೇಳುತ್ತದೆ. ಜಗತ್ತಿನಲ್ಲಿ ಸೇರಿದ ಪ್ರಮಾಣಗಳು ಸದ್ವಿಲಕ್ಷಣವಾದ್ದರಿಂದ ಅವು ಸಾಧಕ. ಹೀಗಾಗಿ ನಮ್ಮ ಮತ ದಲ್ಲಿ ಯಾವ ದೋಷವೂ ಇಲ್ಲ ಎಂದು ಮಾಯಾವಾದಿಯ ನಿಲುವು (stand) (ಜಗತ್ತು ತೋರುವುದರಿಂದ ಅಸದ್ವಿಲಕ್ಷಣ ಮತ್ತು ಅದು ಕೊನೆಗೆ ಬ್ರಹ್ಮ ಜ್ಞಾನದಿಂದ ಬಾಧಿತವಾಗುವದರಿಂದ ಸದ್ವಿಲಕ್ಷಣ ಎಂದು ಅವನ ವಾದ, ಅಸತ್ತು ತೋರುವದಿಲ್ಲ. ಮತ್ತು ಸತ್ಯವು ಬಾಧಿತವಾಗುವದಿಲ್ಲ ಎಂದು ಅವನ ಮತ).

ಜಗತ್ತು ಸದಸದ್ವಿಲಕ್ಷಣ ಎಂಬ ನಿನ್ನ ವಾದವು ಹಿಂದೆ ಪ್ರಮಾಣಗಳ ಬಗ್ಗೆ ಮಾಡಿದ ವಿಕಲ್ಪ ರೀತಿಯಂತೆ ಸಿದ್ಧಿಸುವದಿಲ್ಲ, ಹೇಗೆಂದರೆ— i) ಜಗತ್ತು ಸದಸದ್ವಿಲಕ್ಷಣ ಎಂಬುದು ಶುದ್ಧ ಸತ್ಯ ಪ್ರಮಾಣದಿಂದ ಸಿದ್ಧಿಸುವದಿಲ್ಲ. ಏಕೆಂದರೆ

ಮಾಯಾವಾದಿ ಸತ್ಯ ಪ್ರಮಾಣವನ್ನು ಒಪ್ಪಿಲ್ಲ. (ii) (iii) ಜಗತ್ತು ಸದಸದ್ವಿಲಕ್ಷಣ ಎಂಬುದು ಸುಳ್ಳು ಪ್ರಮಾಣಗಳಿಂದಲೂ ಸಿದ್ಧಿಸಲಾರದು. ಏಕೆಂದರೆ ಇವನ್ನು ಸಿದ್ಧಾಂತಿ ಒಪ್ಪಿಲ್ಲ. ಶುದ್ಧ ಸತ್ಯ ಪ್ರಮಾಣಕ್ಕೆ ಮಾತ್ರ ಸಾಧಕತ್ವವಿದೆ ಎಂದು ಅವನ ಅಭಿಪ್ರಾಯ.

ಇದಲ್ಲದೆ ಜಗತ್ತು ಸದಸದ್ವಿಲಕ್ಷಣ ಎಂಬಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರತ್ಯಕ್ಷದಿಂದಂತೂ ಜಗತ್ತು ಸತ್ಯವೆಂದು ತಿಳಿದು ಬರುತ್ತದೆ. ಅನುಮಾನವು ಸ್ವತಂತ್ರವಾಗಿ ಪ್ರಮಾಣವಲ್ಲ. "ನೇಹ ನಾನಾಸ್ತಿ ಕಿಂಚನ" ಎಂಬ ಶ್ರುತಿಯೂ ಜಗತ್ತು ಸದಸದ್ವಿಲಕ್ಷಣ ಎಂದು ಸರ್ವಥಾ ಹೇಳುವದಿಲ್ಲ.

**ವೈಲಕ್ಷಣ್ಯಂ ಸತಶ್ಚಾಪಿ ಸ್ವಯಂ ಸದ್ಭೇದವಾದಿನಃ ।**
**ಅಸತಶ್ಚಾಪಿ ವಿಶ್ವಸ್ಯ ತೇನಾನಿಷ್ಟಂ ಕಥಂ ಭವೇತ್ ॥೩೪॥**

**ಅವತರಣಿಕೆ :** ಜಗತ್ತು ಸದಸದ್ವಿಲಕ್ಷಣ ಎಂಬುದನ್ನು ಮಾಯಾವಾದಿಯು ಅನುಮಾನದಿಂದ ಸಾಧಿಸುತ್ತಾನೆ. ಆದರೆ ಈ ಅನುಮಾನ ಆಭಾಸ ಮಾತ್ರ. ಆದರ ಪ್ರತಿಜ್ಞಾ ಭಾಗವನ್ನು ಇಲ್ಲಿ ದೂಷಿಸುತ್ತಾರೆ.

**ಅನುವಾದ :** ಭಾವಾಭಾವ ಪದಾರ್ಥಗಳಲ್ಲಿ (ಅಥವಾ ಇರುವ ಇಲ್ಲದಿರುವ ಪದಾರ್ಥಗಳಲ್ಲಿ) ಭೇದವನ್ನು ಒಪ್ಪುವ ಸಿದ್ಧಾಂತಿಗೆ ಜಗತ್ತು ಸದ್ವಿಲಕ್ಷಣ ಎಂಬುದು ಸಮ್ಮತ ಇದ್ದೇ ಇದೆ. (ಸ್ವಯಂ ಸತ್–ಆಸ್ತಿ ಏವ) ಅದರಂತೆ ಜಗತ್ತು ಅಸದ್ವಿಲಕ್ಷಣ ಎಂಬುದೂ ಸಮ್ಮತವಿದೆ. ಆದ್ದರಿಂದ ಜಗತ್ತು ಸದಸದ್ವಿಲಕ್ಷಣ ಎಂಬುದರಿಂದ ಸಿದ್ಧಾಂತಿಗೆ ಅನಿಷ್ಟ ಹೇಗೆ ಆಗುವದು ? ಅಥವಾ ಜಗತ್ತು ಸದಸದ್ವಿಲಕ್ಷಣ ಎನ್ನುವ ನಿನಗೆ (ತೇ) ಅನಿಷ್ಟ ಹೇಗೆ ಆಗುವದಿಲ್ಲ? (ತೇನಾನಿಷ್ಟಂ ಎಂಬುದನ್ನು ತೇ–ನ–ಅನಿಷ್ಟಂ ಕಥಂ ಭವೇತ್ ಎಂದು ಪದಚ್ಛೇದ ಮಾಡಬೇಕು.)

**ವಿವರಣೆ :** (i) ಮಾಯಾವಾದಿ ಮಾಡುವ ಅನುಮಾನ ಹೀಗಿದೆ. ವಿವಾದಪದಂ (ವಿಶ್ವಂ) ಸದಸದ್ವಿಲಕ್ಷಣಂ ಬಾಧ್ಯತ್ವಾತ್ ಯಥಾ ಶುಕ್ತಿರಜತಂ" ವಿವಾದ ವಿಷಯವಾದ ಜಗತ್ತು ಸದಸದ್ವಿಲಕ್ಷಣವಾಗಿದೆ. ಏಕೆಂದರೆ ಅದು ಬ್ರಹ್ಮಜ್ಞಾನದಿಂದ ಬಾಧಿತವಾಗುತ್ತದೆ ಶುಕ್ತಿರಜತದಂತೆ. ಈ ಅನುಮಾನಕ್ಕೆ ಮುಖ್ಯವಾಗಿ ಸಿದ್ಧಸಾಧನತಾ ದೋಷ(ಸಿದ್ಧವಾದುದನ್ನೇ ಸಾಧಿಸುವದು.)ಮತ್ತು ಅರ್ಥಾಂತರತಾ ದೋಷ (ಉದ್ದೇಶ ಸಿದ್ಧಿಸಲಾರದೆ ಸಾಧ್ಯ ಕೊನೆಗೊಳ್ಳುವದು) ಬರುತ್ತವೆ. (ii) ಈ ಶ್ಲೋಕದಲ್ಲಿಯು ಸತ್, ಅಸತ್ ಶಬ್ದಗಳ ಅರ್ಥ, ಭಾವ–ಅಭಾವ **ಅಥವಾ** ವಿದ್ಯಮಾನ–ಅವಿದ್ಯಮಾನ (ಇರುವ–ಇಲ್ಲದಿರುವ) ಎಂದು, ಈ ಎರಡರಲ್ಲಿಯೂ ಎಂಟೆಂಟು ವಿಕಲ್ಪ ಮಾಡಿ ದೂಷಿಸಲಾಗಿದೆ. ಇದಲ್ಲದೆ ಸತ್ವಾಸತ್ವಾಭಾವ ಎಂಬ ಅರ್ಥವನ್ನು ವಿಕಲ್ಪ ಮಾಡಿಕೊಂಡು ದೂಷಿಸಲಾಗಿದೆ. ಭೇದವಾದಿಯು

ಸಿದ್ಧಾಂತದ ಪ್ರಕಾರವೂ ಜಗತ್ತು ಸದಸದ್ವಿಲಕ್ಷಣವಿದೆ. ಹೇಗೆಂದರೆ—

(1) ಭಾವ ಪದಾರ್ಥವು ಅಭಾವ ಪದಾರ್ಥದಿಂದ ಭಿನ್ನ ಅಥವಾ ವಿಲಕ್ಷಣ ವಾಗಿದೆ. ಮತ್ತು ಅಭಾವ ಪದಾರ್ಥವು ಭಾವ ಪದಾರ್ಥದಿಂದ ವಿಲಕ್ಷಣ (ಭಿನ್ನ) ಇದೆ. ಎಂದರೆ ಭಾವರೂಪ ಜಗತ್ತಿಗೆ, ಅಭಾವ ಪದಾರ್ಥದಿಂದ ವೈಲಕ್ಷಣ್ಯ ಮತ್ತು ಅಭಾವರೂಪ ಜಗತ್ತಿಗೆ ಭಾವಪದಾರ್ಥದಿಂದ ವೈಲಕ್ಷಣ್ಯ ಇವು ಭೇದ ವಾದಿಯಾದ ನನ್ನ ಮತದಲ್ಲಿ ಇದ್ದೇ ಇವೆ. ಆದ್ದರಿಂದ ಜಗತ್ತು ಸದಸದ್ವಿಲಕ್ಷಣ ಎಂಬುದರಿಂದ ನನಗೆ ಅನಿಷ್ಟ ಹೇಗೆ ಆಗುತ್ತದೆ ? (ಅನಿಷ್ಟವಿಲ್ಲ ಎಂದು ಭಾವ). ಇದರಿಂದ ನಿನ್ನ ಅನುಮಾನಕ್ಕೆ ಸಿದ್ಧಸಾಧನತಾ ದೋಷ ಬರುತ್ತದೆ. ಇಂತಹ ಸದಸದ್ವಿಲಕ್ಷಣತ್ವ, ಸಾಧಿಸುವದರಿಂದ ನಿನ್ನ ಉದ್ದೇಶ ಎಂದರೆ ಜಗತ್ತು ಸುಳ್ಳು ಎನ್ನುವದು ಸಿದ್ಧಿಸುವದಿಲ್ಲವಾದ್ದರಿಂದ, ನಿನ್ನ ಅನುಮಾನಕ್ಕೆ ಅರ್ಥಾಂತರತಾ ದೋಷ ಬರುತ್ತದೆ. (ಉದ್ದೇಶಸಿದ್ಧಿಂ ವಿನಾ ಸಾಧ್ಯಪರ್ಯವಸಾನಂ)

(2) ಪ್ರತ್ಯೇಕವಾಗಿ ಭಾವ–ಅಭಾವ ವೈಲಕ್ಷಣವೂ ಇದೆ. ಹೇಗೆಂದರೆ ಒಂದು ಭಾವ ಪದಾರ್ಥವು (ಘಟವು) ಇನ್ನೊಂದು ಭಾವಪದಾರ್ಥ ದಿಂದ (ಪಟದಿಂದ) ಮತ್ತು ಅಭಾವಪದಾರ್ಥದಿಂದ ಭಿನ್ನ (ವಿಲಕ್ಷಣ) ಇದೆ. ಇದರಂತೆಯೇ ಒಂದು ಅಭಾವವು ಇನ್ನೊಂದು ಅಭಾವದಿಂದ ಹಾಗೂ ಭಾವ ಪದಾರ್ಥದಿಂದ ಭಿನ್ನವಿದೆ. ಇಂತಹ ವೈಲಕ್ಷಣ್ಯದಿಂದ ನನಗೆ ಹೇಗೆ ಅನಿಷ್ಟ ?

(3) ಭಾವಾಭಾವ ವೈಲಕ್ಷಣ್ಯವೆಂದರೆ ಭಾವಪದಾರ್ಥದಲ್ಲಿ ಅಭಾವತ್ವವಿಲ್ಲ ಮತ್ತು ಅಭಾವದಲ್ಲಿ ಭಾವತ್ವವಿಲ್ಲ ಎಂಬ ಅರ್ಥವೂ ನನಗೆ ಸಮ್ಮತ. ಏಕೆಂದರೆ ಭಾವರೂಪ ಜಗತ್ತಿಗೆ ಅಭಾವದಿಂದ ವೈಲಕ್ಷಣ್ಯ ಇದೆ. ಇದರಂತೆ ಅಭಾವಕ್ಕೆ ಭಾವದಿಂದ ವೈಲಕ್ಷಣ್ಯ ನನಗೆ ಇದ್ದೇ ಇದೆ. ಆದ್ದರಿಂದ ನಾನು ಒಪ್ಪಿದ ಇಂತಹ ಭಾವಾಭಾವ ವೈಲಕ್ಷಣ್ಯವನ್ನು ಸಾಧಿಸುವದರಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ ?

(4) ಭಾವಾಭಾವ ವೈಲಕ್ಷಣ್ಯವೆಂದರೆ ಪ್ರತ್ಯೇಕವಾಗಿ ಭಾವಾಭಾವರೂಪತ್ವ ವಿಲ್ಲದಿರುವದು ಎಂಬ ಅರ್ಥವೂ ನನಗೆ ಸಮ್ಮತ, ಏಕೆಂದರೆ ಒಂದು ಭಾವ ವಸ್ತುವಿನಲ್ಲಿ ಭಾವಾಭಾವವೆಂಬ ಎರಡು ಸ್ವರೂಪವಿರಲಾರದು. ಇದರಂತೆ ಅಭಾವ ದಲ್ಲಿಯೂ ಭಾವಾಭಾವಗಳೆರಡೂ ಇರಲಾರವು. ಭಾವದಲ್ಲಿ ಭಾವತ್ವವಿದೆ, ಅಭಾವತ್ವ ವಿಲ್ಲ; ಮತ್ತು ಅಭಾವದಲ್ಲಿ ಅಭಾವತ್ವವೇ ಇದೆ, ಭಾವತ್ವವಿಲ್ಲ. ಹೀಗಾಗಿ ಈ ಪಕ್ಷದಿಂದಲೂ ನನಗೆ ಹೇಗೆ ಅನಿಷ್ಟವಾಗುತ್ತದೆ ?

(5) ಭಾವಾಭಾವ ವೈಲಕ್ಷಣ್ಯವೆಂದರೆ ಒಂದೊಂದು ವಸ್ತುವಿನಲ್ಲಿ ಭಾವತ್ವ–ಅಭಾವತ್ವವೆರಡೂ ಇಲ್ಲದಿರುವದು. ಇದು ನಿನ್ನ ಸಾಧ್ಯವಿದ್ದರೂ ನನಗೆ ಸಮ್ಮತವೇ. ಏಕೆಂದರೆ ನಮ್ಮ ಮತದಲ್ಲಿ ಭಾವರೂಪ ಜಗತ್ತಿಗೆ ಅಭಾವದಿಂದ ವೈಲಕ್ಷಣ್ಯವಿದೆ.

ಎಂದರೆ ಭಾವದಲ್ಲಿ ಅಭಾವತ್ವ ಧರ್ಮವಿಲ್ಲ. ಇದರಂತೆ ಅಭಾವಕ್ಕೂ ಭಾವದಿಂದ ವೈಲಕ್ಷಣ್ಯವಿದೆ. ಒಂದೇ ವಸ್ತುವಿನಲ್ಲಿ ಭಾವತ್ವ ಅಭಾವತ್ವಗಳೆರಡೂ ಇರುವದಿಲ್ಲ. ಹೀಗಾಗಿ ನೀನು ಮೇಲಿನಂತೆ ಸಾಧಿಸುವದರಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ? ಸಾಧ್ಯದ ಎರಡು ಅಂಶಗಳಲ್ಲಿ ಒಂದು ಅಂಶ ನನಗೆ ಸಿದ್ಧವಿರುವದರಿಂದ ಪರನಿಗೇನೇ ಸಿದ್ಧಸಾಧನತಾ ದೋಷ ಮತ್ತು ನಿಗ್ರಹ ಬರುತ್ತವೆ.

(6) ಭಾವದಲ್ಲಿ ಭಾವತ್ವ, ಅಭಾವದಲ್ಲಿ ಅಭಾವತ್ವವಿಲ್ಲದಿರುವದು ಸಾಧ್ಯವೆಂದು ಹೇಳಿದರೂ ಅದು ನನಗೆ ಸಮ್ಮತ. ಏಕೆಂದರೆ, ಒಂದು ಭಾವರೂಪ ವಸ್ತುವಿನಲ್ಲಿ (ಘಟದಲ್ಲಿ) ಭಾವತ್ವ ಸಾಮಾನ್ಯ ಇಲ್ಲವೇ ಇಲ್ಲ. ಏಕೆಂದರೆ ಪ್ರತಿ ವಸ್ತುವಿನಲ್ಲಿರುವ ಭಾವತ್ವ ಬೇರೆಯೇ. (ಪ್ರತಿಭಾವಂ ಭಾವತ್ವಾನಿ ಭಿದ್ಯಂತೇ) ಎಲ್ಲ ಭಾವಗಳಲ್ಲಿ ಅನುಗತವಾದ ಒಂದು ಅಖಂಡ ಧರ್ಮವಿರುವದಿಲ್ಲ. ಇದರಂತೆಯೇ ಒಂದು ಅಭಾವ ಪದಾರ್ಥದಲ್ಲಿ ಬೇರೊಂದು ಅಭಾವತ್ವವಿರುವದಿಲ್ಲ, ಹೀಗಾಗಿ ನೀನು ಮೇಲಿನಂತೆ ಸಾಧಿಸಿದರೆ ನನಗೆ ಹೇಗೆ ಅನಿಷ್ಟವಾಗುತ್ತದೆ ?

(7) ಭಾವಾಭಾವಗಳಲ್ಲಿ ಯಾವ ರೀತಿಯಿಂದಲೂ ಭಾವತ್ವ ಅಭಾವತ್ವವಿಲ್ಲದಿರುವುದು (ಎಂದರೆ ಭಾವದಲ್ಲಿ ಭಾವತ್ವಸಾಮಾನ್ಯದ ಅಭಾವ ಮತ್ತು ಅಭಾವದಲ್ಲಿ ಅಭಾವತ್ವ ಸಾಮಾನ್ಯದ ಅಭಾವ–ಪರಿಮಳ) ಇದುವೇ ಸಾಧ್ಯವೆಂದು ನೀನು ಹೇಳಿದರೂ ಅದು ನಮಗೆ ಸಮ್ಮತ, (ಏಕೆಂದರೆ ಭಾವಪದಾರ್ಥದಲ್ಲಿ ಯಾವ ರೀತಿಯಿಂದಲೂ ಅಭಾವತ್ವವಿಲ್ಲ,) ಹಾಗೂ ಭಾವಗಳಲ್ಲಿ ಅನುಗತವಾದ ಒಂದು ಭಾವತ್ವ ಸಾಮಾನ್ಯವಿಲ್ಲ. ಇದರಂತೆ ಅಭಾವದಲ್ಲಿ ಭಾವತ್ವವಿಲ್ಲ. ಮತ್ತು ಅನುಗತವಾದ ಒಂದು ಅಭಾವತ್ವ ಸಾಮಾನ್ಯವಿಲ್ಲ. ಹೀಗಾಗಿ ನೀನು ಮೇಲಿನಂತೆ ಸಾಧಿಸಿದರೆ ನನಗೆ ಹೇಗೆ ಅನಿಷ್ಟವಾಗುತ್ತದೆ ?

(8) ಭಾವದಲ್ಲಿ ಅಭಾವತ್ವವಿಲ್ಲ ಮತ್ತು ಅಭಾವದಲ್ಲಿ ಭಾವತ್ವವಿಲ್ಲ ಎಂಬುದು ಉಭಯವಾದಿ ಸಮ್ಮತ. ಆದರೆ ಭಾವದಲ್ಲಿ ಭಾವತ್ವವೂ ಇಲ್ಲ, ಅಭಾವದಲ್ಲಿ ಅಭಾವತ್ವವೂ ಇಲ್ಲ ಎಂಬುದು ಸಾಧ್ಯ ಎಂದು ಮಾಯಾವಾದಿ ಹೇಳಿದರೂ ನನಗೆ ಅನಿಷ್ಟವಿಲ್ಲ, ಏಕೆಂದರೆ ಮಾಯಾವಾದಿಯು ಪ್ರತಿಜ್ಞೆ ಸಿದ್ಧಿಸುವದೇ ಇಲ್ಲ. ಅದು ಪ್ರಮಾಣ ಬಾಧಿತವಾಗಿದೆ. ಭಾವದಲ್ಲಿ ಅಭಾವತ್ವವಿಲ್ಲವೆಂಬುದು ಪ್ರಮಾಣ ಪ್ರಮಿತವಾದರೂ ಅದರಲ್ಲಿ ಭಾವತ್ವವೂ ಇಲ್ಲವೆಂಬುದು ಸರ್ವಥಾ ಪ್ರಮಾಣಪ್ರಮಿತವಲ್ಲ, ಇನ್ನು ವ್ಯವಹಾರದಲ್ಲಿರುವ ಭಾವತ್ವ–ಅಭಾವತ್ವ ಗಳನ್ನು ಗೋಚರಿಸುವ ಪ್ರತ್ಯಕ್ಷಪ್ರಮಾಣವು, ತತ್ವವಿಷಯವಾದ ಯಥಾರ್ಥ ಅನುಮಾನದಿಂದ ಬಾಧಿತವಾಗುತ್ತದೆಂದು ವಾದಿಸುವದು ಅಯುಕ್ತ. ಏಕೆಂದರೆ ಭಾವಾಭಾವಗಳನ್ನು ಗೋಚರಿಸುವ ಪ್ರತ್ಯಕ್ಷವು ತತ್ವಬೋಧಕವೇ. ಇಲ್ಲವಾದರೆ

ಚಕ್ರಕಾದಿ ದೋಷಗಳು ಬರುತ್ತವೆ. ಮತ್ತು ಕಾಮಚಾರಿಯಾದ ಕೇವಲ ಅನುಮಾನವು ತತ್ವವಿಷಯದಲ್ಲಿ ಅತಿಪ್ರಸಂಗ ತರುತ್ತದೆ. (ಉದಾ– ಅಗ್ನಿಯು ಪದಾರ್ಥವಾದ್ದರಿಂದ ಅನುಷ್ಣ, ನೀರಿನಂತೆ.)

(9) ಇನ್ನು ಸದಸತ್ ಇರುವ–ಇಲ್ಲದಿರುವ (ವಿದ್ಯಮಾನ–ಅವಿದ್ಯಮಾನ) ಎಂಬ ಎರಡನೆಯ ಅರ್ಥದಲ್ಲಿಯೂ ಇದೇ ಉತ್ತರ. ಹೇಗೆಂದರೆ ಸತ್ಯವಾದ ಜಗತ್ತಿಗೆ (ಘಟಕ್ಕೆ) ಸತ್ಯವಾದ ಅಥವಾ ಇರುವ ಬೇರೊಂದು ವಸ್ತುವಿನಿಂದ (ಘಟದಿಂದ) ಭೇದವು(ಸತಃ ವೈಲಕ್ಷಣ್ಯಂ) ಸ್ವತಃ ಇದ್ದೇ ಇದೆ, ಆದ್ದರಿಂದ ಇದನ್ನು ಸಾಧಿಸುವದರಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ ? ನಾನು ಸತ್ಯವಾದ ಜಗತ್ತಿಗೆ ಇಲ್ಲದಿರುವ ಎಂದರೆ ಅಸತ್ಯದಿಂದ ಭೇದವನ್ನೂ, ಇರುವ ಪದಾರ್ಥಗಳಲ್ಲಿಯೇ ಪರಸ್ಪರ ಭೇದವನ್ನೂ ಒಪ್ಪುತ್ತೇನೆ.

(10) ಸದಸದ್ವಿಲಕ್ಷಣ ಎಂದರೆ ಸತ್ಯತೆಯೂ ಇಲ್ಲ; ಅಸತ್ಯತೆಯೂ ಇಲ್ಲ ಎಂಬ ಅರ್ಥವೂ ನನ್ನ ಮತದಲ್ಲಿ ಕೂಡುತ್ತದೆ. ಏಕೆಂದರೆ ಸತ್ಯವಾದ ಜಗತ್ತಿಗೆ ಅಸತ್ಯದಿಂದ ಭೇದ ಇದ್ದೇ ಇದೆ ಎಂದರೆ ಸತ್ಯ ವಸ್ತುವಿನಲ್ಲಿ ಅಸತ್ಯತೆ ಇಲ್ಲ. ಇದರಂತೆ ಅಸತ್ಯದಲ್ಲಿ ಸತ್ಯತ್ವವಿಲ್ಲ. ಆದ್ದರಿಂದ ಮೇಲಿನಂತೆ ಸದಸದ್ವಿಲಕ್ಷಣವನ್ನು ಸಾಧಿಸುವದರಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ ?

ಮೇಲೆ (10)ರಲ್ಲಿ ಜಗತ್ತು ಸದಸದ್ವಿಲಕ್ಷಣವೆಂದರೆ, ಅದರಲ್ಲಿ ಸತ್ಯತೆಯೂ ಇಲ್ಲ. ಅಸತ್ಯತೆಯೂ ಇಲ್ಲ ಎಂಬ ಅರ್ಥವು ಅತ್ಯಂತ ಅಯುಕ್ತವೆಂದು ಪ್ರತಿಪಾದಿಸುತ್ತಾರೆ. ಸತ್ಯತೆಯಲ್ಲಿ ಅಸತ್ಯತೆಯಿಲ್ಲ ಎಂಬ ಅಂಶ ಉಭಯವಾದಿ ಸಮ್ಮತ. ಆದರೆ ಸತ್ಯದಲ್ಲಿ ಸತ್ಯತೆಯೂ ಇಲ್ಲವೆನ್ನುವದು ಅಸಂಗತ, ಇದರಿಂದ ಎರಡು ಅನಿಷ್ಟಗಳು ಬರುತ್ತವೆ. (i) ಸತ್ಯತೆ ಇಲ್ಲ ಎಂದರೆ ಅಸತ್ಯತೆ ಇದೆ ಎಂದಾಗುತ್ತದೆ, ಎಂದರೆ ಜಗತ್ತು ಅಸತ್ಯವಾಗಬೇಕಾಗುತ್ತದೆ. (ii) ಸತ್ಯತೆಯಿಲ್ಲವೆಂದರೆ ಅಸತ್ಯತೆ ಇದೆ ಎಂದಾಗುತ್ತದೆ. ಮುಂದೆ ಅಸತ್ಯತೆಯೂ ಇಲ್ಲ ಎಂದು ಅಸತ್ಯತೆಯನ್ನು ನಿರಾಕರಿಸುವದರಿಂದ ಪರಸ್ಪರ ವಚನವಿರೋಧ ದೋಷ ಬರುತ್ತದೆ. (ವ್ಯಾಘಾತ) ಇಲ್ಲಿ ಗಮನಿಸಬೇಕಾದ ಒಂದು ಮುಖ್ಯ ಸಂಗತಿ ಎಂದರೆ ಪ್ರತಿಯೊಂದು ವಸ್ತುವಿನಲ್ಲಿ ಸತ್ವವಿದ್ದೇ ಇರುತ್ತದೆ. ಆದರೆ ಎಲ್ಲಿ ವಸ್ತುಗಳಲ್ಲಿರುವ ಸತ್ವ ಒಂದೇ ಅಲ್ಲ. ಅದು ಬೇರೆ ಬೇರೆಯೇ, ಘಟದಲ್ಲಿರುವ ಸತ್ವ, ಪಟದಲ್ಲಿರುವ ಸತ್ವ ಬೇರೆ ಬೇರೆಯೇ. "ನ ಸತ್ವಂ ನಾಮ ಏಕಂ ಅನುಗತಂ, ಕಿಂತು ಪ್ರತಿವಸ್ತು ಭಿದ್ಯತೇ"—ಸುಧಾ,

ಮಾಯಾವಾದಿಗಳು ಆಕಾಶಾದಿಗಳಿಗೆ ಅಸತ್ಯದಿಂದ ವೈಲಕ್ಷಣ್ಯ ಹೇಳುವದರೊಂದಿಗೆ ಅವುಗಳಲ್ಲಿ ಸತ್ಯತೆಯೂ ಇಲ್ಲ ಎನ್ನುತ್ತಾರೆ. "ಅಂಬರಾದೇಃ". ಅಸದ್ವಿ

ಲಕ್ಷಣತ್ವೇ ಸತಿ ಸತ್ತ್ವಾನಧಿಕರಣತ್ವಂ" ಆಕಾಶಾದಿಗಳಲ್ಲಿ ಅಸತ್ಯವಿಲ್ಲವೆಂಬ ಅಂಶ ಸಮ್ಮತವಿದ್ದರೂ ಅವುಗಳಲ್ಲಿ ಸತ್ಯತ್ವವೂ ಇಲ್ಲ ಎನ್ನುವದನ್ನು ಒಪ್ಪಲಿಕ್ಕೆ ಬರುವದಿಲ್ಲ ಹೇಗೆಂದರೆ :– ಅಂಬರಾದಿಗಳಲ್ಲಿ ಸತ್ಯತ್ವವಿಲ್ಲ ಎಂದು ಸಾಧಿಸುವ ನಿನ್ನ (ಮಾಯಾವಾದಿಯ) ಅಭಿಪ್ರಾಯವೇನು ?

i) ಒಂದು ಸತ್ಯತ್ವವಿಲ್ಲವೆಂದೋ ii) ಅನೇಕ ಸತ್ಯಗಳಿಲ್ಲವೆಂದೋ iii) ಸರ್ವಸತ್ವಗಳಿಲ್ಲವೆಂದೋ iv) ವಿಶೇಷಣಗಳಿಲ್ಲದ ಕೇವಲ ಸತ್ವವಿಲ್ಲವೆಂದೋ ? v) ಸರ್ವಥಾ (ಯಾವ ಪ್ರಕಾರದಿಂದಲೂ) ಸತ್ವವಿಲ್ಲವೆಂದೋ ?

ಇವುಗಳಲ್ಲಿ ಯಾವ ವಿಕಲ್ಪದಿಂದಲೂ ನನಗೆ (ಸಿದ್ಧಾಂತಿಗೆ) ಅನಿಷ್ಟವಿಲ್ಲ. (i) ಒಂದು ಸತ್ಯ ವಸ್ತುವಿನಲ್ಲಿ ಇನ್ನೊಂದರ ಸತ್ಯತ್ವವಿಲ್ಲವೆಂಬುದು ನನಗೆ ಸಮ್ಮತವೇ. ಘಟದಲ್ಲಿ ಪಟದ ಸತ್ಯತ್ವವಿಲ್ಲ. ಪ್ರತಿಯೊಂದು ವಸ್ತುವಿನಲ್ಲಿ ಬೇರೆ ಬೇರೆ ಸತ್ಯತ್ವಗಳೇ ಇವೆ. ಆದ್ದರಿಂದ ಈ ವಿಕಲ್ಪದಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ ? iv) ಮೇಲಿನ ನಿರೂಪಣೆಯಿಂದ ಕೇವಲ ಸತ್ವವಿಲ್ಲ ಎಂಬ ನಾಲ್ಕನೆಯ ವಿಕಲ್ಪವೂ ನಿರಾಕೃತವಾಗುತ್ತದೆ. (ii) & (iii) ನಮ್ಮ ಮತದಲ್ಲಿ ಒಂದು ವಸ್ತು ಬೇರೆ ವಸ್ತುಗಳಿಂದ, ಉಳಿದೆಲ್ಲ ವಸ್ತುಗಳಿಂದ ಭಿನ್ನ. ಎಂದರೆ ಒಂದು ವಸ್ತುವಿನಲ್ಲಿ ಬೇರೆ ಅನೇಕ ಅಥವಾ ಉಳಿದೆಲ್ಲ ವಸ್ತುಗಳ ಸತ್ಯತ್ವವಿಲ್ಲವೆಂಬುದನ್ನು ನಾವು ಒಪ್ಪಿದ್ದೇವೆ. ಏಕೆಂದರೆ ಹಿಂದೆ ನಿರೂಪಿಸಿದಂತೆ, ಪ್ರತಿಯೊಂದು ವಸ್ತುವಿನಲ್ಲಿಯು ಸತ್ಯತ್ವವು ಬೇರೆಯೇ. ಈ ಎರಡೂ ವಿಕಲ್ಪಗಳಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ ? (v) ಅಂಬರಾದಿಗಳು ಅಸದ್ವಿಲಕ್ಷಣವಾಗಿದ್ದು, ಅವುಗಳಲ್ಲಿ ಸರ್ವಥಾ ಸತ್ವವಿಲ್ಲವೆನ್ನುವದು ತುಂಬಾ ಅಸಮಂಜಸ. ಆಕಾಶಾದಿಗಳು ಅಸದ್ವಿಲಕ್ಷಣ ಎಂದರೆ ಅವುಗಳಲ್ಲಿ ಅಸತ್ವವಿಲ್ಲ. ಸತ್ಯತ್ವವಿವೆ ಎಂದಾಗುತ್ತದೆ. ಮುಂದೆ ಅವುಗಳಲ್ಲಿ ಸತ್ಯತ್ವವಿಲ್ಲವೆನ್ನುವದು ಹಿಂದಿನ ಮಾತಿಗೆ ವಿರುದ್ಧವಾಗುವದು. 'ನನ್ನ ತಾಯಿ ಬಂಜೆ ಎಂಬಂತೆ ವ್ಯಾಘಾತ ದೋಷ ಬರುತ್ತದೆ. ಮತ್ತು ಆಕಾಶಾದಿಗಳು ಸತ್ಯಾಸತ್ಯ ಎಂದರೆ ಪರಸ್ಪರ ವಿರುದ್ಧ ರೂಪವಾಗುವ ಅನಿಷ್ಟ ಪ್ರಸಂಗವೂ ಬರುತ್ತದೆ. ಹೀಗಾಗಿ ನಿನ್ನ ವ್ಯಾಹತ ಪ್ರತಿಜ್ಞೆಯಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ ?

ಇದಲ್ಲದೆ ಜಗತ್ತು ಸತ್ಯವಿದೆ. ಅದು ಅಸತ್ಯದಿಂದ ಭಿನ್ನವಿದೆ ಎಂಬುದು ಸಾಕ್ಷಿ ಸಿದ್ಧ. ಇದಕ್ಕೆ ವಿರುದ್ಧವಾಗಿ ಜಗತ್ತು ಸುಳ್ಳು ಅದರಲ್ಲಿ ಸತ್ಯತ್ವ ಸರ್ವಥಾ ಇಲ್ಲ ಎನ್ನುವದು ಅಸಮಂಜಸ. ಹೀಗೆ ನಿಸ್ಸಂದಿಗ್ಧ ಸಾಕ್ಷಿಪ್ರತ್ಯಕ್ಷಕ್ಕೆ ಬಾಧಕವಾದ ಜಗನ್ಮಿಥ್ಯಾತ್ವವನ್ನು ಪ್ರತಿಜ್ಞೆ ಮಾಡಿ, ಅದನ್ನು ಸಾಧಿಸುವದರಿಂದ ನನಗೆ ಹೇಗೆ ಅನಿಷ್ಟವಾಗುತ್ತದೆ ? ಸಾಕ್ಷಿ ಪ್ರಮಾಣವು ಮುಖ್ಯ ಸತ್ಯತೆಯನ್ನು

ವಿಷಯೀಕರಿಸುತ್ತದೆ. ನೀನು ಹೇಳುವಂತೆ ಅನುಖ್ಯ ಸತ್ಯತ್ವವನ್ನಲ್ಲ. ಅಮುಖ್ಯ ಸತ್ಯವು ಇನ್ನೂ ಸಿದ್ಧವೇ ಇಲ್ಲ.

**ಟೀಪು :** ಕೆಲವು ವ್ಯಾಖ್ಯಾನಕಾರರು "ತೇ(ತವ) ನ ಅನಿಷ್ಟಂ ಕಥಂ ಭವೇತ್" ನಿನಗೆ (ಮಾಯಾವಾದಿಗೆ) ಹೇಗೆ ಅನಿಷ್ಟವಾಗುವದಿಲ್ಲ ಎಂದು ವ್ಯಾಖ್ಯಾನಿಸುತ್ತಾರೆ. ಇದೂ ಗ್ರಾಹ್ಯವೇ. ಈ ಬಗೆಯ ಪದಚ್ಛೇದದಲ್ಲಿ ಯಾವ ವ್ಯಾಕರಣಾದಿ ದೋಷಗಳಿಲ್ಲ.

**ಯದ್ಯುಚ್ಯತೇಽಪಿ ಸರ್ವಸ್ಮಾದಿತಿ ಸದ್ಭೇದಸಂಸ್ಥಿತಿಃ ।**
**ಸನ್ಮಾತ್ರತ್ವಂ ಬ್ರಹ್ಮಣೋಽಪಿ ತಸ್ಮಾತ್ತದಪಿ ನೋ ಭವೇತ್ ॥೨೫॥**

**ಅವತರಣಿಕೆ :** ಜಗತ್ತು ಸದಸದ್ವಿಲಕ್ಷಣ ಎಂದು ಸಾಧಿಸಲು ಹೊರಟ ಮಾಯಾವಾದಿಯ ಅನುಮಾನದ ಪ್ರತಿಜ್ಞಾ ಭಾಗಕ್ಕೆ ಬರುವ ಬೇರೆ ದೋಷಗಳನ್ನು ಹೇಳುತ್ತಾರೆ.

**ಅನುವಾದ :** (ಅಸದ್ವಿಲಕ್ಷಣವಾದ) ಜಗತ್ತು ಸದ್ವಿಲಕ್ಷಣ ಎಂದರೆ ಅದು ಇತರ ಎಲ್ಲ ಸತ್ಪದಾರ್ಥಗಳಿಂದ ಭಿನ್ನ ಎಂಬ ಅರ್ಥ ಹೇಳಿದರೆ, ಸತ್ಪದಾರ್ಥಗಳಲ್ಲಿ ಭೇದವು ಸಿದ್ಧಿಸುತ್ತದೆ. ಇದರಿಂದಾಗಿ ಮಾಯಾವಾದಿಗೆ ಅಪಸಿದ್ಧಾಂತ ದೋಷ ಬರುತ್ತದೆ. ಇನ್ನು ಸದ್ವಿಲಕ್ಷಣವೆಂದರೆ ಕೇವಲ ಸತ್ಯದಿಂದ ಭಿನ್ನ ಎಂಬ ಅರ್ಥ ವಿದ್ದರೆ ಜಗತ್ತು ಕೇವಲ ಸತ್ಯತ್ವವುಳ್ಳ ಬ್ರಹ್ಮನಿಂದ ಭಿನ್ನ ಎಂದಾಗುತ್ತದೆ. ಇದೂ ನಮಗೆ ಸಮ್ಮತವೇ.

**ವಿವರಣೆ :** ಹಿಂದಿನ ಶ್ಲೋಕದ 10ನೇ ವಿಕಲ್ಪದ (ii) (iii)ಗಳಿಗೆ ಬರುವ ದೋಷಗಳನ್ನು ಈ ಶ್ಲೋಕದ ಪೂರ್ವಾರ್ಧದಿಂದಲೂ iv ಕ್ಕೆ ಬರುವ ದೋಷವನ್ನು ಉತ್ತರಾರ್ಧದಿಂದಲೂ ವಿವರಿಸುತ್ತಾರೆ. ಜಗತ್ತು ಸದ್ವಿಲಕ್ಷಣವೆಂದರೆ ಇತರ ಅನೇಕ, ಅಥವಾ ಸರ್ವಸತ್ಪದಾರ್ಥಗಳಿಂದ ಭಿನ್ನ ಎಂದರೆ ಅನೇಕ ಸತ್ಯತೆಗಳನ್ನು ಹಾಗೂ ಅವುಗಳಲ್ಲಿಯ ಭೇದವನ್ನು ಒಪ್ಪಿದಂತಾಗುತ್ತದೆ. ಇದರಿಂದಾಗಿ ನಿನಗೆ ಅಪಸಿದ್ಧಾಂತ ದೋಷ ಬರುತ್ತದೆ. ಇನ್ನು ಸದ್ವಿಲಕ್ಷಣವೆಂದರೆ ಜಗತ್ತು ಕೇವಲ ಸತ್ಯದಿಂದ ಭಿನ್ನ ಎಂಬ ಅರ್ಥವೂ ನಮಗೆ ಸಮ್ಮತ. ಬ್ರಹ್ಮನಿಗೆ ಮಾತ್ರ ಕೇವಲ ಸತ್ಯತ್ವವಿದೆ. ಆದ್ದರಿಂದ ಜಗತ್ತು ಕೇವಲ ಸತ್ಯತ್ವವುಳ್ಳ ಬ್ರಹ್ಮನಿಂದ ಭಿನ್ನ ಎಂಬ ಅರ್ಥವೂ ನಮಗೆ ಸಮ್ಮತ.

ಅಥವಾ

ಜಗತ್ತು ಸದಸದ್ವಿಲಕ್ಷಣ ಎನ್ನುವ ನಿಮ್ಮ ಪ್ರಕಾರ ಸತ್ಯತೆ (ಸತ್ವಂ) ಎಂದರೇನು ? ಸತ್ತಾ ಎಂಬ ಜಾತಿಯೋ ? (ಸಾಮಾನ್ಯವೋ) ಅಥವಾ ವಸ್ತು ಸ್ವರೂಪವೋ ? ಜಾತಿ (ಸತ್ತಾ) ಎಂಬ ಅರ್ಥ ಕೂಡುವದಿಲ್ಲ, ಜಾತಿ ಅಥವಾ

ಸಾಮಾನ್ಯವು ಎಲ್ಲ ವಸ್ತುಗಳಲ್ಲಿ ಅನುಗತವಾಗಿರುತ್ತದೆ, (ನಿತ್ಯಂ ಏಕಂ ಅನೇಕಾನುಗತಂ ಸಾಮಾನ್ಯಂ) ಆದ್ದರಿಂದ ಜಗತ್ತು ಸದ್ವಿಲಕ್ಷಣವೆಂದು ಹೇಳಿದರೆ, ಬೇರೆ ಸತ್ಯ ಪದಾರ್ಥಗಳ ಇರುವಿಕೆ ಮತ್ತು ಅವುಗಳಲ್ಲಿಯು ಪರಸ್ಪರ ಭೇದ ಒಪ್ಪಿದಂತಾಗುತ್ತದೆ. ಇದರಿಂದ ಮಾಯಾವಾದಿಗೆ ಅಪಸಿದ್ಧಾಂತ ದೋಷ ಬರುತ್ತದೆ. ಏಕೆಂದರೆ ಅವನ ಪ್ರಕಾರ ಬ್ರಹ್ಮವೊಂದೇ ಸತ್ಯ, ಬೇರೆ ಸತ್ಯಗಳಿಲ್ಲ. ಬ್ರಹ್ಮನಿಗೆ ಕೇವಲ ಸತ್ಯತೆ, ನಿರ್ವಿಶೇಷ ಸತ್ಯತೆ ಇದೆ (ಸಾಮಾನ್ಯ ಸತ್ವ ಇಲ್ಲ) ಎಂಬುದು ನಮಗೆ ಸಮ್ಮತವೇ.

ಸತ್ವ ಎಂದರೆ ವಸ್ತುಸ್ವರೂಪವಾದ ಧರ್ಮ ಎಂಬ ಎರಡನೆಯ ಅರ್ಥ ಹೇಳಿದರೂ ನಿನಗೆ ದೋಷ ತಪ್ಪುವದಿಲ್ಲ ಎಂದು ಶ್ಲೋಕದ ಎರಡನೇ ಚರಣದಿಂದ ನಿರೂಪಿಸುತ್ತಾರೆ. ವಸ್ತು ಸ್ವರೂಪವಾದ ಕೇವಲ ಸತ್ವ ಬ್ರಹ್ಮನಿಗಿದೆ. 'ಸದ್ವೈಲಕ್ಷಣ್ಯ ಎಂದರೆ ಜಗತ್ತಿಗೆ ಬ್ರಹ್ಮನಿಂದ ವೈಲಕ್ಷಣ್ಯ ಅಥವಾ ಭೇದ, ನಮಗೆ ಸಮ್ಮತ. ಇದರಿಂದ ಮಾಯಾವಾದಿಗೆ ಸಿದ್ಧಸಾಧನತಾ ದೋಷ ಬರುತ್ತದೆ.

**ಟೀಪು :** ಈ ಶ್ಲೋಕಕ್ಕಿರುವ ಇನ್ನೂ ಬೇರೆ ಅರ್ಥಗಳಿಗಾಗಿ ಮೂಲ ನೋಡಿರಿ. ಇದರಂತೆ ಸತ್ಯ ಎಂದರೆ 'ಅರ್ಥಕ್ರಿಯಾಕಾರಿತ್ವಂ' 'ಜ್ಞಾನಬಾಧ್ಯತ್ವಂ' 'ಪ್ರತಿಪನ್ನೋಪಾಧೌ ನಿಷೇಧಾಪ್ರತಿಯೋಗಿತ್ವಂ' ಮೊದಲಾದ ಅರ್ಥಗಳ ವಿವೇಚನೆಗೆ ಮೂಲ ನೋಡಿರಿ. ಇವುಗಳಲ್ಲಿ ಕೆಲವನ್ನು ಮುಂದಿನ ಶ್ಲೋಕದಲ್ಲಿ ನಿರೂಪಿಸಲಾಗಿದೆ.

**ಜ್ಞಾನಬಾಧ್ಯತ್ವಮಪಿ ತು ನ ಸಿದ್ಧಂ ಪ್ರತಿವಾದಿನಃ ।**
**ವಿಜ್ಞಾತಸ್ಯಾನ್ಯಥಾ ಸಮ್ಯಗ್ವಿಜ್ಞಾನಂ ಹ್ಯೇವ ತನ್ಮತಮ್ ॥೨೬॥**

**ಅವತರಣಿಕೆ :** "ಜಗತ್ತು ಸದಸದ್ವಿಲಕ್ಷಣವಾಗಿದೆ, ಏಕೆಂದರೆ ಬ್ರಹ್ಮಜ್ಞಾನದಿಂದ ಬಾಧಿತವಾಗುತ್ತದೆ. ಶುಕ್ತಿರಜತದಂತೆ" ಎಂಬ ಮಾಯಾವಾದಿಯ ಅನುಮಾನದ ಹೇತು ಮತ್ತು ದೃಷ್ಟಾಂತ ದೋಷಗಳನ್ನು ನಿರೂಪಿಸುತ್ತಾರೆ.

**ಅನುವಾದ :** ಅದ್ವೈತಿಗಳಿಗೆ ಸಮ್ಮತವಾದ ಜ್ಞಾನಬಾಧ್ಯತ್ವವಾದರೋ ಪ್ರತಿವಾದಿಯಾದ ಸಿದ್ಧಾಂತಿಗೆ ಸಮ್ಮತವಿಲ್ಲ, ವಿಪರೀತವಾಗಿ ತಿಳಿದ ವಸ್ತುವಿನ ಯಥಾರ್ಥ ಜ್ಞಾನವೇ ಬಾಧ ಎಂದು ನಮ್ಮ (ಸಿದ್ಧಾಂತಿಗಳ) ಮತ.

**ವಿವರಣೆ :** ಪರರ ಪ್ರಕಾರ ಜ್ಞಾನಬಾಧ್ಯತ್ವವೆಂದರೆ (1) ಜ್ಞಾನನಿವರ್ತ್ಯತ್ವಂ ಜ್ಞಾನದಿಂದ ನಿವೃತ್ತಿ ಅಥವಾ ನಾಶ ಹೊಂದುವದು. ಅಥವಾ (2) ಪ್ರತಿಪನ್ನೋಪಾಧೌ ನಿಷೇಧ ಪ್ರತಿಯೋಗಿತ್ವಂ—ಪ್ರಮಾಣ ಪ್ರಮಿತ ಅಧಿಕರಣದಲ್ಲಿ (ಆತ್ರಯದಲ್ಲಿ) ನಿಷೇಧವನ್ನು ಹೊಂದುವದು. ಈ ಲಕ್ಷಣದ ಅಭಿಪ್ರಾಯ

ವನ್ನೇ ಕೆಲವರು 'ಪ್ರತಿಪನ್ನೋಪಾಧೌ' ತ್ರೈಕಾಲಿಕಸತ್ತಾನಿಷೇಧಃ ಎಂದು ಹೇಳುವರು.

ಆದರೆ ಈ ಎರಡೂ ಲಕ್ಷಣಗಳು ಪ್ರತಿವಾದಿಗೆ (ಸಿದ್ಧಾಂತಿಗೆ) ಸಮ್ಮತ ವಿಲ್ಲ. ಸಿದ್ಧಾಂತಿಗಳ ಪ್ರಕಾರ ಬಾಧೆ ಎಂದರೆ 'ಅನ್ಯಥಾ ವಿಜ್ಞಾತಸ್ಯ ಸಮ್ಯಕ್ ವಿಜ್ಞಾನಂ— ವಿಪರೀತವಾಗಿ ತಿಳಿದ ವಸ್ತುವಿನ ಯಥಾರ್ಥ ಜ್ಞಾನ. ಪರರು ನಿರೂಪಿಸಿದ ಬಾಧದ ಲಕ್ಷಣಗಳನ್ನು ಟೀಕಾರಾಯರು ವಿಶ್ಲೇಷಿಸಿ ನಿರಾಕರಿಸಿದ್ದಾರೆ. ಅದರ ಸಾರ ಹೀಗಿದೆ.

1) **ಜ್ಞಾನನಿವರ್ತ್ಯತ್ವಂ ಬಾಧ** : ಜ್ಞಾನದಿಂದ ನಿವೃತ್ತಿ ಅಥವಾ ನಾಶ ಹೊಂದು ವದು ಬಾಧ ಎಂಬ ಲಕ್ಷಣ ಅಯುಕ್ತ. ಘಟಜ್ಞಾನವಾದೊಡನೆ, ತತ್ಪೂರ್ವ ದಲ್ಲಿದ್ದ ಘಟವಿಷಯಕ ಅಜ್ಞಾನ ನಿವೃತ್ತವಾಗುವದರಿಂದ ಘಟಜ್ಞಾನಕ್ಕೂ ಬಾಧ ಎನ್ನುವ ಪ್ರಸಂಗ ಬರುತ್ತದೆ. ಆದ್ದರಿಂದ ಈ ದೋಷವನ್ನು ಪರಿಹರಿಸಲು ತನ್ನ ಕಾರ್ಯ ಸಹಿತವಾದ ಅಜ್ಞಾನದ ನಿವೃತ್ತಿ ಬಾಧ ಎಂದು ಬಾಧದ ಲಕ್ಷಣ ಹೇಳುತ್ತಾರೆ. ಬ್ರಹ್ಮಜ್ಞಾನವಾದೊಡನೆ ಅಜ್ಞಾನವು ನಾಶವಾಗಿ, ಅದರ ಕಾರ್ಯವಾದ ಜಗತ್ತೂ ನಾಶಹೊಂದುತ್ತದೆಂದು ಮಾಯಾವಾದಿಗಳು ಹೇಳು ತ್ತಾರೆ. ಈ ವಿಷಯ ನಮಗೆ ಸಮ್ಮತವಲ್ಲ. ಪನಿಕೆಯು ಹೊಡೆತದಿಂದ ಗಡಿಗೆ ನಾಶವಾಗುವಂತೆ ಈಶ್ವರನ–ಜ್ಞಾನ–ಇಚ್ಛೆ–ಪ್ರಯತ್ನ ವ್ಯಾಪಾರಗಳಿಂದ ಪ್ರಪಂಚದ ನಾಶವನ್ನು ನಾವು ಹೇಳುತ್ತೇವೆ. ಬ್ರಹ್ಮಜ್ಞಾನವಾದೊಡನೆ ಜಗತ್ತು ನಿವೃತ್ತ ವಾಗುವದಿಲ್ಲ. ಇದಲ್ಲದೆ ಮಾಯಾವಾದಿಯು "ಜ್ಞಾನದಿಂದ ನಿವೃತ್ತವಾಗುವದು ಅಜ್ಞಾನ ಅಥವಾ ಅಜ್ಞಾನದ ಕಾರ್ಯ" ಎನ್ನುತ್ತಾನೆ. ಇದೂ ನಮಗೆ ಅಸಮ್ಮತ. ಸತ್ಯ ಪದಾರ್ಥವೂ ಜ್ಞಾನದಿಂದ ನಿವೃತ್ತವಾಗುತ್ತದೆ ಉದಾ : ಕೈದಿಯ ಸತ್ಯವಾದ ಬೇಡಿಗಳು ರಾಜನ ಅನುಗ್ರಹದಿಂದ ನಿವೃತ್ತವಾಗುತ್ತವೆ.

2) **ಪ್ರತಿಪನ್ನೋಪಾಧೌ ನಿಷೇಧ ಪ್ರತಿಯೋಗಿತ್ವಂ ಬಾಧ :** ಪ್ರಮಾಣ ಪ್ರಮಿತ ಅಧಿಕರಣದಲ್ಲಿ (ಆಶ್ರಯದಲ್ಲಿ) ನಿಷೇಧ ಹೊಂದುವದು ಬಾಧ. ಈ ಲಕ್ಷಣವನ್ನು ಮಾಯಾವಾದಿಗಳು ಹೇಳುತ್ತಾರೆ. ಅವರ ಇದು ನಮಗೆ ಸಮ್ಮತ ವಿಲ್ಲ. ಇದಕ್ಕೆ ಸಂಪೂರ್ಣ ವಿರುದ್ಧವಾಗಿಯೇ ನಮ್ಮ ಲಕ್ಷಣವಿದೆ. ಪ್ರತಿಪನ್ನೋ ಪಾಧೌ ನಿಷೇಧ– ಅಪ್ರತಿಯೋಗಿತ್ವಂ ಬಾಧಃ. ಪ್ರಮಾಣಪ್ರಮಿತ ಅಧಿಕರಣದಲ್ಲಿ (ಆಶ್ರಯದಲ್ಲಿ) ನಿಷೇಧ ಹೊಂದದಿರುವದು ಬಾಧ. ಇದರ ಅಭಿಪ್ರಾಯ ಒಂದು ಉದಾಹರಣೆಯಿಂದ ಸ್ಪಷ್ಟವಾಗುತ್ತದೆ. ದೂರದಿಂದ ಶಿಂಪನ್ನು ನೋಡಿ ಇದು ಬೆಳ್ಳಿ ಎಂಬ ಭ್ರಮ ಒಮ್ಮೊಮ್ಮೆ ಉಂಟಾಗುತ್ತದೆ. ನಂತರ ಸಮೀಪಕ್ಕೆ ಹೋಗಿ ಪರೀಕ್ಷಿಸಿದಾಗ (ದರ್ಶನ, ಛೇದನ, ಭೇದನ ಮುಂ.) "ಇದು ಬೆಳ್ಳಿಯಲ್ಲ, ಶಿಂಪು ಎಂಬ ಬಾಧಜ್ಞಾನ ಬರುತ್ತದೆ. ಈ ಜ್ಞಾನಕ್ಕೆ ಶಿಂಪು ಆಶ್ರಯ. ಉಪಾಧಿ

ಅಥವಾ ಅಧಿಕರಣ). ಈ ಜ್ಞಾನ ಯಥಾರ್ಥ. ಇದಕ್ಕೆ (ಬಾಧಜ್ಞಾನಕ್ಕೆ) ನಿಷೇಧ ಉಂಟಾಗುವದಿಲ್ಲ. ಆದ್ದರಿಂದ ಪ್ರತಿಪನ್ನ (ಸಮ್ಮತ) ಉಪಾಧೌ ನಿಷೇಧ ಅಪ್ರತಿಯೋಗಿತ್ವಂ ಬಾಧಃ ಎಂಬ ಲಕ್ಷಣ ಸುಸಂಗತವಾಗಿದೆ. [ಸತ್ಯತೆಯ ಲಕ್ಷಣವೂ ಇದೇ ಆಗಿದೆ. 'ಇದು ಗಡಿಗೆ' ಎಂಬ ಜ್ಞಾನ ಯಥಾರ್ಥ ಈ ಜ್ಞಾನಕ್ಕೆ ಆಶ್ರಯ ಭೂತಲ. ಆದರೆ ಭೂತಲದಲ್ಲಿ ಈ ಗಡಿಗೆ ಇಲ್ಲ ಎಂಬ ನಿಷೇಧ ಜ್ಞಾನ ಬರುವದಿಲ್ಲ. ಆದ್ದರಿಂದ ಪ್ರತಿಪನ್ನೋಪಾಧೌ ನಿಷೇಧ ಅಪ್ರತಿಯೋಗಿತ್ವಂ ಸತ್ಯತಾ ಎಂಬ ಲಕ್ಷಣ ಸುಸಂಗತವಾಗಿದೆ.] ಆದರೆ ಮಾಯಾವಾದಿಗಳು ಇದಕ್ಕೆ ವಿರುದ್ಧವಾಗಿ ನಿಷೇಧ ಹೊಂದುವದು, ತ್ರೈಕಾಲಿಕ ಸತ್ಯತಾ ನಿಷೇಧಃ ಬಾಧಃ ಎನ್ನುತ್ತಾರೆ. ಹೀಗೆ ಹೇಳಲು ಕಾರಣವೆಂದರೆ, ಅವರ ಪ್ರಕಾರ ಬ್ರಹ್ಮಜ್ಞಾನವಾದೊಡನೆ ಸಕಲ ಪ್ರಪಂಚವು (ಘಟ ಪಟ, ಶುಕ್ತಿ ಮುಂ.) ನಿವೃತ್ತವಾಗುತ್ತದೆ. ಎಂದರೆ ಪ್ರಪಂಚ ನಾಶವಾಗಿ ಅದರಲ್ಲಿಯ ಎಲ್ಲ ವಸ್ತುಗಳು ನಾಶ (ನಿಷೇಧ) ಹೊಂದುತ್ತವೆ. ಈ ಲಕ್ಷಣ ನಮಗೆ ಸಮ್ಮತವಲ್ಲ. ಏಕೆಂದರೆ ಬ್ರಹ್ಮಜ್ಞಾನವಾದೊಡನೆ ಪ್ರಪಂಚ ಮತ್ತು ಎಲ್ಲ ವಸ್ತುಗಳು ನಾಶವಾಗುತ್ತವೆಂಬುದನ್ನು ನಾವು ಒಪ್ಪುವದಿಲ್ಲ.

ಹೀಗೆ ಮಾಯಾವಾದಿಯ ಅನುಮಾನದ 'ಜ್ಞಾನ ಬಾಧ್ಯತ್ವಂ' ಎಂಬ ಹೇತುವನ್ನು ನಿರಾಕರಿಸಲಾಯಿತು.

ಅಥವಾ

ಪ್ರಕೃತ ಅನುಮಾನದ ಪ್ರತಿಜ್ಞಾ ಭಾಗವನ್ನು (ಸಾಧ್ಯವನ್ನು) ನಿರಾಕರಿಸಿದ ನಂತರ ಈಗ ದೃಷ್ಟಾಂತವನ್ನು ದೂಷಿಸುತ್ತಾರೆ. 'ಅಪಿ' ಶಬ್ದ ಸಮುಚ್ಚಯಾರ್ಥದಲ್ಲಿದೆ.

**ಅನುವಾದ :** (ಸದಸದ್ವಿಲಕ್ಷಣತ್ವ ಅಥವಾ ಅನಿರ್ವಚನೀಯತ್ವವೆಂಬ ಸಾಧ್ಯ ಹಿಂದೆ ನಿರೂಪಿಸಿದಂತೆ, ನಮಗೆ ಸಮ್ಮತವಿಲ್ಲ.) ಮತ್ತು (ಅಪಿ) ದೃಷ್ಟಾಂತವಾದ ಶುಕ್ತಿ ರಜತದಲ್ಲಿಯ ಜ್ಞಾನಬಾಧ್ಯತ್ವವೂ ಪ್ರತಿವಾದಿಗೆ ಸಮ್ಮತವಿಲ್ಲ. ವಿಪರೀತವಾಗಿ ತಿಳಿದ ವಸ್ತುವಿನ ಯಥಾರ್ಥ ಜ್ಞಾನವೇ ಬಾಧ ಎಂದು ನಮ್ಮ ಮತ,

**ವಿವರಣೆ :** ಮಾಯಾವಾದಿಯ ಪ್ರಕಾರ ಶುಕ್ತಿರಜತವು ಅನಿರ್ವಚನೀಯತ್ವ ಅಥವಾ ಸದಸದ್ವಿಲಕ್ಷಣ. ಆದರೆ ಅದು ಅಸದ್ವಿಲಕ್ಷಣ (ಅಸತ್ಯದಿಂದ ಭಿನ್ನ, ಸತ್ಯ) ಸರ್ವಥಾ ಇಲ್ಲ. ಶುಕ್ತಿರಜತ ಅಸತ್ಯವೇ. ಏಕೆಂದರೆ ಮುಂದೆ "ಅತ್ಯಂತ ಅಸತ್ಯವಾದ ಬೆಳ್ಳಿಯೇ ತೋರಿತ್ತು" ಎಂಬ ಬಾಧ ಜ್ಞಾನ ಬರುತ್ತದೆ. ಶುಕ್ತಿರಜತವು ಅಸತ್ಯವಾದ್ದರಿಂದ ನಿತ್ಯದಲ್ಲಿ ನಾಶಹೊಂದಿರುತ್ತದೆ. (ಅಸತಃ ನಿತ್ಯನಿವೃತ್ತತ್ವಾತ್) ಹೀಗಾಗಿ ಶುಕ್ತಿರಜತದಲ್ಲಿ, ಜ್ಞಾನಬಾಧ್ಯತ್ವ (ಜ್ಞಾನ ನಿವರ್ತ್ಯತ್ವ, ಜ್ಞಾನದಿಂದ ನಾಶ ಹೊಂದುವದು.) ಕೂಡುವದಿಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಅಸದ್ವಿಲಕ್ಷಣ

ಎಂಬ ಸಾಧ್ಯ ಮತ್ತು ಬಾಧ್ಯತ್ವ ಎಂಬ ಹೇತು ಇಲ್ಲ; ಹೀಗೆ ದೃಷ್ಟಾಂತವು ದೋಷ ಯುಕ್ತವಾಗಿದೆ.

ಶುಕ್ತಿರಜತದಲ್ಲಿ ನೀನು ಹೇಳುವ ಬಾಧದ ಲಕ್ಷಣ ಕೂಡುವದಿಲ್ಲ. ಆದರೆ ನಾವು ನಿರೂಪಿಸುವ ಬಾಧಲಕ್ಷಣ ಸುಸಂಗತವಾಗಿದೆ. ವಿಪರೀತವಾಗಿ ತಿಳಿದ ವಸ್ತುವಿನ ಯಥಾರ್ಥ ಜ್ಞಾನವೇ ಬಾಧ. ಉದಾಹರಣಾರ್ಥವಾಗಿ ಎದುರಿಗಿರುವ ವಸ್ತುವನ್ನು (ಶಿಂಪನ್ನು) ಬೆಳ್ಳಿಯೆಂದು ವಿಪರೀತವಾಗಿ ತಿಳಿದುಕೊಂಡಿದ್ದನ್ನು ಸರಿಯಾಗಿ ಎಂದರೆ ಶಿಂಪೆಂದು ತಿಳಿದುಕೊಳ್ಳುವದೇ ಬಾಧೆ. ಅದರಂತೆ ಇಲ್ಲದೇ ಇದ್ದ ಬೆಳ್ಳಿಯನ್ನು ಬೆಳ್ಳಿಯೆಂದು ವಿಪರೀತವಾಗಿ ತಿಳಿದುಕೊಂಡಾಗ, ಅದು ಬೆಳ್ಳಿಯಲ್ಲ ಎಂದು ಸರಿಯಾಗಿ ತಿಳಿಯುವದು ಬಾಧೆ.

ಬಾಧ ಶಬ್ದವು ಬಾಧೃ (ಲೋಡನೇ) ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಲೋಡನೆ ಎಂದರೆ ನಿವರ್ತನ ನಾಶ. ಬಾಧದಲ್ಲಿರುವ ನಾಶ ಯಾವುದಕ್ಕೆ ಎಂಬ ಪ್ರಶ್ನೆ ಬರುತ್ತದೆ. ಈ ನಾಶವು ಜ್ಞಾನಕ್ಕೋ, ವಸ್ತುವಿಗೋ ? ಜ್ಞಾನಕ್ಕೆ ನಾಶ ವಿಲ್ಲ. ಏಕೆಂದರೆ ಅದು ಕ್ಷಣಿಕ. ಸ್ವತಃ ನಾಶವಾಗುತ್ತದೆ. (1ನೇ ಕ್ಷಣದಲ್ಲಿ ಜ್ಞಾನ ಹುಟ್ಟುತ್ತದೆ. 2ನೇ ಕ್ಷಣದಲ್ಲಿ ಇರುತ್ತದೆ. 3ನೇ ಕ್ಷಣದಲ್ಲಿ ನಾಶಹೊಂದುತ್ತದೆ.) ಇನ್ನು ನಾಶವು ವಸ್ತುವಿಗೂ (ಅರ್ಥ) ಅಲ್ಲ. ಏಕೆಂದರೆ ಭ್ರಮದಲ್ಲಿ ಅಧಿಷ್ಠಾನ ವಾದ ಶಿಂಪಿನ ಚೂರು ಇದ್ದಂತೆಯೇ ಇರುತ್ತದೆ. ಭ್ರಮದಲ್ಲಿ ತೋರಿದ ಬೆಳ್ಳಿ ಅಸತ್ಯ. ಬಂಜೆಯ ಮಗನ ಸಂಹಾರದಂತೆ ಅಸತ್ಯಕ್ಕೆ ನಾಶವಿಲ್ಲ, ದೇವದತ್ತನ ಸಂಹಾರದಂತೆ ಸತ್ಯ ಅಥವಾ ಇರುವ ಪದಾರ್ಥಕ್ಕೇನೇ ನಾಶ ಅಥವಾ ಬಾಧವಿದೆ (ನಹಿ ನಾಶಃ ಅಸತೋ ಭವೇತ್) ಆದ್ದರಿಂದ ಭ್ರಮದಲ್ಲಿ ತೋರಿದ ವಿಪರೀತಾ ಕಾರಕ್ಕೆ ನಾಶ ಹೇಳಬೇಕು. (ಅನ್ಯಥಾ ಕಾರಸ್ಯ ಲೋಡನಮಿವ ಲೋಡನಂ) ಎಂದರೆ ವಿಪರೀತಾಕಾರವನ್ನು ತೋರಿಸುವ ಹಿಂದಿನ ಭ್ರಮಾತ್ಮಕ ಜ್ಞಾನದ ಬಗ್ಗೆ ಅಪ್ರಮಾಣವೆಂಬ ತಿಳುವಳಿಕೆ ಹುಟ್ಟಿಸುವದೇ ಲೋಡನ (ನಾಶ) ಶಬ್ದದ ಅರ್ಥ :

**ಶ್ಲೋಕ 24, 25, 26 ಇವುಗಳಿಗೆ ಬೇರೆ ರೀತಿಯಿಂದ ವ್ಯಾಖ್ಯಾನ.**

ಈ ಶ್ಲೋಕಗಳ ಅರ್ಥ ಹಿಂದೆ ವಿವೇಚಿಸಿದಂತೆಯೇ. ಈ ಶ್ಲೋಕಗಳಿಂದ ಮಾಯಾವಾದಿಯ ಅನಿರ್ವಚನೀಯತ್ವದ ಲಕ್ಷಣಗಳು ನಿರಾಕೃತವಾಗುತ್ತವೆ. ಮಾಯಾವಾದಿಯು ಅನಿರ್ವಚನೀಯಕ್ಕೆ ಎರಡು ಲಕ್ಷಣಗಳನ್ನು ಹೇಳಿದ್ದಾನೆ. 1) ಸದಸದ್ವಿಲಕ್ಷಣತ್ವಂ ಅನಿರ್ವಚನೀಯತ್ವಂ. 2) ಜ್ಞಾನಬಾಧ್ಯತ್ವಂ ಅನಿರ್ವಚನೀಯತ್ವಂ, ಈ ಎರಡೂ ಲಕ್ಷಣಗಳು ಅಯುಕ್ತವೆಂದು ಪ್ರಸ್ತುತವಾದ ಈ ಮೂರು ಶ್ಲೋಕಗಳಲ್ಲಿ ಹೇಳುತ್ತಾರೆ. ಮೊದಲನೆಯ ಲಕ್ಷಣವನ್ನು ಮೊದಲು ನಿರಾಕರಿಸುತ್ತಾರೆ. ಹೇಗೆಂದರೆ —

**ಶ್ಲೋಕ 24 :** ಈ ಶ್ಲೋಕದ ಅರ್ಥ ಈ ಮೊದಲು ವಿವೇಚಿಸಿದಂತೆಯೇ. ಅನಿರ್ವಚನೀಯ ಎಂದರೆ ಸದ್ವಿಲಕ್ಷಣ (ಸತ್ಯದಿಂದ ಭಿನ್ನ) ಮತ್ತು ಅಸದ್ವಿಲಕ್ಷಣ (ಅಸತ್ಯದಿಂದ ಭಿನ್ನ) ಎಂದು ಹೇಳಿದರೆ (i) ಅಸಂಗತಿ (ii) ಅಸಿದ್ಧಿ (iii) ಅಸಂಭವ ಎಂಬ ಮೂರು ದೋಷಗಳು ಮುಖ್ಯವಾಗಿ ಬರುತ್ತವೆ.

(i) ಈ ಶ್ಲೋಕಕ್ಕೆ ಮಾಡಿದ ವಿವಿಧ ವಿಕಲ್ಪಗಳಲ್ಲಿ. ಎಲ್ಲೆಲ್ಲಿ ಸಿದ್ಧಾರ್ಥ ದೋಷ ಹೇಳಲಾಗಿದೆಯೋ ಎಂದರೆ ಸಿದ್ಧಾಂತಿಗೆ ಸಮ್ಮತವಾದ ಸದ್ವಿಲಕ್ಷಣತ್ವ ಅಸದ್ವಿ ಲಕ್ಷಣತ್ವ ಹೇಳಲಾಗಿದೆಯೋ ಅವೆಲ್ಲವುಗಳಲ್ಲಿ ಅನಿರ್ವಚನೀಯತ್ವ ಬರುತ್ತದೆ. ಏಕೆಂದರೆ ಸದ್ವಿಲಕ್ಷಣತ್ವ, ಅಸದ್ವಿಲಕ್ಷಣತ್ವವೆಂದರೆ, ಅನಿರ್ವಚನೀಯತ್ವವೇ. ಹೀಗಾಗಿ ಆ ಎಲ್ಲ ಕಡೆಗಳಲ್ಲಿ ಅನಿರ್ವಚನೀಯತ್ವವನ್ನು ನಿರಾಕರಿಸಿದಂತೆಯೇ, ಇನ್ನು ಆಕಾಶಾದಿಗಳು ಸತ್ಯ. (ವ್ಯಾವಹಾರಿಕ ಸತ್ಯ) ಎನ್ನುತ್ತೀ.ಸತ್ಯ ಎಂದರೆ ಅಸತ್ಯದಿಂದ ಭಿನ್ನ, ಅಸದ್ವಿಲಕ್ಷಣ ಎಂದಾಗುತ್ತದೆ. ನಿನ್ನ ಅನಿರ್ವಚನೀಯತ್ವದ ವ್ಯಾಖ್ಯೆಯ ಪ್ರಕಾರ, ಅಸದ್ವಿಲಕ್ಷಣವೆಂದರೆ ಅನಿರ್ವಚನೀಯ. ಹೀಗಾಗಿ ಸತ್ಯವಾದ ಆಕಾಶಾದಿ ಗಳು ಅನಿರ್ವಚನೀಯವಾಗುತ್ತವೆ. ಹೀಗಿರುವಾಗ ಪ್ರಪಂಚವು ಸತ್ಯವಲ್ಲ. ಆದರೆ ಅನಿರ್ವಚನೀಯ(ನ ಸನ್ ಪ್ರಪಂಚಃ ಕಿಂತು ಅನಿರ್ವಚನೀಯಃ)ಎಂದು ನೀನು ನಿನ್ನ ವಾದವನ್ನು ಆರಂಭಿಸಿದ್ದು ಪೂರ್ವೋತ್ತರ ವಿರೋಧ ಮೂಲಕ ಅಸಂಗತ.

(ii) ಈ ಶ್ಲೋಕಕ್ಕೆ ಮಾಡಿದ ಅನೇಕ ವಿಕಲ್ಪಗಳಲ್ಲಿ ಬಾಧ ಮೊದಲಾದ ದೋಷ ಹೇಳಿದಲ್ಲೆಲ್ಲ ಅವ್ಯಾಪ್ತಿ ದೋಷವೂ ಬರುತ್ತದೆ. ಅಥವಾ ನಿನ್ನ ಪ್ರಕಾರ ಅಮುಖ್ಯ ಸತ್ಯವಾದ ಆಕಾಶಾದಿ ಪ್ರಪಂಚ ಮತ್ತು ಶುಕ್ತಿರಜತ ಅನಿರ್ವಚ ನೀಯ. ಎಂದರೆ ಇವು ಸದ್ವಿಲಕ್ಷಣ ಮತ್ತು ಅಸದ್ವಿಲಕ್ಷಣ, ಆದರೆ ಇದು ಅಯುಕ್ತ. ಹೇಗೆಂದರೆ— ಆಕಾಶಾದಿಗಳು ಸತ್ಯವಾದ್ದರಿಂದ ಅವು ಅಸದ್ವಿಲಕ್ಷಣ. ಇವುಗಳಲ್ಲಿ ಅಸತ್ಯತ್ವವಿಲ್ಲ ಎಂದು ಭಾವ. ಇನ್ನು ಇವು ಅನಿರ್ವಚನೀಯವಾದರೆ ಇವು ಸದ್ವಿಲಕ್ಷಣವೂ ಆಗುತ್ತವೆ. ಆದರೆ ಈ ಸದ್ವೈಲಕ್ಷಣ್ಯ ಪ್ರಮಾಣ ಬಾಧಿತವಾಗಿದೆ, ಇದರಂತೆ ಶುಕ್ತಿರಜತ ಅಸತ್ಯವೆಂದೇ ಪ್ರಮಿತವಾಗಿದೆ. ಆದರೆ ಇದು ಅನಿರ್ವಚನೀಯವಾಗಿದೆಯಾದ್ದರಿಂದ ಅದರಲ್ಲಿ ಬರುವ ಅಸದ್ವೈಲಕ್ಷಣ್ಯವು ಪ್ರಮಾಣ ಬಾಧಿತವಾಗುತ್ತದೆ. ಇದರಿಂದಾಗಿ ಆಕಾಶಾದಿ ಪ್ರಪಂಚ ಹಾಗೂ ಶುಕ್ತಿರಜತ ಮುಂ,ಗಳಲ್ಲಿ ಅನಿರ್ವಚನೀಯತ್ವದ ಲಕ್ಷಣ ಸಿದ್ಧಿಸುವದಿಲ್ಲ.

(iii) ಸದ್ವಿಲಕ್ಷಣ ಮತ್ತು ಅಸದ್ವಿಲಕ್ಷಣ ಪರಸ್ಪರ ವಿರುದ್ಧವಾದ್ದರಿಂದ ಎರಡನ್ನೂ ಒಂದರಲ್ಲಿಯೇ ಸೇರಿಸಿ ಅನಿರ್ವಚನೀಯತ್ವದ ಲಕ್ಷಣ ಹೇಳುವದು ಅಸಂಭವ ದೋಷಗ್ರಸ್ತವಾಗಿದೆ. ಇಂತಹ ದೋಷಯುಕ್ತ ಲಕ್ಷಣ ಹೇಳುವದ ರಿಂದ ನಿನಗೆ ನಿಗ್ರಹಸ್ಥಾನ ಮುಂತಾದ ಅನಿಷ್ಟಗಳು ಬರುತ್ತವೆ.

**ಶ್ಲೋಕ 25 :** ಈ ಶ್ಲೋಕದ 'ಯದ್ಯುಚ್ಯತೇ' ಎಂಬ ಪೂರ್ವಾರ್ಧದಿಂದ

ಅಸಂಭವಾದಿ ದೋಷಗಳನ್ನು ಹಿಂದಿನ ಶ್ಲೋಕದಲ್ಲಿ ನಿರೂಪಿಸಿದಂತೆ ತಿಳಿಯ ಬೇಕು. ಹೇಗೆಂದರೆ, ಜಗತ್ತು ಅನಿರ್ವಚನೀಯ ಎಂದು ಹೇಳುತ್ತೀ. ಅನಿರ್ವ ಚನೀಯ ಎಂದರೆ ಸದ್ವಿಲಕ್ಷಣ. ಎಲ್ಲ ಸತ್ಯಗಳಿಂದ (ಸರ್ವಸ್ಮಾತ್) ಭಿನ್ನ. ಇದರಿಂದ ಜಗತ್ತಿನಲ್ಲಿ ಯಾವ ಸತ್ಯತೆಯೂ ಇಲ್ಲವೆಂದಾಗುತ್ತದೆ. ಸರ್ವ ಸತ್ಯತೆ ಇಲ್ಲ ಎಂದು ಹೇಳಲು ಅನೇಕ ಸತ್ಯತೆಗಳನ್ನು ಒಪ್ಪಬೇಕು. ಆದರೆ ನಿನಗೆ ಇದು ಶಕ್ಯವಿಲ್ಲ. ಏಕೆಂದರೆ ನಿನ್ನ ಪ್ರಕಾರ ಬ್ರಹ್ಮವೊಂದೇ ಸತ್ಯ. ಆದ್ದರಿಂದ ನಿನಗೆ ಅಸಂಭವ ದೋಷ ಬರುತ್ತದೆ. ಇದಲ್ಲದೆ ನಿನ್ನ ಅನುಮಾನಕ್ಕೆ ಅತಿ ವ್ಯಾಪ್ತಿ ದೋಷ ಬರುವದಾಗಿ 'ಸನ್ಮಾತ್ರತ್ವಂ' ಎಂಬ ಉತ್ತರಾರ್ಧದಿಂದ ಹೇಳು ತ್ತಾರೆ. ಬ್ರಹ್ಮನು ನಿರ್ಧರ್ಮಕನಾದ್ದರಿಂದ ಅವನು 'ಸನ್ಮಾತ್ರ'; ಎಂದರೆ ಅವನಲ್ಲಿ ಯಾವ ಬಗೆಯು ಸತ್ಯತೆಗಳಿಲ್ಲ (ಸತ್ವ-ಅನಧಿಕರಣತ್ವಂ) ಎಂಬುದು ನಿಶ್ಚಿತ. ಎಂದರೆ ಅವನು ಅಸದ್ವಿಲಕ್ಷಣ ಅರ್ಥಾತ್ ಅನಿರ್ವಚನೀಯ ಎಂದಾಯಿತು. ಹೀಗೆ ಬ್ರಹ್ಮ ಸತ್ಯವೆಂದು ಹೇಳುವ ನೀನು ಆ ಬ್ರಹ್ಮ ಅನಿರ್ವಚನೀಯ ಎಂದು ಹೇಳುವ ಅತಿಪ್ರಸಂಗ ಬರುತ್ತದೆ. [ಈ ದೋಷ ಪರಿಹರಿಸಲು ಅನಿ ರ್ವಚನೀಯ ಎಂದರೆ ವಿಚಾರ ಅಸಹಿಷ್ಣುತ್ವಂ. ಸತ್ಯ ಅಥವಾ ಅಸತ್ಯ ಎಂಬ ವಿಚಾರಕ್ಕೆ ಒಳಪಡದಿರುವದು ಎಂದು ಹೇಳುತ್ತಾರೆ. ಆದರೆ ಈ ಸಮಾಧಾನ ಅಸಮಂಜಸ. ಆಕಾಶಾದಿಗಳ ಬಗ್ಗೆ ಯಾವ ವಿಚಾರ ಇದೆಯೋ ಅದೇ ವಿಚಾರ ಬ್ರಹ್ಮನ ಬಗ್ಗೆಯೂ ಇರುವದರಿಂದ, ಬ್ರಹ್ಮನು ಅನಿರ್ವಚನೀಯ ಹೇಗೆ ಆಗು ವದಿಲ್ಲ ?]

**ಶ್ಲೋಕ 26 :** ಇಲ್ಲಿ ಜ್ಞಾನಬಾಧ್ಯತ್ವಂ ಅನಿರ್ವಚನೀಯತ್ವಂ ಎಂಬ ಅನಿರ್ವಚ ನೀಯದ ಎರಡನೇ ಲಕ್ಷಣವನ್ನು ಖಂಡಿಸುತ್ತಾರೆ.

a) ಜ್ಞಾನಬಾಧ್ಯತ್ವ ಎಂದರೆ ಜ್ಞಾನನಿವರ್ತ್ಯತ್ವಂ : ಜ್ಞಾನದಿಂದ ನಿವೃತ್ತಿಯನು ಹೊಂದುವದು ಎಂಬ ಅರ್ಥ. ಈ ಲಕ್ಷಣವು ಶುಕ್ತಿರಜತ ಮತ್ತು ಆಕಾಶಾ ದಿಗಳಲ್ಲಿ ಕೂಡುವದಿಲ್ಲ. ಏಕೆಂದರೆ ಆಕಾಶಾದಿಗಳು ಸತ್ಯವಾದ್ದರಿಂದ ಮತ್ತು ಶುಕ್ತಿರಜತ ಅಸತ್ಯವಾದ್ದರಿಂದ ನಿವೃತ್ತಿ ಹೊಂದುವದಿಲ್ಲ. ಆದ್ದರಿಂದ ಈ ಲಕ್ಷಣ ಅಸಂಭಾವಿತ.

b) ಇನ್ನು ಜ್ಞಾನಬಾಧ್ಯತ್ವವೆಂದರೆ ಜ್ಞಾನವಿನಾಶ್ಯತ್ವಂ–ಜ್ಞಾನದಿಂದ ನಾಶವಾಗು ವದು ಎಂದು ಹೇಳಿದರೆ, ಲಕ್ಷಣಕ್ಕೆ ಅತಿವ್ಯಾಪ್ತಿ ದೋಷ ಬರುತ್ತವೆ. ಹೇಗೆಂದರೆ ಆಕಾಶ ನಿತ್ಯವಾದ್ದರಿಂದ ನಾಶ ಹೊಂದುವದಿಲ್ಲ. ಶುಕ್ತಿರಜತ ಅಸತ್ಯವಾದ್ದರಿಂದ ಅದಕ್ಕೆ ನಾಶವಿಲ್ಲ. (ನಹಿ ನಾಶಃ ಅಸತಃ ಭವೇತ್).

c) ಪ್ರತಿಪನ್ನೋಪಾಧೌ ನಿಷೇಧ ಪ್ರತಿಯೋಗಿತ್ವಂ ಜ್ಞಾನಬಾಧ್ಯತ್ವಂ (ಅನಿರ್ವ ಚನೀಯತ್ವಂ) ಎಂಬ ಲಕ್ಷಣವೂ ಆಯುಕ್ತ ಎಂಬುದನ್ನು 26ನೇ ಶ್ಲೋಕದ 1ನೇ ಅರ್ಧ ವಿವೇಚಿಸುವ ಸಂದರ್ಭಗಳಲ್ಲಿ ನಿರಾಕರಿಸಲಾಗಿದೆ. (ಪುಟ 71)

## ಪಂಚಾಖ್ಯಾತಿವಾದಃ (ಭ್ರಮದ ಐದು ಭೇದಗಳು)

ಈ ಮೊದಲು ವಿವರಿಸಿದಂತೆ (ಶ್ಲೋಕ 26) ವಿಪರೀತವಾಗಿ ತಿಳಿದ ವಸ್ತುವಿನ ಯಥಾರ್ಥ ಜ್ಞಾನವೇ ಬಾಧ. ಬಾಧಜ್ಞಾನ ಪಟ್ಟಾಗಿ ಭ್ರಮದಲ್ಲಿ ಬರುವದರಿಂದ, ಬಾಧವಿವೇಚನೆಯು ಪ್ರಸಂಗ ನಿಮಿತ್ತವಾಗಿ ಶ್ರೀಮಜ್ಜಯತೀರ್ಥರು ಭ್ರಮದ ಬಗ್ಗೆ ಇರುವ ಐದು ವಾದಗಳನ್ನು ಕೂಲಂಕಷವಾಗಿ ಚರ್ಚಿಸಿ ಸಿದ್ಧಾಂತವನ್ನು ಸಯುಕ್ತಿಕವಾಗಿ ಸಮರ್ಥಿಸಿದ್ದಾರೆ.

ಖ್ಯಾತಿ ಎಂದರೆ ಜ್ಞಾನ.ಆದರೆ ಜ್ಞಾನ ವಿಶೇಷವಾದ ಭ್ರಮದಲ್ಲಿಯೂ ಖ್ಯಾತಿ ಶಬ್ದವನ್ನು ಬಳಸಲಾಗುತ್ತದೆ. ಉದಾ :'ಖ್ಯಾತಿ ಪಂಚಕಂ.' ಭ್ರಮದ 5 ವಾದಗಳು.

**I ಅಖ್ಯಾತಿವಾದ :** ಭ್ರಮ ಇಲ್ಲ ಎನ್ನುವ ವಾದ. ಹೀಗೆ ಹೇಳುವವರು ಪ್ರಾಭಾಕರರು, ರಾಮಾನುಜರು ಮತ್ತು ಕೆಲವು ತಾರ್ಕಿಕರು.

**II ಅನ್ಯಥಾಖ್ಯಾತಿವಾದ :** ಭ್ರಮ ಕಾಲದಲ್ಲಿ ಶಿಂಪಿನಲ್ಲಿ ತೋರಿದ ಬೆಳ್ಳಿ ಸತ್ಯವೇ, ಅಂಗಡಿಯಲ್ಲಿದ್ದ ಸತ್ಯವಾದ ಬೆಳ್ಳಿ ತೋರುತ್ತದೆ. ಇದು ಪ್ರಾಚೀನ ತಾರ್ಕಿಕರ ಮತ.

**III ಆತ್ಮಖ್ಯಾತಿವಾದ :** (ವಿಜ್ಞಾನವಾದಿ ಬೌದ್ಧರ ವಾದ) ತೋರಿದ ಬೆಳ್ಳಿ ಸತ್ಯ, ಜ್ಞಾನಾಕಾರದ್ದು. ಇದು ಆಂತರಿಕ.

**IV ಅಸತ್‌ಖ್ಯಾತಿವಾದ :** (ಶೂನ್ಯವಾದಿ ಬೌದ್ಧರ ವಾದ) ಭ್ರಮದಲ್ಲಿ ಅಸತ್ಯಕ್ಕೆ ಪ್ರತೀತಿ ಉಂಟೆಂಬ ವಾದ.

**V ಅನಿರ್ವಚನೀಯಖ್ಯಾತಿವಾದ ;** (ಮಾಯಾವಾದಿ ಅದ್ವೈತಿಗಳ ವಾದ) ಭ್ರಮದಲ್ಲಿ ತೋರಿದ ಬೆಳ್ಳಿ ಅನಿರ್ವಚನೀಯ, ಸದಸದ್ವಿಲಕ್ಷಣ ಎಂಬ ವಾದ.

**ಸಿದ್ಧಾಂತ :** ನಮ್ಮದು ಅಭಿನವ ಅನ್ಯಥಾ ಖ್ಯಾತಿವಾದ, ಸತ್ಯವಾದ ಶಿಂಪೇ ಕಣ್ಣಿನ ದೋಷ ಮೂಲಕ ಅತ್ಯಂತ ಅಸತ್ಯವಾದ ಬೆಳ್ಳಿಯೆಂದು ತೋರುತ್ತದೆ ಎಂದು ಶ್ರೀಮದಾಚಾರ್ಯರ ಮತ.

**ಶೀರ್ಷಿಕೆ :** ಭ್ರಮದ ಐದು ವಾದಗಳಲ್ಲಿ ಸುಧಾಕಾರರು ಅಖ್ಯಾತಿವಾದವನ್ನು ಮೊದಲು ನಿರೂಪಿಸಿದ್ದರಿಂದ 'ಪಂಚಾಖ್ಯಾತಿವಾದಃ' ಎಂಬ ಶೀರ್ಷಿಕೆ ಇದೆ.ಅಖ್ಯಾತಿಃ ಪ್ರಥಮಾ ಯಸ್ಯ ಸಃ ಅಖ್ಯಾತಿಪ್ರಥಮಃ (ವಾದಸಮೂಹಃ), ಪಂಚಸು ಅಖ್ಯಾತಿ ಪ್ರಥಮಃ ವಾದಃ, ಪಂಚಾಖ್ಯಾತಿ ವಾದಃ. ಶಾಕಪಾರ್ಥಿವಾದಿ ಅಥವಾ ಮಧ್ಯಮ ಪದಲೋಪೀ ಕರ್ಮಧಾರಯ ಸಮಾಸ.

**I ಅಖ್ಯಾತಿವಾದ :** (ಭ್ರಮವೇ ಇಲ್ಲ ಎಂಬ ವಾದ) ಭ್ರಮವೇ (ಖ್ಯಾತಿ) ಇಲ್ಲ ಎನ್ನುವ ವಾದಕ್ಕೆ ಅಖ್ಯಾತಿವಾದ ಎನ್ನುತ್ತಾರೆ. ಖ್ಯಾತಿವಾದೀ–ಭ್ರಾಂತಿರಸ್ತೀತಿ ವಾದೀ । ನ ಖ್ಯಾತಿವಾದೀ ಅಖ್ಯಾತಿವಾದೀ–ಪರಿಮಳ. ಭ್ರಾಂತಿ–ಬಾಧಗಳ

ಸ್ವರೂಪವನ್ನು ವಿವರಿಸುವದಕ್ಕೋಸ್ಕರ ಮೊದಲು ಭ್ರಮವೇ ಇಲ್ಲ ಎನ್ನುವ ಅಖ್ಯಾತಿವಾದವನ್ನು ನಿರಾಕರಿಸುತ್ತಾರೆ. ಮಾರಲು ಭ್ರಮ ಇದೆ ಎಂದು ಸಿದ್ಧ ಮಾಡಿ, ನಂತರ ಭ್ರಮದ ಬಗ್ಗೆ ಇರುವ ಇತರ ವಾದಗಳನ್ನು ಖಂಡಿಸುತ್ತಾರೆ.

## I (i) ಪ್ರಾಭಾಕರರು

ಪಂಚಾ ಖ್ಯಾತಿಯಲ್ಲಿ ಇದು ದೊಡ್ಡ ಘಟ್ಟ. ಇದರ ನಿರೂಪಣೆ ಸ್ಥೂಲವಾಗಿ ಕೆಳಗಿನಂತಿದೆ. (A) ಭ್ರಮದ ಲಕ್ಷಣಗಳು ಕೂಡುವದಿಲ್ಲ. (B) ಭ್ರಮ ಹುಟ್ಟಲು ಕಾರಣಗಳಿಲ್ಲ. (C) ಭ್ರಮ ಒಪ್ಪಿದರೆ ಬರುವ ಅನುಪಪತ್ತಿಗಳು (D) ಪ್ರಾಭಾಕರನ ಪ್ರಕ್ರಿಯೆ (E) ಈ ವಾದದ ನಿರಾಕರಣ.

A) **ಭ್ರಮದ ಲಕ್ಷಣಗಳು ಕೂಡುವದಿಲ್ಲ :** ಭ್ರಮವನ್ನೇ ಒಪ್ಪದ ಪ್ರಾಭಾಕರನು ಭ್ರಮದ ಲಕ್ಷಣಗಳು ಕೂಡುವದಿಲ್ಲ ಎಂದು ಮೊದಲು ನಿರೂಪಿಸುತ್ತಾನೆ.

i) ಅಧಿಷ್ಠಾನಕ್ಕಿಂತ ಬೇರೆಯಾಗಿ ಪರಿಣಾಮ ಹೊಂದಿದ ವಸ್ತು ವಿಷಯಕ ಜ್ಞಾನ ಭ್ರಮ. (ಭಾಸ್ಕರ) (ಅನ್ಯಥಾ ಪರಿಣತೇ ವಸ್ತುನಿ ಖ್ಯಾತಿಃ) ಉದಾ : ಶಿಂಪಿನಲ್ಲಿ ಶಿಂಪಿನಿಂದ ಬೇರೆಯಾದ ಬೆಳ್ಳಿಯ ಜ್ಞಾನ. ಈ ಲಕ್ಷಣ ಒಪ್ಪಿದರೆ, ಕಾರಣವಾದ ಮಣ್ಣಿನಿಂದ ಬೇರೆಯಾಗಿ ಅಂದರೆ ಘಟವಾಗಿ ಪರಿಣಾಮ ಹೊಂದಿದ್ದರಿಂದ ಘಟಜ್ಞಾನವೂ ಭ್ರಮವಾಗಲಿ ಎಂಬ ಅತಿಪ್ರಸಂಗ ಬರುತ್ತದೆ, ಅಲ್ಲದೆ ಶಿಂಪು ಬೆಳ್ಳಿಯಾಗಿ ಪರಿಣಾಮ ಹೊಂದಲಿಕ್ಕೆ ಕಾರಣವಿಲ್ಲ.

ii) ಒಂದು ವಸ್ತು ಇನ್ನೊಂದು ವಸ್ತುವಿನ ಸ್ವರೂಪವಾಗಿ ತೋರುವ ಜ್ಞಾನ ಭ್ರಮ. (ನೈಯಾಯಿಕರು) (ವಸ್ತುನಃ ವಸ್ತ್ವಂತರಾತ್ಮನಾ ಅವಭಾಸಃ) ಈ ಲಕ್ಷಣ ಅಯುಕ್ತ. ಇನ್ನೊಂದು ವಸ್ತು ಸತ್ಯವೋ, ಅಸತ್ಯವೋ ? ಸತ್ಯವಾದರೆ ಆ ಜ್ಞಾನ ಯಥಾರ್ಥವೇ. ಭ್ರಮವಲ್ಲ. ಇನ್ನು ಆ ಜ್ಞಾನ ಅಸತ್ಯವಾಗಲಾರದು. ಏಕೆಂದರೆ ಅಸತ್ಯವಾದುದು ತೋರುವದೇ ಇಲ್ಲ. ಅಸತ್ ಚೇತ್ನ ಪ್ರತೀಯೇತ.

iii) ಸಂಬಂಧವಿಲ್ಲದ ವಿಶೇಷಣಕ್ಕೆ ಇಲ್ಲದ ಸಂಬಂಧವನ್ನು ತೋರಿಸುವ ಜ್ಞಾನ ಭ್ರಮ. (ಅಸಬಂದ್ಧ ವಿಶೇಷಣವಿಶಿಷ್ಟಪ್ರತೀತಿಃ) ಈ ಲಕ್ಷಣವೂ ಅಯುಕ್ತ. ಇಲ್ಲಿದ್ದ ಸಂಬಂಧ ಅಸತ್ಯ, ಅಸತ್ಯಕ್ಕೆ ಪ್ರತೀತಿಯೇ ಇಲ್ಲವಾದ್ದರಿಂದ ಅದು ಜ್ಞಾನದಲ್ಲಿ ತೋರಲಾರದು.

iv) ಅಧಿಷ್ಠಾನಕ್ಕಿಂತ ಭಿನ್ನವಾದ ಆಕಾರವುಳ್ಳ ಜ್ಞಾನವು ಭ್ರಮ. (ವಿಜ್ಞಾನವಾದಿ ಬೌದ್ಧರು), ಅನ್ಯಾಕಾರಂ ಜ್ಞಾನಂ. ಈ ಲಕ್ಷಣವೂ ಅಸಮಂಜಸ. ವಸ್ತು ಹೊರಗಿರುತ್ತದೆ. ಮತ್ತು ಜ್ಞಾನ ಒಳಗಿರುತ್ತದೆ. (ಆಂತರಿಕ) ಹೀಗಾಗಿ ಹೊರಗಿರುವ ಘಟದ ಜ್ಞಾನವು ಭ್ರಮವಾಗುವ ಅತಿಪ್ರಸಂಗ ಬರುತ್ತದೆ.

v) ಒಂದನ್ನು ಗ್ರಹಿಸುವ (ಉಲ್ಲೇಖಿ), ಇನ್ನೊಂದನ್ನು ವಿಷಯೀಕರಿಸುವ

(ಆಲಿಂಬನ, ಆಶ್ರಯ) ಜ್ಞಾನವು ಭ್ರಮ. (ಅನ್ಯಾಕಾರೋಲ್ಲೇಖಿ ಅನ್ಯಾಲಂಬನಂ ಜ್ಞಾನಂ) ಈ ಲಕ್ಷಣವೂ ಅಸಂಗತ. ಏಕೆಂದರೆ ಗ್ರಹಣವಾದುದೇ ಜ್ಞಾನಕ್ಕೆ ವಿಷಯವಾಗುತ್ತದೆ. ಬೇರೊಂದಲ್ಲ. ಉದಾ : ಎದುರಿಗಿರುವ ವಸ್ತುವನ್ನು (ಕಂಬ) ಎಂದು ಗ್ರಹಿಸಿದ ಜ್ಞಾನಕ್ಕೆ ಸ್ತಂಭವೇ ವಿಷಯವಾಗುತ್ತವೆ, ಕುಂಭ (ಕೊಡ) ಅಲ್ಲ. ಆದ್ದರಿಂದ ಉಲ್ಲೇಖಿ ಮತ್ತು ಆಲಂಬನ ಪರಸ್ಪರ ವಿರುದ್ಧವಾಗುವದು ಅಯುಕ್ತ.

**B) ಭ್ರಮ ಹುಟ್ಟಲು ಕಾರಣಗಳಿಲ್ಲ.**

(i) ಕಣ್ಣು ಮೊದಲಾದ ಇಂದ್ರಿಯಗಳು ಭ್ರಮಕ್ಕೆ ಕಾರಣವಲ್ಲ. ಏಕೆಂದರೆ ಇಂದ್ರಿಯಗಳಿಂದ ಯಥಾರ್ಥ ಜ್ಞಾನ ಹುಟ್ಟುವದು ಅನುಭವ ಸಿದ್ಧ. ವಿಪರೀತ ಜ್ಞಾನ ಹುಟ್ಟುವುದಿಲ್ಲ. ಮುಪ್ಪು ಮರಣಗಳನ್ನು ನಿವಾರಿಸುವ ಅಮೃತವು ಎಂದೂ ಮುಪ್ಪು ಮರಣಗಳಿಗೆ ಕಾರಣವಾಗಲಾರದು. ಅದರಂತೆ ಯಥಾರ್ಥ ಜ್ಞಾನ ಸಾಧನಗಳಾದ ಕಣ್ಣು ಮೊದಲಾದ ಇಂದ್ರಿಯಗಳಿಂದ ಭ್ರಮ ಹುಟ್ಟಲಾರದು.

(ii) ಇನ್ನು ದುಷ್ಟೇಂದ್ರಿಯವು ಭ್ರಮಕ್ಕೆ ಕಾರಣ ಎಂದೂ ಹೇಳಲಾಗದು. ಏಕೆಂದರೆ ದೋಷವು ಕಾರಣಶಕ್ತಿಯನ್ನು ಕುಂಠಿಸುತ್ತದೆ. ವಿಪರೀತ ಶಕ್ತಿಯನ್ನು ಹುಟ್ಟಿಸುವದಿಲ್ಲ. ಉದಾ : ಅಡವಿಯ ಮಲ್ಲಿಗೆಯ ಬೀಜವು (ಕುಟಜಃ) ದುಷ್ಟವಿದ್ದರೆ ಅದು ಮಲ್ಲಿಗೆಯನ್ನು ಹುಟ್ಟಿಸುವದಿಲ್ಲ. ಅದು ವಿಪರೀತವಾದ ಆಲದ ಮರವನ್ನಂತೂ ಸರ್ವಥಾ ಹುಟ್ಟಿಸಲಾರದು. ಇದರಂತೆ ಹುರಿದ ಬೀಜದಿಂದ ಅಂಕುರ ಹುಟ್ಟುವದಿಲ್ಲ.

**C) ಭ್ರಮ ಒಪ್ಪಿದರೆ ಬರುವ ಅನುಪಪತ್ತಿಗಳು :** ಭ್ರಮ ಒಪ್ಪಿದರೆ ಕೆಳಗಿನ ಅನುಪಪತ್ತಿಗಳಿವೆ.

i) **ಸಾಕಾರವಾದಾತ್ :** ಇದು ಬೆಳ್ಳಿ ಎಂದು ಬೆಳ್ಳಿಯ ಜ್ಞಾನವಂತೂ ಆಗಿದೆ. ಹಾಗಾದರೆ ಆ ಬೆಳ್ಳಿ ಎಲ್ಲಿದೆ ? ತೋರಿದ ಬೆಳ್ಳಿ ಎದುರಿಗಿರುವ ಸತ್ಯ ಪದಾರ್ಥವಂತೂ ಅಲ್ಲ. ಏಕೆಂದರೆ ಮುಂದೆ ಇದು ಬೆಳ್ಳಿ ಅಲ್ಲ ಎಂಬ ಬಾಧ ಜ್ಞಾನ ಬರುತ್ತದೆ. ಸತ್ಯಕ್ಕೆ ಬಾಧ ಬರುವದಿಲ್ಲ. ಇನ್ನು ನೈಯಾಯಿಕರು ಹೇಳುವಂತೆ, ತೋರಿದ ಬೆಳ್ಳಿ ದೇಶಾಂತರದಲ್ಲಿ ಅಂಗಡಿಯಲ್ಲಿರುವ ಸತ್ಯವಾದ ಬೆಳ್ಳಿ ಎಂದು ಹೇಳಲಿಕ್ಕಾಗದು. ಏಕೆಂದರೆ ಈ ಬಗ್ಗೆ ಪ್ರಮಾಣವಿಲ್ಲ. ತೋರಿದ ಬೆಳ್ಳಿ ಅಸತ್ಯವೆಂದೂ ಹೇಳಲಾಗದು. ಏಕೆಂದರೆ ಅಸತ್ಯಕ್ಕೆ ಪ್ರತೀತಿಯೇ ಇಲ್ಲ. ಆದ್ದರಿಂದ ಪರಿಶೇಷದಿಂದ ಅಂತರಿಕ ಜ್ಞಾನವೇ ಬೆಳ್ಳಿಯಾಕಾರವಾಗಿ ತೋರಿದೆ ಎಂದು ಹೇಳಬೇಕು. ಇದರಿಂದ ಅವೈದಿಕ ಬೌದ್ಧರ ವಿಜ್ಞಾನವಾದ ಒಪ್ಪುವ ಅನುಪಪತ್ತಿ (ಬಾಧಕ) ಬರುತ್ತದೆ.

ii) **ಅಸತೋ ನ ಭಾನಾತ್ :** ಮೇಲೆ ಹೇಳಿದಂತೆ ತೋರಿದ ಬೆಳ್ಳಿ ಸತ ವಂತೂ ಅಲ್ಲ. ಆದ್ದರಿಂದ ಅದು ಅಸತ್ಯವೆಂದೇ ಹೇಳಬೇಕು. ಆದರೆ ಅಸತ್ಯಕ್ಕೆ ಪ್ರತೀತಿ ಇಲ್ಲ. ಆದ್ದರಿಂದ ಭ್ರಮ ಒಪ್ಪಿದರೆ ಅಸತ್ಯಕ್ಕೆ ಪ್ರತೀತಿ ಉಂಟು ಎಂದು ಒಪ್ಪುವ ಬಾಧಕ ಬರುತ್ತದೆ.

iii) **ಸಂವಿದ್ವಿರೋಧಾತ್ :** ಇದು ಬೆಳ್ಳಿ ಎಂಬ ಬೆಳ್ಳಿಜ್ಞಾನದಲ್ಲಿ ವಿಷಯು ಶಿಂಪು ಮತ್ತು ಗ್ರಹಣವಾಗುವದು (ಉಲ್ಲೇಖಿ) ಬೆಳ್ಳಿ. ಹೀಗೆ ವಿಷಯು ಮತ್ತು ಉಲ್ಲೇಖಿ ಭಿನ್ನವಿರುವದು ಜ್ಞಾನಾನುಭವಕ್ಕೆ ವಿರುದ್ಧವಾಗಿದೆ. ಏಕೆಂದರೆ ಇದು ಬಟ್ಟೆ (ಪಟ) ಎಂಬ ಜ್ಞಾನದಲ್ಲಿ ವಿಷಯು. ಪಟ ಮತ್ತು ಗ್ರಹಣವಾಗುವದೂ ಪಟವೇ. ಈ ವಿಷಯದಲ್ಲಿ ಒಂದು ಪ್ರಶ್ನೆ ಕೇಳುತ್ತೇವೆ. ಇದು ಬೆಳ್ಳಿ ಎಂಬ ಬೆಳ್ಳಿಜ್ಞಾನವಲ್ಲಿ ಶಿಂಪು (ಶುಕ್ತಿ) ತೋರುತ್ತದೆಯೋ ಇಲ್ಲವೋ ? ತೋರು ತ್ತದೆ ಎಂದರೆ ನೀನು ಬಹಳ ಬುದ್ಧಿವಂತ, ದೇವಾನಾಂಪ್ರಿಯು (ಅಜ್ಞ, ಮೂರ್ಖ) ಎಂದು ಹೇಳಬೇಕಾಗುತ್ತದೆ. ಏಕೆಂದರೆ ಶಿಂಪು ಶಿಂಪಾಗಿ ತೋರುವದಿಲ್ಲವೆಂದೇ ಭ್ರಮದ ಪ್ರಸ್ತಾಪ ಹೊರಟಿದೆ. ಇನ್ನು ಶಿಂಪು ತೋರುವದಿಲ್ಲವೆಂದರೆ ಬೆಳ್ಳಿಯು ಜ್ಞಾನಕ್ಕೆ ಶಿಂಪು ವಿಷಯು ಹೇಗೆ ಆಗುತ್ತದೆ ? ಇದಲ್ಲದೆ ತೋರುವದು ಬೆಳ್ಳಿ, ವಿಷಯು ಮಾತ್ರ ಶಿಂಪು ಎಂದು ಹೇಳಿದರೆ ಅತಿ ಪ್ರಸಂಗ ಬರುತ್ತದೆ. ಉದಾ : ಘಟ ಎಂದು ತೋರುವ ಜ್ಞಾನಕ್ಕೆ ಪಟ ವಿಷಯುವಾಗಲಿ ಎಂಬ ಅತಿಪ್ರಸಂಗ ಬರುತ್ತದೆ.

iv) **ಹೇತ್ವಭಾವಾತ್ :** ಹಿಂದೆ "B" ಯಲ್ಲಿ ಹೇಳಿದಂತೆ ಭ್ರಮ ಹುಟ್ಟಲು ಕಾರಣಗಳಿಲ್ಲ.

v) **ಧಿಯಾಂ ಅನಾಶ್ವಾಸಭಯಾತ್ :** ಜ್ಞಾನವೇ ಎಲ್ಲೆಡೆಯಲ್ಲಿ ವಸ್ತುಗಳನ್ನು ನಿರ್ಣಯಿಸುತ್ತದೆ. ಹೀಗಿರುವಾಗ ಇದು ಬೆಳ್ಳಿ ಎಂಬ ಒಂದು ಜ್ಞಾನ ಬಾಧಿತ ವಾದರೆ ಜ್ಞಾನದ ಪ್ರಾಮಾಣ್ಯದಲ್ಲಿ ಅಪನಂಬಿಕೆಯಾಗುತ್ತದೆ. ಆದ್ದರಿಂದ ಅಹಾ, ಭ್ರಮ ಒಪ್ಪಿ ಬುದ್ಧಿವಂತರು ಕೂಡ ಮಾಡುವ ಮಹಾ ಪ್ರಮಾದ ! ಇದು ಬೆಳ್ಳಿ ಎಂಬ ಒಂದು ಜ್ಞಾನ ವ್ಯಭಿಚರಿತವಾದರೆ, ವಿಶ್ವಾಸಕ್ಕೆ ಜ್ಞಾನ ಬಿಟ್ಟು ಬೇರೆ ಯಾವದು ತಾನೇ ಕಾರಣವಾಗುವದು ? (ಜ್ಞಾನಸ್ಯ ವ್ಯಭಿಚಾರಿತ್ವೇ ವಿಶ್ವಾಸಃ ಕಿಂನಿಬಂಧನಃ)

ಮೇಲೆ ನಿರೂಪಿಸಿದ ಐದು ಅನುಪಪತ್ತಿಗಳನ್ನು (ಬಾಧಕಗಳನ್ನು ಕೆಳಗಿನ ಶ್ಲೋಕದಲ್ಲಿ ಸಂಗ್ರಹಿಸಲಾಗಿದೆ.

**ಸಾಕಾರವಾದಾತ್, ಅಸತೋ ನ ಭಾನಾತ್, ಸಂವಿದ್ವಿರೋಧಾತ್,**
**ಅಥ ಹೇತ್ವಭಾವಾತ್ ।**

**ಧಿಯಾಮನಾಶ್ವಾಸಭಯಾಚ್ಚ ನೇಷ್ಟಾ ಯತೋನ್ಯಥಾಖ್ಯಾತಿರತೋ ಯಥಾರ್ಥಾ ||**

D) **ಪ್ರಾಭಾಕಾರನ ಪ್ರಕ್ರಿಯೆ :** ಮೇಲೆ ನಿರೂಪಿಸಿದಂತೆ ಐದು ಬಾಧಕಗಳು ಬರುವದರಿಂದ ಭ್ರಮ ಒಪ್ಪಬಾರದು. ಹಾಗಾದರೆ ಶಿಂಪು ನೋಡಿ, ಇದು ಬೆಳ್ಳಿ (ಇದಂ ರಜತಂ) ಎಂದು ಬರುವ ಜ್ಞಾನದ ಗತಿ ಏನು ಎಂದು ಪ್ರಶ್ನೆ ಎತ್ತಿಕೊಂಡು ಪ್ರಾಭಾಕರನು ತನ್ನ ಪ್ರಕ್ರಿಯೆ ವಿವರಿಸುತ್ತಾನೆ.

**ಇದಂ (ಇದು) :** ಇದು ಅನುಭವ. ಕಣ್ಣು ಎದುರಿಗಿರುವ ವಸ್ತುವನ್ನು ಮಾತ್ರ ಗ್ರಹಿಸುತ್ತದೆ. ದೋಷ ಮೂಲಕ ಶುಕ್ತಿತ್ವವೆಂಬ ಸಾಮಾನ್ಯ (ಜಾತಿ) ಹಾಗೂ ವಿಶೇಷಗಳನ್ನು ಗ್ರಹಿಸದೆ, ಬೆಳ್ಳಿಯಂತಿರುವ ಕೇವಲ ದ್ರವ್ಯವನು ಗ್ರಹಿಸುತ್ತದೆ. ಮುಂದೆ ಸಂಸ್ಕಾರ ಉದ್ಬುದ್ಧವಾದೊಡನೆ ಬೆಳ್ಳಿಯ ಸ್ಮರಣೆಯನ್ನು ತಂದುಕೊಡುತ್ತದೆ.

**ರಜತಂ (ಬೆಳ್ಳಿ) :** ಇದು ಸ್ಮರಣ, ಹಿಂದೆ ಆಗಿದ್ದ ಬೆಳ್ಳಿಯ ಅನುಭವವನ್ನು ನೆನಪಿಗೆ ತಂದು ಕೊಡುತ್ತದೆ, ಆದರೆ ದೋಷ ಮೂಲಕ ಹಿಂದೆ ಗ್ರಹಿಸಿದ ಬೆಳ್ಳಿಯ ತತ್ತಾಂಶಗಳನ್ನು ಎಂದರೆ ದೇಶ ಕಾಲ ಸಂಬಂಧವನ್ನು ಕಳೆದುಕೊಂಡು (ಪ್ರಮುಷಿತ ತತ್ತಾಂಶಃ) ಅನುಭವ ಸದೃಶವಾಗಿ ಉಳಿಯುತ್ತದೆ.

ಹೀಗೆ "ಇದಂ" ಎಂಬ ಅನುಭವ ಮತ್ತು "ರಜತಂ" ಎಂಬ ಸ್ಮರಣೆ ಸ್ವರೂಪತಃ ಮತ್ತು ವಿಷಯತಃ ಭಿನ್ನವಿದ್ದರೂ ದೋಷ ಮೂಲಕ ಭೇದಗ್ರಹಣವಾಗದೆ, ಅಂಗಡಿಯ ಬೆಳ್ಳಿಯ ಸಾದೃಶ್ಯ ಮೂಲಕ 'ಇದು ಬೆಳ್ಳಿ' ಎಂಬ ಅಭೇದ ವ್ಯವಹಾರ ಹೊಂದುತ್ತದೆ.

ಭ್ರಮ ವ್ಯವಹಾರವು ಯಾವಾಗಲೂ ಗ್ರಹಣ–ಸ್ಮರಣಾತ್ಮಕ ಎಂಬ ನಿಯಮವಿಲ್ಲ. ಕೆಲವೊಂದು ಸಲ ಭ್ರಮ ವ್ಯವಹಾರವು ಭೇದ ತಿಳಿಯದ ಎರಡು ಅನುಭವಗಳಿಂದ ಆಗುತ್ತದೆ. ಉದಾ : ಪೀತಃ ಶಂಖಃ (ಶಂಖ ಹಳದಿ ಇದೆ) ತಿಕ್ತಃ ಗುಡಃ (ಬೆಲ್ಲವು ಕಹಿ bitter ಇದೆ) ಇನ್ನು ಭೇದ ತಿಳಿಯದ ಎರಡು ಸ್ಮರಣೆಗಳಿಂದಲೂ ಭ್ರಮ ವ್ಯವಹಾರ ಆಗುವದುಂಟು. ಉದಾ : ಸಘಟಃ ತತ್ರಾಸೀತ್ (ಆ ಕೊಡ ಅಲ್ಲಿತ್ತು).

ಹೀಗೆ ಭೇದದ ತಿಳುವಳಿಕೆ ಇಲ್ಲದಿರುವದರಿಂದ (ವಿವೇಕಾಗ್ರಹೇಣ) ಅಭೇದ ವ್ಯವಹಾರ ನಡೆಯುವಾಗ, ಎರಡು ಜ್ಞಾನಗಳಲ್ಲಿ ಅಭೇದವನ್ನು ಕಲ್ಪಿಸುವ ಭ್ರಮವನ್ನೇಕೆ ಒಪ್ಪಬೇಕು ? ಇದಲ್ಲದೆ ಭ್ರಮ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಭ್ರಮ ಇಲ್ಲವೆಂಬ ಅಖ್ಯಾತಿವಾದವೇ ಲೇಸು. (ತಸ್ಮಾತ್ ಅಖ್ಯಾತಿವಾದ ಏವ ಶ್ರೇಯಾನ್)

ಎಲ್ಲ ಜ್ಞಾನ ಯಥಾರ್ಥ, ಭ್ರಮವೇ ಇಲ್ಲ ಎಂದು ಸಾಧಿಸಲು ಪ್ರಾಭಾಕರನು ಮಾಡುವ ಅನುಮಾನ ಪ್ರಯೋಗಗಳು ಹೀಗಿವೆ.

i) ವಿವಾದ ವಿಷಯವಾದ ಇದು ಬೆಳ್ಳಿ ಎಂಬ ಜ್ಞಾನವು ಯಥಾರ್ಥವಾಗಿದೆ ಏಕೆಂದರೆ ಇದು ಜ್ಞಾನವಾಗಿದೆ. ಸತ್ಯವಾದ ಘಟಜ್ಞಾನದಂತೆ.

ii) ವಿವಾದವಿಷಯವಾದ ಬೆಳ್ಳಿ ಜ್ಞಾನವು ಬೆಳ್ಳಿಯನ್ನು ವಿಷಯೀಕರಿಸುತ್ತದೆ, ಏಕೆಂದರೆ ಅದು ಬೆಳ್ಳಿಜ್ಞಾನವಾಗಿದೆ. ಸಮ್ಮತವಾದ ಘಟಜ್ಞಾನದಂತೆ.

iii) ಜ್ಞಾನಸ್ವಭಾವ ಧರ್ಮವು (ಜ್ಞಾನತ್ವಂ) ಯಥಾರ್ಥದಲ್ಲಿ ಮಾತ್ರ ಇರುತ್ತದೆ. ಜ್ಞಾನತ್ವವು ಜ್ಞಾನದಲ್ಲಿ ಮಾತ್ರ ಇರುವದರಿಂದ. ಪ್ರಮಾತ್ವದಂತೆ.

iv) ಶಿಂಪು ಬೆಳ್ಳಿಸ್ವಭಾವದಿಂದ ತೋರುವದಿಲ್ಲ, ಏಕೆಂದರೆ ಅದು ಬೆಳ್ಳಿಸ್ವಭಾವ ದಿಂದ ಇರುವದಿಲ್ಲ. ಯಾವುದು ಯಾವುದರ ಸ್ವಬಾವದಿಂದ ಇರುವದಿಲ್ಲವೋ ಅದು ಆ ಸ್ವರೂಪದಿಂದ ತೋರುವದಿಲ್ಲ. ಮೇರು ಪರ್ವತವು ಸಾಸಿವೆಯ ರೂಪದಿಂದ ತೋರದಿರುವಂತೆ.

v) ಈ ಬೆಳ್ಳಿ ತಾದಾತ್ಮ್ಯವು ಜ್ಞಾನದಲ್ಲಿ ತೋರುವದು ಶಕ್ಯವಿಲ್ಲ, ಏಕೆಂದರೆ ಅದು ಅಸತ್ಯವಾಗಿದೆ. ಆಮೆಯ ಕೂದಲಂತೆ.

E) **ನಿರಾಕರಣ**

ಈ ವಿಷಯದಲ್ಲಿ ನಾವು ಉತ್ತರ ಹೇಳುತ್ತೇವೆ. (ಅತ್ರ ಉಚ್ಯತೇ) ಭ್ರಮದ ಮೊದಲಿನ ನಾಲ್ಕು ಲಕ್ಷಣಗಳನ್ನು ನೀನು ನಿರಾಕರಿಸಿದ್ದು ನಮಗೆ ಸಮ್ಮತವೇ. ಆದರೆ ಐದನೆಯ ಲಕ್ಷಣ ಎಂದರೆ ಒಂದನ್ನು ಗ್ರಹಿಸುವ ಇನ್ನೊಂದನ್ನು ವಿಷಯೀಕರಿಸುವ ಜ್ಞಾನವು ಭ್ರಮ ಎಂಬ ಲಕ್ಷಣ ಸುಸಂಗತ ವಾಗಿದೆ.

'ಇದು ಬೆಳ್ಳಿ' ಎಂಬ ಭ್ರಮದ ಉದಾಹರಣೆಯಲ್ಲಿ, ಕಣ್ಣು ಮತ್ತು ಶಿಂಪಿನ ನಡುವೆ ಸಂಯೋಗ ಸಂಬಂಧವಿದೆ. ಆದರೆ ಕಣ್ಣು ಸಂಯೋಗ ಸಂಬಂಧ ಹೊಂದಿದ ಎದುರಿಗಿರುವ ಸತ್ಯವಾದ ಶಿಂಪಿನ ಚೂರನ್ನು ದೋಷ ಮೂಲಕ ಅತ್ಯಂತ ಅಸತ್ಯವಾದ ಬೆಳ್ಳಿ ಎಂದು ಗ್ರಹಿಸುವ ಜ್ಞಾನವು ಭ್ರಮ, ಎಂದರೆ ಅಸತ್ಯವಾದ ಬೆಳ್ಳಿಯನ್ನು ಸತ್ಯವೆಂದು ತೋರಿಸುವ ಜ್ಞಾನವು ಭ್ರಮ. ಅದರಂತೆ ಸತ್ಯವಾದ ಶಿಂಪನ್ನು (ಇದು ಶಿಂಪಲ್ಲ ಬೆಳ್ಳಿ ಎಂದು) ಅಸತ್ಯವೆಂದು ತೋರಿಸುವ ಜ್ಞಾನವು ಭ್ರಮ ಎಂದು ವಿಷ್ಣುತತ್ತ್ವ ನಿರ್ಣಯದಲ್ಲಿ ಹೇಳಲಾಗಿದೆ. "ಅಸತಃ ಸತ್ವಪ್ರತೀತಿಃ, ಸತಃ ಅಸತ್ವಪ್ರತೀತಿಃ, ಅನ್ಯಥಾ ಖ್ಯಾತಿರೇವ. –ಭ್ರಾಂತಿತ್ವಾತ್"

ನೀನು ಹೇಳಿದಂತೆ ದೋಷವು ಕಾರಣಶಕ್ತಿಯನ್ನು ಪ್ರತಿಬಂಧಿಸುವದು ನಿಜ. ಉದಾ : ಹುರಿದ ಬೀಜ ದೋಷಯುಕ್ತವಾಗಿದೆ. ಆದ್ದರಿಂದ ಅದು ಬೀಜಕ್ಕಿರುವ ಮೊಳಕೆ ಒಡೆಯುವ ಶಕ್ತಿಯನ್ನು ಪ್ರತಿಬಂಧಿಸುವದು ನಿಜ. ಆದರೆ

ಕೆಲವೊಂದು ಸಲ, ದೋಷ ಮೂಲಕ ವಿಪರೀತ ಶಕ್ತಿಯೂ ಉಂಟಾಗುತ್ತದೆ. ಉದಾಹರಣಾರ್ಥವಾಗಿ ವತ್ಸನಾಭಿ ಎಂಬ ತೀಕ್ಷ್ಣ ವಿಷವನ್ನು ರಸಾಯನ ಔಷಧಗಳಲ್ಲಿ ಮಿಶ್ರಣ ಮಾಡುವದರಿಂದ ವಿಷದ ಮಾದಕತ್ವ ಶಕ್ತಿ ಹೋಗಿ ಆರೋಗ್ಯ ಉಂಟಾಗುತ್ತದೆ. ಇದಲ್ಲದೆ ಭ್ರಮ ವಿಷಯದಲ್ಲಿ ಪ್ರಮಾಣವೂ ಇದೆ. 'ಇದು ಬೆಳ್ಳಿಯಲ್ಲ, ಅತ್ಯಂತ ಅಸತ್ಯವಾದ ಬೆಳ್ಳಿಯೇ ತೋರಿತ್ತು' ಎಂದು ಹಿಂದಿನಿಂದ ಬರುವ ಬಾಧ ಜ್ಞಾನವೇ ಭ್ರಮ ವಿಷಯದಲ್ಲಿ ಪ್ರಮಾಣವಾಗಿದೆ.

**ಭ್ರಮ ಒಪ್ಪಿದರೆ ಯಾವ ಅನುಪಪತ್ತಿಗಳೂ ಇಲ್ಲ.**

i) ಭ್ರಮದಲ್ಲಿ ತೋರುವದು ಅತ್ಯಂತ ಅಸತ್ಯವಾದ ಆಕಾರವೇ.

ii) ಅಸತ್ಯಕ್ಕೆ ಪ್ರತೀತಿ ಇದ್ದೇ ಇದೆ, ಉದಾ : ಶಶವಿಷಾಣ (ಮೊಲದಕೋಡು) ಇದಲ್ಲದೆ ಶುಕ್ತಿರಜತ ಅಸದ್ವಿಲಕ್ಷಣ ಎಂದು ತಿಳಿದುಕೊಳ್ಳಲು ಅಸತ್ಯವನ್ನು ಅರಿಯಲೇ ಬೇಕು. ಆದ್ದರಿಂದ ಅಸತ್ಯಕ್ಕೆ ಪ್ರತೀತಿ ಇದ್ದೇ ಇದೆ.

iii) ನಾವು ವಿಷಯದ ಲಕ್ಷಣವನ್ನು ಹೀಗೆ ಹೇಳುತ್ತೇವೆ. ಯಾವ ಜ್ಞಾನವು (ಬೆಳ್ಳಿಯ ಜ್ಞಾನ) ಯಾವ ವಸ್ತುವಿನೊಡನೆ (ಶಿಂಪು) ಸನ್ನಿಕರ್ಷ ಹೊಂದಿದ ಇಂದ್ರಿಯದಿಂದ (ಕಣ್ಣು) ಹುಟ್ಟುತ್ತದೆಯೋ, ಆ ಜ್ಞಾನಕ್ಕೆ ಆ ಇಂದ್ರಿಯದೊಡನೆ (ಕಣ್ಣಿನೊಡನೆ) ಸಂಪರ್ಕ ಹೊಂದಿದ ವಸ್ತು (ಶಿಂಪು) ವಿಷಯವಾಗುತ್ತದೆ. ಪ್ರಕೃತದಲ್ಲಿ ಇದು ಬೆಳ್ಳಿ ಎಂಬ ಜ್ಞಾನಕ್ಕೆ ಶಿಂಪು ವಿಷಯ.

iv) ದುಷ್ಟ ಇಂದ್ರಿಯವೇ ಭ್ರಮಕ್ಕೆ ಕಾರಣ. ಶಿಂಪಿನೊಡನೆ ಸನ್ನಿಕರ್ಷ ಹೊಂದಿದ ಕಣ್ಣು ದೋಷ ಮೂಲಕ ಬೆಳ್ಳಿಯನ್ನು ಗ್ರಹಿಸುತ್ತದೆ.

v) ಜ್ಞಾನದಲ್ಲಿ ಅಪನಂಬಿಕೆ ಹುಟ್ಟುವ ಪ್ರಸಂಗವಿಲ್ಲ. 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಎಂದು ಮುಂದೆ ಶ್ಲೋಕ 66–67ರಲ್ಲಿ ನಿರೂಪಿಸುವಂತೆ, ಜ್ಞಾನದ ಪ್ರಾಮಾಣ್ಯವು ಸ್ವಾಭಾವಿಕ. ಅಪ್ರಾಮಾಣ್ಯವು ಅಪವಾದ ಮೂಲಕ. ಚೈತನ್ಯ ರೂಪವಾದ ಸಾಕ್ಷಿಯ ಪ್ರಾಮಾಣ್ಯವು ಅಬಾಧಿತ. ಇಂತಹ ಸಾಕ್ಷಿಯು ಅಂತಃಕರಣ ಪರಿಣಾಮ ರೂಪವಾದ ಜ್ಞಾನದಲ್ಲಿಯ ಪ್ರಾಮಾಣ್ಯವನ್ನು ಸ್ವತಃ ಗ್ರಹಿಸುತ್ತದೆ. ಆದ್ದರಿಂದ ಜ್ಞಾನದಲ್ಲಿ ಅಪನಂಬಿಕೆ ಹುಟ್ಟುವ ಪ್ರಸಂಗವಿಲ್ಲ. ಇದಲ್ಲದೆ ಒಂದೆಡೆ ಪ್ರವೃತ್ತಿಯಲ್ಲಿ (ವ್ಯವಹಾರ) ಬಾಧ ಬಂದರೆ ಎಲ್ಲ ಪ್ರವೃತ್ತಿಗಳಲ್ಲಿ ಅವಿಶ್ವಾಸ ಉಂಟಾಗುವದಿಲ್ಲ. ಅದರಂತೆ ಒಂದೆಡೆ ಜ್ಞಾನವು ಬಾಧಿತವಾದರೆ, ಎಲ್ಲ ಜ್ಞಾನ ಬಾಧಿತವಾಗುವದೆಂದು ಜ್ಞಾನದಲ್ಲಿಯೇ ವಿಶ್ವಾಸ ಹೊರಟು ಹೋಗುವ ಪ್ರಸಂಗ ಸರ್ವಥಾ ಬರುವದಿಲ್ಲ,

ಒಟ್ಟಿನಲ್ಲಿ ಭ್ರಮ ಇದೆ. ಭ್ರಮವಿರುವ ಬಗ್ಗೆ ಅನುಭವ ಪ್ರಮಾಣವಿದೆ. ಭ್ರಮಕ್ಕೆ ಕಾರಣವೂ ಇದೆ. ಭ್ರಮ ಒಪ್ಪಿದರೆ, ಯಾವ ಬಾಧಕಗಳೂ ಇಲ್ಲ. ಅಸತ್ಯಕ್ಕೆ ಪ್ರತೀತಿ ಉಂಟು. ಮೇಲಾಗಿ ನಿನ್ನ ಜ್ಞಾನಸದ್ವಿತ್ವದ ಬಗ್ಗೆ ಪ್ರಮಾಣವಿಲ್ಲ.

ಹಾಗೂ ನಿನ್ನ ಅನುಮಾನ ಪ್ರಯೋಗಗಳು ದೋಷಯುಕ್ತವಾಗಿವೆ. ಆದ್ದರಿಂದ ಪ್ರಾಭಾಕರನ ಮತ, ಪ್ರಕ್ರಿಯೆ, ಅಗ್ರಾಹ್ಯ.

### I 2-ರಾಮಾನುಜೀಯ ಮತ

ರಾಮಾನುಜರ ಪ್ರಕಾರ ಎಲ್ಲದರಲ್ಲಿ ಎಲ್ಲ ಅಂಶಗಳಿರುತ್ತವೆ. ಹೀಗಾಗಿ ಶಿಂಪಿನಲ್ಲಿ ಬೆಳ್ಳಿಯ ಅಂಶಗಳಿರುವದರಿಂದ 'ಇದು ಬೆಳ್ಳಿ' ಎಂಬ ಜ್ಞಾನ ಯಥಾರ್ಥವೇ. ಈ ಬಗ್ಗೆ ಪ್ರಮಾಣಗಳು :

i) ತಾಸಾಂ ತ್ರಿವೃತಂ ತ್ರಿವೃತಂ ಏಕೈಕಂ ಅಕರೋತ್ (ಛಾಂದೋಗ್ಯ ಉಪನಿಷತ್) (ಶ್ರೀ-ಪ್ರಾಣ-ರುದ್ರರಿಂದ ಅಭಿವ್ಯಕ್ತವಾದ) ಅಗ್ನಿ-ಜಲ-ಪೃಥ್ವೀ ಎಂಬ ಮೂರು ಅಂಶಗಳಿಂದೊಡಗೂಡಿದ ಪೃಥ್ವಿ ಮೊದಲಾದ ಒಂದೊಂದು ದ್ರವ್ಯವನ್ನು ಭಗವಂತನು ಸೃಷ್ಟಿಸಿದನು.

ii) ಮಹತ್ತತ್ವದಿಂದ ಪೃಥ್ವೀವರೆಗಿನ ಎಲ್ಲ ತತ್ವಗಳು ಸೇರಿ ಪರಸ್ಪರ ಸಂಯೋಗವನ್ನೂ ಅವಲಂಬನವನ್ನೂ ಪಡೆದು ಬ್ರಹ್ಮಾಂಡವನ್ನು ಸೃಷ್ಟಿಸುತ್ತವೆ. (ಪುರಾಣ ವಾಕ್ಯ)

iii) ಓಂ ತ್ರ್ಯಾತ್ಮಕತ್ವಾತ್ ಭೂಯಸ್ತ್ವಾತ್ ಓಂ (ಬ್ರಹ್ಮಸೂತ್ರ III-1-2) ಜೀವನು ಪೃಥ್ವೀ-ಅಪ್-ತೇಜಸ್ ಭೂತಗಳಿಂದೊಡಗೂಡಿದ ಬೇರೊಂದು ದೇಹಕ್ಕೆ ಹೋಗುತ್ತಾನೆ. ಅವುಗಳಲ್ಲಿ ನೀರಿನ ಅಂಶ ಹೆಚ್ಚಿಗಿರುತ್ತದೆ.

iv) ಸೋಮಾಭಾವೇ ಪೂತಿಕಾಂ ಗೃಹ್ಣೀಯಾತ್, ವ್ರೀಹ್ಯಭಾವೇ ಚ ನೀವಾರಂ ಗೃಹ್ಣೀಯಾತ್" ಸೋಮ ಇಲ್ಲದಿದ್ದರೆ ಪೂತಿಕಾ (ಅವ್ಯಕ್ತ ಬಳ್ಳಿ), ಅಕ್ಕಿ ಇಲ್ಲದಿದ್ದರೆ ನವಣೆ ತೆಗೆದುಕೊಳ್ಳಬೇಕು.

ಶಿಂಪಿನಲ್ಲಿ ಬೆಳ್ಳಿಯ ಅಂಶಗಳಿವೆ. ಆದರೆ ಕಣ್ಣು ದೋಷ ಮೂಲಕ ಶಿಂಪಿನಲ್ಲಿರುವ, ಶಿಂಪಿನ ಬಹಳ ಅಂಶಗಳನ್ನು ಬಿಟ್ಟು ಅದರಲ್ಲಿರುವ ಅಲ್ಪ ಬೆಳ್ಳಿಯ ಅಂಶಗಳನ್ನೇ ಪ್ರಕಾಶಗೊಳಿಸುವದರಿಂದ ಮನುಷ್ಯನು ಶಿಂಪನ್ನು ನೋಡಿ ಬೆಳ್ಳಿ ಎಂದು ತಿಳಿದು ಅದನ್ನು ತೆಗೆದುಕೊಳ್ಳಲು ಹೋಗುತ್ತಾನೆ.

**ನಿರಾಕರಣ**- ಈ ಮತ ಅಯುಕ್ತ ಏಕೆಂದರೆ—

i) ನೀನು ಉದಾಹರಿಸಿದ ಶ್ರುತಿ-ಪುರಾಣಾದಿ ವಚನಗಳಲ್ಲಿ ಪೃಥ್ವೀ ಮೊದಲಾದ ದ್ರವ್ಯಗಳಲ್ಲಿ, ಅಗ್ನಿ-ಜಲ-ಪೃಥ್ವೀಗಳ ಮಿಶ್ರಣವಿದೆ ಎಂದು ಹೇಳಲಾಗಿದೆ. ಶಿಂಪಿನಲ್ಲಿ ಬೆಳ್ಳಿಯ ಅಂಶವಿದೆ ಎಂದು ಎಲ್ಲಿಯೂ ಹೇಳಿಲ್ಲ. ಇದಲ್ಲದೆ ಕಾರಣದಲ್ಲಿ ಮಿಶ್ರಣವಿದ್ದರೆ ಕಾರ್ಯದಲ್ಲಿಯೂ ಮಿಶ್ರಣವಿರಬೇಕಾಗಿಲ್ಲ.

ii) ಸೋಮ ಇರದಿದ್ದರೆ ಅವ್ಯಕ್ತ ಬಳ್ಳಿ (ಪೂತಿಕಾ), ಅಕ್ಕಿ ಇರದಿದ್ದರೆ ನವಣೆ ತೆಗೆದುಕೊಳ್ಳಬೇಕು ಎಂದಿಷ್ಟೇ ಹೇಳಿದೆ. ಸೋಮದಲ್ಲಿ ಪೂತಿಕಾದ ಅಂಶ, ಅಕ್ಕಿಯಲ್ಲಿ ನವಣೆಯ ಅಂಶ ಇವೆ ಎಂದು ತಿಳಿಯಬೇಕಿಲ್ಲ. ಶ್ರುತಿ ಪ್ರಾಮಾಣ ರಕ್ಷಣೆ

ಗಾಗಿ ಸೋಮ ಘೂತಿಕಾಗಳಿಗೆ ಒಂದೇ ಕೆಲಸ ಮಾಡುವ ಶಕ್ತಿ ಇದೆ. ಮತ್ತು ನವಣೆ ಅಕ್ಕಿಯು ಕೆಲಸವನ್ನೂ ಮಾಡಬಲ್ಲದು ಎಂದು ಒಪ್ಪಬೇಕು.

iii) ಇದಲ್ಲದೆ ನಿನ್ನ ಪ್ರಕಾರ ಮಾತೃ–ಮಾತಂಗ–ವಂದಿರಾ (ತಾಯಿ, ಚಂಡಾಲ ಸೆರೆ) ಮೊದಲಾದವುಗಳಿಗೆ ಅತಿ ಸಾದೃಶ್ಯ. ಹೆಂಡತಿ–ತಂದೆ–ಹಾಲುತುಪ್ಪಗಳಲ್ಲಿ ಇರುವದರಿಂದ ಭಾರ್ಯಾಭೋಗವು ಮಾತೃಗಮನದಂತೆ ಮಹಾಪಾತಕವಾಗಲಿ, ಚಂಡಾಲರಂತೆ ತಂದೆ ಅಸ್ಪೃಶ್ಯನಾಗಲಿ, ಸುರಾಪಾನದಂತೆ ತುಪ್ಪ ಮತ್ತು ಹಾಲು ಕುಡಿಯುವದು ನಿಷಿದ್ಧವಾಗಲಿ! ಹೀಗೆ ಈ ಮತ ಅಗ್ರಾಹ್ಯ. ಬೆಳ್ಳಿ ಬಯಸು ವವನು ಶಿಂಪು ತೆಗೆದುಕೊಳ್ಳುವ ಪ್ರವೃತ್ತಿಗೆ ಕಾರಣವೆಂದರೆ ಕಣ್ಣಿನ ದೋಷ ದಿಂದುಂಟಾದ ಭ್ರಮ. ಆದ್ದರಿಂದ ಭ್ರಮವಿದೆ ಎಂದು ಒಪ್ಪಬೇಕು. ಭ್ರಮ ಮೂಲಕ ಶಿಂಪನ್ನು ಬೆಳ್ಳಿ ಎಂದು ಭಾವಿಸಿ ಶಿಂಪನ್ನು ತೆಗೆದುಕೊಳ್ಳಲು ಮನುಷ್ಯನು ಪ್ರವೃತ್ತನಾಗುತ್ತಾನೆ.

## I–3 (ಕೆಲವು ತಾರ್ಕಿಕರು–ನ್ಯಾಯ ಕಲ್ಪತರುಕಾರ)

'ನ್ಯಾಯ ಕಲ್ಪತರು' ಎಂಬ ಗ್ರಂಥಕಾರನ ಪ್ರಕಾರ 'ಇದಂ ರಜತಂ' (ಇದು ಬೆಳ್ಳಿ) ಎಂಬುದು ಒಂದು ಅಖಂಡ ಸವಿಕಲ್ಪಕ ಜ್ಞಾನ. ಈ ಜ್ಞಾನಕ್ಕೆ ಎದು ರಿಗಿರುವ ಶಿಂಪು ಮತ್ತು ತೋರಿದ ಬೆಳ್ಳಿ ಇವೆರಡೂ ವಿಷಯಗಳೇ, ಇವೆರಡೂ ಸತ್ಯವೇ. ಕಣ್ಣಿಗೆ ಶಿಂಪಿನೊಡನೆ ಸನ್ನಿಕರ್ಷವಿದ್ದರೂ ಅದು ಕಾಚಕಾಮಲಾದಿ ದೋಷ ಮೂಲಕ ಹಾಗೂ ಬೆಳ್ಳಿಯೊಡನೆ ಇರುವ ಅಸಂಬಧ (ಅಸಂಸರ್ಗ) ಗಳನ್ನು ತಿಳಿಯುವದಿಲ್ಲ. ಹೀಗೆ ಭೇದವನ್ನು ಗ್ರಹಿಸದಿರುವದರಿಂದ, ಇದು ಬೆಳ್ಳಿ ಎಂಬ ಒಂದು ಅಖಂಡ ಸವಿಕಲ್ಪಕ ಜ್ಞಾನ ಹುಟ್ಟುತ್ತದೆ, ಮತ್ತು ಬೆಳ್ಳಿ ತೆಗೆದುಕೊಳ್ಳಲು ಪ್ರವೃತ್ತನಾಗುತ್ತಾನೆ. ಮುಂದೆ ಇದು ಬೆಳ್ಳಿ ಅಲ್ಲ ಎಂಬ ವಿವೇಕ ಜ್ಞಾನ, ಭೇದಜ್ಞಾನ ಆದೊಡನೆ ಆ ಪ್ರವೃತ್ತಿ ಹೋಗುತ್ತದೆ.

**ನಿರಾಕರಣೆ :** ಈ ಪ್ರಕ್ರಿಯೆ ಅಯುಕ್ತವಾಗಿದೆ. (ತದಿದಂ ಅನುಪಪನ್ನಂ) ಹೇಗೆಂದರೆ : —

i) ಎಲ್ಲ ಪ್ರವೃತ್ತಿಗೆ ಭೇದದ ಅಜ್ಞಾನವೇ (ಭೇದಾಗ್ರಹ) ಕಾರಣ ಎಂದು ಹೇಳಲಿಕ್ಕೆ ಬರುವದಿಲ್ಲ. ಹೀಗಿರುವಾಗ 'ಇದಂ ರಜತಂ' ಎಂಬ ಜ್ಞಾನದಿಂದಾ ಗುವ ಪ್ರವೃತ್ತಿಯಲ್ಲಿ ಮಾತ್ರ ವಿವೇಕಾಗ್ರಹ, ಭೇದ ಅಗ್ರಹ ಏಕೆ ಒಪ್ಪುತ್ತೀ?

ii) ನಿನ್ನ ಗುರುಗಳ (ಅಕ್ಷಪಾದರ) ಮತದ ಪ್ರಕಾರ 'ಅತಸ್ಮಿನ್ ತದಿತಿಪ್ರತ್ಯಯಃ ವಿಪರ್ಯಯಃ.' ನೀನು ಪೂರ್ವಾಚಾರ್ಯರ ಮತ ಬಿಟ್ಟು ಪ್ರಾಭಾಕರನ 'ವಿವೇಕ ಅಗ್ರಹದ' ಚೌರ್ಯವನ್ನೇಕೆ ಮಾಡುತ್ತೀ ? ಇದರಿಂದ ನಿನಗೆ ಅಪಸಿದ್ಧಾಂತ ದೋಷ ಬರುತ್ತದೆ. ಭ್ರಮವನ್ನು ಒಪ್ಪಿದರೆ, ವೇದ ಪ್ರಾಮಾಣ್ಯಕ್ಕೆ ಬಾಧ ಬರುವದೆಂಬ ನಿನ್ನ ಶಂಕೆ ಅನುಚಿತ. ಇದು ಬೆಳ್ಳಿ ಎಂಬ ಒಂದು ಜ್ಞಾನ

ಬಾಧಿತವಾದರೆ, ವೇದ ಜನ್ಯ ಜ್ಞಾನ ಬಾಧಿತವಾಗುತ್ತದೆ ಎಂಬ ನಿನ್ನ ವಾದ ಅಸಮಂಜಸ, ಏಕೆಂದರೆ ವೇದ ಪ್ರಾಮಾಣ್ಯವು ಅದರ ಅಪೌರುಷೇಯತ್ವವನ್ನು ಆಧರಿಸಿಕೊಂಡಿದೆ.

ಆದ್ದರಿಂದ ಭ್ರಮ ಒಪ್ಪಬೇಕು. ಶಿಂಪು ಬೆಳ್ಳಿ ಎಂದು ತೋರುತ್ತದೆ ಎಂದು ಸಿದ್ಧವಾಯಿತು.

## II ಅನ್ಯಥಾಖ್ಯಾತಿವಾದ

## (ಭಾಟ್ಟ ಮೀಮಾಂಸಕರು ಮತ್ತು ಪ್ರಾಚೀನ ತಾರ್ಕಿಕರು)

ಭ್ರಮವಿದೆ, ಶಿಂಪನ್ನು ನೋಡಿ 'ಇದು ಬೆಳ್ಳಿ' ಎಂದು ಬರುವ ಜ್ಞಾನ ಭ್ರಮ. ಶಿಂಪಿನಲ್ಲಿ ತೋರುವ (ಆರೋಪಿತವಾಗುವ) ಬೆಳ್ಳಿ ಸತ್ಯ. ಅಸತ್ಯವಲ್ಲ. ಅತ್ಯಂತ ಅಸತ್ಯವಿದ್ದರೆ ತೋರುತ್ತಿದ್ದಿಲ್ಲ, ತೋರಿದೆಯಾದ್ದರಿಂದ ಬೆಳ್ಳಿ ಸತ್ಯವೇ. ಆದರೆ ಅದು ಎದುರಿಗಿಲ್ಲವಾದ್ದರಿಂದ ಅಂಗಡಿ ಮೊದಲಾದ ದೂರದೇಶದಲ್ಲಿದ್ದ ಬೆಳ್ಳಿ ತೋರುತ್ತದೆ ಎಂದು ಇವರ ಮತ. (ವಿಮತಂ ರಜತಂ ದೇಶಾಂತರೇ ಸತ್, ಪುರಃ ಅಸತ್ವೇಸತಿ ಸತ್ವಾತ್, ಸಮ್ಮತವತ್)

ಇದು ಬೆಳ್ಳಿ (ಇದಂ ರಜತಂ) ಎಂಬಲ್ಲಿ ಮೂರು ಅಂಶಗಳಿವೆ. ಇದು ರಜತಂ ಮತ್ತು ರಜತತಾದಾತ್ಮ್ಯ ಅಥವಾ ಸಂಸರ್ಗ. ಈ ಮೂರರಲ್ಲಿ ಎದುರಿಗಿರುವ ಶಿಂಪಂತೂ ಪ್ರತ್ಯಕ್ಷ ಕಾಣುವದರಿಂದ ಸತ್ಯ. ತೋರಿದ ಬೆಳ್ಳಿಯೂ ಸತ್ಯವೇ. ಅಸತ್ಯವಾಗಿದ್ದರೆ ತೋರುತ್ತಿರಲಿಲ್ಲ, ಇದು ಬೆಳ್ಳಿ ಎಂಬ ಜ್ಞಾನಕ್ಕೆ ಮುಂದೆ ಬಾಧ ಬರುವದರಿಂದ 3ನೇ ಅಂಶವಾದ ರಜತತಾದಾತ್ಮ್ಯ ಅಥವಾ ಸಂಸರ್ಗ ಅಸತ್ಯವೆಂದು ಅನ್ಯಥಾಖ್ಯಾತಿವಾದಿಗಳು ಹೇಳುತ್ತಾರೆ. ಕಾಚಕಾಮಲಾದಿ ದೋಷ ದೂಷಿತವಾದ ಕಣ್ಣು ಶಿಂಪಿನ ಜೊರಿನೊಡನೆ ಸಂಬಂಧ ಹೊಂದಿದ್ದರೂ ಎದುರಿಗಿರುವ ವಸ್ತುವನ್ನು ದೂರದಲ್ಲಿರುವ ಬೆಳ್ಳಿಯ ಸ್ವರೂಪದಿಂದ ತೋರಿಸುತ್ತದೆ ಎಂದು ಇವರ ವಾದ (ವಿಪ್ರಕೃಷ್ಟ ರಜತಾತ್ಮನಾ ದರ್ಶಯತಿ)

**ನಿರಾಕರಣ** : ನಿಮ್ಮ ಪ್ರಕ್ರಿಯೆ ಅಯುಕ್ತವಾಗಿದೆ. ಹೇಗೆಂದರೆ : —

i) ತೋರಿದ ಬೆಳ್ಳಿ ಸತ್ಯ, ಅಂಗಡಿಯಲ್ಲಿದ್ದುದು ಎಂಬ ನಿಮ್ಮ ವಾದ ಸರಿಯಲ್ಲ; ಏಕೆಂದರೆ ಮುಂದೆ ಅಸತ್ಯವಾದ ಬೆಳ್ಳಿಯೇ ತೋರಿತ್ತು. (ಅಸದೇವ ರಜತಂ ಪ್ರತ್ಯಭಾತ್) ಎಂದು ಬಾಧ ಜ್ಞಾನ ಬರುತ್ತದೆ. ಈ ಬಾಧ ಜ್ಞಾನಕ್ಕೆ ಅನುಗುಣವಾಗಿ ತೋರಿದ ಬೆಳ್ಳಿ ಅಸತ್ಯವೆಂದೇ ಹೇಳಬೇಕು.

ii) ಇಲ್ಲಿ ತೋರಿದ ಬೆಳ್ಳಿಯೇ ಬೇರೆ ದೇಶದಲ್ಲಿ ಎಂದರೆ ಅಂಗಡಿಯಲ್ಲಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ.

ii) ಕೆಳಗಿನ ಉದಾಹರಣೆಯಲ್ಲಿ ಘಟವು ಬೇರೆಡೆಯಲ್ಲಿ ಸತ್ಯವಾಗಿರದಿದ್ದರೂ ಭ್ರಮ ಹುಟ್ಟಿದ್ದು ಕಂಡಿದೆ. ಆದ್ದರಿಂದ ತೋರಿದ್ದು ದೇಶಾಂತರದಲ್ಲಿ ಸತ್ಯ ಎಂಬ ನಿನ್ನ ಪ್ರಮೇಯಕ್ಕೆ ಭಂಗ ಬರುತ್ತದೆ.

ಚೈತ್ರನು ಮೈತ್ರನಿಗೆ "ಮನೆಯಲ್ಲಿ ಕೊಡವಿದೆ, ಅದನ್ನು ನೀನು ತೆಗೆದುಕೊ" ಎಂದು ಹೇಳುತ್ತಾನೆ. ಆಗ ಮೈತ್ರನು ನಾನು ನಾಳೆ ತೆಗೆದುಕೊಳ್ಳುವೆ ಎಂದು ಮಾರು ನುಡಿಯುತ್ತಾನೆ, ಮರುದಿನ ಮೈತ್ರನು ಬರುವಷ್ಟರಲ್ಲಿ ಬೇರೊಬ್ಬನು ಅಲ್ಲಿದ್ದ ಕೊಡವನ್ನು ಒಡೆದು ಆ ಸ್ಥಳದಲ್ಲಿ ಬೇರೊಂದು ಕೊಡವನ್ನಿಟ್ಟಿರುತ್ತಾನೆ. ಮೈತ್ರನಾದರೋ ಬಂದು ಅಲ್ಲಿದ್ದ ಕೊಡವೇ ಚೈತ್ರನು ತನಗೆ ತೆಗೆದುಕೊಳ್ಳಲು ಹೇಳಿದ್ದ ಕೊಡವೆಂದು ಭ್ರಮಿಸಿ ತೆಗೆದುಕೊಳ್ಳುತ್ತಾನೆ. ಹೀಗೆ ಚೈತ್ರನು ಭ್ರಮಿಸಿದ ಕೊಡವು ಬೇರೆಡೆಯಲ್ಲಿ ಸತ್ಯವಾಗಿರದಿದ್ದರೂ ಚೈತ್ರನಿಗೆ ಭ್ರಮ ಹುಟ್ಟಿದೆ.

ಹಾಗಾದರೆ ಆರೋಪಿಸಲ್ಪಟ್ಟಿರುವದು ಯಾವಾಗಲೂ ಅಸತ್ಯವೆಂದು ಭಾವಿಸಕೂಡದು.

ಆರೋಪ ಎರಡು ವಿಧ, (i) ಗೃಹ್ಯಮಾಣ ಆರೋಪ (ii) ಸ್ಮರ್ಯಮಾಣ ಆರೋಪ.

(i) ಇಲ್ಲಿ ಆರೋಪ್ಯವು (ಆರೋಪಿಸಲ್ಪಟ್ಟದ್ದು) ಸತ್ಯವಿರುತ್ತದೆ. ಉದಾ : ದೂರದಿಂದ ಒಂದು ಮಾವು ಮತ್ತು ಒಂದು ಹಲಸಿನ ಗಿಡ ನೋಡಿದಾಗ ಎರಡೂ ಮಾವು ಅಥವಾ ಎರಡೂ ಹಲಸು ಎಂಬ ಭ್ರಮದಲ್ಲಿ ಆರೋಪ್ಯವು ಸತ್ಯವಿದೆ.

ii) ಇಲ್ಲಿ ಆರೋಪ್ಯವು ಅಸತ್ಯವಿದೆ. ಉದಾ : ಶಿಂಪನ್ನು ನೋಡಿ ಇದು ಬೆಳ್ಳಿ ಎಂಬಲ್ಲಿ ತೋರಿದ ಬೆಳ್ಳಿ ಅಸತ್ಯ. ಅಂತೆಯೇ ಮುಂದೆ 'ಅಸತ್ಯವಾದ ಬೆಳ್ಳಿ ನನಗೆ ತೋರಿತ್ತು' ಎಂದು ಬಾಧ ಜ್ಞಾನ ಬರುತ್ತದೆ.

## III ಆತ್ಮಖ್ಯಾತಿವಾದ (ಅಥವಾ ಜ್ಞಾನಖ್ಯಾತಿವಾದ)
## ( ವಿಜ್ಞಾನವಾದಿ ಬೌದ್ಧರ ಮತ )

ವಿಜ್ಞಾನವಾದಿ ಬೌದ್ಧರ ಪ್ರಕಾರ ಇದು ಬೆಳ್ಳಿ ಎಂಬ ಭ್ರಮದಲ್ಲಿ ತೋರಿದ ಬೆಳ್ಳಿಯು ಸತ್ಯ. ಆಂತರಿಕ ಮತ್ತು ಜ್ಞಾನಾಕಾರದ್ದು. ಹೊರಗೆ ತೋರುವ ಬೆಳ್ಳಿಯು ಒಳಗಿರುವ ಜ್ಞಾನದ ಪರಿಣಾಮ. ಹೀಗೆ ಜ್ಞಾನಸ್ವರೂಪ ಆತ್ಮನೇ ಬೆಳ್ಳಿಯಾಕಾರವಾಗುತ್ತಾನೆ. ಈ ಒಳಗಿನ ಬೆಳ್ಳಿಯನ್ನು ಹೊರಗಿನದೆಂದು ತಿಳಿಯುವದು ಭ್ರಮ. ಮುಂದೆ ಇದು ಹೊರಗಿನ ಬೆಳ್ಳಿಯಲ್ಲಿ ಎಂದು ತಿಳಿಯುವದೇ ಬಾಧ. ಈ ವಾದವನ್ನು ಕೆಳಗಿನಂತೆ ಮಂಡಿಸಲಾಗುತ್ತದೆ,

i) **ಪರಿಶೇಷ ಪ್ರಮಾಣ :** ತೋರಿದ ಬೆಳ್ಳಿ ಅಸತ್ಯವಲ್ಲ. ಏಕೆಂದರೆ ಅಸತ್ಯವಾಗಿದರೆ ತೋರುತ್ತಿರಲಿಲ್ಲ. ತೋರಿದ ಬೆಳ್ಳಿ ಎದುರಿನಲ್ಲಿಯೇ ಇರುವ ಸತ್ಯ

ಪದಾರ್ಥವಲ್ಲ. ಏಕೆಂದರೆ ಅದು ಸತ್ಯವಾಗಿದ್ದರೆ, ಇದು ಬೆಳ್ಳಿ ಎಂಬ ಜ್ಞಾನ ಭ್ರಮವಾಗುತ್ತಿದ್ದಿಲ್ಲ. ಹಾಗೂ ಮುಂದೆ ಬಾಧಜ್ಞಾನವೂ ಬರುತ್ತಿರಲಿಲ್ಲ. ಇನ್ನು ತೋರಿದ ಬೆಳ್ಳಿ ಬೇರೆ ದೇಶದಲ್ಲಿರುವ ಸತ್ಯ ಪದಾರ್ಥವಲ್ಲ. ಏಕೆಂದರೆ ಭ್ರಮ ಸ್ಥಳದಲ್ಲಿಯ ಬೆಳ್ಳಿ ಬೇರೆ ಸ್ಥಳದಲ್ಲಿರುವ ಬಗ್ಗೆ ಪ್ರಮಾಣವಿಲ್ಲ.

ಆದ್ದರಿಂದ ಪರಿಶೇಷ ಪ್ರಮಾಣದಿಂದ ತೋರಿದ ಬೆಳ್ಳಿ ಜ್ಞಾನಾಕಾರದ್ದು. ಎಂದರೆ ಅದು ಸತ್ಯ ಮತ್ತು ಆಂತರಿಕ.

ii) **ಅರ್ಥಾಪತ್ತಿ ಪ್ರಮಾಣ ;** ಶಿಂಪಿನಲ್ಲಿ ತೋರಿದ ಬೆಳ್ಳಿ ಜ್ಞಾನರೂಪವಾದದ್ದು. ಏಕೆಂದರೆ ಇಂದ್ರಿಯ ಸಂಬಂಧದಿಂದ ಹುಟ್ಟದಿದ್ದ ಪ್ರತ್ಯಕ್ಷದಲ್ಲಿ ವಿಷಯವಾಗಿದೆ, ಜ್ಞಾನದಂತೆ.

iii) ತೋರಿದ ಬೆಳ್ಳಿ ಸತ್ಯವಾದರೂ ಭ್ರಮ ಮತ್ತು ಬಾಧ ಕೂಡುತ್ತವೆ. ಹೇಗೆಂದರೆ ಒಳಗಿರುವವನ್ನು ಎಂದರೆ ಸತ್ಯವಾದ ಜ್ಞಾನವನ್ನು ಹೊರಗೆ ಘಟಾದ್ಯಾಕಾರವಾಗಿ ಇದೆ ಎಂದು ತಿಳಿಯುವದೇ ಭ್ರಮ. "ಆಂತರಸ್ಯೈವ ಬಾಹ್ಯತಯಾ ಅವಭಾಸಃ ಭ್ರಮಃ" ಇದು ಬೆಳ್ಳಿಯಲ್ಲ ಎಂಬ ಬಾಧಜ್ಞಾನವೆಂದರೆ, ಬೆಳ್ಳಿ ಹೊರಗಿಲ್ಲ ಎಂದು ಅರ್ಥ. (ಬಾಹ್ಯತಾ ನಿಷೇಧಃ).

**ನಿರಾಕರಣ :**

i) ಈ ವಾದ ಅಯುಕ್ತ. ತೋರಿದ ಬೆಳ್ಳಿ ಸತ್ಯವೆಂದು ನೀನು ಹೇಳಿದ್ದು ಅಯುಕ್ತ, ಅದು ಅಸತ್ಯವೇ ಆಗಿದೆ. ಏಕೆಂದರೆ ಅಸತ್ಯವಾದ ಬೆಳ್ಳಿಯೇ ತೋರಿತ್ತು ಎಂದು ಹಿಂದಿನಿಂದ ಬಾಧಜ್ಞಾನ ಬರುತ್ತದೆ.

ii) ಹೊರಗೆ ತೋರಿದ ಬೆಳ್ಳಿಯು ಸತ್ಯವೋ ಅಸತ್ಯವೋ ಎಂದು ಕೇಳುತ್ತೇವೆ. ಅದು ಸತ್ಯವಾಗಲಾರದು. ಏಕೆಂದರೆ ಸತ್ಯವಾಗಿದ್ದರೆ ಇದು ಬೆಳ್ಳಿ ಎಂಬ ಜ್ಞಾನ ಭ್ರಮವೆನಿಸುತ್ತಿದ್ದಿಲ್ಲ ಹಾಗೂ ಮುಂದೆ ಇದು ಬೆಳ್ಳಿಯಲ್ಲ ಎಂಬ ಬಾಧ ಜ್ಞಾನವು ಬರುತ್ತಿದ್ದಿಲ್ಲ. ಇನ್ನು ಇದು ಅಸತ್ಯವೂ ಆಗಲಾರದು. ಏಕೆಂದರೆ ಅಸತ್ಯವು ತೋರುವದಿಲ್ಲವಾದ್ದರಿಂದ ಬೆಳ್ಳಿ ಹೊರಗಾದರೂ (ಬಹಿಷ್ಟತಯಾ) ಹೇಗೆ ತೋರುತ್ತದೆ ? ಬೆಳ್ಳಿ ಒಳಗಿದೆ (ಆಂತರೇತು) ಎಂಬ ವಿಷಯದಲ್ಲಿ ಪ್ರಮಾಣವಿಲ್ಲ.

iii) ನಿನ್ನ ಅರ್ಥಾಪತ್ತಿ ಪ್ರಮಾಣ ದೋಷಯುಕ್ತವಾಗಿದೆ. ಅನುಮಾನದ ಹೇತು (ಇಂದ್ರಿಯ ಸಂಬಂಧವಿಲ್ಲದೆ ಹುಟ್ಟಿದ ಪ್ರತ್ಯಕ್ಷ) ಪಕ್ಷವಾದ ಬೆಳ್ಳಿಯಲ್ಲಿ ಇಲ್ಲ. ಮತ್ತು ಸಾಧ್ಯಾಭಾವದಲ್ಲಿದೆ. (ಸಾಧ್ಯಂ–ಜ್ಞಾನರೂಪಂ) ಇದರಿಂದ ಕ್ರಮವಾಗಿ ಅಸಿದ್ಧಿ ಮತ್ತು ಅನೈಕಾಂತಿಕ (ವ್ಯಭಿಚಾರ) ದೋಷ ಬರುತ್ತವೆ. ಅಲ್ಲದೆ ದೃಷ್ಟಾಂತವಾದ ಜ್ಞಾನದಲ್ಲಿ ಹೇತುವಿಲ್ಲ. ಜ್ಞಾನವು ಇಂದ್ರಿಯಸಂಬಂಧದಿಂದಲೇ ಹುಟ್ಟುತ್ತದೆ. ಹೀಗಾಗಿ ದೃಷ್ಟಾಂತ ಸಾಧನವಿಕಲವಾಗುತ್ತದೆ.

iv) ಆರೋಪ್ಯವಾದ ಬೆಳ್ಳಿ ಸತ್ಯ ಮತ್ತು ಆಂತರಿಕ ಎಂದು ನೀನು ಹೇಳುತ್ತೀ. ಹಾಗಾದರೆ ದೂರದಿಂದ ಗುಲಗಂಜಿ ರಾಶಿಯನ್ನು ಬೆಂಕಿಯ ಕಿಡಿಗಳೆಂದು ಭ್ರಮಿಸಿದಾಗ, ಆರೋಪ್ಯವಾದ ಬೆಂಕಿಯ ಕಿಡಿಗಳು ಸತ್ಯವೂ ಆಂತರಿಕವೂ ಆಗಬೇಕು. ಹೀಗಾದರೆ ದೇಹವು ಸುಟ್ಟು ಹೋಗುವ ಪ್ರಸಂಗ ಬರುತ್ತದೆ.

## IV ಅಸತ್‌ಖ್ಯಾತಿವಾದ
## ( ಶೂನ್ಯವಾದಿ ಬೌದ್ಧರು, ಮಾಧ್ಯಮಿಕರು )

ಭ್ರಮದಲ್ಲಿ ಅಸತ್ಯದ ಗ್ರಹಣವಾಗುತ್ತದೆ. (cognition of the unreal) 'ಇದು ಬೆಳ್ಳಿ' ಎಂಬ ಜ್ಞಾನದಲ್ಲಿ ಅಸತ್ತವೇ ವಿಷಯವಾಗಿದೆ. (ಅಸದಾಲಂಬನೈವ) ಹೇಗೆಂದರೆ : i) ಪರಿಶೇಷ ಪ್ರಮಾಣ. ತೋರಿದ ಬೆಳ್ಳಿ ಸತ್ಯವಲ್ಲ. ಏಕೆಂದರೆ ಮುಂದೆ ಅದಕ್ಕೆ ಬೆಳ್ಳಿಯಲ್ಲ ಎಂಬ ಬಾಧಜ್ಞಾನ ಬರುತ್ತದೆ. ತೋರಿದ ಬೆಳ್ಳಿ ಸತ್ಯಾಸತ್ಯ (ಸದಸತ್) ಅಲ್ಲ. ಏಕೆಂದರೆ ಒಂದೇ ವಸ್ತು ವಿರುದ್ಧ ಧರ್ಮಗಳುಳ್ಳದ್ದು ಆಗಲಾರದು. ದೇಶಕಾಲ ಭೇದದಿಂದ ತೋರಿದ ಬೆಳ್ಳಿ ಸತ್ಯಾಸತ್ಯ ಎಂದು ಹೇಳಲಾಗದು. ಏಕೆಂದರೆ ಹಾಗೆ ಹೇಳಿದರೆ ಇಲ್ಲಿಯ ಘಟ ಅಲ್ಲಿ ಇಲ್ಲ. (ದೇಶಭೇದ)ವಾದ್ದರಿಂದ ಘಟಜ್ಞಾನವೂ ಭ್ರಮವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಪರಿಶೇಷದಿಂದ ಭ್ರಮಜ್ಞಾನದಲ್ಲಿ ಅಸತ್ಯವೇ ವಿಷಯವಾಗಿರುತ್ತದೆ. (ಅಸದೇವ ವಿಭ್ರಮಾಲಂಬನಂ).

ii) ಅಸತ್ಯಕ್ಕೂ ಪ್ರತೀತಿ ಉಂಟು. ಏಕೆಂದರೆ ಸತ್ಯಕ್ಕೆ ಮಾತ್ರ ಪ್ರತೀತಿಯನ್ನು ಒಪ್ಪಿದರೆ ಭ್ರಮಸ್ಥಳದಲ್ಲಿ, ಇದು ಬೆಳ್ಳಿ ಎಂಬ ಪ್ರತೀತಿ ಇರುವದರಿಂದ ಆ ಬೆಳ್ಳಿಯ ಜ್ಞಾನ ಸತ್ಯವಾಗಿ ಭ್ರಮವಾಗದಿರುವ ಪ್ರಸಂಗ ಬರುತ್ತದೆ. ಮತ್ತು ಅಸತ್ಯವಾದ ಬೆಳ್ಳಿ ತೋರಿತ್ತು ಎಂಬ ಬಾಧಜ್ಞಾನವೂ ಕೂಡುವದಿಲ್ಲ. (ನ ಭ್ರಾಂತಿಃ ನಾಪಿ ಬಾಧಃ).

iii) ಭ್ರಮದಲ್ಲಿ ತೋರಿದ ಬೆಳ್ಳಿ ಅಸತ್ಯವೆಂದು ಅನ್ಯಥಾಖ್ಯಾತಿವಾದಿಗಳು ಒಪ್ಪಿದ್ದಾರೆ. ವಿಜ್ಞಾನವಾದಿ ಬೌದ್ಧರೂ ಸಹ ಅಸತ್ಯವಾದ ಬಾಹ್ಯವಸ್ತುವಿಗೆ ಪ್ರತೀತಿಯನ್ನು ಒಪ್ಪಿದ್ದಾರೆ.

**ನಿರಾಕರಣ :** ಅಸತ್‌ಖ್ಯಾತಿ ಎಂದರೇನು ?

i) ಸತ್ಯವಾದ ಶಿಂಪು ಅತ್ಯಂತ ಅಸತ್ಯವಾದ ಬೆಳ್ಳಿಯ ಜ್ಞಾನವನ್ನು ಹುಟ್ಟಿಸುತ್ತವೆ ಎಂದು ನೀನು ಹೇಳಿದರೆ, ಅದು ನಮಗೆ ಸಮ್ಮತವೇ, ನಿಮ್ಮ ಪೂರ್ವಾಚಾರ್ಯರೂ ಇದನ್ನೇ ಹೇಳಿದ್ದಾರೆ. (ಯತ್ ಅನ್ಯಥಾ ಸಂತಂ ಅನ್ಯಥಾ ಪ್ರತಿಪದ್ಯತೇ ತನ್ನಿರಾಲಂಬನಂ ಜ್ಞಾನಂ ಅಸದಾಲಂಬನಂ ಚ ತತ್ ಇತಿ).

ii) ಇದು ಬೆಳ್ಳಿ ಎಂಬ ಜ್ಞಾನದಲ್ಲಿ ತೋರಿದುದೆಲ್ಲವೂ ಅಸತ್ಯ ಎಂದು ಹೇಳಿದರೆ ಅದು ಅಯುಕ್ತ. ಏಕೆಂದರೆ ಇದು ಬೆಳ್ಳಿ ಎಂಬಲ್ಲಿ ಶಿಂಪು (ಇದು) ಯಾವಾಗಲೂ

(ಎಂದರೆ ಭ್ರಮಕ್ಕಿಂತ ಮೊದಲು ಮತ್ತು ನಂತರ) ಸತ್ಯ. ಅಂತೆಯೇ ಅದನ್ನು 'ಇದಂ' ಎಂದು ಬೆರಳಿನಿಂದ ನಿರ್ದೇಶಿಸಿ ಹೇಳುತ್ತಾರೆ.

2) ಭ್ರಮಕ್ಕೆ ಕಾರಣವೇನು ? ದುಷ್ಟ ಇಂದ್ರಿಯವಲ್ಲ. ಏಕೆಂದರೆ ಅದಕ್ಕೆ ಅಸತ್ಯ ವಸ್ತುವಿನೊಡನೆ (ಬೆಳ್ಳಿ) ಸನ್ನಿಕರ್ಷ ಅಥವಾ ಸಂಬಂಧವಿಲ್ಲ. ಕಣ್ಣಿಗೆ ಬೆಳ್ಳಿಯ ಸಂಬಂಧವಿದ್ದರೆ ಮಾತ್ರ ಬೆಳ್ಳಿಯ ಜ್ಞಾನ ಹುಟ್ಟುತ್ತದೆ. ಆದರೆ ಕಣ್ಣಿಗೆ ಸಂಬಂಧವಿರುವದು ಶಿಂಪಿನೊಂದಿಗೆ.

3) ಅಸತ್ಯವೇ ಆದ ಬೆಳ್ಳಿ ಹೇಗೆ ತೋರುತ್ತದೆ ? ಅಸತ್ಯವಾಗಿ ತೋರಲಾರದು. ಏಕೆಂದರೆ ಹಾಗೆ ತೋರಿದ್ದರೆ, ಅದನ್ನು ತೆಗೆದುಕೊಳ್ಳುವ ಪ್ರವೃತ್ತಿ ಕೂಡುವ ದಿಲ್ಲ. ಆದ್ದರಿಂದ ಬೆಳ್ಳಿ ಸತ್ಯವಾಗಿ (ಸತ್ಯರೂಪದಿಂದ) ತೋರಿದೆ ಎನ್ನಬೇಕು. ಹೀಗೆ ಹೇಳಿದರೆ ಅನ್ಯಥಾ ಖ್ಯಾತಿವಾದ ಸ್ವೀಕರಿಸಿದಂತೆ.

ಆದ್ದರಿಂದ ಶಿಂಪೇ ಬೆಳ್ಳಿಯಾಗಿ ತೋರುತ್ತದೆಂದು ಒಪ್ಪಬೇಕು. [ಭ್ರಮಕ್ಕೆ ಯಾವಾಗಲೂ ಸತ್ಯವಾದ ಅಧಿಷ್ಠಾನ ಬೇಕು. ಉದಾ : ಇದು ಬೆಳ್ಳಿ ಎಂಬಲ್ಲಿ ಅಧಿಷ್ಠಾನವಾದ ಶಿಂಪು ಸತ್ಯವಾಗಿದೆ. ಹಾಗಾದರೆ ಕೇಶೋಂಡ್ರುಕಾದಿ ಭ್ರಮಕ್ಕೆ ಅಧಿಷ್ಠಾನವಿಲ್ಲ ಎಂದು ಶಂಕಿಸಬಹುದು. ಬೆಳಕಿನಲ್ಲಿ ಸೂರ್ಯ ಕಿರಣಗಳ ಕಡೆ ನೋಡಿದಾಗ, ಕೂದಲ ಗುಂಪಿಯಾಗಿ (ಕೇಶೋಂಡ್ರುಕ) ತೋರುತ್ತದೆ. ಈ ಭ್ರಮ ದಲ್ಲಿ ಸೂರ್ಯನ ತೇಜಸ್ಸು (ಆಲೋಕ ಮಂಡಲ) ಅಧಿಷ್ಠಾನ. ಕತ್ತಲೆಯಲ್ಲಿ ಈ ಭ್ರಮ ಉಂಟಾಗುವದಿಲ್ಲ.]

ಆದ್ದರಿಂದ ಅಸತ್‌ಖ್ಯಾತಿವಾದ ಅಯುಕ್ತ.

## V ಅನಿರ್ವಚನೀಯ ಖ್ಯಾತಿ (ಅದ್ವೈತಿ ಮಾಯಾವಾದಿಗಳು)

ಶಿಂಪನ್ನು ನೋಡಿ ಇದು ಬೆಳ್ಳಿ ಎಂದು ಬರುವ ಜ್ಞಾನದಲ್ಲಿ ತೋರಿದ ಬೆಳ್ಳಿಯು ಅನಿರ್ವಚನೀಯ (ಸದಸದ್ವಿಲಕ್ಷಣ) ಎಂದು ಮಾಯಾವಾದಿಗಳು ಹೇಳುತ್ತಾರೆ. ಇದನ್ನು ಅವರು ಕೆಳಗಿನಂತೆ ಸಾಧಿಸುತ್ತಾರೆ.

1) ತೋರಿದ ಬೆಳ್ಳಿ ಸತ್ಯವಲ್ಲ, ಏಕೆಂದರೆ 'ಇದು ಬೆಳ್ಳಿಯಲ್ಲ' ಎಂಬ ಬಾಧಜ್ಞಾನ ಬರುತ್ತದೆ. ತೋರಿದ ಬೆಳ್ಳಿ ಅಸತ್ಯವಲ್ಲ. ಏಕೆಂದರೆ ಅದಕ್ಕೆ ಪ್ರತೀತಿ ಇದೆ. ಅಸತ್ಯಕ್ಕೆ ಪ್ರತೀತಿ ಇಲ್ಲ. ತೋರಿದ ಬೆಳ್ಳಿ ಸತ್ಯಾಸತ್ಯವಲ್ಲ. ಏಕೆಂದರೆ ಒಂದು ವಸ್ತು ಪರಸ್ಪರ ವಿರುದ್ಧ ಧರ್ಮ ಉಳ್ಳದ್ದಾಗಲಾರದು. ಆದ್ದರಿಂದ ಶಿಂಪಿನಲ್ಲಿ ತೋರುವ ಬೆಳ್ಳಿ ಸದಸದ್ವಿಕ್ಷಣ ಅಥವಾ ಅನಿರ್ವಚನೀಯ.

2) ತೋರಿದ ಬೆಳ್ಳಿ ಅನಿರ್ವಚನೀಯ ಎಂಬುದನ್ನು ಕೆಳಗಿನಂತೆ ಅನುಮಾನ ಪ್ರಯೋಗಗಳಿಂದ ಸಾಧಿಸುತ್ತಾರೆ.

i) ತೋರಿದ ಬೆಳ್ಳಿ ಅನಿರ್ವಾಚ್ಯ. ಏಕೆಂದರೆ ದೋಷ ಮೂಲಕವಾಗಿ ಜ್ಞಾನ ವಿಷಯವಾಗಿದೆ. ರಜತ–ತಾದಾತ್ಮ್ಯದಂತೆ.

ii) ವಿವಾದಾಸ್ಪದವಾದ ಶುಕ್ತಿರಜತವು ಅನಿರ್ವಚನೀಯ, ಏಕೆಂದರೆ ಭ್ರಮದಲ್ಲಿ ವಿಷಯವಾಗಿದೆ. (ತೋರಿದೆ.) ಭ್ರಮದಲ್ಲಿ ತೋರದಿದ್ದುದು ಅನಿರ್ವಚನೀಯ ವಾಗುವದಿಲ್ಲ. (ಆತ್ಮನಂತೆ)

iii) ವಿವಾದಾಸ್ಪದವಾದ ಶುಕ್ತಿರಜತವು ಅನಿರ್ವಚನೀಯ, ಏಕೆಂದರೆ ಬಾಧಿತ ವಾಗುತ್ತದೆ, ಇಲ್ಲಿ ಆತ್ಮನು ವ್ಯತಿರೇಕ ದೃಷ್ಟಾಂತ.

iv) ಸತ್ಯ ಮತ್ತು ಅಸತ್ಯಗಳು ಒಂದು ಧರ್ಮಿಯಲ್ಲಿ ಇಲ್ಲದಿರುವ ಧರ್ಮ ಗಳು. ಏಕೆಂದರೆ ಧರ್ಮಗಳಾಗಿವೆ. ಇಲ್ಲಿ ರೂಪರಸಗಳು ದೃಷ್ಟಾಂತ.

**ನಿರಾಕರಣ :** ಅನಿರ್ವಚನೀಯತ್ವವನ್ನು ಈ ಮೊದಲು 26ನೇ ಶ್ಲೋಕದ 3ನೇ ವ್ಯಾಖ್ಯಾನದಲ್ಲಿ ನಿರಾಕರಿಸಲಾಗಿದೆ. ಮುಂದೆಯೂ ನಿರಾಕರಿಸಲಾಗುವದು. ಸ್ಥೂಲವಾಗಿ ಈ ವಾದದ ದೋಷಗಳು ಹೀಗಿವೆ.

1) ಅನಿರ್ವಚನೀಯ ಎಂಬ ಶಬ್ದಪ್ರಯೋಗವೇ ಅಸಾಧು. ಅನಿರ್ವಚನೀಯ ಎಂದರೆ ನಿರ್ವಚನ, ನಿರುಕ್ತಿ ಅಥವಾ ಶಬ್ದವ್ಯವಹಾರವಿಲ್ಲದ್ದು. ಆದರೆ ಅನಿ ರ್ವಚನೀಯ ಎಂಬ ಶಬ್ದ ಪ್ರಯೋಗ ಇರುವದರಿಂದ ಅನಿರ್ವಚನೀಯತ್ವ ಅಸಂಭಾವಿತ.

2) ಬೆಳ್ಳಿ ಅನಿರ್ವಚನೀಯ ಎಂಬಲ್ಲಿ ಪ್ರಮಾಣವಿಲ್ಲ. ಅಸತ್ಯವಾದ ಬೆಳ್ಳಿಯೇ ತೋರಿತ್ತು ಎಂದು ಬಾಧಜ್ಞಾನ ಬರುವದರಿಂದ ತೋರಿದ ಬೆಳ್ಳಿ ಅಸತ್ಯವೆಂದೇ ಹೇಳಬೇಕು.

3) ಬೆಳ್ಳಿ ಅನಿರ್ವಚನೀಯವಾಗಿದ್ದರೆ, ಅದು ಪ್ರತೀತಿ ಸಮಯದಲ್ಲಿ ಸತ್ಯ ವೆಂದೂ ಬಾಧ ಸಮಯದಲ್ಲಿ ಅಸತ್ಯವೆಂದೂ ಏಕೆ ತೋರುತ್ತದೆ ? ಅನಿರ್ವಚ ನೀಯವೆಂದೇ ಏಕೆ ತೋರುವದಿಲ್ಲ ?

4) ನಿನ್ನ ಅನುಮಾನ ಪ್ರಯೋಗಗಳೂ ದೋಷಯುಕ್ತವಾಗಿವೆ. (ದೋಷ ಗಳಿಗಾಗಿ ಮೂಲ ಸುಧಾ ನೋಡಬೇಕು.)

5) ತೋರಿದ ಬೆಳ್ಳಿ ನಿತ್ಯವೋ ? ಅನಿತ್ಯವೋ ? ನಿತ್ಯವಾದರೆ ಯಾವಾಗಲೂ ತೋರಲಿ ! ಅನಿತ್ಯವಾದರೆ ಅದರ ಉತ್ಪತ್ತಿಗೆ ಕಾರಣವೇನು ? ಅವಿದ್ಯೆ ಕಾರಣ ವೆಂದು ನಿನಗೆ ಹೇಳಲು ಬರುವದಿಲ್ಲ. ಏಕೆಂದರೆ ಅವಿದ್ಯೆ ನಿನ್ನ ಮತದಲ್ಲಿ ಕೂಡುವದಿಲ್ಲ ಎಂಬುದನ್ನು 'ನಿರ್ವಿಶೇಷೇ ಸ್ವಯಂ ಭಾತೇ' ಎಂಬ 29ನೇ ಶ್ಲೋಕ ದಲ್ಲಿ ನಿರೂಪಿಸಲಾಗುವದು.

6) ಇದಲ್ಲದೆ ನಿನ್ನ ಪ್ರಕಾರ ಅವಿದ್ಯೆ ಆತ್ಮನಿಷ್ಠವಾಗಿದೆ. ಮತ್ತು ಬೆಳ್ಳಿ ಅವಿದ್ಯೆಯ ಪರಿಣಾಮವಾಗಿದೆ. ಆದ್ದರಿಂದ ಬೆಳ್ಳಿ ಸಹ ಒಳಗೆ (ಪ್ರತ್ಯಕ್) ಎಂದರೆ ಅಂತಃಕರಣದಲ್ಲಿ ತೋರಬೇಕು. ಹೊರಗೆ ತೋರಬಾರದು.

7) ನಿನ್ನ ಮತದಲ್ಲಿ ಅವಿದ್ಯೆಯ ಪ್ರತೀತಿಯೂ ಬರಲಾರದು. ಹೇಗೆಂದರೆ

ಇದು ಬೆಳ್ಳಿ ಎಂಬ ಪ್ರತೀತಿ (ಜ್ಞಾನ) ಘಟಪಟಾದಿಗಳಂತೆ ಇಂದ್ರಿಯ ಮತ್ತು ವಸ್ತುಗಳ ಸಂಬಂಧದಿಂದ (ಸನ್ನಿಕರ್ಷ) ತಿಳಿಯುತ್ತದೆಯೋ ಅಥವಾ ಅತೀತ (ಹಿಂದಿನ) ಘಟದಂತೆ ಸಂಸ್ಕಾರದಿಂದ ತಿಳಿಯುತ್ತದೆಯೋ ಅಥವಾ ಸುಖಾದಿಗಳಂತೆ ಸಾಕ್ಷಿಯಿಂದ ತಿಳಿಯಲ್ಪಡುತ್ತದೆಯೋ ? ಕಣ್ಣು ಮತ್ತು ಬೆಳ್ಳಿಗಳ ನಡುವೆ ಸಂಬಂಧವಾದ ಬಳಿಕ ಬೆಳ್ಳಿ ಎಂಬ ಜ್ಞಾನ ಹುಟ್ಟಿಲ್ಲ. ಆದ್ದರಿಂದ ಇಂದ್ರಿಯ ಸನ್ನಿಕರ್ಷದಿಂದ ಈ ಜ್ಞಾನ ಹುಟ್ಟಿಲ್ಲ. ಪ್ರತೀತಿ ಸಮಯದಲ್ಲಿಯೇ ರಜತ ಜನ್ಮವೆಂದು ಒಪ್ಪಿರುತ್ತೀ. ಈ ಬೆಳ್ಳಿ ಮೊದಲು ತೋರಿಲ್ಲವಾದ್ದರಿಂದ ಇದರ ಸಂಸ್ಕಾರದಿಂದ ಇದು ಬೆಳ್ಳಿ ಎಂದು ಪ್ರತೀತವಾಗುವದಿಲ್ಲ. ಇನ್ನು ಇದು ಸುಖದಂತೆ ಸಾಕ್ಷಿವೇದ್ಯವೂ ಅಲ್ಲ. ಏಕೆಂದರೆ ಸಾಕ್ಷಿಯು ಪ್ರಾತಿಭಾಸಿಕ ಬೆಳ್ಳಿಯನ್ನು ಗ್ರಹಿಸಲಾರದು.

8) ಇನ್ನು ಕಣ್ಣಿನಿಂದ ಅಧಿಕರಣವಾದ ಶಿಂಪಿನ ಜ್ಞಾನ ಮತ್ತು ಸಾಕ್ಷಿಯಿಂದ ಬೆಳ್ಳಿಯ ಜ್ಞಾನ ಆಗುವದೆಂದು ಹೇಳಿದರೆ ಪ್ರಾಭಾಕರನ ಅಖ್ಯಾತಿವಾದ ಸ್ವೀಕರಿಸಿದಂತೆ ಆಗುತ್ತದೆ. ಇದರಿಂದಾಗಿ ಎಲ್ಲ ಜ್ಞಾನ ಪ್ರಮಾಣ (ಯಥಾರ್ಥ) ಆಗುತ್ತದೆ. ಹಾಗೂ ಭ್ರಮಜ್ಞಾನವೇ ಇಲ್ಲವೆಂದಾಗುತ್ತದೆ. ಇದು ಅನುಭವ ವಿರುದ್ಧ.

ಹೀಗೆ ಮಾಯಾವಾದಿಗಳ ಅನಿರ್ವಚನೀಯ ಖ್ಯಾತಿವಾದ ಅತ್ಯಂತ ಅಸಮಂಜಸ. ಆದ್ದರಿಂದ ನಾವು ಈ ಮೊದಲು ಹೇಳಿದ ಬಾಧದ ಲಕ್ಷಣವೇ ಅತ್ಯಂತ ಯುಕ್ತವಾಗಿದೆ. ವಿಪರೀತವಾಗಿ ತಿಳಿದ ವಸ್ತುವಿನ ಯಥಾರ್ಥ ಜ್ಞಾನವೇ ಬಾಧ ಎಂದು ನಮ್ಮ (ಸಿದ್ಧಾಂತಿಗಳ) ಮತ.

## ಸಿದ್ಧಾಂತ (ಅಭಿನವ ಅನ್ಯಥಾಖ್ಯಾತಿವಾದ)

ಶ್ರೀಮನ್ಮಧ್ವಾಚಾರ್ಯರು ನಿರೂಪಿಸಿದ ಭ್ರಮವಾದಕ್ಕೆ "ಅಭಿನವ ಅನ್ಯಥಾಖ್ಯಾತಿ" ಎನ್ನುತ್ತಾರೆ ಅನ್ಯಥಾಖ್ಯಾತಿ ಎಂದರೆ ವಿಪರೀತ ಜ್ಞಾನ ಅಥವಾ ಭ್ರಮ. ಭ್ರಮವನ್ನೊಪ್ಪಿದ್ದರಿಂದ ಆಚಾರ್ಯರ ವಾದ ಅನ್ಯಥಾಖ್ಯಾತಿ. ಆದರೆ ಉಳಿದ ಅನ್ಯಥಾಖ್ಯಾತಿವಾದಿಗಳು ಅಂಗಡಿಯಲ್ಲಿರುವ ಸತ್ಯವಾದ ಬೆಳ್ಳಿಯೇ ಶಿಂಪಿನಲ್ಲಿ ಅಭೇದದಿಂದ ತೋರುತ್ತದೆ ಎಂದು ಹೇಳುವಂತೆ ಇವರು ಹೇಳುವದಿಲ್ಲ. ಇವರು ಭ್ರಮವನ್ನು ಹೊಸ ರೀತಿಯಿಂದ ನಿರೂಪಿಸುತ್ತಾರೆ. 'ಅತ್ಯಂತ ಅಸತ್ಯವಾದ ಬೆಳ್ಳಿಯು ಕಣ್ಣಿನ ದೋಷ ಮೂಲಕ ಶಿಂಪಿನಲ್ಲಿ ತೋರುತ್ತದೆ' ಎಂದು ಆಚಾರ್ಯರ ಹೇಳಿಕೆ. ಆದ್ದರಿಂದ ಇವರ ವಾದಕ್ಕೆ ಅಭಿನವ ಅನ್ಯಥಾಖ್ಯಾತಿವಾದ ಎನ್ನುತ್ತಾರೆ.

ಒಂದು ಜ್ಞಾನವು ಇನ್ನೊಂದನ್ನು ವಿಷಯೀಕರಿಸುವದು ಭ್ರಮ, ಎಂದರೆ ಅಸತ್ಯವು (ಬೆಳ್ಳಿ) ಸತ್ಯವೆಂದು ತೋರುವದು, ಸತ್ಯವು (ಶಿಂಪು) ಅಸತ್ಯವೆಂದು

ತೋರುವದು. ಭ್ರಮದ ಇನ್ನೊಂದು ಲಕ್ಷಣ ಹೀಗಿದೆ. 'ಒಂದನ್ನು ಗ್ರಹಿಸುವ, ಇನ್ನೊಂದನ್ನು ವಿಷಯೀಕರಿಸುವ ಜ್ಞಾನವು ಭ್ರಮ (ಅನ್ಯಕಾರೋಲ್ಲೇಖಿ ಅನ್ಯಾಲಂಬನಂ ಜ್ಞಾನಂ ಅನ್ಯಥಾಖ್ಯಾತಿಃ) 'ಭ್ರಮ ಇದೆ ಎಂಬ ಅನುಭವವೇ ಭ್ರಮ ವಿಷಯದಲ್ಲಿ ಪ್ರಮಾಣ. ಬಾಧಜ್ಞಾನ ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದಲೂ ಭ್ರಮವಿದೆ ಎಂಬುದು ಅರ್ಥಾಪತ್ತಿ ಪ್ರಮಾಣದಿಂದ ಸಿದ್ಧಿಸುತ್ತದೆ " ಹೇಗೆಂದರೆ— ವಿವಾದ ವಿಷಯವಾದ 'ಇದು ಬೆಳ್ಳಿ' ಎಂಬ ಜ್ಞಾನವು ಯಥಾರ್ಥವಲ್ಲ. ಏಕೆಂದರೆ ಮುಂದೆ (ಇದು ಬೆಳ್ಳಿಯಲ್ಲ ಎಂಬ) ಬಾಧಜ್ಞಾನ ಬರುತ್ತದೆ. ಉದಾ : ಲೋಕ ವ್ಯವಹಾರ, ಕಣ್ಣಿನ ದೋಷವೇ ಭ್ರಮಕ್ಕೆ ಕಾರಣ. ಶಿಂಪಿನೊಡನೆ ಸಂಬಂಧ ಹೊಂದಿದ ದುಷ್ಟ ಇಂದ್ರಿಯ (ಕಣ್ಣು) ಕಾಚಾದಿ ದೋಷ ಮೂಲಕ ಆ ಶಿಂಪನ್ನೇ ಅತ್ಯಂತ ಅಸತ್ಯವಾದ ಬೆಳ್ಳಿಯಾಕಾರದಲ್ಲಿ ತೋರಿಸುವ ಜ್ಞಾನವನ್ನು ಹುಟ್ಟಿಸುತ್ತದೆ. ಘಟಜ್ಞಾನದಲ್ಲಿ ವಿಷಯು ಘಟ ವಸ್ತು ಗ್ರಹಿಸಲ್ಪಟ್ಟಿದ್ದು ಘಟವೇ. ಆದರೆ ಭ್ರಮಜ್ಞಾನದಲ್ಲಿ ಹೀಗಲ್ಲ. ಇದು ಬೆಳ್ಳಿ ಎಂಬ ಭ್ರಮಜ್ಞಾನದಲ್ಲಿ ಕಣ್ಣಿನೊಡನೆ ಸಂಬಂಧವಿರುವ ಶಿಂಪೇ ವಿಷಯು. (ಯತ್ಸನ್ನಿಕೃಷ್ಟಕರಣೇನ ಯತ್ ಜ್ಞಾನಂ ಜನ್ಯತೇ ತತ್‌ತಸ್ಯ ವಿಷಯಃ ಎಂಬ ನಿಯಮದ ಪ್ರಕಾರ.)



**ಅಸದ್ವಿಲಕ್ಷಣಜ್ಞಪ್ತ್ಯೈ ಜ್ಞಾತವ್ಯಂ ಅಸದೇವ ಹಿ**
**ತಸ್ಮಾತ್ ಅಸತ್ಪ್ರತೀತಿಶ್ಚ ಕಥಂ ತೇನ ನಿವಾರ್ಯತೇ ॥೨೭॥**

**ಅವತರಣಿಕೆ :** ಶಿಂಪಿನಲ್ಲಿ ತೋರಿದ ಬೆಳ್ಳಿ ಅಸದ್ವಿಲಕ್ಷಣ ಮತ್ತು ಸದ್ವಿಲಕ್ಷಣ ಎಂದು ಒಪ್ಪುವ ಮಾಯಾವಾದಿಗೆ ಅಸತ್ಯಕ್ಕೆ ಪ್ರತೀತಿ ಉಂಟು ಎಂಬುದನ್ನು ನಿರಾಕರಿಸಲಿಕ್ಕಾಗದು ಎಂದು ಸಾಧಿಸುತ್ತಾರೆ.

**ಅನುವಾದ :** ತೋರಿದ ಬೆಳ್ಳಿ ಅಸತ್ ಭಿನ್ನ (ಅಸದ್ವಿಲಕ್ಷಣ) ಎಂಬ ಜ್ಞಾನವಾಗುವದಕ್ಕೆ (ಪ್ರತಿಯೋಗಿಯಾದ) ಅಸತ್ತನ್ನು ತಿಳಿಯಬೇಕು. ಆದ್ದರಿಂದ ಶುಕ್ತಿರಜತ ಅಸದ್ವಿಲಕ್ಷಣ ಎನ್ನುವ ಮಾಯಾವಾದಿಯಿಂದ (ತೇನ) ಅಸದ್ವಿಷಯಕ ಜ್ಞಾನವು ಅದು ಹೇಗೆ ನಿರಾಕರಿಸಲ್ಪಡುತ್ತದೆ ?

**ವಿವರಣೆ :** (1) ಶುಕ್ತಿರಜತವು ಅಸದ್ವಿಲಕ್ಷಣ ಮತ್ತು ಸದ್ವಿಲಕ್ಷಣ ಎಂದು ಮಾಯಾವಾದಿ ಹೇಳುತ್ತಾನೆ. ಅಸದ್ವಿಲಕ್ಷಣ, ಅಸದ್ಭಿನ್ನ ಎಂಬ ಭೇದಜ್ಞಾನಕ್ಕೆ ಪ್ರತಿಯೋಗಿಯಾದ ಅಸತ್ಯದ ಜ್ಞಾನ ಅವಶ್ಯಕ. ಏಕೆಂದರೆ ಭೇದಜ್ಞಾನಕ್ಕೆ ಪ್ರತಿಯೋಗಿ ಜ್ಞಾನ ಕಾರಣವಾಗಿದೆ. ಆದ್ದರಿಂದ ತೋರಿದ ಬೆಳ್ಳಿ ಅಸದ್ಭಿನ್ನ ಎನ್ನುವ ಮಾಯಾವಾದಿಯು ಅಸತ್ತಿಗೆ ಪ್ರತೀತಿ ಇದೆ ಎಂಬುದನ್ನು ಹೇಗೆ ನಿರಾಕರಿಸುವನು ? (ಅಸತ್ತಿಗೆ ಪ್ರತೀತಿ ಇರುವದರಿಂದ ತೋರಿದ ಶುಕ್ತಿರಜತ ಅಸತ್ಯವೆಂಬುದನ್ನೂ ನಿರಾಕರಿಸಲಾರನು.)

(2) ಘಟದಲ್ಲಿ ಬಿಳಿಯ ಬಣ್ಣವಿಲ್ಲವೆಂದು ನಿಷೇಧಿಸುವವರಿಗೆ ಘಟಜ್ಞಾನವಿರುತ್ತದೆ. ಅದರಂತೆ ಅಸತ್ತಿಗೆ ಪ್ರತೀತಿ ಇಲ್ಲ ಎನ್ನುವ ಮಾಯಾವಾದಿಗೆ ಅಸತ್ತಿನ ಬಗ್ಗೆ ಜ್ಞಾನವಿರಲೇಬೇಕು.

(3) ಮನುಷ್ಯನ ತಲೆಯಲ್ಲಿ ಕೋಡು ಇದೆ ಎಂಬ ವಾಕ್ಯವು ಬೋಧಕವೋ? ಅಲ್ಲವೋ ? ಬೋಧಕವಾದರೆ ಅಸತ್ಯದ ಬಗ್ಗೆ, ಮನುಷ್ಯನ ಅಸತ್ಯ ಕೋಡಿನ ಬಗ್ಗೆ ಜ್ಞಾನವಿದೆ ಎಂದಾಯಿತು. ಆದ್ದರಿಂದ ಅಸತ್ತಿಗೆ ಪ್ರತೀತಿ ಇಲ್ಲ ಎಂದು ಹೇಗೆ ಹೇಳುತ್ತೀ ? ಇನ್ನು ಈ ವಾಕ್ಯ ಅಬೋಧಕ ಎಂದು ಹೇಳುವದು ಅನುಭವ ವಿರುದ್ಧ. ಹೀಗೆ ಅಸತ್ತಿನ ಬಗ್ಗೆ ಜ್ಞಾನ ಹುಟ್ಟುವದರಿಂದ ಅಸತ್ತಿಗೆ ಪ್ರತೀತಿ ಇರುವದರಿಂದ ತೋರಿದ ಬೆಳ್ಳಿ (ಮುಂದೆ ಬರುವ ಬಾಧಜ್ಞಾನಕ್ಕೆ ಅನುಗುಣವಾಗಿ) ಅಸತ್ಯವೇ. ಆದ್ದರಿಂದ ಅದು ಸದಸದ್ವಿಲಕ್ಷಣ ಎಂದು ಮಾಯಾವಾದಿಯ ಹೇಳಿಕೆ ಅಯುಕ್ತ.

**ಅನ್ಯಥಾತ್ವಮಸತ್ತಸ್ಮಾತ್ ಭ್ರಾಂತಾವೇವ ಪ್ರತೀಯತೇ ।**
**ಸತ್ಯಸ್ಯಾಸತ ಏವಂ ಹಿ ಸ್ವೀಕಾರ್ಯೈವ ಪ್ರತೀತತಾ ॥೨೮॥**
**ತಸ್ಯಾನಿರ್ವಚನೀಯತ್ವೇ ಸ್ಯಾದೇವ ಹ್ಯನವಸ್ಥಿತಿಃ**

**ಅವತರಣಿಕೆ :** ಶಿಂಪನ್ನು ನೋಡಿ ಇದು ಬೆಳ್ಳಿ ಎಂದು ಬರುವ ಭ್ರಮ ಜ್ಞಾನದಲ್ಲಿ ಬೆಳ್ಳಿ ಪ್ರತ್ಯಕ್ಷವಾಗಿ ಸತ್ಯವಾಗಿ ತೋರಿದೆ. ಅಂತೆಯೇ ಅದನ್ನು ತೆಗೆದುಕೊಳ್ಳುವ ಪ್ರವೃತ್ತಿ ಹುಟ್ಟುತ್ತದೆ. ಆದ್ದರಿಂದ ತೋರಿದ ಬೆಳ್ಳಿ ಮನುಷ್ಯನ ಕೋಡಿನಂತೆ ಅಸತ್ಯ ಹೇಗೆ ? ಅಸತ್ಯಕ್ಕೆ ಪ್ರತೀತಿ ಇಲ್ಲ. ಅದು ಅಸದ್ವಿಲಕ್ಷಣ ಎಂಬ ಮಾಯವಾದಿಯ ಹೇಳಿಕೆಯನ್ನು ಇಲ್ಲಿ ನಿರಾಕರಿಸಲಾಗಿದೆ.

**ಅನುವಾದ :** ಇದು ಬೆಳ್ಳಿ (ಇದಂ ರಜತಂ) ಎಂಬಲ್ಲಿ ಅನ್ಯಥಾತ್ವವು ಅಸತ್ಯವಾಗಿದೆ. ಎಂದರೆ ಇದಂ ಅಂಶಕ್ಕೆ ರಜತದ ಸಂಬಂಧ ಮತ್ತು ರಜತಕ್ಕೆ ಇದಂ ಅಂಶದ ಸಂಬಂಧ ಇವು ಅಸತ್ಯ. ಅಸತ್ಯವಾದುದರಿಂದಲೇ ಅನ್ಯಥಾತ್ವವು ಭ್ರಾಂತಿಯಲ್ಲಿ ಮಾತ್ರ ತೋರುತ್ತದೆ. ಹೀಗೆ ಭ್ರಾಂತಿಯಲ್ಲಿ ಅಸತ್ಯವಾದ ಬೆಳ್ಳಿಗೆ ಸತ್ವೇನ ಪ್ರತೀತಿಯನ್ನು ಒಪ್ಪಬೇಕು. ಇನ್ನು ಈ ಅನ್ಯಥಾತ್ವವು ಎಂದರೆ ಇದಂ ಅಂಶಕ್ಕೆ ರಜತದ ಸಂಬಂಧ ಹಾಗೂ ರಜತಕ್ಕೆ "ಇದಂ" ಇದರ ಸಂಬಂಧ ಅನಿರ್ವಚನೀಯ ಅಥವಾ ಪ್ರಾತಿಭಾಸಿಕ ಎಂದರೆ ಪ್ರವೃತ್ತಿಕೊಡದಿರುವ ಅವ್ಯವಸ್ಥಿತಿ (ಅನವಸ್ಥಿತಿ) ದೋಷ ಬರುತ್ತದೆ. ಏಕೆಂದರೆ ತೋರಿದಬೆಳ್ಳಿ ಸತ್ಯವಿದ್ದರೆ ಮಾತ್ರ ಪ್ರವೃತ್ತಿ ಕೊಡುತ್ತದೆ.

**ವಿವರಣೆ :** (1) ಶಿಂಪಿನಲ್ಲಿ ತೋರಿದ ಬೆಳ್ಳಿ ಆರೋಪಿತ, ಅಧ್ಯಸ್ತ ಎಂದು ನೀನೂ ಒಪ್ಪಿರುತ್ತೀ. ಬೆಳ್ಳಿಯಲ್ಲದ ಶಿಂಪಿನಲ್ಲಿ ಬೆಳ್ಳಿ ಎಂಬ ತಿಳುವಳಿಕೆಯೋ

ಅಧ್ಯಾಸ. ಹೀಗೆ ಶಿಂಪಿನಲ್ಲಿ ತೋರಿದ ಬೆಳ್ಳಿ ವಿಪರೀತ ಅನ್ಯಥಾ ಆಗಿದೆ ಇದಂ ರಜತಂ ಎಂಬಲ್ಲಿ, ಇದಂ ಅಂಶಕ್ಕೆ ರಜತದೊಡನೆ ಸಂಬಂಧ ಮತ್ತು ರಜತಕ್ಕೆ "ಇದಂ"ದೊಡನೆ ಸಂಬಂಧ ಇವೇ ಅನ್ಯಥಾ ಆಗಿವೆ. ಹೀಗೆ ಅಸತ್ಯವಾದ ಬೆಳ್ಳಿ ಪ್ರತ್ಯಕ್ಷವಾಗಿ ಸತ್ಯವೆಂದು ತೋರುವದರಿಂದ "ಅಸತ್ ಅಪರೋಕ್ಷತಯಾ ಸತ್ತ್ವೇನ ನ ಅವಭಾಸತೇ" ಎಂಬ ನಿನ್ನ ವ್ಯಾಪ್ತಿಗೆ ಭಂಗ ಬರುವದರಿಂದ ನಿನ್ನ ಈ ಹೇಳಿಕೆ ಅಯುಕ್ತ.

(2) ಶಿಂಪಿನಲ್ಲಿ ತೋರಿದ ಬೆಳ್ಳಿ ಎಂಬ ಅನ್ಯಥಾತ್ವವು ಎಂತಹದು ಎಂಬ ಪ್ರಶ್ನೆ ಇದೆ. ಇದು ಸತ್ಯವಲ್ಲ; ಸತ್ಯವಾಗಿದ್ದರೆ ಮುಂದೆ ಇದು ಬೆಳ್ಳಿಯಲ್ಲ ಎಂದು ಬಾಧಜ್ಞಾನ ಬರುತ್ತಿರಲಿಲ್ಲ. ಇನ್ನು ಇದು ಅನಿರ್ವಚನೀಯವಲ್ಲ ಎಂದು ಈಗಲೇ ಮುಂದೆ ಹೇಳುತ್ತೇವೆ. ಆದ್ದರಿಂದ ತೋರಿದ ಅನ್ಯಥಾಕಾರವೂ ಅಸತ್ಯವೇ.

(3) ಹೀಗೆ ವಿಪರೀತವಾಗಿ ತೋರುವದು ಭ್ರಮದಲ್ಲಿ ಮಾತ್ರ. ಅಸತ್ಯವು ಸತ್ಯವೆಂದು ತೋರುವದು, ಸತ್ಯವು ಅಸತ್ಯವೆಂದು ತೋರುವದೇ ಭ್ರಮ."

(4) ಆದ್ದರಿಂದ ಭ್ರಮದಲ್ಲಿ ಇಲ್ಲದೇ ಇದ್ದ ಬೆಳ್ಳಿಗೆ (ಅಸತಃ) ಸತ್ತ್ವೇನ ಪ್ರತೀತಿಯನ್ನು ಒಪ್ಪಲೇಬೇಕು. ಇಲ್ಲವಾದರೆ ಪ್ರವೃತ್ತಿಯೇ ಕೂಡುವದಿಲ್ಲ. ತೋರಿದ ಬೆಳ್ಳಿ ಸುಳ್ಳಾದರೆ ಅದನ್ನು ತೆಗೆದುಕೊಳ್ಳಲು ಪ್ರವೃತ್ತರಾಗುವದಿಲ್ಲ. ಸತ್ಯವೆಂದು ತೋರಿದರೆ ಮಾತ್ರ ಪ್ರವೃತ್ತಿ ಉಂಟಾಗುತ್ತವೆ.

(5) ಕೊನೆಯದಾಗಿ ಈ ಅನ್ಯಥಾತ್ವವು ಅನಿರ್ವಚನೀಯ, ಪ್ರಾತಿಭಾಸಿಕವೆಂದರೂ ಪ್ರವೃತ್ತಿ ಕೂಡದಿರುವ ಅವ್ಯವಸ್ಥೆ ಬರುತ್ತದೆ. (ಅನವಸ್ಥಿತಿಃ = ಅವ್ಯವಸ್ಥಿತಿ, ಪ್ರವೃತ್ತ್ಯವಸ್ಥಿತಿಃ)

ಒಟ್ಟಿನಲ್ಲಿ ಶಿಂಪನ್ನು ನೋಡಿ ಇದು ಬೆಳ್ಳಿ ಎಂದು ಬರುವ ಜ್ಞಾನವು ಭ್ರಮ. ಭ್ರಮದಲ್ಲಿ ಸತ್ಯವಾದ ಶಿಂಪೇ ಇಂದ್ರಿಯ ದೋಷ ಮೂಲಕವಾಗಿ ವಿಪರೀತವಾಗಿ ಬೆಳ್ಳಿ ಎಂದು ತೋರುತ್ತದೆ. ಬೆಳ್ಳಿ ಸತ್ಯವೆಂದೇ ತೋರುವದರಿಂದ ಅದನ್ನು ತೆಗೆದುಕೊಳ್ಳುವ ಪ್ರವೃತ್ತಿ ಕಂಡಿದೆ. ಎಲ್ಲರ ಅನುಭವವೂ ಹೀಗೆಯೇ ಇದೆ. ಆದರೆ ಮುಂದೆ ಇದು ಬೆಳ್ಳಿಯಲ್ಲ" ಎಂಬ ಬಾಧಜ್ಞಾನದ ಮೂಲಕ ತೋರಿದ ಬೆಳ್ಳಿ ಅಸತ್ಯವೆಂದು ಹೇಳಬೇಕು.

**ಟೀಕು :** "ತಸ್ಮಾನ್ನಿರ್ವಚನೀಯತ್ವೇ ಸ್ಯಾದೇವ ಹ್ಯನವಸ್ಥಿತಿಃ" ಎಂಬುದಕ್ಕೆ ಇನ್ನೊಂದು ರೀತಿಯಿಂದಲೂ ಸುಧಾಕಾರರು ಅರ್ಥ ನಿರೂಪಿಸಿದ್ದಾರೆ. ಇದಂ ಅಂಶಕ್ಕೆ ರಜತದೊಡನೆ ಸಂಸರ್ಗ (ಸಂಬಂಧ) ಮತ್ತು ರಜತಕ್ಕೆ ಇದಂ ಅಂಶದೊಡನೆ ಸಂಸರ್ಗ ಎಂದರೆ ಏನು? ಅದು ವ್ಯಾವಹಾರಿಕವೋ? ಪ್ರಾತಿಭಾಸಿಕವೋ? ಪ್ರಾತಿಭಾಸಿಕವಾದರೆ ಅದು ಪ್ರಾತಿಭಾಸಿಕವಾಗಿ ತೋರುತ್ತದೆಯೋ ? ಅಥವಾ

ವ್ಯಾವಹಾರಿಕವಾಗಿ ತೋರುತ್ತದೆಯೊ ? ಈ ಮೊದಲಾದ ಅನೇಕ ವಿಕಲ್ಪಮಾಡಿ ಹೇಗೆ ಹೇಳಿದರೂ ಮಾಯಾವಾದಿಗೆ ಅನವಸ್ಥೆ ದೋಷ ಬರುತ್ತದೆಂದು ವಿವರಿಸಿದ್ದಾರೆ.

**ನಿರ್ವಿಶೇಷೇ ಸ್ವಯಂಭಾತೇ ಕಿಮಜ್ಞಾನಾವೃತಂ ಭವೇತ್ ॥೨೯॥**
**ಮಿಥ್ಯಾವಿಶೇಷೋಽಪಿ ಅಜ್ಞಾನಸಿದ್ಧಿಮೇವ ಹ್ಯಪೇಕ್ಷತೇ ॥೩೦೦॥**

**ಅವತರಣಿಕೆ :** ಮಾಯಾವಾದಿಗಳ ಮತದಲ್ಲಿ ಅಜ್ಞಾನವೇ ಕೂಡುವದಿಲ್ಲ ಎಂದು ಸಾಧಿಸಲು ಆರಂಭಿಸುತ್ತಾರೆ.

**ಅನುವಾದ :** ಬ್ರಹ್ಮನು ಧರ್ಮರಹಿತ (ನಿರ್ವಿಶೇಷ) ಮತ್ತು ಸ್ವಯಂಪ್ರಕಾಶ ವಿರುವದರಿಂದ ಅವನಲ್ಲಿ ಯಾವದು ತಾನೇ ಅಜ್ಞಾನದಿಂದ ಆವರಿಸಲ್ಪಡುತ್ತದೆ ? ಆವನ ಅದ್ವಿತೀಯತ್ವಾದಿಗಳು ಕೂಡ ಅಜ್ಞಾನದಿಂದ ಆವೃತವಾಗಲಾರವು. ಏಕೆಂದರೆ ಅವು ಅಜ್ಞಾನದ ಸಿದ್ಧಿಯನ್ನೇ ಅಪೇಕ್ಷಿಸುತ್ತವೆ.

**ವಿವರಣೆ :** [ಇಲ್ಲಿ ನಿರಾಕೃತವಾದ ಮಾಯಾವಾದಿಗಳ ಅಜ್ಞಾನವಾದದ ಪ್ರಕ್ರಿಯೆ ಸ್ಥೂಲವಾಗಿ ಹೀಗಿದೆ. ಸತ್ಯನಾದ ಶುದ್ಧ ನಿರ್ವಿಶೇಷ (ನಿರ್ಧರ್ಮಕ) ಬ್ರಹ್ಮನು ಅಜ್ಞಾನ ಮೂಲಕ ಜಗತ್ತು–ಈಶ್ವರ–ಜೀವ ರೂಪ ಹೊಂದುತ್ತಾನೆ. ಅಜ್ಞಾನವು ಮಾಯಾ–ಅವಿದ್ಯಾ ಎಂದು ಎರಡು ವಿಧ. ಮಾಯಾ ವಿಶಿಷ್ಟ ಬ್ರಹ್ಮನೇ ಈಶ್ವರ, ಅವನು ಸೃಷ್ಟಿ–ಸ್ಥಿತಿ–ಸಂಹಾರ ಕರ್ತಾ. ಅವನನ್ನು ಮಾಯೆ ಮೋಹಿಸುವದಿಲ್ಲ. ಜೀವ ಎಂದರೆ ಅವಿದ್ಯಾವಿಶಿಷ್ಟ ಬ್ರಹ್ಮ. ಅವಿದ್ಯೆ ಜೀವನನ್ನಾಶ್ರಯಿಸಿ ಅವನನ್ನು ಮೋಹಗೊಳಿಸುತ್ತದೆ. ಶಾಸ್ತ್ರಜನ್ಯ ಜ್ಞಾನದಿಂದ ಅಜ್ಞಾನವು ಹೊರಟುಹೋಗಿ ಜೀವ ಮುಕ್ತನಾಗುತ್ತಾನೆ. ಎಂದರೆ ಶುದ್ಧ ಬ್ರಹ್ಮನಲ್ಲಿ ಐಕ್ಯಹೊಂದುತ್ತಾನೆ. ಆದರೆ ಅಜ್ಞಾನವೇ ಅವರ ಮತದಲ್ಲಿ ಕೂಡುವದಿಲ್ಲವೆಂದು ಶ್ರೀಮದಾಚಾರ್ಯರು ಸಯುಕ್ತಿಕವಾಗಿ, ಈ ಅಜ್ಞಾನವಾದವನ್ನು ಖಂಡಿಸುತ್ತಾರೆ ]

ಸಂಸಾರಬಂಧಕ್ಕೆ ಕಾರಣವೆಂದರೆ ಅಸತ್ಯವಾದ ಅಜ್ಞಾನ ಅಥವಾ ಅವಿದ್ಯೆ ಎಂದು ಮಾಯಾವಾದಿಗಳು ಹೇಳುತ್ತಾರೆ. ಆದರೆ ಈ ಭಾವರೂಪ ಅಜ್ಞಾನವೇ ಕೂಡುವದಿಲ್ಲ. ಹೇಗೆಂದರೆ, ಕಣ್ಣಿಗೆ ಕಟ್ಟಿದ ಪಟ್ಟಿ ಕಣ್ಣನ್ನು ಆಶ್ರಯಿಸಿ ಘಟ ಮೊದಲಾದ ವಸ್ತು ವಿಷಯಕ ಜ್ಞಾನವನ್ನು ಪ್ರತಿಬಂಧಿಸುತ್ತದೆ. ಅದರಂತೆ ಪ್ರಕೃತದಲ್ಲಿ ಅಜ್ಞಾನ ಅವರಣವು (ಅ) ಏನನ್ನು ಆಶ್ರಯಿಸಿದೆ ? (ಬ) ಏನನ್ನು ಪ್ರತಿಬಂಧಿಸುತ್ತದೆ ? ಎಂದು ಕೇಳುತ್ತೇವೆ.

(ಅ) ಅಜ್ಞಾನವು ಜೀವನವನ್ನು ಆಶ್ರಯಿಸಲಾರದು, ಏಕೆಂದರೆ ಅಜ್ಞಾನ ಮೂಲಕವೇ ಜೀವ ಭಾವ ಬಂದಿದೆ. ತತ್ಪೂರ್ವದಲ್ಲಿ ಜೀವನಿಲ್ಲ. ಅಜ್ಞಾನವು ಜಡವನ್ನೂ ಆಶ್ರಯಿಸಲಾರದು. ಏಕೆಂದರೆ ಜಡ ಅಜ್ಞಾನ ಕಲ್ಪಿತ. ಕಾರಣವಾದ ಅಜ್ಞಾನವು ಕಾರ್ಯವಾದ ಜಡವನ್ನು ಆಶ್ರಯಿಸಲಾರದು. ಆದ್ದರಿಂದ ಪರಿಶೇಷ

ದಿಂದ ಅಜ್ಞಾನವು ಬ್ರಹ್ಮನನ್ನಾಶ್ರಯಿಸುತ್ತದೆ ಎಂದು ಹೇಳಬೇಕು.

(ಬ) ಬ್ರಹ್ಮನನ್ನು ಆಶ್ರಯಿಸಿದ ಅಜ್ಞಾನವು ಏನನ್ನು ಆವರಿಸುತ್ತದೆ ?
(i) ಬ್ರಹ್ಮನನ್ನೋ (ii) ಜೀವನನ್ನೋ (iii) ಜಡವನ್ನೋ ?

(i) ಅಜ್ಞಾನವು ಬ್ರಹ್ಮನ ಧರ್ಮವನ್ನು ಆವರಿಸಲಾರದು. ಏಕೆಂದರೆ ಮಾಯಾವಾದಿಗಳ ಪ್ರಕಾರ ಬ್ರಹ್ಮನು ನಿರ್ವಿಶೇಷ. ಅವನಲ್ಲಿ ಯಾವ ಧರ್ಮಗಳೂ ಇಲ್ಲ. ಇನ್ನು ಅಜ್ಞಾನವು ಬ್ರಹ್ಮನ ಸ್ವರೂಪವನ್ನೂ ಆವರಿಸಲಾರದು. ಏಕೆಂದರೆ ಅವನು ಸ್ವಪ್ರಕಾಶ. (ಸ್ವಯಂಭಾತೀ). ಮಿಥ್ಯಾವಿಶೇಷವಾದ ಅದ್ವಿತೀಯತ್ವಾದಿ ಧರ್ಮಗಳೂ ಅಜ್ಞಾನದಿಂದ ಆವರಿಸಲ್ಪಡುವದಿಲ್ಲ. ಏಕೆಂದರೆ ಈ ಅದ್ವಿತೀಯತ್ವಾದಿಗಳು ಅಜ್ಞಾನಸಿದ್ಧಿಯನ್ನೇ ಅವಲಂಬಿಸಿವೆ. ಅಜ್ಞಾನ ಸಿದ್ಧಿಸಿದರೆ ತಾನೇ ಅಜ್ಞಾನ ಕಲ್ಪಿತ ಮಿಥ್ಯಾ ಧರ್ಮಗಳಾದ ಅದ್ವಿತೀಯತ್ವಾದಿಗಳು ಸಿದ್ಧಿಸುತ್ತವೆ. ಅಜ್ಞಾನವಾದರೋ ವಿಷಯವಿಲ್ಲದಿದ್ದರೆ ಆವರಣವಾಗಲಾರದು. ವಿಷಯಕ್ಕಾಗಿ ಅಜ್ಞಾನವು ಅದ್ವಿತೀಯತ್ವಾದಿ ಧರ್ಮವನ್ನು ಅವಲಂಬಿಸುತ್ತದೆ. ಹೀಗೆ ಅನ್ಯೋನ್ಯಾಶ್ರಯ ದೋಷ ಬರುವದರಿಂದ ಅಜ್ಞಾನವು ಬ್ರಹ್ಮನ ಅದ್ವಿತೀಯತ್ವಾದಿ ಮಿಥ್ಯಾ ವಿಶೇಷಗಳನ್ನು ಆವರಿಸಲಾರದು.

(iii) ಅಜ್ಞಾನವು ಜಡವನ್ನು ಆವರಿಸಲಾರದು ಎಂದು ಮುಂದಿನ ಶ್ಲೋಕದಲ್ಲಿ ನಿರೂಪಿಸುತ್ತಾರೆ.

**ನ ಚಾವರಣಮಜ್ಞಾನನುಸಕ್ತೇ ತೇನ ಚೇಷ್ಯತೇ ||೩೦||**

**ಅಪ್ರಕಾಶಸ್ವರೂಪತ್ವಾಜ್ಜಡೇऽಜ್ಞಾನಂ ನ ಮುಸ್ಯತೇ |**

**ಅಜ್ಞಾನಾಭಾವತಃ ಶಾಸ್ತ್ರಂ ಸರ್ವಂ ವ್ಯರ್ಥೀಭವಿಷ್ಯತಿ ||೩೦||**

**ಅವತರಣಿಕೆ :** ಅಜ್ಞಾನವು ಜಡವನ್ನೂ ಆವರಿಸಲಾರದು. ಆದ್ದರಿಂದ ಶಾಸ್ತ್ರವು ವ್ಯರ್ಥವಾಗುವದೆಂದು ನಿರೂಪಿಸುತ್ತಾರೆ.

**ಅನುವಾದ :** ಅಸತ್ಯವಾದ ಜಡದಲ್ಲಿ ಅಜ್ಞಾನಾವರಣವು ಮಾಯಾವಾದಿಯಿಂದ ಅಂಗೀಕರಿಸಲ್ಪಟ್ಟಿಲ್ಲ. ಜಡಕ್ಕೆ ಪ್ರಕಾಶ ಸ್ವರೂಪವಿಲ್ಲವಾದ್ದರಿಂದ ಜಡದಲ್ಲಿ ಅಜ್ಞಾನವನ್ನು ಅವನು ಒಪ್ಪುವದಿಲ್ಲ. ಹೀಗೆ ಅಜ್ಞಾನವೇ ಕೂಡುವದಿಲ್ಲವಾದ್ದರಿಂದ ಎಲ್ಲ ವೇದಾಂತಶಾಸ್ತ್ರ ವ್ಯರ್ಥವಾಗುತ್ತದೆ.

**ವಿವರಣೆ :** (1) ಅಜ್ಞಾನದ ಆವರಣ ಜಡಕ್ಕೂ ಕೂಡುವದಿಲ್ಲ. ಏಕೆಂದರೆ ಹಿಂದೆ ಜೀವನ ಬಗ್ಗೆ ಹೇಳಿದಂತೆ ಇಲ್ಲಿಯೂ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಇದಲ್ಲದೆ ಮಾಯಾವಾದಿಯು ಅಜ್ಞಾನವು ಜಡವನ್ನು ಆವರಿಸುವದಿಲ್ಲ. ವೆಂದು ಒಪ್ಪಿದ್ದಾನೆ. ಏಕೆಂದರೆ ಅನೇಕ ಕಾರಣಗಳಿದ್ದರೂ ಕಾರ್ಯ ಸಿದ್ಧಿಸದಿದ್ದರೆ ಪ್ರತಿಬಂಧಕ ಅಥವಾ ಆವರಣವನ್ನು ಕಲ್ಪಿಸಬೇಕು. ಜಡಕ್ಕಾದರೋ ಪ್ರಕಾಶ ಸ್ವರೂಪವಿಲ್ಲವಾದ್ದರಿಂದ ಅದಕ್ಕೆ ತನ್ನ ಹಾಗೂ ಪರವಿಷಯಕ ಜ್ಞಾನ ಉಂಟಾಗುವದಿಲ್ಲ.

ಇದರಿಂದಾಗಿ ಜಡಕ್ಕೆ ಅಜ್ಞಾನವು ಆವರಣವಾಗುವ ಪ್ರಸಂಗವಿಲ್ಲ. (ii) ಆವರಣಕ್ಕೆ ಒಂದು ಆಶ್ರಯ ಬೇಕು. ಆದರೆ ಹಿಂದೆ ನಿರೂಪಿಸಿದಂತೆ ಅಜ್ಞಾನಕ್ಕೆ ಬ್ರಹ್ಮ-ಜೀವ-ಜಡ ಇವಾವೂ ಆಶ್ರಯವಾಗಲಾರವು. ಹೀಗಾಗಿ ಅಜ್ಞಾನಾವರಣವೇ ಮಾಯಾವಾದಿಯ ಮತದಲ್ಲಿ ಕೂಡುವದಿಲ್ಲ. (iii) ಹೀಗೆ ಅಜ್ಞಾನವೇ ಕೂಡುವದಿಲ್ಲವಾದ್ದರಿಂದ ಅಜ್ಞಾನ ಮೂಲಕವಾದ ಬಂಧಾಧ್ಯಾಸ ಮತ್ತು ಆದರ ನಿವೃತ್ತಿ ಸರ್ವಥಾ ಕೂಡಲಾರವು. ಇದರಿಂದಾಗಿ ಬಂಧವೇ ವಿಷಯ, ಬಂಧ ನಿವೃತ್ತಿಯೇ ಪ್ರಯೋಜನ ಮತ್ತು ಅಜ್ಞನೇ ಅಧಿಕಾರಿ ಆಗಿರುವ ಶಾಸ್ತ್ರವು ವ್ಯರ್ಥವಾಗುತ್ತದೆ,

**ಅಜ್ಞಾನಸ್ಯ ಚ ಮಿಥ್ಯಾತ್ವಂ ಅಜ್ಞಾನಾದಿತಿ ಕಲ್ಪನೇ ।**
**ಅನವಸ್ಥಿತಿಸ್ತಥಾ ಚ ಸ್ಯಾತ್ ಅನ್ಯೋನ್ಯಾಶ್ರಯತಾಥವಾ ॥೩೭॥**

**ಅವತರಣಿಕೆ :** ಅಜ್ಞಾನವಾದದಲ್ಲಿ ಬರುವ ಬೇರೆ ದೋಷಗಳನ್ನು ಹೇಳುತ್ತಾರೆ.

**ಅನುವಾದ :** ಅಜ್ಞಾನವು ಮಿಥ್ಯಾ, ಅಂತೆಯೇ ಆರೋಪಿತ ಎಂಬುದು ಅಜ್ಞಾನದಿಂದ ಸಿದ್ಧಿಸುವದಾಗಿ ಕಲ್ಪಿಸಿದರೆ ಅನವಸ್ಥಾ ದೋಷ ಮತ್ತು ಅನ್ಯೋನ್ಯಾಶ್ರಯ ದೋಷ (ಅಥವಾ ಆತ್ಮಾಶ್ರಯ ದೋಷ) ಬರುತ್ತವೆ.

**ವಿವರಣೆ :** ಅಜ್ಞಾನವು ಸತ್ಯವಾದರೆ ಅದರ ಕಾರ್ಯವಾದ ಸಂಸಾರ ಬಂಧವು ಸತ್ಯವಾಗುವದರಿಂದ ಅಜ್ಞಾನ ಮಿಥ್ಯಾ ಎಂದು ಮಾಯಾವಾದಿ ಹೇಳುತ್ತಾನೆ. ಆದರೆ ಹೀಗೆ ಹೇಳಿದರೆ ಆ ಅಜ್ಞಾನವನ್ನು ಆತ್ಮನಲ್ಲಿ ಆರೋಪಿಸಬೇಕು, ಏಕೆಂದರೆ ಎಲ್ಲ ಸುಳ್ಳುಗಳಿಗೆ ಆತ್ಮನು ಅಧಿಷ್ಠಾನವೆಂದು ಪರನು ಒಪ್ಪಿದ್ದಾನೆ. ಆತ್ಮನಲ್ಲಿ ಮಾಡುವ ಅಜ್ಞಾನಾರೋಪವು (i) ಸ್ವಾಭಾವಿಕವೋ ? ಅಥವಾ (ii) ಒಂದು ಕಾರಣ ಮೂಲಕವೋ ? ಎಂದು ಕೇಳುತ್ತೇವೆ.

(i) ಸ್ವಾಭಾವಿಕವೆಂದು ಹೇಳಲು ಬರುವದಿಲ್ಲ. ಸ್ವಾಭಾವಿಕವಾದರೆ ಆ ಅಜ್ಞಾನ ನಿವೃತ್ತವಾಗುವದಿಲ್ಲ ಏಕೆಂದರೆ ಸ್ವಾಭಾವಿಕವಾದುದಕ್ಕೆ ನಾಶವಿಲ್ಲ. ಇನ್ನು ಸ್ವಾಭಾವಿಕವಾದುದೂ ನಿವೃತ್ತವಾಗುವದಾಗಿ ಹೇಳಿದರೆ ಆತ್ಮನಾಶ ಒಪ್ಪುವ ಪ್ರಸಂಗ ಬರುತ್ತದೆ.

(ii) ಆತ್ಮನಲ್ಲಿ ಮಾಡುವ ಮಿಥ್ಯಾ ಅಜ್ಞಾನ ಆರೋಪಕ್ಕೆ ಕಾರಣವಿದೆ ಎಂದರೆ ಆ ಕಾರಣ ಯಾವದು ? (ಅ) ಆತ್ಮಸ್ವರೂಪವೋ ? (ಬ) ಅಜ್ಞಾನವೋ ?

(ಅ) ಆತ್ಮ ಸ್ವರೂಪ ಕಾರಣವಾಗಲಾರದು. ಏಕೆಂದರೆ ಆತ್ಮ ನಿಷ್ಕಲಂಕ ಸ್ವರೂಪನೂ ಅದ್ವಿತೀಯನೂ ಆಗಿದ್ದಾನೆ. ಒಂದು ವೇಳೆ ಆತ್ಮ ಸ್ವರೂಪವು ಆರೋಪಕ್ಕೆ ಕಾರಣವಾದರೆ ಶಿಂಪಿನಲ್ಲಿಯ ಬೆಳ್ಳಿಯ ಆರೋಪಕ್ಕೆ ಅಜ್ಞಾನ ಕಾರಣವೆಂಬ ಕಲ್ಪನೆ ವ್ಯರ್ಥವಾಗುತ್ತದೆ. ಮತ್ತು ಚೈತನ್ಯ ಮೂಲಕವಾದ

ಅಜ್ಞಾನಾರೋಪವು ಮೋಕ್ಷದಲ್ಲಿಯೂ ಇರುವ ಪ್ರಸಂಗ ಬರುತ್ತದೆ.

(ಬ) ಭಾವರೂಪ ಅಜ್ಞಾನವನ್ನು ಆತ್ಮನಲ್ಲಿ ಆರೋಪಿಸುವದಕ್ಕೆ ಅಜ್ಞಾನವೇ ಕಾರಣವೆಂದು ಕಲ್ಪಿಸಿದರೆ ಬರುವ ದೋಷಗಳು ಹೀಗಿವೆ. ಅಜ್ಞಾನಾರೋಪಕ್ಕೆ ಕಾರಣವಾದ ಅಜ್ಞಾನವು ಸತ್ಯವಾದರೆ ಬಂಧವೂ ಸತ್ಯವಾಗುತ್ತದೆ. ಇನ್ನು ಉಪಾದಾನಕಾರಣ (ಅಜ್ಞಾನ) ಮಿಥ್ಯಾ ಅಥವಾ ಆರೋಪಿತವೆಂದರೆ ಅದಕ್ಕೆ ಕಾರಣ ವೇನು ? ಇನ್ನೊಂದು ಅಜ್ಞಾನವೆಂದು ಹೇಳಿದರೆ ಅದಕ್ಕೆ ಮತ್ತೊಂದು ಅಜ್ಞಾನ ಕಾರಣ. ಇವಕ್ಕೆ ಇನ್ನೊಂದು ಅಜ್ಞಾನ ಕಾರಣ ಎಂದು ಹೇಳಬೇಕಾಗುತ್ತದೆ. ಇದರಿಂದ ಅನವಸ್ಥಾ ದೋಷ ಬರುತ್ತದೆ. ಈ ಅನವಸ್ಥಾ ಬೀಜಾಂಕುರ ನ್ಯಾಯದಂತೆ ಪ್ರಾಮಾಣಿಕವಲ್ಲ. ಇನ್ನು ಆರೋಪಕ್ಕೆ. ಶಿಂಪಿನಲ್ಲಿ ಬೆಳ್ಳಿ ಎಂಬ ಆರೋಪಕ್ಕೆ ಕಾರಣವಾದ ಅಜ್ಞಾನಕ್ಕೆ ಇನ್ನೊಂದು ಅಜ್ಞಾನ ಕಾರಣ ಎಂಬಲ್ಲಿ ಪ್ರಮಾಣವಿಲ್ಲ. ಅಲ್ಲದೆ ಇದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಅದರಂತೆ ಒಂದೇ ಅಜ್ಞಾನವಿದ್ದು ಅದಕ್ಕೆ ತಾನೇ ಉಪಾದಾನ ಕಾರಣವೆಂದು ಹೇಳಿದರೆ ಆತ್ಮಾಶ್ರಯ ದೋಷ ಬರುತ್ತದೆ.

**ಭಾವರೂಪ ಅಜ್ಞಾನವುಂಟು ಎಂಬ ಪೂರ್ವಪಕ್ಷ :** ಎಲ್ಲರೂ ಅನಾದಿಯಾದ ಭಾವರೂಪ ಅಜ್ಞಾನವನ್ನು ಒಪ್ಪಿದ್ದಾರೆ. ಅದು ಇರುವ ಬಗ್ಗೆ ಪ್ರತ್ಯಕ್ಷಾದಿ ಪ್ರಮಾಣಗಳಿವೆ. ಹೀಗಿರುವಾಗ ಮಾಯಾವಾದ ಮತದಲ್ಲಿ ಅಜ್ಞಾನವೇ ಕೂಡುವದಿಲ್ಲವಾದ್ದರಿಂದ ಅವರ ಶಾಸ್ತ್ರ ವ್ಯರ್ಥ ಎಂದು ನೀವು ಹೇಳಿದ್ದು ಅಯುಕ್ತ. ಭಾವರೂಪ ಅಜ್ಞಾನ ಉಂಟು ಎಂದು ಕೆಳಗಿನ ಪ್ರಮಾಣಗಳಿಂದ ತಿಳಿದು ಬರುತ್ತದೆ.

(ಅ) **ಪ್ರತ್ಯಕ್ಷ :** "ನಾನು ಅಜ್ಞನು" (ಅಹಂ ಅಜ್ಞಃ) "ನಾನು ನನ್ನನ್ನೂ ಬೇರೆಯವರನ್ನೂ ಅರಿಯೆನು" ಎಂಬ ಪ್ರತ್ಯಕ್ಷ ಅನುಭವವಿದೆ. ಇದರಿಂದ ಭಾವರೂಪ ಅಜ್ಞಾನವು ಸಿದ್ಧಿಸುತ್ತದೆ. ಈ ಅನುಭವ ಜ್ಞಾನಾಭಾವ ವಿಷಯಕವಲ್ಲ. ಏಕೆಂದರೆ ಅಭಾವಜ್ಞಾನವು "ಅನುಪಲಬ್ಧಿ" ಎಂಬ ಆರನೇ ಪ್ರಮಾಣದಿಂದ ಆಗುತ್ತವೆ, ಅಲ್ಲದೆ ಇದಕ್ಕೆ ಧರ್ಮಿಜ್ಞಾನ (ಆಶ್ರಯಜ್ಞಾನ) ಮತ್ತು ಪ್ರತಿಯೋಗಿ ಜ್ಞಾನ ಆವಶ್ಯಕ. ಆದರೆ ನಾನು ಅಜ್ಞ ಎಂಬುದರ ಪ್ರತೀತಿ ಸಾಕ್ಷಿ ಪ್ರತ್ಯಕ್ಷದಿಂದ ಆಗುವದರಿಂದ ಇದು ಭಾವರೂಪ ಅಜ್ಞಾನವೆಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ಮಲಗಿ ಎಚ್ಚತ್ತ ನಂತರ ಬರುವ "ನಾನು ಇಷ್ಟುಕಾಲ ಸುಖವಾಗಿ ಮಲಗಿದ್ದೆ. ನಾನು ಏನನ್ನೂ ಅರಿಯಲಿಲ್ಲ" ಎಂಬ ಪರಾಮರ್ಶವು ಭಾವರೂಪ ಅಜ್ಞಾನದಲ್ಲಿ ಪ್ರಮಾಣ.

(ಬ) **ಅನುಮಾನ :** ಒಂದು ವಸ್ತುವಿನ ವಿಷಯವಾಗಿ ನಮಗೆ ಮೊದಲು ಅಜ್ಞಾನವಿರುತ್ತದೆ. ಮುಂದೆ ಅದರ ಜ್ಞಾನವಾದೊಡನೆ ಮೊದಲಿದ್ದ ಅಜ್ಞಾನ ಹೊರಟು

ಹೋಗುತ್ತದೆ. ಆದ್ದರಿಂದ ವಸ್ತುವಿನ ಯಥಾರ್ಥ ಜ್ಞಾನದಿಂದ ಅದರ ಬಗ್ಗೆ ಮೊದಲಿದ್ದ ಭಾವರೂಪ ಅಜ್ಞಾನವನ್ನು ಊಹಿಸಬಹುದು. ಹೇಗೆಂದರೆ, ಪ್ರತ್ಯಕ್ಷ ಪ್ರಮಾಣದಿಂದ ಹುಟ್ಟುವ ಪಟಜ್ಞಾನವು ತತ್ಪೂರ್ವದಲ್ಲಿದ್ದ ಪಟದ ಭಾವರೂಪ ಅಜ್ಞಾನವುಳ್ಳದ್ದಾಗಿದೆ. ಕತ್ತಲೆಯಲ್ಲಿ ಮೊದಲು ಉಂಟಾದ ಪ್ರದೀಪದ ಬೆಳಕಿನಂತೆ.

(ಕ) **ಆಗಮ :** "ತಮ ಆಸೀತ್, ಮಾಯಾಂ ತು ಪ್ರಕೃತಿಂ ವಿದ್ಯಾತ್"ಮೊದಲಾದ ಆಗಮ ವಾಕ್ಯಗಳಿಂದ ಭಾವರೂಪ ಅಜ್ಞಾನವಿರುವದು ತಿಳಿದುಬರುತ್ತದೆ.

(ಡ) **ಅರ್ಥಾಪತ್ತಿ :** "ನೀನು ಹೇಳಿದ ವಿಷಯವನ್ನು ನಾನು ಅರಿಯೆನು" ಎಂಬ ಲೋಕ ವ್ಯವಹಾರವು ಭಾವರೂಪ ಅಜ್ಞಾನಬಿಟ್ಟು ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದ (ಅನ್ಯಥಾ ಅನುಪಪತ್ತ್ಯಾ). ಭಾವರೂಪ ಅಜ್ಞಾನವು ಸಿದ್ಧಿಸುತ್ತದೆ.

**ಉಪಸಂಹಾರ :** ಅಧ್ಯಾಸ ಅಥವಾ ಆರೋಪ ಎಂದರೆ "ಅನ್ಯಸ್ಮಿನ್ ತದಿತಿ ಬುದ್ಧಿಃ". ಉದಾ : ಬೆಳ್ಳಿಯಲ್ಲದ ಶಿಂಪಿನಲ್ಲಿ ಬೆಳ್ಳಿ ಎಂಬ ತಿಳುವಳಿಕೆ. ಹೀಗೆ ಅಧ್ಯಾಸವು ತಪ್ಪು ತಿಳುವಳಿಕೆ (ಮಿಥ್ಯಾಭೂತ) ಆಗಿದೆ. ಆದರಂತೆ ಬ್ರಹ್ಮಸ್ವರೂಪನಾದ ಆತ್ಮನಲ್ಲಿ ಅಹಂಕಾರಾದಿ ಆರೋಪ, (ಎದೆ ಮುಟ್ಟಿಕೊಂಡು ನಾನು ನಾನು ಎಂದು ಜೀವನಲ್ಲಿ ದೇಹದ ಆರೋಪ) ಕೂಡ ಮಿಥ್ಯಾ, ಈ ಮಿಥ್ಯಾಭೂತ ಅಧ್ಯಾಸಕ್ಕೆ ಉಪಾದಾನ ಕಾರಣವು ಅನಾದಿ ಮಿಥ್ಯಾಭೂತ ಅಜ್ಞಾನ ಅಥವಾ ಅವಿದ್ಯೆ ಇರಲೇಬೇಕು. ಏಕೆಂದರೆ ಕಾರಣವು ಸತ್ಯವಾದರೆ ಕಾರ್ಯವಾದ ಅಧ್ಯಾಸವು ಸತ್ಯವಾಗುವ ಪ್ರಸಂಗ ಬರುತ್ತದೆ. ಇದಲ್ಲದೆ ಜ್ಞಾನದಿಂದ ಬಂಧನಿವೃತ್ತಿ ಎಂಬ ಶ್ರುತಿಗಳ ಹೇಳಿಕೆ ಸಹ ಅನಾದಿ ಭಾವರೂಪ ಅಜ್ಞಾನವಿಲ್ಲದೆ ಕೂಡುವದಿಲ್ಲ.

ಈ ರೀತಿ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದ ಭಾವರೂಪ ಅಜ್ಞಾನವು ಜಡದಲ್ಲಿ ಕೂಡುವದಿಲ್ಲ. ಈ ಬಗ್ಗೆ ಪ್ರಮಾಣವೂ ಪ್ರಯೋಜನವೂ ಇಲ್ಲ. ಆದ್ದರಿಂದ ಪರಿಶೇಷದಿಂದ ಆತ್ಮನಲ್ಲಿಯೇ ಈ ಅಜ್ಞಾನವಿದೆ ಎಂದು ಒಪ್ಪಬೇಕು. ಹೀಗಿರುವಾಗ "ಅಜ್ಞಾನವು ಕೂಡುವದಿಲ್ಲವಾದ್ದರಿಂದ, ಮಾಯಾವಾದಿಗಳ ಶಾಸ್ತ್ರ ವ್ಯರ್ಥ" ಎಂದು ನೀವು ಹೇಳಿದ್ದು ಅತ್ಯಂತ ಅಯುಕ್ತ.

**ಸಿದ್ಧಾಂತ :** ಇದಕ್ಕೆ ಉತ್ತರ ಹೀಗಿದೆ. (ಅತ್ರ ಉಚ್ಯತೇ)

(ಅ) **ಪ್ರತ್ಯಕ್ಷ :** ಭಾವರೂಪ ಅಜ್ಞಾನ ಸಿದ್ಧಿಸಲು ನೀನುಕೊಟ್ಟ "ಅಹಂ ಅಜ್ಞಃ" ಎಂಬ ಉದಾಹರಣೆ ಜ್ಞಾನಾಭಾವದ್ದೂ ಆಗಬಲ್ಲದು. ಅಹಂ ಅಜ್ಞಃ ಎಂದರೆ ನನ್ನಲ್ಲಿ ಜ್ಞಾನಾಭಾವವಿದೆ (ಅಹಂ ಜ್ಞಾನಾಭಾವವಾನ್) ಎಂದು ಅರ್ಥ, ಇನ್ನು ಅಭಾವಜ್ಞಾನವು ಅನುಪಲಬ್ಧಿ ಪ್ರಮಾಣದಿಂದಲೇ ಆಗುತ್ತವೆಂಬ ನಿನ್ನ

ವಾದ ಅಯುಕ್ತ. ಅದು ಪ್ರತ್ಯಕ್ಷಕ್ಕೂ ಗೋಚರವಾಗುತ್ತದೆ. ಉದಾ— ನನ್ನಲ್ಲಿ ಸುಖವಿಲ್ಲವೆಂಬ ಸುಖಾಭಾವವು ಸಾಕ್ಷಿ ಪ್ರತ್ಯಕ್ಷದಿಂದ ತಿಳಿಯುತ್ತದೆ. ಅದರಂತೆ ಕಣ್ಣು ತೆರೆದೊಡನೆ (ಉನ್ಮೀಲಿತ ನೇತ್ರಸ್ಯ) ಅಲ್ಲಿ ಘಟವಿಲ್ಲ ಎಂಬ ಘಟಾಭಾವ ಜ್ಞಾನ ಪ್ರತ್ಯಕ್ಷದಿಂದಲೇ ಆಗುತ್ತದೆ. ಇದಲ್ಲದೆ ಮಲಗಿ ಎಚ್ಚತ್ತ ನಂತರ ಬರುವ, ನಾನು ಏನನ್ನೂ ಅರಿಯಲಿಲ್ಲ ಎಂಬ ಪರಾಮರ್ಶವು ಜ್ಞಾನಾಭಾವ ವಿಷಯಕವಾಗಿಯೂ ಆಗಬಲ್ಲದು.

(ಬ) **ಅನುಮಾನ** : ನೀನು ಉದಾಹರಿಸಿದ ಅನುಮಾನ ಪ್ರಯೋಗದಲ್ಲಿ ಅನೇಕ ದೋಷಗಳಿವೆ. (ಈ ದೋಷಗಳನ್ನು ಮೂಲಗ್ರಂಥದಿಂದ ತಿಳಿದುಕೊಳ್ಳಬೇಕು.)

(ಕ) **ಆಗಮ** : ಜೀವರಿಗೆ ಪೂರ್ಣಜ್ಞಾನವಿಲ್ಲ. ಜ್ಞಾನಾಭಾವವಿದೆ ಎಂದು ಆಗಮದಿಂದಲೂ ತಿಳಿಯುತ್ತದೆ.

(ಡ) **ಅರ್ಥಾಪತ್ತಿ** : "ನೀನು ಹೇಳಿದ ವಿಷಯವನ್ನು ನಾನರಿಯೆನು" ಎಂಬ ಲೋಕವ್ಯವಹಾರವು ಜ್ಞಾನದ ಅಭಾವವನ್ನೇ ವಿಷಯೀಕರಿಸುತ್ತದೆ.

**ಉಪಸಂಹಾರ** : ಅಜ್ಞಾನವೆಂಬ ಕಾರಣವಿಲ್ಲದೆ ಅಧ್ಯಾಸರೂಪ ಕಾರ್ಯ ಕೂಡುವದಿಲ್ಲವೆಂಬ ನಿನ್ನ ಹೇಳಿಕೆ ಅಯುಕ್ತ. ಅಧ್ಯಾಸವು ಜ್ಞಾನರೂಪ ಮತ್ತು ಅದಕ್ಕೆ ಅಂತಃಕರಣವೇ ಉಪಾದಾನ ಕಾರಣ. ಇನ್ನು ಅಧ್ಯಾಸದ ಕಾರಣ ಸತ್ಯವಾದರೆ, ಅಧ್ಯಾಸವು ಸತ್ಯವಾಗಲಿ ಎಂಬ ನಿನ್ನ ಆಪಾದನೆ ನಮಗೆ ಇಷ್ಟವೇ. ಜ್ಞಾನದಿಂದ ಬಂಧನಿವೃತ್ತಿ ಎಂಬುದು ಇನ್ನೂ ಸಿದ್ಧವಾಗಿಲ್ಲ. ನಾವು ಈ ಮೊದಲು ಹೇಳಿದಂತೆ, ಬಂಧನಿವೃತ್ತಿಯು ಜ್ಞಾನದಿಂದಾಗುವ ಭಗವಂತನ ಪ್ರಸಾದದಿಂದ ಮಾತ್ರ.

ಇದ್ದರಿಂದ ಯಾವ ಪ್ರಮಾಣಗಳಿಂದಲೂ ಭಾವರೂಪ ಅಜ್ಞಾನವನ್ನು ಸ್ಥಾಪಿಸಲು ನೀನು ಸಮರ್ಥನಾಗಿಲ್ಲ. ನಾವಾದರೋ ಭಾವರೂಪ ಅಜ್ಞಾನಕ್ಕೆ ವಿರೋಧಿಗಳಲ್ಲ. ಅದನ್ನು ಒಪ್ಪುತ್ತೇವೆ. ಆದರೆ ನಿನ್ನ ಮತದಲ್ಲಿ ಭಾವರೂಪ ಅಜ್ಞಾನ ಕೂಡುವದಿಲ್ಲ ಎಂದು ಹೇಳುತ್ತೇವೆ.

**ಸ್ವಭಾವಾಜ್ಞಾನವಾದಸ್ಯ ನಿರ್ದೋಷತ್ವಾನ್ನ ತದ್ಭವೇತ್ ||೩೩–ಅ||**

**ಅವತರಣಿಕೆ** : ನಾವು ಭಾವರೂಪ ಅಜ್ಞಾನ ಒಪ್ಪುತ್ತೇವೆ, ನಮ್ಮದು ಸ್ವಭಾವ ಅಜ್ಞಾನವಾದ. ಇದು ಅತ್ಯಂತ ಸುಸಂಗತ ಹಾಗೂ ದೋಷರಹಿತವಾದ್ದರಿಂದ ಇದರಲ್ಲಿ ಶಾಸ್ತ್ರ ವೈಫಲ್ಯವಿಲ್ಲ.

**ಅನುವಾದ** : [ನಾವು ನಿರೂಪಿಸುವ ಸ್ವಭಾವ-ಅಜ್ಞಾನವಾದ ಎಂದರೆ ಸ್ವಾಭಾವಿಕವಾದ-ಮಿಥ್ಯಾ ಅಲ್ಲದ–ಸತ್ಯವಾದ ಅಜ್ಞಾನವು ಜೀವನನ್ನು ಆಶ್ರಯಿಸಿ ಅವನಿಗೆ ಸ್ವತಂತ್ರನಾದ ಪರಮಾತ್ಮನ ಬಗ್ಗೆ ಮತ್ತು ತನ್ನ ನಿಜ ಸ್ವರೂಪದ ಬಗ್ಗೆ ಅಜ್ಞಾನ

ವನ್ನುಂಟು ಮಾಡುತ್ತದೆ] ಈ ಸ್ವಭಾವ–ಅಜ್ಞಾನವಾದರೋ ದೋಷರಹಿತವಾದ್ದರಿಂದ ಇದರಲ್ಲಿ ಶಾಸ್ತ್ರವೈಯರ್ಥ್ಯ (ತತ್)ವಿಲ್ಲ.

**ನಿವರಣೆ :** (1) ಮಾಯಾವಾದಿಗಳ ಅಜ್ಞಾನವಾದವನ್ನು ನಿರಾಕರಿಸಿದ್ದರೂ ನಾವು ಅಜ್ಞಾನದ ವಿರೋಧಿಗಳಲ್ಲ. ಅಜ್ಞಾನವು ಪರಮತದಲ್ಲಿ ಕೂಡುವದಿಲ್ಲವಾದ್ದರಿಂದ ಅವರಿಗೆ ಶಾಸ್ತ್ರ ವೈಯರ್ಥ್ಯ ದೋಷ ಬರುತ್ತದೆ. ನಾವೂ ಭಾವರೂಪ ಅಜ್ಞಾನ ಒಪ್ಪುತ್ತೇವೆ, ನಮ್ಮದು ಸ್ವಭಾವ ಅಜ್ಞಾನವಾದ. ಇದರಲ್ಲಿ ಯಾವ ದೋಷವೂ ಇಲ್ಲ.

ಸ್ವಭಾವ ಅಜ್ಞಾನವಾದ ಎಂಬ ಶಬ್ದದ ಅರ್ಥವನ್ನು ಟೀಕಾರಾಯರು ಐದು ರೀತಿಯಿಂದ ವಿವೇಚಿಸಿದ್ದಾರೆ.

(i) ಸ್ವಭಾವ ಎಂದರೆ ಜೀವ. (ಸ್ವಶ್ಚಾಸೌ ಭಾವಶ್ಚ ಸ್ವಭಾವಃ). ಒಳಗಿರುವ ಜ್ಞಾನರೂಪ ಜೀವ. ಈ ಜೀವನನ್ನಾಶ್ರಯಿಸಿದ, ಅವನಿಗೆ ಆವರಕವಾದ ಅಜ್ಞಾನವೆಂಬ ವಾದವು ಸ್ವಭಾವ ಅಜ್ಞಾನವಾದ ಎಂದು ಕರೆಯಲ್ಪಡುತ್ತದೆ.

(ii) ಸ್ವಭಾವ ಎಂದರೆ ತಾನಾಗಿಯೇ ಇರುವ (ಸ್ವಯಮೇವ ಭವತಿ ಅಸ್ತಿ ಇತಿ) ಅಜ್ಞಾನ ಕಲ್ಪಿತವಲ್ಲದ ಜೀವ. ಇಲ್ಲಿ ಜೀವ ಅಜ್ಞಾನ ಕಲ್ಪಿತವಲ್ಲವಾದ್ದರಿಂದ ಈ ವಾದದಲ್ಲಿ ಪರಮತದ ಅನ್ಯೋನ್ಯಾಶ್ರಯ ದೋಷವಿಲ್ಲ, ಶಾಸ್ತ್ರ ವೈಯರ್ಥ್ಯವೂ ಇಲ್ಲ.

(iii) ಸ್ವಭಾವ ಎಂದರೆ ಸ್ವತಂತ್ರ ಪರಮಾತ್ಮ (ಸ್ವಃ ಸ್ವತಂತ್ರಃ ಭಾವಃ ಪರಮಾತ್ಮಾ) ಇದರಂತೆ ಸ್ವಭಾವ ಎಂದರೆ ಜೀವನ (ಸ್ವಸ್ಯ) ಪಾರತಂತ್ರ್ಯಾದಿ ಧರ್ಮ. ಜೀವನಿಗೆ ಪರಮಾತ್ಮನ ಬಗ್ಗೆ ಮತ್ತು ತನ್ನ ಪಾರತಂತ್ರ್ಯಾದಿಗಳ ಬಗ್ಗೆ ಅಜ್ಞಾನವಿರುತ್ತದೆ ಎಂಬ ವಾದವು ಸ್ವಭಾವ ಅಜ್ಞಾನವಾದವು. ಇದರಲ್ಲಿ ಶಾಸ್ತ್ರ ವೈಯರ್ಥ್ಯವಿಲ್ಲ.

(iv) ಸ್ವಭಾವಭೂತವಾದ ಅಜ್ಞಾನ, ಸುಳ್ಳಾದ ಅಜ್ಞಾನವಲ್ಲ ಎಂಬ ವಾದವು ಸ್ವಭಾವ ಅಜ್ಞಾನವಾದ. ಇದರಲ್ಲಿ ಅನವಸ್ಥಾದಿ ದೋಷ ಹಾಗೂ ಶಾಸ್ತ್ರ ವೈಯರ್ಥ್ಯವಿಲ್ಲ.

(v) ಸ್ವತಂತ್ರನಾದ ಪರಮಾತ್ಮನಿಂದ ಜೀವನಿಗುಂಟಾದ ಅಜ್ಞಾನವೆಂಬ ವಾದವು ಸ್ವಭಾವ ಅಜ್ಞಾನವಾದ. ಇಲ್ಲಿ ಜೀವನಿಗೆ ಪರಮಾತ್ಮನ ಬಗ್ಗೆ ಮತ್ತು ತನ್ನ ಜ್ಞಾನಾನಂದಾದಿ ಸ್ವರೂಪದ ಬಗ್ಗೆ ಅಜ್ಞಾನವಿರುವದು ಕೂಡುತ್ತದೆಯಾದ್ದರಿಂದ ಶಾಸ್ತ್ರ ವೈಯರ್ಥ್ಯ ದೋಷವಿಲ್ಲ.

ನಮ್ಮ ಮತದಲ್ಲಿ ಅಜ್ಞಾನವನ್ನು ಒಪ್ಪುವದರಿಂದ ಯಾವ ದೋಷವೂ ಇಲ್ಲ. ನಮ್ಮ ಪ್ರಕಾರ (ಅ) ಭಾವರೂಪ ಅಜ್ಞಾನವೂ ಸತ್ಯವಾಗಿದೆ. ಅದು ಅಜ್ಞಾನಕಲ್ಪಿತವಲ್ಲ. (ಬ) ಅಜ್ಞಾನವು ಬ್ರಹ್ಮನಿಂದ ಭಿನ್ನನಾದ ಜೀವನನ್ನು

ಆಶ್ರಯಿಸಿದೆ ಮತ್ತು ಅವನಿಗೆ ಆವರಕವಾಗಿದೆ. (ಕ) ಜೀವನು ಸ್ವಪ್ರಕಾಶ ಮತ್ತು ಜ್ಞಾನಾನಂದಸ್ವರೂಪನಾಗಿದ್ದರೂ ಪರಮೇಶ್ವರನ ಅಚಿಂತ್ಯ ಅದ್ಭುತ ಶಕ್ತಿ ಮತ್ತು ಇಚ್ಛೆಯಿಂತೆ ಅವನಿಗೆ (ಜೀವನಿಗೆ) ಸಂಸಾರಾವಸ್ಥೆಯಲ್ಲಿ ಪರಮೇಶ್ವರನ ಬಗ್ಗೆ ಮತ್ತು ತನ್ನ ಸ್ವರೂಪಭೂತ ಜ್ಞಾನಾನಂದಾದಿಗಳ ಬಗ್ಗೆ ಅಜ್ಞಾನವಿದೆ. ಸತ್ಯವಾದ ಬೇಡಿಗಳು ರಾಜನ ಅನುಗ್ರಹದಿಂದ ದೂರಾಗುವಂತೆ ಪರಮಾತ್ಮನ ಪ್ರಸಾದದಿಂದ ಜೀವನನ್ನಾಶ್ರಯಿಸಿದ ಸತ್ಯವಾದ ಅಜ್ಞಾನ ಆವರಣ ಹೊರಟು ಹೋಗಿ ಜೀವನಿಗೆ ಜ್ಞಾನೋದಯವಾಗುತ್ತದೆ. ಇದರಿಂದ ಅವನ ಸ್ವಸ್ವರೂಪ ಪ್ರಕಟವಾಗಿ ಅವನು ಮೋಕ್ಷ ಪಡೆಯುತ್ತಾನೆ. ಇದರಿಂದಾಗಿ ಈ ಸ್ವಭಾವ ಅಜ್ಞಾನ ವಾದದಲ್ಲಿ ಯಾವ ದೋಷವೂ ಇಲ್ಲ. ಶಾಸ್ತ್ರ ವೈಯರ್ಥ್ಯವೂ ಇಲ್ಲ.

**ಅವಿದ್ಯಾ ದುರ್ಘಟತ್ವಂ ಚೇತ್ ಸ್ಯಾದಾತ್ಮಾಪಿ ಹಿ ತಾದೃಶಃ ||೩೩||**

**ಅವತರಣಿಕೆ :** ಅವಿದ್ಯೆ ಯುಕ್ತಿಯಿಂದ ಕೂಡದಿರುವದು ದೂಷಣವೇ ಅಲ್ಲ. ಅದು ಭೂಷಣ ಎಂಬ ಮಾಯಾವಾದಿಗಳ ಹೇಳಿಕೆಯನ್ನು ನಿರಾಕರಿಸುತ್ತಾರೆ.

**ಅನುವಾದ :** ಅವಿದ್ಯೆ ದುರ್ಘಟವಾದರೆ ಅವಿದ್ಯೆಗೆ ಅಧಿಷ್ಠಾನ ಮತ್ತು ಸಾಕ್ಷಿ ಯಾದ ಆತ್ಮನೂ ಅವಿದ್ಯೆಯಂತೆ ಮಿಥ್ಯಾ ಆಗಲಿ (ಇದರಿಂದಾಗಿ ಶೂನ್ಯವಾದ ಪ್ರಸಂಗ ಬರುತ್ತದೆ.)

**ವಿವರಣೆ :** ವಿಚಾರಯುಕ್ತವಿಲ್ಲದಿರುವದು (ದುರ್ಘಟತ್ವಂ) ಅವಿದ್ಯೆಯ ಸ್ವಭಾವ. ಆದ್ದರಿಂದ ಅವಿದ್ಯೆಯು ನಮ್ಮ ಮತದಲ್ಲಿ ಕೂಡದಿರುವದು ಭೂಷಣ, ದೂಷಣ ವಲ್ಲ ಎಂದು ಮಾಯಾವಾದಿ ಹೇಳಿದರೆ ಅದು ಅಯುಕ್ತ. ಏಕೆಂದರೆ ಅವಿದ್ಯೆ ದುರ್ಘಟವಾದರೆ ಅದಕ್ಕೊಂದು ಅಧಿಷ್ಠಾನ. (ಆಶ್ರಯ) ಹಾಗೂ ಸಾಕ್ಷಿಯಾದ ಆತ್ಮ ಇಲ್ಲದೆ ಹೋಗಲಿ. ಅಧಿಷ್ಠಾನ ಮತ್ತು ಸಾಕ್ಷಿ ಹೇಳಿದರೆ ಅದು ಸುಘಟ ಅಥವಾ ಯುಕ್ತಿ ಯುಕ್ತವಾಗುತ್ತದೆ. ಮತ್ತು ಇದರಿಂದಾಗಿ ಅದರ ದುರ್ಘಟನಾ ಸ್ವಭಾವವು ಹೊರಟುಹೋಗುತ್ತದೆ. ಹೀಗಾಗಿ ಆತ್ಮನು ಇಲ್ಲದಿರುವ ಶೂನ್ಯವಾದ ಪ್ರಸಂಗ ಬರುತ್ತದೆ. ಮತ್ತು ಆತ್ಮನು ಅವಿದ್ಯೆಯಂತೆ ಮಿಥ್ಯಾ ಆಗಲಿ ಎಂದು ಆಪಾದಿಸಬೇಕಾಗುತ್ತದೆ.

ನಮ್ಮ ಮತದಲ್ಲಿಯಾದರೋ, ಅವಿದ್ಯಾ ಕೂಡುತ್ತದೆ. ಈ ಮೊದಲು ನಿರೂಪಿಸಿದಂತೆ, ಪರಮೇಶ್ವರನು ತನ್ನ ಅಚಿಂತ್ಯ ಅದ್ಭುತ ಶಕ್ತಿಯಿಂದ, ಅವಿದ್ಯೆ ಯಿಂದ ಜೀವನನ್ನು ಆವರಿಸಿ ಸಂಸಾರದಲ್ಲಿ ತೊಡಗಿಸುತ್ತಾನೆ. ಅವನ ಪ್ರಸಾದ ವಾದನಂತರ ಬಂಧ ವಿಮೋಚನವಾಗುತ್ತದೆ. ನಮ್ಮ ಪ್ರಕಾರ, ಭಗವಂತನ ಶಕ್ತಿಯು ಪ್ರಮಾಣಸಿದ್ಧವಾದುದನ್ನು ಅದು ಸುಘಟವಿರಲಿ, ದುರ್ಘಟವಿರಲಿ ಸಂಘಟಿಸುವಲ್ಲಿ ಸಮರ್ಥವಿದೆ.

**ಅತೋಧಿಕಾರಿವಿಷಯಫಲಯೋಗಾದಿವರ್ಜಿತಂ**
**ಅನಂತದೋಷದುಷ್ಟಂಚ ಹೇಯಂ ಮಾಯಾಮತಂ ಶುಭೈಃ ||೩೪||**

**ಅವತರಣಿಕೆ :** "ನಿರ್ವಿಶೇಷೇ ಸ್ವಯಂಭಾತೇ" ಎಂದು 21ನೇ ಶ್ಲೋಕದಿಂದ ಆರಂಭವಾದ ಮಾಯಾವಾದಿಗಳ ಅಜ್ಞಾನವಾದದ ನಿರಾಕರಣೆಯ ಉಪಸಂಹಾರ ಮಾಡುತ್ತಾರೆ.

**ಅನುವಾದ :** ಮಾಯಾವಾದದಲ್ಲಿ ಅಜ್ಞಾನವೇ ಕೂಡುವದಿಲ್ಲವಾದ್ದರಿಂದ (ಅತಃ) ಎಂದರೆ ಅಧಿಕಾರಿ–ವಿಷಯ–ಪ್ರಯೋಜನ ಮತ್ತು ಇವುಗಳ ಪರಸ್ಪರ ಸಂಬಂಧ ಕೂಡುವದಿಲ್ಲವಾದ್ದರಿಂದ ಅನಂತದೋಷ ದುಷ್ಟವಾದ ಮಾಯಾವಾದಿಗಳ ಮತವು. ಸಜ್ಜನರಿಂದ ತ್ಯಾಜ್ಯವಾಗಿದೆ.

**ವಿವರಣೆ :** ಹೀಗೆ ಮಾಯಾವಾದಿಗಳ ಮತದಲ್ಲಿ ಅಜ್ಞಾನ (ಅವಿದ್ಯೆ) ಕೂಡುವದಿಲ್ಲ. ಅಜ್ಞಾನ ಇದ್ದರಷ್ಟೇ ಅಜ್ಞ ಅಥವಾ ಸಂದೇಹಿ ಅಧಿಕಾರಿಯಾಗುತ್ತಿದ್ದ. ಅಜ್ಞಾನವು ವಿಷಯವಾಗುತ್ತಿತ್ತು, ಹಾಗೂ ಅಜ್ಞಾನ ನಿವೃತ್ತಿಯು ಫಲ ಅಥವಾ ಪ್ರಯೋಜನವಾಗುತ್ತಿತ್ತು. ಈ ಮೂರು ಇಲ್ಲವಾದ್ದರಿಂದ ಅವುಗಳ ಪರಸ್ಪರ ಸಂಬಂಧವೂ ಇಲ್ಲ. ಹೀಗೆ ಈ ಮತದಲ್ಲಿ ಅನುಬಂಧ–ಚತುಷ್ಟಯವಿಲ್ಲ. ಇದಲ್ಲದೆ ಈ ಮತದಲ್ಲಿ ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಅನೇಕ ದೋಷಗಳಿವೆ. ಆದ್ದರಿಂದ ಸಜ್ಜನರಿಂದ ಈ ಮತವು ತ್ಯಾಜ್ಯವಾಗಿದೆ. (ಮಾಯಾ ಮತ್ತು ಅವಿದ್ಯೆ ಇವು ಅಜ್ಞಾನದ ಪ್ರಭೇದಗಳು).

**ಸತ್ಯತ್ವಾತ್ತೇನ ದುಃಖಾದೇಃ ಪ್ರತ್ಯಕ್ಷೇಣ ವಿರೋಧತಃ |**
**ನ ಬ್ರಹ್ಮತಾಂ ವದೇದ್ವೇದೋ ಜೀವಸ್ಯ ಹಿ ಕಥಂಚನ ||೩೫||**

**ಅವತರಣಿಕೆ :** ಜೀವಬ್ರಹ್ಮರ ಐಕ್ಯವು ಶಾಸ್ತ್ರ ವಿಷಯ ಆಗಲಾರದೆಂದು ತಿಳಿಸುತ್ತಾರೆ.

**ಅನುವಾದ :** ದುಃಖಾದಿಗಳು ಸತ್ಯವಾದ್ದರಿಂದ, ಜೀವಬ್ರಹ್ಮರ ಐಕ್ಯವು ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾದ್ದರಿಂದ ಜೀವನು ಬ್ರಹ್ಮನೆಂದು ವೇದವು ಮುಖ್ಯ ಅಥವಾ ಅಮುಖ್ಯ ವೃತ್ತಿಯಿಂದ (ಕಥಂಚನ) ಹೇಳಲಾರದು.

**ವಿವರಣೆ :** 1) ಪ್ರತ್ಯಕ್ಷ ವಿರೋಧ ಮೂಲಕ ಜೀವ ಬ್ರಹ್ಮರ ಐಕ್ಯವು ಶಾರೀರಿಕ ಮೀಮಾಂಸಾಕ್ಕೆ" ಎಂದರೆ ಬ್ರಹ್ಮಸೂತ್ರಕ್ಕೆ ವಿಷಯವಾಗಲಾರದು. ಒಂದು ವೇಳೆ ಐಕ್ಯವು ಬ್ರಹ್ಮಸೂತ್ರಕ್ಕೆ ವಿಷಯವಾದರೆ, ಅದು ವೇದಕ್ಕೂ ವಿಷಯವಾಗಬೇಕಾಗುತ್ತದೆ. ಏಕೆಂದರೆ ಬ್ರಹ್ಮಸೂತ್ರವು ವೇದಕ್ಕೆ ಸಹಕಾರಿ ಎಂದರೆ ಇತಿಕರ್ತವ್ಯತಾ ರೂಪವಾಗಿದೆ. ಮಂತ್ರ–ಬ್ರಾಹ್ಮಣ–ಆರಣ್ಯಕ–ಉಪನಿಷತ್ ರೂಪ

ವಾದ ವೇದವಾದರೋ ಭೇದವನ್ನೇ ಹೇಳುತ್ತದೆ. ಐಕ್ಯವನ್ನು ಹೇಳುವದಿಲ್ಲ. ಆದ್ದರಿಂದ ಬ್ರಹ್ಮಸೂತ್ರಕ್ಕೂ ಜೀವಬ್ರಹ್ಮರ ಐಕ್ಯ ವಿಷಯವಾಗಲಾರದು.

ಆದರೆ ಮಾಯಾವಾದಿಯು ಸಿದ್ಧಾಂತಿಯ ಮೇಲಿನ ವಾದವನ್ನು ಒಪ್ಪುವದಿಲ್ಲ. ಅವನು ಹೇಳುವದೇನೆಂದರೆ— ವೇದವು ಜೀವಬ್ರಹ್ಮರ ಐಕ್ಯವನ್ನೇ ನಿರೂಪಿಸುತ್ತದೆ. ವೇದದ ಮಂತ್ರ (ದೇವತಾಕಾಂಡ) ಮತ್ತು ಬ್ರಾಹ್ಮಣ (ಕರ್ಮಕಾಂಡಗಳು) ಅತತ್ತ್ವಾವೇದಕವಾಗಿವೆ. ಅವಿದ್ವಜ್ಜನರಿಗೋಸ್ಕರ ದೇವತಾಪ್ರೀತ್ಯರ್ಥವಾಗಿ ಐಹಿಕ ಸುಖಸಾಧನೆಗಾಗಿ ಯಜ್ಞಯಾಗಾದಿಗಳು ಪ್ರತಿಪಾದಿತವಾಗಿವೆ. ಆದರೆ ವೇದಾಂತವೆನಿಸಿದ ಉಪನಿಷತ್ತುಗಳಲ್ಲಿ ಜೀವಬ್ರಹ್ಮರ ಐಕ್ಯ ಪ್ರತಿಪಾದಿಸಲ್ಪಟ್ಟಿದೆ. ಕೆಲವು ವಾಕ್ಯಗಳು ಬ್ರಹ್ಮನ ಸ್ವರೂಪವನ್ನೂ ಕೆಲವು ಜೀವನ ಸ್ವರೂಪವನ್ನೂ ತಿಳಿಸುತ್ತವೆ. ಪ್ರಾಣಾದ್ಯುಪಾಸನೆ ಹೇಳುವದರ ಉದ್ದೇಶ ಅಂತಃಕರಣ ವೃತ್ತಿಗಳು ಬಾಹ್ಯ ಜಡ ವಸ್ತುಗಳಲ್ಲಿ ಹೋಗದಂತೆ ಮಾಡಿ ನಿಗ್ರಹ ಮೂಲಕ ಅದ್ವೈತ ಜ್ಞಾನ ಹುಟ್ಟಿಸುವದಾಗಿದೆ. ಹೀಗೆ ತತ್ತ್ವಾವೇದಕವಾದ ಉಪನಿಷತ್ತಿನ ವಿಷಯವಾದ ಜೀವಬ್ರಹ್ಮರ ಐಕ್ಯವು, ವೇದಗಳ ಇತಿ ಕರ್ತವ್ಯತಾ ಭಾಗವಾದ ಬ್ರಹ್ಮಸೂತ್ರಗಳಿಗೂ ವಿಷಯ.

**ಸಿದ್ಧಾಂತಿ :** ನಿನ್ನ ಸಮನ್ವಯ ಪ್ರಕ್ರಿಯೆ ಒಂದೆಡೆ ಇರಲಿ (ಅ) ತತ್ತ್ವಮಸಿ ಎಂಬ ಉಪನಿಷದ್ವಾಕ್ಯವು ಜೀವನಿಗೆ ಬ್ರಹ್ಮನೊಡನೆ ಐಕ್ಯವನ್ನು ಸರ್ವಥಾ ಹೇಳುವದಿಲ್ಲ. ಹೇಗೆಂದರೆ— ಜೀವನಿಗೆ (ತ್ವಮ್) ಬ್ರಹ್ಮತ್ವವು (ತತ್) (ಅ) ಮುಖ್ಯವೃತ್ತಿಯಿಂದ ಹೇಳಲ್ಪಡುತ್ತದೆಯೋ ಅಥವಾ (ಬ) ವಿರೋಧ ಭಾಗ ಬಿಟ್ಟು (ಎಂದರೆ ಬ್ರಹ್ಮನ ಸರ್ವಜ್ಞತ್ವ, ನಿರ್ದುಃಖತ್ವವನ್ನೂ, ಜೀವನ ಅಲ್ಪಜ್ಞತ್ವ ದುಃಖಿತ್ವಗಳನ್ನೂ ಬಿಟ್ಟು) ಸ್ವರೂಪಭೂತ ಚಿದಂಶದಲ್ಲಿ ಮಾತ್ರ ಐಕ್ಯ ಎಂದರೆ ಜೀವನ ಚಿತ್‌ಗೆ ಬ್ರಹ್ಮನ ಚಿತ್‌ದೊಂದಿಗೆ ಐಕ್ಯ ಎಂದು "ಜಹದಜಹಲ್ಲಕ್ಷಣಾ" ವೃತ್ತಿಯಿಂದ ಹೇಳಲ್ಪಡುತ್ತದೆಯೋ ? ಈ ಎರಡೂ ಕೂಡುವದಿಲ್ಲ. ಏಕೆಂದರೆ ಪ್ರತ್ಯಕ್ಷ ವಿರೋಧ ಬರುತ್ತದೆ. ಹೇಗೆಂದರೆ, ಬಂಧ, ಸಂಸಾರಬಂಧ, ದುಃಖಗಳು ಸುಳ್ಳು ಎಂದು ಶ್ರುತಿ ಹೇಳಿದರೆ ಅವು ಸತ್ಯವೆಂದು ಪ್ರತ್ಯಕ್ಷಾನುಭವದಿಂದ ನಿಶ್ಚಿತವಾಗುತ್ತವೆ.

ಅಥವಾ

ಎರಡು ಸಾಧ್ಯ ಮತ್ತು ಎರಡು ಹೇತು ಮಾಡಬಹುದು. ಹೇಗೆಂದರೆ– (i) ಮುಖ್ಯವೃತ್ತಿಯಿಂದ ಜೀವಬ್ರಹ್ಮರ ಐಕ್ಯವಿಲ್ಲ. ಏಕೆಂದರೆ ಪ್ರತ್ಯಕ್ಷ ವಿರೋಧವಿದೆ. (ii) ಲಕ್ಷಣಾವೃತ್ತಿಯಿಂದಲೂ ಜೀವಬ್ರಹ್ಮರ ಐಕ್ಯವಿಲ್ಲ. ಏಕೆಂದರೆ ದುಃಖಾದಿಗಳು ಸತ್ಯವಿವೆ.

(2) **ತತ್ತ್ವಮಸಿ ವಾಕ್ಯಾರ್ಥ :** (i) ತತ್ತ್ವಮಸಿ ಎಂಬ ವಾಕ್ಯವು ಮುಖ್ಯವೃತ್ತಿಯಿಂದ ಜೀವಬ್ರಹ್ಮರ ಐಕ್ಯ ಹೇಳಲಾರದು. ಏಕೆಂದರೆ ಪ್ರತ್ಯಕ್ಷ ವಿರೋಧ

ವಿವೆ. ಹೇಗೆಂದರೆ ಪ್ರತ್ಯಕ್ಷವಾಗಿ ಜೀವನು (ತ್ವಮ್) ದುಃಖಾದಿ ವಿಶಿಷ್ಟನಾಗಿ ದ್ದಾನೆ. ಮತ್ತು ಗುಣಪೂರ್ಣ ಬ್ರಹ್ಮನು (ತತ್) ನಿರ್ದುಃಖಿಯಾಗಿದ್ದಾನೆ. [ಹೀಗೆ ಪ್ರತ್ಯಕ್ಷ ವಿರೋಧದಿಂದ ಉಪಲಕ್ಷಣಯಾ ಶ್ರುತಿಗೆ ಬರುವ ಸ್ವವಚನ ವಿರೋಧವನ್ನೂ ತೆಗೆದುಕೊಳ್ಳಬಹುದು. ಹೇಗೆಂದರೆ ಪರಮಾತ್ಮನು ಜೀವರಿಂದ ಭಿನ್ನವೆಂದು "ಭಿನ್ನೋಽಚಿಂತ್ಯಃ" ಎಂಬ ವಚನದಿಂದ ಅಥವಾ ಶಕುನಿಸೂತ್ರ ಮೊದಲಾದ ದೃಷ್ಟಾಂತಗಳಿಂದ ವೇದವು ಪ್ರತಿಪಾದಿಸಿ ನಂತರ ಅದೇ ವೇದವು "ತತ್ವಮಸಿ" ಎಂಬ ವಾಕ್ಯದಿಂದ ಜೀವ ಬ್ರಹ್ಮರ ಐಕ್ಯ ಹೇಳಿದರೆ "ನನ್ನ ತಾಯಿ ಬಂಜೆ" ಎಂಬಂತೆ ಸ್ವವಚನ ವಿರೋಧ ಬರುತ್ತದೆ.]

(ii) ತತ್ವಮಸಿ ವಾಕ್ಯವು ಅಮುಖ್ಯವೃತ್ತಿಯಿಂದ ಎಂದರೆ "ಜಹದಜಹಲ್ಲಕ್ಷಣಾ" ವೃತ್ತಿಯಿಂದಲೂ ಜೀವಬ್ರಹ್ಮರ ಐಕ್ಯ ಹೇಳಲಾರದು. ಹೇಗೆಂದರೆ–ನಿರ್ದುಃಖಿತ್ವ, ಸರ್ವಜ್ಞತ್ವ ಮತ್ತು ದುಃಖಿತ್ವ ಅಲ್ಪಜ್ಞತ್ವ ಮೊದಲಾದವುಗಳಲ್ಲಿಯ ವಿರೋಧ ಪರಿತ್ಯಾಗದ ಉದ್ದೇಶವೇನು ? (ಅ) ವಿರೋಧ ಹೇಳುವ ಇಚ್ಛೆ (ವಿವಕ್ಷಾ) ಇಲ್ಲವೆಂದೋ ? (ಬ) ವಿರೋಧ ಅನಿತ್ಯವೆಂದೋ ? (ಕ) ಅಥವಾ ವಿರೋಧ ಮಿಥ್ಯಾ ಎಂದೋ ? ಮೂರೂ ವಿಕಲ್ಪಗಳು ಕೂಡುವದಿಲ್ಲ, ಹೇಗೆಂದರೆ— (ಅ) ವಿರೋಧ ಹೇಳುವ ಇಚ್ಛೆ ಇಲ್ಲವೆಂದ ಮಾತ್ರಕ್ಕೆ ವಿರೋಧ ಪರಿಹಾರ ವಾಗುವದಿಲ್ಲ. ಉದಾ ; ಪೃಥ್ವಿಯು ನೀರಿನಿಂದ ಭಿನ್ನವೆಂದು ಹೇಳುವ ಇಚ್ಛೆ ಇಲ್ಲ ದಿದ್ದರೂ ಅವುಗಳ ಭೇದ ಉಳಿದೇ ಉಳಿಯುತ್ತದೆ. (ಬ) ವಿರೋಧ ಅನಿತ್ಯ ಎಂದು ಹೇಳಲು ಬರುವದಿಲ್ಲ. ವಿರೋಧ ಅನಿತ್ಯವಾಗಿದ್ದರೆ, ತತ್ ತ್ವಮ್ ಭವಿಷ್ಯಸಿ— "ನೀನು ಬ್ರಹ್ಮನಾಗುವಿ" ಎಂದು ಪ್ರಯೋಗವಿರಬೇಕಾಗಿತ್ತು. (ಕ) ವಿರೋಧ ಮಿಥ್ಯಾ ಆಗಲಾರದು. ಏಕೆಂದರೆ ದುಃಖ ಮೊದಲಾದ ಧರ್ಮ ಗಳು ಸತ್ಯವೆಂದು ಪ್ರತ್ಯಕ್ಷದಿಂದ ನಿಶ್ಚಿತವಾಗಿದೆ.

ಹೀಗೆ ತತ್ವಮಸಿ ವಾಕ್ಯವು ಜೀವಬ್ರಹ್ಮರ ಐಕ್ಯಪ್ರತಿಪಾದಕವಲ್ಲ.

**ಯಜಮಾನಪ್ರಸ್ತರತ್ವಂ ಯಥಾ ನಾರ್ಥಃ ಶ್ರುತೇರ್ಭವೇತ್ ।**
**ಬ್ರಹ್ಮತ್ವಮಪಿ ಜೀವಸ್ಯ ಪ್ರತ್ಯಕ್ಷಾವಿಶೇಷತಃ ॥೩೬॥**

**ಅವತರಣಿಕೆ :** ತತ್ವಮಸಿ ಶ್ರುತಿಗೆ ಜೀವನು ಬ್ರಹ್ಮ ಎಂಬ ಅರ್ಥವಾಗಲಾರ ದೆಂದು ನಿರೂಪಿಸುತ್ತಾರೆ.

**ಅನುವಾದ :** ಯಜಮಾನಃ ಪ್ರಸ್ತರಃ ಎಂಬ ಶ್ರುತಿಗೆ ಯಜಮಾನನು ದರ್ಭದ ಮುಷ್ಟಿ ಎಂದು ಅರ್ಥ ಹೇಗೆ ಆಗುವದಿಲ್ಲವೋ ಅದರಂತೆ 'ತತ್ವಮಸಿ' ಎಂಬ ಶ್ರುತಿಗೆ ಜೀವನು ಬ್ರಹ್ಮ ಎಂಬ ಅರ್ಥ ಆಗುವದಿಲ್ಲ. ಏಕೆಂದರೆ ಯಜಮಾನನನ್ನು ಗ್ರಹಿಸುವ ಪ್ರತ್ಯಕ್ಷ ಮತ್ತು ಜೀವನನ್ನು ಗ್ರಹಿಸುವ ಪ್ರತ್ಯಕ್ಷಗಳಲ್ಲಿ

ಯಾವ ಭೇದ ಅಥವಾ ವ್ಯತ್ಯಾಸ (ವಿಶೇಷ) ಇಲ್ಲ.

**ವಿವರಣೆ :** 1) ಮಾಯಾವಾದಿಯು ಕೆಳಗಿನ ಆಕ್ಷೇಪಕ್ಕೆ ಈ ಶ್ಲೋಕ ಉತ್ತರ ರೂಪವಾಗಿದೆ.

**ಆಕ್ಷೇಪ :** ತತ್ವಮಸಿ ಶ್ರುತಿಯು ಅಭೇಧ ಪರ ಅರ್ಥವನ್ನು ಪ್ರತ್ಯಕ್ಷ ವಿರೋಧದ ಮೂಲಕ ಬಿಟ್ಟು ಬಿಡುವದು (ಪ್ರಚ್ಛಾವನಂ) ಉಚಿತವಲ್ಲ. ತದ್ವಿರುದ್ಧವಾಗಿ ನಾನು, ದುಃಖಿ ಎಂಬ ಪ್ರತ್ಯಕ್ಷಕ್ಕೇನೇ ಬಾಧ ಹೇಳಬೇಕು. ಏಕೆಂದರೆ ನಾನು ನಾನು ಎಂದು ಪ್ರತ್ಯಕ್ಷಸಿದ್ಧನಾದ ಜೀವನಿಗೆ ಬ್ರಹ್ಮನೊಡನೆ ಐಕ್ಯ ಹೇಳಲು ತತ್ವಮಸಿ ಶ್ರುತಿಯು, ಪ್ರತ್ಯಕ್ಷ, ಪ್ರವೃತ್ತವಾದ ನಂತರ ಪ್ರವೃತ್ತವಾಗಿದೆ. ಹೀಗಾಗಿ ಶ್ರುತಿ ಪ್ರಬಲ. ಮೇಲಾಗಿ ಶ್ರುತಿ ಯಾವಾಗಲೂ ಸ್ವಭಾವದಿಂದಲೇ ಪ್ರತ್ಯಕ್ಷಕ್ಕಿಂತ ಪ್ರಬಲ.

**ಆಕ್ಷೇಪ ಪರಿಹಾರ :** (1) ಯಜಮಾನಃ ಪ್ರಸ್ತರಃ ಎಂಬ ಶ್ರುತಿಯ ಅರ್ಥವು, ಯಜಮಾನನು ದರ್ಭದ ಮುಷ್ಟಿ ಎಂದು ಹೇಗೆ ಆಗುವದಿಲ್ಲವೋ ಅದರಂತೆ ತತ್ತ್ವಮಸಿ ಶ್ರುತಿಯ ಅರ್ಥ ಜೀವನು ಬ್ರಹ್ಮ (ಎಂದರೆ ಜೀವ ಬ್ರಹ್ಮರ ಐಕ್ಯ) ಸರ್ವಥಾ ಆಗಲಾರದು. ಏಕೆಂದರೆ ದರ್ಭಮುಷ್ಟಿ ಮತ್ತು ಜೀವನನ್ನು ಗ್ರಹಿಸುವ ಪ್ರತ್ಯಕ್ಷದಲ್ಲಿ ಎಳ್ಳಷ್ಟೂ ವ್ಯತ್ಯಾಸವಿಲ್ಲ.

2) ಈ ವಿಷಯದಲ್ಲಿ ಕೆಳಗಿನ ಎರಡು ಅನುಮಾನಗಳನ್ನು ಪ್ರಯೋಗಿಸಲಾಗುತ್ತದೆ. i) ಜೀವಬ್ರಹ್ಮರ ಐಕ್ಯವು ಬ್ರಹ್ಮ ಮೀಮಾಂಸಾ ಶಾಸ್ತ್ರದ ವಿಷಯವಲ್ಲ, ಏಕೆಂದರೆ ಮೀಮಾಂಸೆಯಿಂದ ಉಪಕಾರ ಪಡೆಯುವ ವೇದಕ್ಕೆ ಐಕ್ಯ ವಿಷಯವಾಗಿಲ್ಲ. ಆದ್ದರಿಂದ ವೇದಕ್ಕಿದ್ದ ವಿಷಯವೇ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೂ ವಿಷಯವಾಗುತ್ತದೆ. ವೇದ ಭೇದಪರವಾದ್ದರಿಂದ ಬ್ರಹ್ಮಸೂತ್ರವೂ ಜೀವಬ್ರಹ್ಮರ ಭೇದವನ್ನೇ ಪ್ರತಿಪಾದಿಸುತ್ತದೆ.

ii) ತತ್ತ್ವಮಸಿ ಮೊದಲಾದ ವಾಕ್ಯಗಳು ಅಪಾತತಃ ತೋರುವ ಐಕ್ಯಾರ್ಥವನ್ನು ಪ್ರತಿಪಾದಿಸುವದಿಲ್ಲ. ಏಕೆಂದರೆ ಆ ಐಕ್ಯಾರ್ಥ ಉಪಜೀವ್ಯ ಪ್ರತ್ಯಕ್ಷಕ್ಕೆ ವಿರುದ್ಧವಾಗಿದೆ. ಉದಾ : ಯಜಮಾನಃ ಪ್ರಸ್ತರಃ ಎಂದರೆ ಯಜಮಾನನು ದರ್ಭದ ಮುಷ್ಟಿ ಎಂಬ ಅರ್ಥವಲ್ಲ. ಆದರೆ ದರ್ಭದ ಮುಷ್ಟಿ ಯಜಮಾನನ ಕಾರ್ಯ ಮಾಡುತ್ತದೆ ಎಂಬ ಲಾಕ್ಷಣಿಕ ಅರ್ಥ ತೆಗೆದುಕೊಳ್ಳಬೇಕು.

**ಟೀಪು :** ಆದರೆ ಶ್ರುತಿಗೆ ಸಾಮಾನ್ಯ ಪ್ರತ್ಯಕ್ಷದ ವಿರೋಧವಿದ್ದರೆ ಶ್ರುತ್ಯರ್ಥ ಬಿಡಕೂಡದು. ಉದಾಹರಣಾರ್ಥವಾಗಿ ಪರಮಾತ್ಮನು ದೋಷರಹಿತ ಎಂದು ಶ್ರುತಿ ಘೋಷಿಸುತ್ತದೆ, ಆದರೆ ರಾಮಕೃಷ್ಣಾದ್ಯವತಾರಗಳಲ್ಲಿ ಭಗವಂತನು ಪ್ರತ್ಯಕ್ಷ ಶೋಕಿಸಿದ್ದು ಮೋಹಗೊಂಡದ್ದು ಕಂಡು ಬಂದರೂ ಆ ಪ್ರತ್ಯಕ್ಷ ಉಪಜೀವ್ಯವಲ್ಲ. ಏಕೆಂದರೆ ಭಗವಂತನ ಸ್ವರೂಪವನ್ನು ನಿರ್ಧರಿಸುವದು ಶ್ರುತಿ.

ಆದ್ದರಿಂದ ಈ ಸಾಮಾನ್ಯ ಪ್ರತ್ಯಕ್ಷ ವಿರೋಧವನ್ನು ಕಡೆಗಣಿಸಿ, ಭಗವಂತನು ದೋಷರಹಿತ ಎಂಬ ಅರ್ಥವನ್ನೇ ಪ್ರತಿಪಾದಿಸುತ್ತೇವೆ.

ಉಪಜೀವ್ಯ–ಉಪಜೀವಕಗಳಲ್ಲಿ ಉಪಜೀವ್ಯ ಪ್ರಬಲ. 'ಯಜಮಾನಃ ಪ್ರಸ್ತರಃ' ತತ್ತ್ವಮಸಿ ಎಂಬಲ್ಲಿಯು ಪ್ರತ್ಯಕ್ಷ ಉಪಜೀವ್ಯವಾದ್ದರಿಂದ ಅದು ಪ್ರಬಲ. ಹೀಗಾಗಿ ಶ್ರುತಿಗೆ ಗೌಣಾರ್ಥ ಮಾಡುತ್ತೇವೆ. ರಾಮಕೃಷ್ಣಾದ್ಯ ತಾರಗಳಲ್ಲಿರುವ ಪ್ರತ್ಯಕ್ಷವು ಉಪಜೀವ್ಯವಲ್ಲ. ಹೀಗಾಗಿ ಇಲ್ಲಿ ಶ್ರುತ್ಯರ್ಥ ಪ್ರಬಲ. ಆದ್ದರಿಂದ ಭಗವಂತನು ನಿರ್ದೋಷನೆಂದೂ ಅವತಾರಗಳಲ್ಲಿ ಕಂಡು ಬರುವ ಶೋಕ ಮೋಹಾದಿಗಳು ಕೇವಲ ನಟನೆಯೆಂದೂ ಹೇಳುತ್ತೇವೆ.

**ಸಾರ್ವಜ್ಞಾದಿಗುಣಂ ಜೀವಾದ್ಭಿನ್ನಂ ಜ್ಞಾಪಯತಿ ಶ್ರುತಿಃ ।**
**ಈಶಂ ತಾಮುಪಜೀವ್ಯೈವ ವರ್ತತೇ ಹಿ ಐಕ್ಯವಾದಿನೀ ॥೩೭॥**
**ಉಪಜೀವ್ಯವಿರೋಧೇನ ನಾಸ್ಯಾಸ್ತನ್ಮಾನತಾ ಭವೇತ್ ॥೩೮॥**

**ಅವತರಣಿಕೆ :** ಇಲ್ಲಿಯ ವರೆಗೆ ಜೀವನನ್ನು ಅನುವಾದ ಮಾಡಿ ಅವನಿಗೆ ಬ್ರಹ್ಮನೊಡನೆ ಆಪಾತತಃ ಐಕ್ಯಹೇಳುವ (ತತ್ತ್ವಮಸಿ) ಮುಂ. ಶ್ರುತ್ಯರ್ಥ ವಿಚಾರ ಮಾಡಲಾಯಿತು. ಈಗ ಬ್ರಹ್ಮ ತತ್ತ್ವವನ್ನು ಅನುವಾದ ಮಾಡಿ ಬ್ರಹ್ಮನಿಗೆ ಜೀವನೊಡನೆ ಆಪಾತತಃ ಐಕ್ಯ ಪ್ರತಿಪಾದಿಸುವ "ತದ್ಯೋಽಹಂ ಸೋಽಸೌ, ಯೋಽಸೌ ಸೋಽಹಂ," ಮೊದಲಾದ ಶ್ರುತಿಗಳ ಅರ್ಥಪರಾಮರ್ಶ ಮಾಡುತ್ತಾರೆ. ಇಲ್ಲಿಯೂ ಉಪಜೀವ್ಯ ಪ್ರತ್ಯಕ್ಷ ವಿರೋಧ ಬರುವದರಿಂದ ಬ್ರಹ್ಮನಿಗೆ ಜೀವೈಕ್ಯವನ್ನು ಶ್ರುತಿಗಳು ಹೇಳುವದಿಲ್ಲ ಎಂದು ತೀರ್ಮಾನಿಸುತ್ತಾರೆ.

**ಅನುವಾದ :** 'ಯಃಸರ್ವಜ್ಞಃ ಸರ್ವವಿತ್' ಎಂಬ ಶ್ರುತಿಯು ಭಗವಂತನು ಸರ್ವಜ್ಞತ್ವಾದಿ ಗುಣಪೂರ್ಣನೂ ಅಂತೆಯೇ ಜೀವನಿಂದ ಭಿನ್ನನೂ ಎಂದು ತಿಳಿಸುತ್ತದೆ. ಆ ಶ್ರುತಿಯನ್ನು ಉಪಜೀವಿಸಿಯೇ ಆಪಾತತಃ ಐಕ್ಯ ಬೋಧಕ 'ತದ್ಯೋಽಹಂ' ಶ್ರುತಿ ಇದೆ. ಉಪಜೀವ್ಯಶ್ರುತಿಯ ವಿರೋಧ ಬರುವದರಿಂದ 'ತದ್ಯೋಽಹಂ' ಶ್ರುತಿಗೆ ಐಕ್ಯಾರ್ಥದಲ್ಲಿ ಪ್ರಾಮಾಣ್ಯವಿಲ್ಲ.(ತನ್ಮಾನತಾ, ತಸ್ಮಿನ್ ಅರ್ಥೇ ಪ್ರಾಮಾಣ್ಯಂ ನ ಭವೇತ್).

**ವಿವರಣೆ :** ಇಲ್ಲಿ ಬ್ರಹ್ಮನನ್ನು ಅನುವಾದ ಮಾಡಿ ಅವನಿಗೆ ಜೀವನೊಡನೆ ಆಪಾತತಃ ಐಕ್ಯ ಹೇಳುವ ಶ್ರುತಿಗಳನ್ನು ವಿಚಾರಿಸುತ್ತಾರೆ. ಯಃ ಅಸೌ ಎಂಬಲ್ಲಿ ಮೊದಲು ಪರಬ್ರಹ್ಮನ ನಿರ್ದೇಶವಿದೆ. ಪರಬ್ರಹ್ಮನಾದರೋ ಯಃ ಸರ್ವಜ್ಞಃ ಎಂಬ ಶ್ರುತಿಯಿಂದ ಸರ್ವಜ್ಞನೆಂದು ಸಿದ್ಧನಾಗುತ್ತಾನೆ. ಆದ್ದರಿಂದ ಈಶ್ವರನಿಗೆ ಸರ್ವಜ್ಞತ್ವವನ್ನು ನಿರೂಪಿಸುವ ಶ್ರುತಿಯೇ ಇಲ್ಲಿ ಉಪಜೀವ್ಯ. ಆ ಶ್ರುತಿಯಾದರೋ ಸರ್ವಜ್ಞನಾದ ಭಗವಂತನು ಅಲ್ಪಜ್ಞನಾದ ಜೀವನಿಂದ ಭಿನ್ನನೆಂದೇ

ತಿಳಿಸುತ್ತದೆ. ಆದ್ದರಿಂದ ಅದಕ್ಕೆ ವಿರುದ್ಧವಾಗಿ ಆ ಭಗವಂತನೆ' ನಾನು ಅಥವಾ ಜೀವ ಎಂದು ಶ್ರುತಿಯು ಅರ್ಥ ಸರ್ವಥಾ ಅಲ್ಲ.

**ಟೀಕು :** ಈ ಶ್ರುತಿಗಳಲ್ಲಿ ಬಂದ 'ಅಹಂ' ಶಬ್ದಕ್ಕೆ 'ನಾನು' ಎಂಬ ಅರ್ಥವಲ್ಲ. ನನ್ನ ಅಂತರ್ಯಾಮಿ ಅಥವಾ ಅಹೇಯನಾದ (ತ್ಯಾಜ್ಯನಲ್ಲದ) ಪರಮಾತ್ಮಾ ಎಂದು ಅರ್ಥ. ಆದ್ದರಿಂದ ಮೇಲಿನ ಶ್ರುತಿಗಳ ತಾತ್ಪರ್ಯವೆಂದರೆ ನನ್ನಲ್ಲಿ ಅಂತರ್ಯಾಮಿಯಾದ ಭಗವಂತನೇ (ಯೋಽಹಂ) ಸೂರ್ಯನಲ್ಲಿ ಅಂತರ್ಯಾಮಿ. ಸೂರ್ಯನಲ್ಲಿ ಅಂತರ್ಯಾಮಿಯಾದ ಭಗವಂತನೇ(ಯೋಽಸೌ)ನನ್ನಲ್ಲಿ ಅಂತರ್ಯಾಮಿಯಾಗಿದ್ದಾನೆ. (ಸೋಽಹಂ.) ಸ್ಥಾನ ಭೇದದಿಂದ ಅಂತರ್ಯಾಮಿಯಲ್ಲಿ ಭೇದವಿಲ್ಲ.

**ಸ್ವಾತಂತ್ರ್ಯೇ ಚ ವಿಶಿಷ್ಟತ್ವೇ ಸ್ಥಾನಮತ್ಯೈಕ್ಯಯೋರಪಿ ||೩೮||**
**ಸಾದೃಶ್ಯೇ ಚೈಕ್ಯವಾಕ್ ಸಮ್ಯಕ್ ಸಾವಕಾಶಾ ಯಥೇಷ್ಟತಃ ||೩೯ಅ||**

**ಅವತರಣಿಕೆ :** ಭೇದ ಶ್ರುತಿಗಳು ಅದ್ವೈತ ಶ್ರುತಿಗಳಿಗಿಂತ ಪ್ರಬಲವಾದರೆ ಅದ್ವೈತ ಶ್ರುತಿಗಳ ಗತಿ ಏನು ಎಂಬುದನ್ನು ಇಲ್ಲಿ ವಿವರಿಸುತ್ತಾರೆ.

**ಅನುವಾದ :** ಸ್ವಾತಂತ್ರ್ಯ, ವಿಶಿಷ್ಟತ್ವ, ಸ್ಥಾನೈಕ್ಯ, ಮತ್ಯೈಕ್ಯ, ಸಾದೃಶ್ಯ ಎಂಬ ನಿಮಿತ್ತಗಳಿಂದ ಐಕ್ಯವಚನವು ಯಥಾಯೋಗ್ಯವಾಗಿ (ಯಥೇಷ್ಟತಃ ಯಥಾ ಸಂಭವಂ) ಬೇರೆ ಅರ್ಥ ಹೇಳಲು ಅವಕಾಶವುಳ್ಳದ್ದಾಗಿದೆ.

**ವಿವರಣೆ :** ಈ ಮೊದಲು ನಿರೂಪಿಸಿದಂತೆ ಭೇದ ಶ್ರುತಿಗಳು ಅಭೇದ ಶ್ರುತಿಗಿಂತ ಪ್ರಬಲ; ಐಕ್ಯಬೋಧಕ ಶ್ರುತಿಗಳಿಗೆ ಸಂದರ್ಭಾನುಸಾರವಾಗಿ ಕೆಳಗಿನ ಅರ್ಥ ಹೇಳಬಹುದು.

i) **ಸ್ವಾತಂತ್ರ್ಯ :** ಉದಾ : 'ಅಯಂ ಗ್ರಾಮಃ ಸ್ವಯಮೇವ' ಅದನೇ ಸ್ವತಃ ಈ ಹಳ್ಳಿ ಎಂದರೆ ಅವನ ಅಧೀನದಲ್ಲಿ ಹಳ್ಳಿ ಇದೆ ಎಂದು ಅರ್ಥ.

ii) **ವಿಶಿಷ್ಟತ್ವ** ಹಳ್ಳಿಯಲ್ಲಿ ಬ್ರಾಹ್ಮಣನೆಂದರೆ ಇವನೇ, ಎಂದರೆ ಇವನು ವಿದ್ಯಾದಿವಿಶಿಷ್ಟ, ಸದಾಚಾರಿ ಬ್ರಾಹ್ಮಣ ಎಂದು ಅರ್ಥ.

iii) **ಸ್ಥಾನೈಕ್ಯ :** 'ಸಾಯಂ ಗೋಷ್ಠೇ ಗಾವಃ ಏಕೀಭವಂತಿ' ಸಾಯಂಕಾಲದಲ್ಲಿ ಆಕಳುಗಳು ದನದ ಮನೆಯಲ್ಲಿ ಒಂದೆಡೆ ಸೇರುತ್ತವೆ.

iv) **ಮತ್ಯೈಕ್ಯ :** ಹಿಂದೆ ಭಿನ್ನಾಭಿಪ್ರಾಯವುಳ್ಳ ಬ್ರಾಹ್ಮಣರು ಈಗ ಒಂದಾಗಿದ್ದಾರೆ (ಎಂದರೆ ಒಂದೇ ಅಭಿಪ್ರಾಯವುಳ್ಳವರಾಗಿದ್ದಾರೆ.

v) **ಸಾದೃಶ್ಯ :** ಅಗ್ನಿರ್ಮಾಣವಕ : ಬ್ರಹ್ಮಚಾರಿಯು (ಮಾಣವಕಃ) ಅಗ್ನಿಯಂತೆ ತೇಜಃಪುಂಜನಾಗಿದ್ದಾನೆ.

**ಅವಕಾಶೋಜ್ಝಿತಾ ಭೇದಶ್ರುತಿರ್ನಾತಿಬಲಾ ಕಥಂ ||೩೯||**
**ಅಜ್ಞಾನಾಸಂಭವಾದೇವ ಮಿಥ್ಯಾಭೇದೋ ನಿರಾಕೃತಃ ||೪೦ಅ||**

**ಅವತರಣಿಕೆ :** ಭೇದಶ್ರುತಿ ನಿರವಕಾಶವಾದ್ದರಿಂದ ಪ್ರಬಲ ಎಂದು ನಿರೂಪಿಸುತ್ತಾರೆ.

**ಅನುವಾದ :** ಭೇದಶ್ರುತಿಗೆ ಬೇರೆ ಅರ್ಥ ಹೇಳಲು ಅವಕಾಶವಿಲ್ಲ. ಏಂದರೆ ಅದು ನಿರವಕಾಶ. ಆದ್ದರಿಂದ ಅದು ಅಭೇದ ಶ್ರುತಿಗಿಂತ ಪ್ರಬಲ ಹೇಗೆ ಆಗಲಾರದು ? (ಭೇದ ಶ್ರುತಿಯೇ ಪ್ರಬಲ ಎಂದು ಭಾವ.) ಅಜ್ಞಾನವೇ ಕೂಡುವದಿಲ್ಲವಾದ್ದರಿಂದ ಭೇದವು ಸುಳ್ಳು ಎಂಬುದು ನಿರಾಕೃತವಾಯಿತು.

**ವಿವರಣೆ :** 1) ಐಕ್ಯಕ್ಕೆ ಸ್ವಾತಂತ್ರ್ಯ–ವಿಶಿಷ್ಟತ್ವ–ಸ್ಥಾನೈಕ್ಯ ಮುಂ. ಅರ್ಥ ಹೇಳಲು ಬರುವಂತೆ ಭೇದಶ್ರುತಿಗೆ ಜೀವೇಶ್ವರರ ಭೇದ ಬಿಟ್ಟು ಬೇರೆ ಅರ್ಥ ಹೇಳಲು ಬರುವದೇ ಇಲ್ಲ. ಆದ್ದರಿಂದ ಭೇದ ಶ್ರುತಿ ನಿರವಕಾಶ, ಅಂತೆಯೇ ಪ್ರಬಲ.

(ಅ) ಭೇದ ಶ್ರುತಿ ಮಿಥ್ಯಾಭೇದವನ್ನು ಪ್ರತಿಪಾದಿಸುವದಾಗಿ ಹೇಳಿದರೆ ಅದು ಸಾವಕಾಶವಾಗಬಹುದು ಎಂದು ಶಂಕಿಸುವದು ಉಚಿತವಲ್ಲ. ಮಿಥ್ಯಾಭೇದ ಎಂದರೇನು ? i) ಭೇದಸುಳ್ಳು ಎಂದೋ ii) ಭೇದ ಅನಿರ್ವಚನೀಯವೆಂದೋ ?

i) ಭೇದ ಸುಳ್ಳು ಅಲ್ಲ. ಅದು ಸತ್ಯವೆಂದೇ ನಾವು ಒಪ್ಪಿದ್ದೇವೆ.

ii) ನಿನ್ನ ಪ್ರಕಾರ ಅನಿರ್ವಚನೀಯತ್ವವು ಅಜ್ಞಾನದ ಕಾರ್ಯ ಹಾಗೂ ಅಜ್ಞಾನದಿಂದ ಭಿನ್ನ. ಆದರೆ ಅಜ್ಞಾನವೇ ಮಾಯಾವಾದದಲ್ಲಿ ಕೂಡುವದಿಲ್ಲವೆಂದು ಶ್ಲೋಕ 29–32ರಲ್ಲಿ ಸಾಧಿಸಲಾಗಿದೆ. ಆದ್ದರಿಂದ ಅಜ್ಞಾನ ಕಾರ್ಯವಾದ ಅನಿರ್ವಚನೀಯತ್ವ ಸಿದ್ಧಿಸುವದಿಲ್ಲ.

ಹೀಗೆ ಭೇದ ಶ್ರುತಿಗೆ ಮಿಥ್ಯಾಭೇದ ಹೇಳುವದು ಅಸಂಭಾವಿತವಾದ್ದರಿಂದ ಭೇದಶ್ರುತಿಗಳಿಗೆ "ಮಿಥ್ಯಾಭೇದ" ಪರ ಅರ್ಥ ಕಲ್ಪಿಸಲು ಬರುವದಿಲ್ಲ.

(ಬ) ಇನ್ನು ಭೇದಶ್ರುತಿಗಳು ಅನುವಾದಕವೆಂದು ಹೇಳಲಾಗದು, ಭೇದ ಶ್ರುತಿ ಅನುವಾದಕವಾಗಬೇಕಾದರೆ ಅದು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧವಾದುದನ್ನು ಅನುವಾದ ಮಾಡಬೇಕು. ಆದರೆ ಬ್ರಹ್ಮನು ಪ್ರತ್ಯಕ್ಷ ಅನುಮಾನಾದಿಗಳಿಂದ ತಿಳಿಯಲ್ಪಡುವದಿಲ್ಲ. ಅವನು ಆಗಮೈಕವೇದ್ಯ. ಹೀಗಾಗಿ ಶ್ರುತಿ ಅನುವಾದಕ ಎಂಬುದು ಕೂಡುವದಿಲ್ಲ.

(ಕ) ಇನ್ನು ಭೇದಶ್ರುತಿಗಳು ಅನುವಾದಕವೆಂದರೆ, ಪ್ರಮಾಣ ಪ್ರಮಿತವಾದುದನ್ನು ಅನುವಾದ ಮಾಡುವವೋ ಅಥವಾ ಭ್ರಾಂತಿಸಿದ್ಧವಾದುದನ್ನು ಅನುವಾದ ಮಾಡುವವೋ ? ಪ್ರಮಾಣಪ್ರಮಿತವೆಂದರೆ, ಬೇರೆ ಶ್ರುತಿಯಿಂದ ಅದ್ವೈತ ಶ್ರುತಿಗಳಿಗೆ ಬಾಧ ಬರುತ್ತದೆ. ಮಾಯಾವಾದದಲ್ಲಿ ಅಜ್ಞಾನವೇ ಕೂಡುವದಿಲ್ಲವಾದ್ದರಿಂದ ಅಜ್ಞಾನ ಮೂಲಕ ಉಂಟಾಗುವ ಭ್ರಮವೂ ಸಿದ್ಧಿಸುವದಿಲ್ಲ. ಆದ್ದರಿಂದ ಭ್ರಾಂತಿಸಿದ್ಧವಾದುದರ ಅನುವಾದ ಕೂಡುವದಿಲ್ಲ.

(ಡ) ಅಪೂರ್ವತೆ ಅಥವಾ ನಾವೀನ್ಯತೆ (novelty) ಭೇದ ಶ್ರುತಿಗಳಿಗೆ ಇಲ್ಲ ವಾದ್ದರಿಂದ ಅವು ದುರ್ಬಲ ಎಂಬ ಹೇಳಿಕೆ ಅಯುಕ್ತ. ಏಕೆಂದರೆ ಭೇದವು ಬೇರೆ ಪ್ರಮಾಣಗಳಿಂದ ತಿಳಿಯುವದೇ ಇಲ್ಲ ಎಂದು ಮುಂದೆ ಹೇಳುವೆವು. (ಪ್ರಮಾಣಾಂತರಾಪ್ರಾಪ್ತತ್ವಂ).

**ಅತೋ ಯಥಾರ್ಥಬಂಧಸ್ಯ ವಿನಾ ವಿಷ್ಣುಪ್ರಸಾದತಃ ||೪೦||**
**ಅನಿವೃತ್ತೇಸ್ತದರ್ಥಂ ಹಿ ಜಿಜ್ಞಾಸಾತ್ರ ವಿಧೀಯತೇ**
**ಯಥಾ ದೃಷ್ಟ್ವಾ ಪ್ರಸನ್ನಃ ಸನ್ ರಾಜಾ ಬಂಧಾಪನೋದಕೃತ್ ||೪೧||**
**ಏವಂ ದೃಷ್ಟಃ ಸ ಭಗವಾನ್ ಕುರ್ಯಾತ್ ಬಂಧವಿಭೇದನಮ್ ||೪೨||**

**ಅವತರಣಿಕೆ :** ಆಚಾರ್ಯರು ತಾವು ಹೇಳಿದ ಸೂತ್ರಾರ್ಥದ ಉಪಸಂಹಾರ ಮಾಡುತ್ತಾರೆ.

**ಅನುವಾದ :** ಆದ್ದರಿಂದ ಸತ್ಯವಾದ ಸಂಸಾರಬಂಧವು ವಿಷ್ಣುವಿನ ಪ್ರಸಾದವಿಲ್ಲದೆ ನಿವೃತ್ತವಾಗುವದಿಲ್ಲವಾದ್ದರಿಂದ ವಿಷ್ಣುವಿನ ಪ್ರಸಾದಕ್ಕೋಸ್ಕರ (ತದರ್ಥಂ)ಪ್ರಥಮ ಸೂತ್ರದಲ್ಲಿ (ಅತ್ರ) ಬ್ರಹ್ಮವಿಷಯಕ ವಿಚಾರವು (ಜಿಜ್ಞಾಸಾ) ವಿಧಿಸಲ್ಪಟ್ಟಿದೆ.

ಒಳ್ಳೆಯ ರಾಜನು ಕೈದಿಯ ಪ್ರೇಮ ಪೂರ್ಣ ದೃಷ್ಟಿಯಿಂದ ಪ್ರಸನ್ನನಾಗಿ ಕೈದಿಯ ಬೇಡಿಯನ್ನು ಬಿಡಿಸುವಂತೆ ಸಂಸಾರ ಜೀವನಿಂದ ಭಕ್ತಿಪೂರ್ವಕ ನೋಡ ಲ್ಪಟ್ಟ ಅಥವಾ ಸಂಸಾರಜೀವನಿಂದ ಪ್ರತ್ಯಕ್ಷೀಕರಿಸಿಕೊಳ್ಳಲ್ಪಟ್ಟ ಭಗವಂತನು ಪ್ರಸನ್ನನಾಗಿ (ಅನಾದಿಯಾದ) ಸಂಸಾರಬಂಧವನ್ನು ಬಿಡಿಸುತ್ತಾನೆ.

**ವಿವರಣೆ :** (1) 16ನೇ ಶ್ಲೋಕದಿಂದ (ಇತ್ಯುಕ್ತೇಃ ಬಂಧ ಮಿಥ್ಯಾತ್ವಂ) ಇಲ್ಲಿಯ ವರೆಗೆ ಪರರ ಅಪವ್ಯಾಖ್ಯಾನವನ್ನು ನಿರಾಕರಿಸಲಾಯಿತು. ತಮ್ಮ ವ್ಯಾಖ್ಯಾನವು ಶಿಷ್ಯರ ಮನಸ್ಸಿನಲ್ಲಿ ಸುಧೃಢವಾಗಿ ನಿಲ್ಲುವದಕ್ಕೋಸ್ಕರ ಪರರ ವ್ಯಾಖ್ಯಾನವನ್ನು ನಿರಾಕರಿಸಲಾಗಿದೆ. ಆದ್ದರಿಂದ ಪರರ ಆಪಾತತಃ ರಮಣೀಯವಾದ ಅಪಾರ್ಥ ವನ್ನು ನಿರಾಕರಿಸುವದು ಸುಸಂಗತವೇ.

(2) ಬಂಧ ಮಿಥ್ಯಾತ್ವದ ನಿರಾಕರಣೆ ಹಾಗೂ ಬಂಧ ಸತ್ಯತ್ವದ ಸಮರ್ಥನೆ ಕೂಡ ಸೂತ್ರಗತವಾದ 'ಅತಃ' ಶಬ್ದದ ಅರ್ಥವೇ. ವಿಚಾರದಿಂದ ಹುಟ್ಟುವ ಜ್ಞಾನದಿಂದ ಉತ್ಪನ್ನವಾಗುವ ಭಗವಂತನ ಪ್ರಸಾದದಿಂದಲೇ ಜೀವನು ಮುಕ್ತನಾಗ ತ್ತಾನೆ ಎಂಬುದು ಅತಃ ಶಬ್ದದ 1ನೇ ಅರ್ಥ. ಆದರೆ : "ಮೋಕ್ಷಕ್ಕೆ ಪ್ರಸಾದು ಬೇಕಿಲ್ಲ"ಎಂದು ಮಾಯಾವಾದಿ ಕೆಳಗಿನಂತೆ ಆಕ್ಷೇಪಿಸುತ್ತಾನೆ. ಮೋಕ್ಷವೆಂದರೆ ಬ್ರಹ್ಮ ಜ್ಞಾನದಿಂದಾಗುವ ಬಂಧ ನಿವೃತ್ತಿ. ಬಂಧವಾದರೋ ಸುಳ್ಳು. ಏಕೆಂದರೆ ಜ್ಞಾನದಿಂದ ನಿವೃತ್ತವಾಗುವದು ಅಜ್ಞಾನ ಅಥವಾ ಅಜ್ಞಾನದ ಕಾರ್ಯ ಮಾತ್ರ. ಸತ್ಯವಾದುದು ನಿವೃತ್ತವಾಗುವದಿಲ್ಲ. ಆದ್ದರಿಂದ ಬ್ರಹ್ಮಜ್ಞಾನದಿಂದ ನಿವೃತ್ತವಾಗುವ ಬಂಧವೂ

ಸುಳ್ಳು. ಈ ಮಿಥ್ಯಾಭೂತ ಬಂಧ ನಿವೃತ್ತಿಗಾಗಿ ಭಗವಂತನ ಪ್ರಸಾದ ಬೇಕಿಲ್ಲ ಯಾರ ಅಜ್ಞಾನದಿಂದ ಬಂಧವು ಕಲ್ಪಿತವಾಗಿದೆಯೋ ಆ ಬ್ರಹ್ಮನೆ ತತ್ವಜ್ಞಾ ದಿಂದಲೇ ಅಜ್ಞಾನ ಹೊರಟು ಹೋಗಿ ಬಂಧ ನಿವೃತ್ತವಾಗುತ್ತದೆ. ಅದ್ದರಿಂ ಭಗವಂತನ ಪ್ರಸಾದಕ್ಕಾಗಿ ಬ್ರಹ್ಮವಿಷಯಕ ವಿಚಾರ ಮಾಡಬೇಕಾಗಿಲ್ಲ– **ಎಂಬ ಆಕ್ಷೇಪ ಬಂದರೆ** ಅದನ್ನು ಪರಿಹರಿಸಲು ಬಂಧ ಮಿಥ್ಯಾತ್ವವನ್ನು ನಿರಾಕರಿ ಬಂಧ ಸತ್ಯ ಎಂದು ನಿರೂಪಿಸಿದ ಅತಃ ಶಬ್ದದ ಎರಡನೇ ಅರ್ಥವು ಅತ್ಯಂ ಸುಸಂಗತವಾಗಿದೆ.

ಬಂಧವು ಸತ್ಯವಾದರೆ ಅದು ನಿವೃತ್ತಿಹೊಂದಲಾರದು ಎಂಬ ಆಕ್ಷೇಪವನ್ನು ದೃಷ್ಟಾಂತದಿಂದ ಪರಿಹರಿಸುತ್ತಾರೆ. ಒಳ್ಳೆಯ ರಾಜನ ಅನುಗ್ರಹದಿಂದ ಕೈದಿಯ ಸತ್ಯವಾದ ಬೇಡಿ ನಿವೃತ್ತವಾಗುವಂತೆ ಭಗವಂತನ ಪ್ರಸಾದದಿಂದ ಸತ್ಯಭೂತವಾದ ಅನಾದಿ ಸಂಸಾರ ಬಂಧ ನಿವೃತ್ತವಾಗುತ್ತದೆ.



### ಅತಃ ಶಬ್ದದ ಮೂರನೆಯ ಅರ್ಥ (ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ)

(ಶಬ್ದವು ಇಷ್ಟವಾದ ಸಿದ್ಧರೂಪ ವಸ್ತು–ಬೋಧಕವಾದ್ದರಿಂದ.)

ಇಲ್ಲಿಯ ವರೆಗೆ "ಅತಃ" ಶಬ್ದವನ್ನು ಮೀಮಾಂಸಾಶಾಸ್ತ್ರದ (ಬ್ರಹ್ಮಸೂತ್ರ ಗಳ) ಪ್ರಯೋಜನವಾದ ಮೋಕ್ಷಫಲ ಸಮರ್ಥನೆಗಾಗಿ ಎರಡು ರೀತಿಯಿಂದ ವ್ಯಾಖ್ಯಾನ ಮಾಡಲಾಗಿದೆ. ಇನ್ನು ಮುಂದೆ ಅದೇ ಅತಃ ಶಬ್ದವನ್ನು, ಆಕ್ಷೇಪ ಪರಿಹರಿಸುತ್ತ ಶಾಸ್ತ್ರವಿಷಯು ಬ್ರಹ್ಮಪರತಯಾ ಬೇರೆ ಮೂರು ರೀತಿಯಿಂದ ವ್ಯಾಖ್ಯಾನ ಮಾಡುತ್ತಾರೆ.

**ಆಕ್ಷೇಪ ಪರಿಹಾರ :** ಶಬ್ದವು ಸಿದ್ಧಾರ್ಥಬೋಧಕವಾದರೆ ಮಾತ್ರ ಶಬ್ದಾತ್ಮಕ ವಾದ ವೇದವು ಸಿದ್ಧರೂಪ ಬ್ರಹ್ಮನನ್ನು ಬೋಧಿಸಲು ಶಕ್ಯ. ಆದರೆ ಅದು ಕಾರ್ಯಪರವಿದ್ದು ಕಾರ್ಯ ಮತ್ತು ಅದಕ್ಕೆ ಸಂಬಂಧಿಸಿದುದನ್ನು ಮಾತ್ರ ಬೋಧಿಸುವದರಿಂದ ಸಿದ್ಧರೂಪ ಬ್ರಹ್ಮನು ಶಬ್ದಾತ್ಮಕ ವೇದದಿಂದ ಪ್ರತಿಪಾದ್ಯ ನಾಗಲಾರನು ಎಂಬ ಕಾರ್ಯತಾವಾದವನ್ನು ನಿರಾಕರಿಸುತ್ತಾರೆ. ಶಬ್ದವು ಯಾವಾ ಗಲೂ ಕಾರ್ಯಪರವೆಂಬ ನಿಯಮವಿಲ್ಲ. ಅದು ಇಷ್ಟವಾದ ಸಿದ್ಧವಸ್ತುವನ್ನೂ ಬೋಧಿಸುವದರಿಂದ ವೇದವು ಇಷ್ಟವಾದ ಸಿದ್ಧರೂಪ ವಸ್ತು ಪರತಯಾ ಆಗಿದೆ. (ಇಷ್ಟೇಸಿದ್ಧ ವಿಶೇಷೇ ವ್ಯುತ್ಪತ್ತಿಃ)ಆದ್ದರಿಂದ ವೇದವು ಎಲ್ಲರಿಗೂ ಇಷ್ಟವಾದ ಮೋಕ್ಷ ಸಾಧನನಾದ ಸಿದ್ಧರೂಪ ಪರಬ್ರಹ್ಮನನ್ನು (ನಾರಾಯಣನನ್ನು) ಪ್ರತಿಪಾದಿಸುತ್ತದೆ. ಈ ರೀತಿ ಅತಃ ಶಬ್ದದ ಮೂರನೆಯ ಅರ್ಥವೆಂದರೆ "ಶಬ್ದಸ್ಯ, ವೇದಸ್ಯ. ಸಿದ್ಧ ರೂಪವಸ್ತುಪದತ್ವಾತ್, ಸಿದ್ಧಾರ್ಥಪ್ರಮಾಪಕತ್ವಾತ್"— ಶಬ್ದ ಅಥವಾ ಶಬ್ದಾತ್ಮಕ ವೇದವು ಇಷ್ಟವಾದ ಸಿದ್ಧರೂಪ ವಸ್ತು (ಬ್ರಹ್ಮ)ಬೋಧಕವಾದ್ದರಿಂದ–

**ಕಾರ್ಯತಾ ಚ ನ ಕಾಚಿತ್ ಸ್ಯಾದಿಷ್ಟಸಾಧನತಾಂ ವಿನಾ ||೪೨||**
**ಕಾರ್ಯಂ ನ ಹಿ ಕ್ರಿಯಾವ್ಯಾಪ್ಯಂ ನಿಷಿದ್ಧಸ್ಯ ಸಮತ್ವತಃ**
**ನ ಭವಿಷ್ಯತ್ಕ್ರಿಯಾ ಕಾರ್ಯಂ ಪ್ರಸಕ್ತೇರಿತಿ ಹ್ಯಪಿ ||೪೩||**
**ಕಾರ್ಯಂ ಸ್ಯಾನ್ನೈವ ಚಾಕರ್ತುಂ ಅಶಕ್ಯಂ ಕಾರ್ಯಮಿಷ್ಯತೇ**
**ಸಾವಸ್ಯಾದೇವ ನಿಷಿದ್ಧಸ್ಯ ತದಿಷ್ಟಂ ಸಾಧನಂ ತಥಾ ||೪೪||**

**ಅವತರಣಿಕೆ : ಕಾರ್ಯತಾವಾದ**– ತಾವು ಜೈಮಿನಿಯ ಮತದವರೆಂದು ತಿಳಿದು ಕೊಳ್ಳುವ ಪ್ರಭಾಕರ ಮೊದಲಾದವರು (ಜೈಮಿನೀಯಾಃ– ಜೈಮಿನೀಯತ್ವಂ ಆತ್ಮನಃ ಮನ್ಯಮಾನಾಃ —ಪರಿಮಳ.) ಹೀಗೆ ಹೇಳುತ್ತಾರೆ. ಪದಗಳು ಭಿನ್ನಾರ್ಥ ವಿದ್ದರೂ ಪದಸಮೂಹವಾದ ವಾಕ್ಯದ ಅರ್ಥ ಒಂದೇ. ಅದು ಕಾರ್ಯತಾಪರ, ವಿಧಿ-ಅರ್ಥವಾದ-ಮಂತ್ರಾತ್ಮಕವಾದ ಸಮಸ್ತವೇದವು ಕಾರ್ಯನಿಷ್ಠವಾಗಿದೆ ವಸ್ತುನಿಷ್ಠವಲ್ಲ. ಹೀಗಾಗಿ ಸಮಸ್ತ ವೇದವು ಸಿದ್ಧರೂಪ ಬ್ರಹ್ಮನನ್ನು ಬೋಧಿ ಸುವದಿಲ್ಲ. ಅದು ಸ್ವರ್ಗಾದಿಜನಕ ಅಪೂರ್ವರೂಪ ಕಾರ್ಯಪರವೆಂದು ಇವರ ವಾದ. ಇಲ್ಲಿ 'ಲಿಙ್' (ವಿಧ್ಯರ್ಥ potential) "ಲೋಟ್"– ಆಜ್ಞಾರ್ಥ (imperative) ಮತ್ತು ತವ್ಯ-ಯ-ಅನೀಯ ಪ್ರತ್ಯಯಗಳು (ಕರ್ಮಣಿ ವಿಧ್ಯರ್ಥ ಧಾತು ಸಾಧಿತಗಳು– (Potential Passive Participles) ಸಾಕ್ಷಾತ್ ಕಾರ್ಯತಾ ಬೋಧಕವಾಗಿವೆ. ಉಳಿದವು ಕಾರ್ಯತಾ ಬೋಧಕ್ಕೆ ಸಹಾಯಕವಾಗಿವೆ. [ಉಳಿದವೆಂದರೆ ಲಟ್ (ವರ್ತಮಾನ (Present) ಲಙ್ ಪ್ರಥಮ ಭೂತ imperfect, ಲಿಟ್-ಪರೋಕ್ಷಭೂತ, ದ್ವಿತೀಯ ಭೂತ perfect ಲುಙ್ ತೃತೀಯ ಭೂತ Aorist ಲುಟ್, ಲೃಟ್-ಭವಿಷ್ಯತ್ future ಲೃಙ್, conditional, ಲೇಟ್-subjunctive).

ವಾಕ್ಯಗಳು ಕಾರ್ಯನಿಷ್ಠ ಕಾರ್ಯಪರ ಎಂದರೆ **ಅವು** ಕಾರ್ಯ ಅಥವಾ ಅದಕ್ಕೆ ಸಂಬಂಧಿಸಿದುದನ್ನೇ ಬೋಧಿಸುತ್ತವೆ ಎಂದು ಅರ್ಥ, ಕಾರ್ಯತಾವಾದದ ಮಂಡನೆಗೆ ಮುಖ್ಯ ಕಾರಣವೆಂದರೆ ಲೋಕದಲ್ಲಿ ಶಬ್ದದ ವ್ಯುತ್ಪತ್ತಿಯು ವೃದ್ಧ ವ್ಯವಹಾರ ಮೂಲಕ ಕಾರ್ಯನಿಷ್ಠವೇ ಆಗಿದೆ ಎಂಬ ತಿಳುವಳಿಕೆ, ವ್ಯುತ್ಪತ್ತಿ ಎಂದರೆ ಶಬ್ದ ಶಬ್ದಾರ್ಥಜ್ಞಾನ, ವಾಚ್ಯ ವಾಚಕ ಜ್ಞಾನ. ಶಬ್ದ ಶಬ್ದಾರ್ಥ ಜ್ಞಾನವು ಬಾಲಕನಿಗೆ ವೃದ್ಧ ವ್ಯವಹಾರದಿಂದ ಆಗುತ್ತದೆ. ಹೇಗೆಂದರೆ, "ಗಾಂ ಆನಯ" ಆಕಳನ್ನು ತಾ ಎಂದು ಒಬ್ಬ ಹಿರಿಯನು ಹೇಳುತ್ತಾನೆ. ಆಗ ಇನ್ನೊಬ್ಬ ಹಿರಿಯನು ಆಕಳನ್ನು ತರುತ್ತಾನೆ. ಇದರಂತೆ ಮುಂದೆ "ಗಾಂ ಬಧಾನ" ಆಕಳನ್ನು ಕಟ್ಟು ಎಂದೊಡನೆ ಆಕಳನ್ನು ಕಟ್ಟಲಾಗುತ್ತದೆ. ಹೀಗೆ ತರುವ ಮತ್ತು ಕಟ್ಟುವ ಕ್ರಿಯೆಗಳನ್ನು ಗಮನಿಸಿದ ಬಾಲಕನು ಗೋ

ಎಂದರೆ ಆಕಳು ಎಂದು ಗ್ರಹಿಸುತ್ತಾನೆ. ಇಲ್ಲಿ ಗೋ ಎಂದರೆ ಆಕಳ ಎಂಬ ಶಬ್ದಜ್ಞಾನವು, ತರುವ ಮತ್ತು ಕಟ್ಟುವ ಕ್ರಿಯೆಗಳೊಡನೆ ಸಂಬಂಧ್ದವಾಗಿ ಆಗಿದೆ. ಆದ್ದರಿಂದ ಶಬ್ದಾರ್ಥಜ್ಞಾನ ಅಥವಾ ವ್ಯುತ್ಪತ್ತಿಯು ಕಾರ್ಯಾನ್ವಿತ ಎಂದು ಪ್ರಾಭಾಕರನ ವಾದ. ಇದಲ್ಲದೆ ಲೋಕದಲ್ಲಿಯ ಪ್ರವೃತ್ತಿಯು ಕಾರ್ಯಜ್ಞಾನ ಪೂರ್ವಕವೆಂದೇ ಆವನ ಮತ, ಆಕಳನ್ನು ತರುವ ಅಥವಾ ಕಟ್ಟುವ ಪ್ರವೃತ್ತಿಯು ಕೇವಲ ಕ್ರಿಯೆ ಆಗಿರದೆ ಇದು ನನ್ನಿಂದ ಮಾಡಲ್ಪಡಬೇಕು; ಇದು ನನ್ನ ಕಾರ್ಯ ಎಂಬ ಕಾರ್ಯಜ್ಞಾನ ಪೂರ್ವಕವಾಗಿಯೇ ಇರುತ್ತದೆ. ಇವೆಲ್ಲವನ್ನು ಪಕ್ಕದಲ್ಲಿದ್ದ ಬಾಲಕನು ಗಮನಿಸುತ್ತಾನೆ. ಹಾಗೂ ತನ್ನ ಸ್ತನಪಾನ ಮುಂತಾದ ಪ್ರವೃತ್ತಿಯುಕ್ತ ಲೋಕದಲ್ಲಿ ಎಲ್ಲ ಪ್ರವೃತ್ತಿಯು ಕಾರ್ಯಜ್ಞಾನಪೂರ್ವಕವೆಂದು ತೀರ್ಮಾನಿಸುತ್ತಾನೆ.

ಮೇಲೆ ನಿರೂಪಿಸಿದ ಕಾರ್ಯತಾವಾದದ ಸಾರಾಂಶವೆಂದರೆ—

i) ಶಬ್ದ ವ್ಯುತ್ಪತ್ತಿ ವೃದ್ಧವ್ಯವಹಾರದಿಂದ ಕಾರ್ಯಾನ್ವಿತವಾಗಿಯೇ ಆಗುತ್ತದೆ.

ii) ಪ್ರವೃತ್ತಿಯು ಕಾರ್ಯಜ್ಞಾನ ಪೂರ್ವಕ ಇರುತ್ತದೆ.

iii) ಪ್ರವೃತ್ತಿ ನಿವೃತ್ತಿಗಳೇ ಶಾಸ್ತ್ರದ ಪ್ರಯೋಜನ. ಆದ್ದರಿಂದ ವೇದಶಾಸ್ತ್ರವು ಕಾರ್ಯತಾಪರವಾಗಿದ್ದು ಸಿದ್ಧರೂಪ ಪರಬ್ರಹ್ಮನನ್ನು ಬೋಧಿಸುವದಿಲ್ಲ.

ವೇದ ಬ್ರಹ್ಮನಿಷ್ಠವಲ್ಲ ಎಂಬುದಕ್ಕೆ ಕಾರ್ಯತಾವಾದಿಗಳು ಮುಖ್ಯವಾಗಿ ಎರಡು ಕಾರಣ ಕೊಡುತ್ತಾರೆ.

(1) ವೇದ ಬ್ರಹ್ಮಪರವೆಂಬಲ್ಲಿ ಪ್ರಮಾಣವಿಲ್ಲ. (ಪ್ರಮಾಣಾಭಾವಾತ್)

(2) ವೇದ ಬ್ರಹ್ಮಪರವೆಂದು ಹೇಳಲು ಮೂರು ಬಾಧಕಗಳಿವೆ. (ಬಾಧಕ ತ್ರಯ-ಪರಿಮಳ).

(a) ವಾಕ್ಯ ಕಾರ್ಯತಾ ಬೋಧಕವಾಗಿರುವದರಿಂದ ವಾಕ್ಯಸಮೂಹವಾದ ವೇದವು ಸಿದ್ಧವಸ್ತು ಬ್ರಹ್ಮನನ್ನು ಬೋಧಿಸಲಾರದು.

(b) ಶಬ್ದಗಳಿಗೆ ಕಾರ್ಯಾನ್ವಿತದಲ್ಲಿಯೇ ವ್ಯುತ್ಪತ್ತಿ ಇದೆ. ಸಿದ್ಧಾರ್ಥದಲ್ಲಿ ಇಲ್ಲ.

(c) ಶಾಸ್ತ್ರವು ಪ್ರವೃತ್ತಿ ನಿವೃತ್ತಿಗಳ ಉಪಾಯ ಎನಿಸುತ್ತದೆ. (ಪ್ರವೃತ್ತಿ ನಿವೃತ್ತ್ಯೌಪಾಯಿಕ-ಅರ್ಥಶಾಸನಾತ್ ಶಾಸ್ತ್ರತ್ವಮ್)ಆದ್ದರಿಂದ ವೇದವು ಕಾರ್ಯತಾ ಪರವಾದರೇನೇ ವಿಹಿತ ಕರ್ಮದಲ್ಲಿ ಪ್ರವೃತ್ತಿ ಮತ್ತು ನಿಷಿದ್ಧ ಕರ್ಮದಿಂದ ನಿವೃತ್ತಿ ಕೊಡುತ್ತದೆ.

ಮೇಲಿನ ಕಾರ್ಯತಾವಾದದ ನಿರಾಕರಣೆ 42ನೇ ಶ್ಲೋಕದಿಂದ ಆರಂಭ ವಾಗಿದೆ.

**ಅನುವಾದ :** ಕಾರ್ಯತಾ ಎಂದರೆ ಇಷ್ಟ ಸಾಧನತ್ವವನ್ನು ಬಿಟ್ಟು ಬೇರೆ ಯಾವದೂ ಅಲ್ಲ. ಕ್ರಿಯೆಯಿಂದ ವಿಶೇಷವಾಗಿ ಹೊಂದಲರ್ಹವಾದುದು ಕಾರ್ಯವಲ್ಲ, ಏಕೆಂದರೆ ಈ ಲಕ್ಷಣ ಬ್ರಾಹ್ಮಣ ಸಂಹಾರ ಮುಂತಾದ ನಿಷಿದ್ಧ ಕರ್ಮಗಳಲ್ಲಿಯೂ ಸಮನಾಗಿ ಬರುತ್ತದೆ. ಮುಂದಿನ ಕ್ರಿಯೆ ಕಾರ್ಯವಲ್ಲ. ಹಾಗಾದರೆ ಈಶ್ವರನು (ಮುಂದೆ) ಸೃಷ್ಟಿಸುವನು ಎಂಬ ವಾಕ್ಯವೂ ಕಾರ್ಯ ವಾದೀತು ! ಮಾಡದಿರಲು ಅಶಕ್ಯವಾದುದು (ಅಕರ್ತುಂ ಅಶಕ್ಯಮ್) ಕಾರ್ಯ ವಾಗಲಾರದು. ಏಕೆಂದರೆ ಈ ಲಕ್ಷಣವು ನಿಷಿದ್ಧವಾದ ಪರಸ್ತ್ರೀಗಮನ ಮುಂತಾದ ವುಗಳಲ್ಲಿ ಸಮನಾಗಿ ಬರುವದರಿಂದ ಅತಿವ್ಯಾಪ್ತಿ ದೋಷ ಬರುತ್ತದೆ. ಆದ್ದರಿಂದ ಇಷ್ಟ ಸಾಧನವೇ ಕಾರ್ಯ.

**ವಿವರಣೆ ; ಕಾರ್ಯತಾವಾದದ ನಿರಾಕರಣೆ :** ಕಾರ್ಯತಾವಾದ ಅಯುಕ್ತ ವಾಗಿದೆ. (1) ವೇದ ಬ್ರಹ್ಮನಿಷ್ಠ ಎಂಬಲ್ಲಿ ಪ್ರಮಾಣವಿಲ್ಲ ಎಂಬ 1ನೆಯ ಕಾರಣ ನಿರಾಧಾರ. ಈ ಬಗ್ಗೆ ಪ್ರಮಾಣಗಳನ್ನು ಈ ಮೊದಲು ಹೇಳಲಾಗಿದೆ. ಆ ಪ್ರಮಾಣಗಳೆಂದರೆ "ಓಂ ಇತಿ ಬ್ರಹ್ಮ"— "ಸ ಏವ ಭರ್ಗ ಶಬ್ದಾರ್ಥಃ ವಾಹ್ಯತೀ ನಾಂಚ ಭೂಮತಃ" "ಭಾವನಾತ್ ಚೈವ ಸುತ್ರಾಚ್ಚ ಸೋಯಂ ಪುರುಷ ಇತ್ಯಪಿ"–ಸ ಏವ ಸರ್ವವೇದಾರ್ಥಃ ಜಿಜ್ಞಾಸ್ಯೋಽಯಂ ವಿಧೀಯತೇ"(ಸಃ ಎಂದರೆ ಓಂಕಾರ ಶಬ್ದಾರ್ಥ ನಾರಾಯಣ)

(2) ನೀನು ಹೇಳಿದ ಮೂರು ಬಾಧಕಗಳು (ಬಾಧಕ ತ್ರಯ) ಇಲ್ಲವೇ ಇಲ್ಲ. ಹೇಗೆಂದರೆ—

(a) ವಾಕ್ಯ ಮತ್ತು ವಾಕ್ಯಾತ್ಮಕವಾದ ವೇದದ ತಾತ್ಪರ್ಯ ಕಾರ್ಯತಾ ಬೋಧದಲ್ಲಿದೆ ಎಂದು ನೀನು ಹೇಳುತ್ತೀ. ಆದರೆ ಆ ಕಾರ್ಯತಾ ಸಿದ್ಧ ವಿಶೇಷ ಭಗವಾನ್ ನಾರಾಯಣನಿಗೂ ಇದೆ. ಆದ್ದರಿಂದ ಸಿದ್ಧರೂಪ ಆ ನಾರಾಯಣನೂ ವಾಕ್ಯಾರ್ಥ ಹೇಗೆ ಆಗುವದಿಲ್ಲ ? (ತಸ್ಯಾಪಿ ವಾಕ್ಯಾರ್ಥತ್ವೇ ಕೀದೃಶಃ ದೋಷಃ ಸ್ಯಾತ್ ?) ಅವನೇ ಸಕಲ ವೇದ ಪ್ರತಿಪಾದ್ಯ ಎಂದು ಭಾವ.

ಕಾರ್ಯತಾ ಎಂದರೆ ಇಷ್ಟ ಸಾಧನ (ಈಶ್ವರನನ್ನು) ಬಿಟ್ಟು ಬೇರೆ ಯಾವದೂ ಅಲ್ಲ. ಹೇಗೆಂದರೆ—

(i) "ಕ್ರಿಯಾವ್ಯಾಪ್ಯಂ ಕಾರ್ಯಂ" ಕ್ರಿಯೆಯಿಂದ ವಿಶೇಷ ವಾಗಿ ಹೊಂದಲರ್ಹವಾದುದು ಕಾರ್ಯ ಎಂದು ಹೇಳಲು ಬರುವದಿಲ್ಲ. ಹಾಗೆ ಹೇಳಿದರೆ ಬ್ರಾಹ್ಮಣ ಹನನ ಮೊದಲಾದ ನಿಷಿದ್ಧ ಕರ್ಮದಲ್ಲಿಯೂ ಈ ಲಕ್ಷಣ ಬರುವದರಿಂದ ಲಕ್ಷಣಕ್ಕೆ ಅತಿವ್ಯಾಪ್ತಿದೋಷ ಬರುತ್ತದೆ. (ಇದರಿಂದ "ಕೃತಿ ವಿಷಯೀಭೂತಂ ಕಾರ್ಯಂ" ಎಂಬ ಕಾರ್ಯದ ಲಕ್ಷಣವೂ ನಿರಾಕೃತವಾಗುತ್ತದೆ.)

(ii) "ಭವಿಷ್ಯತ್ ಕ್ರಿಯಾ ಕಾರ್ಯಂ" ಎಂದೂ ಹೇಳಲು ಬರುವದಿಲ್ಲ. ಹಾಗೆ ಹೇಳುವದಾದರೆ "ಸ್ರಕ್ಷ್ಯತಿ ಈಶ್ವರಃ" ಈಶ್ವರನು ಸೃಷ್ಟಿಸುವನು ಎಂಬ ಭವಿಷ್ಯತ್ ಕ್ರಿಯೆಯೂ ಕಾರ್ಯವಾದೀತು ! ಇದು ಅಯುಕ್ತ. ಏಕೆಂದರೆ ಕಾರ್ಯವು ಲಿಙ್ (ವಿಧ್ಯರ್ಥ) ಪ್ರತ್ಯಯದಿಂದ ಬೋಧಿತವಾಗುತ್ತದೆ.

(iii) ಅಕರ್ತುಂ ಅಶಕ್ಯಂ ಕಾರ್ಯಂ (ಮಾಡದಿರಲು ಅಶಕ್ಯವಾದುದು ಕಾರ್ಯ) ಎಂದು ಸಹ ಹೇಳಲು ಬರುವದಿಲ್ಲ. ಹಾಗೆ ಹೇಳಿದರೆ ಪರನಾರೀಗಮನ, ಏಕಾದಶಿ ಭೋಜನ ಮೊದಲಾದವು ಕಾರ್ಯವಾಗುವ ಪ್ರಸಂಗ ಬರುತ್ತದೆ. ಇದರಿಂದ ಲಕ್ಷಣಕ್ಕೆ ಅತಿವ್ಯಾಪ್ತಿ ದೋಷ ಬರುತ್ತದೆ.

ಹೀಗೆಯೇ ಕಾರ್ಯದ ಕೆಳಗಿನ ಲಕ್ಷಣಗಳೂ ಅಯುಕ್ತವಾಗಿವೆ. (i) ಕೃತಿ ಸಾಧ್ಯಂ ಪ್ರಧಾನಂ ಯತ್ ತತ್ಕಾರ್ಯಮ ಭಿಧೀಯತೇ. (ii) ಕೃತಿಸಾಧ್ಯತ್ವಂ ಕೃತ್ಯುದ್ದೇಶ್ಯತ್ವಂ ಇಷ್ಟಸಾಧನತ್ವಂ ಚ ಇತ್ಯೇಕಾರ್ಥಸಮವಾಯಿನಃ ತ್ರಯೋಧರ್ಮಾಃ (iii) ತತ್ರಕೃತಿಸಾಧ್ಯತ್ವಾವಚ್ಛಿನ್ನಂ ಕೃತ್ಯುದ್ದೇಶ್ಯತ್ವಂ ಕಾರ್ಯತ್ವಂ, ತದಗವ ಮಸ್ತು ಇಷ್ಟಸಾಧನತಾವಗಮಸಂಬೋಧನಂ].

ಆದ್ದರಿಂದ ಕಾರ್ಯ ಎಂದರೆ ಇಷ್ಟ ಅಥವಾ ಇಷ್ಟ ಸಾಧನ. (ಚಂದ್ರ ಮಂಡಲದಲ್ಲಿ ಇಷ್ಟ ಸಾಧನತಾ ಬುದ್ಧಿ ಇದ್ದರೂ ಅದು ಕೃತಿ ಸಾಧ್ಯವಲ್ಲವಾದ್ದರಿಂದ ಕಾರ್ಯ ಆಗುವದಿಲ್ಲ.)

**(ಕಾರ್ಯಂ) ಸಾಧನಮಿಷ್ಟಸ್ಯ ಭಗವಾನಿಷ್ಟದೇವತಾ ।**
**ಮುಖ್ಯೇಷ್ಟಂ ವಾ ಸುಮನಸಾಂ ಪ್ರೇಯಸ್ತದಿತಿ ಚ ಶ್ರುತಿಃ ॥೪೫॥**
**ಪ್ರಾಣಬುದ್ಧಿಮನಃಖಾತ್ಮದೇಹಾಪತ್ಯಧನಾದಯಃ ।**
**ಯತ್ಸಂಪರ್ಕಾತ್ ಪ್ರಿಯಾ ಆಸನ್ ತತಃ ಕೋನ್ಯಃಪರಃ ಪ್ರಿಯಃ ॥೪೬॥**
**ಇತ್ಯಾದಿವಾಕ್ಯೈರಾಕಾಂಕ್ಷಾಸನ್ನಿಧಿಯೋಗ್ಯತಾ ಯತಃ ।**
**ತಸ್ಮಿನ್ನೇವ ಸಮಸ್ತಸ್ಯೇತಿ (ಇಷ್ಟೇ ವ್ಯುತ್ಪತ್ತಿರಿಷ್ಯತೇ) ॥೪೭॥**

**ಅವತರಣಿಕೆ :** ಕಾರ್ಯ ಎಂದರೆ ಇಷ್ಟಸಾಧನ ಎಂದು ಈ ಮೊದಲು ನಿರೂಪಿಸಿದ್ದಾಯಿತು. ಇಂತಹ ಇಷ್ಟಸಾಧನನು ಭಗವಂತನೇ ಎಂದು ಇಲ್ಲಿ ನಿರೂಪಿಸುತ್ತಾರೆ. ಇದಲ್ಲದೆ ದೇವತೆಗಳಿಗೆ ಅವನೇ ಇಷ್ಟನಾಗಿದ್ದಾನೆ.

**ಅನುವಾದ :** ಇಷ್ಟ ಸಾಧನನು ಭಗವಾನ್ ನಾರಾಯಣ, ಅವನೇ ಇಷ್ಟ ದೇವತೆ, ಒಳ್ಳೆಯ ಮನಸ್ಸುಳ್ಳ ದೇವತೆಗಳಿಗೆ ನಾರಾಯಣನು ಮುಖ್ಯ ಇಷ್ಟನು. ಆ ನಾರಾಯಣನೇ ಅತ್ಯಂತ ಪ್ರಿಯ ಎಂದು (ತದೇದತ್ ಪ್ರೇಯಃ ಎಂಬ) ಶ್ರುತಿ ಹೇಳುತ್ತದೆ. ಪ್ರಾಣ–ಬುದ್ಧಿ–ಮನಸ್ಸು–ಇಂದ್ರಿಯಗಳು–ಜೀವ–ದೇಹ–ಮಕ್ಕಳು ಹಣ ಈ ಮೊದಲಾದವು ಯಾರ ಸಂಪರ್ಕದಿಂದ ಪ್ರಿಯವಾಗುವವೋ ಆ ಪರಮಾತ್ಮ

ನಿಂದ ಬೇರೆಯಾದ ಎಂದರೆ ಆ ಪರಮಾತ್ಮನನ್ನು ಬಿಟ್ಟು ಬೇರೆ ಯಾವನು ತಾನೇ ಪ್ರಿಯನಾಗುವನು? ಈ ದೊಡ್ಡದಾದ (ಪ್ರಕರಣ) ವಾಕ್ಯಗಳಿಂದಲೂ, ವೇದಾಧಿಕಾರಿಗಳಿಗೆಲ್ಲ ಇಷ್ಟಸಾಧನನಾದ ನಾರಾಯಣನಲ್ಲಿಯೇ ಆಕಾಂಕ್ಷಾ (ಜಿಜ್ಞಾಸೆ) ಸನ್ನಿಧಿ, ಯೋಗ್ಯತಾ ಇರುವದರಿಂದಲೂ ಆವನೇ ವೇದಪ್ರತಿಪಾದ್ಯ. ಆದ್ದರಿಂದ. ಇಷ್ಟನಾದ (ಸಿದ್ಧರೂಪ) ಪರಮಾತ್ಮನಲ್ಲಿ ವೇದಕ್ಕೆ ವ್ಯುತ್ಪತ್ತಿ ಉಂಟೆಂದು ಪ್ರಾಮಾಣಿಕರು ಒಪ್ಪಿದ್ದಾರೆ.

**ವಿವರಣೆ :** ಇಷ್ಟ ಸಾಧನವೇ ಕಾರ್ಯ ಎಂದು ಪ್ರಾರಂಭದಲ್ಲಿ ನಿರೂಪಿಸಲಾಗಿತ್ತು ಆ ಇಷ್ಟಸಾಧನ ಭಗವಂತನೇ ಎಂದು ಇಲ್ಲಿ ಹೇಳುತ್ತಾರೆ. ಮೇಲಾಗಿ ಆ ಭಗವಂತ ದೇವತೆಗಳಿಗೆ ಇಷ್ಟನಾಗಿದ್ದಾನೆ.

ಇಷ್ಟಸಾಧನವೇ ಕಾರ್ಯ ಎಂಬುದು ಲೋಕವ್ಯವಹಾರಕ್ಕೆ ಅನುಗುಣವಾಗಿದೆ. ಸಾಮಾನ್ಯವಾಗಿ ಯಾರಾದರೂ 'ನೀನು ಇದನ್ನೇಕೆ ಮಾಡುತ್ತೀ, ಇದ್ಯ ನಿನ್ನ ಕಾರ್ಯ ಏಕೆ ?' ಎಂದು ಬೇರೆಯವರನ್ನು ಕೇಳಿದರ, ಅವರು ಅದು ನನಗೆ 'ಇಷ್ಟ ಸಾಧನ' ಎಂದೇ ಉತ್ತರಿಸುತ್ತಾರೆ. ಸ್ಥೂಲವಾಗಿ ಮೊದಲು ಇಷ್ಟ ಸಾಧನವೆಂಬ ಜ್ಞಾನ, ನಂತರ ಇಚ್ಛೆ, ಬಳಿಕ ಪ್ರಯತ್ನ ಹಾಗೂ ಕ್ರಿಯೆ ಇರುವದು ಕಂಡಿದೆ. ಇನ್ನು ಕೆಲವೊಂದು ಸಲ ಇಷ್ಟವಾದುದೂ ಕಾರ್ಯವಾಗುತ್ತದೆ. ಆದ್ದರಿಂದ ಇಷ್ಟ ಅಥವಾ ಇಷ್ಟಸಾಧನವೇ ಕಾರ್ಯ. ಇಂತಹ ಕಾರ್ಯ ಭಗವಂತನೇ ಆಗಿದ್ದಾನೆ.

ನಾವೆಲ್ಲರೂ ಬಯಸುವ ಸುಖ, ಶಾಶ್ವತ ಸುಖ, ದುಃಖದ ಲವಲೇಶವಿಲ್ಲದ ಪೂರ್ಣಸುಖ ಅರ್ಥಾತ್ ಮೋಕ್ಷ ನೀಡುವವನು ಭಗವಂತನೇ, ಆದ್ದರಿಂದ ಅವನು ನಮಗೆ ಇಷ್ಟಸಾಧನನಾಗಿದ್ದಾನೆ. ಆದರೆ ಮೋಕ್ಷವನ್ನೂ ಇಚ್ಛಿಸದೆ ಅವನಲ್ಲಿಯೇ ಮನಸ್ಸಿಟ್ಟು ನಿರ್ವ್ಯಾಜವಾಗಿ ಅವನನ್ನೇ ಆರಾಧಿಸುವ ದೇವತೆಗಳಿಗೆ (ಸುಮನಸಾಂ) ಭಗವಂತನು ಸಾಕ್ಷಾತ್ ಇಷ್ಟನಾಗಿದ್ದಾನೆ.

ಭಗವಂತನು ದೇವತೆಗಳಿಗೆ ಸಾಕ್ಷಾತ್ ಇಷ್ಟ ಎಂಬುದು ಕೆಳಗಿನ ಪ್ರಮಾಣಗಳಿಂದ ತಿಳಿದು ಬರುತ್ತದೆ. 'ತದೇತತ್‌ಪ್ರೇಯಃ ಪುತ್ರಾತ್ ಪ್ರೇಯಃ ವಿತ್ತಾತ್ ಪ್ರೇಯಃ ಅನ್ಯಸ್ಮಾಚ್ಚ ಸರ್ವಸ್ಮಾದಂತರತರಂ ಯದಯಮಾತ್ಮಾ' (ವಾಜಸನೇಯ ಶ್ರುತಿ) ಎಂದರೆ ಭಗವಂತನು ಮಕ್ಕಳು ಹಣ ಹಾಗೂ ಉಳಿದುದೆಲ್ಲಕ್ಕಿಂತ ಹೆಚ್ಚು ಪ್ರಿಯನು. ಹೀಗೆ ಭಗವಂತನು ಅತ್ಯಂತ ಪ್ರಿಯನು ಮತ್ತು ಎಲ್ಲಕ್ಕೂ ಒಳಗಿರುವವನು. ಇದನ್ನೇ ಪುರಾಣವಾಕ್ಯವಾದ 46ನೇ ಶ್ಲೋಕ ಸ್ಪಷ್ಟ ಮಾಡುತ್ತದೆ, ಶರೀರದಲ್ಲಿಯ ಪ್ರಾಣವಾಯು ಹಾಗೂ ಅಂತಃಕರಣದ ವೃತ್ತಿ ಅಥವಾ ಪರಿಣಾಮಗಳಾದ ಬುದ್ಧಿ ಮನಆದಿ-ಇಂದ್ರಿಯ-ಜೀವ-ದೇಹ-ಮಕ್ಕಳು-ಹಣ ಹೀಗೆ ಎಲ್ಲಕ್ಕಿಂತಲೂ ಭಗವಂತನೇ ಪ್ರಿಯನು. ಅವನಿಗಿಂತ ಹೆಚ್ಚು ಪ್ರಿಯವಾದುದು ಯಾವುದೂ.

ಇಲ್ಲ. ಹೀಗೆ ಭಗಪಂತನು ಉತ್ತಮಾಧಿಕಾರಿಗಳಿಗೆ ಇಷ್ಟನೂ ಉಳಿದವರಿಗೆ ಇಷ್ಟ ಸಾಧನನೂ ಆಗಿದ್ದಾನೆ.

(2) ಮೇಲಿ ನಿರೂಪಿಸಿದಂತೆ ಪರಮಾತ್ಮನು ಇಷ್ಟ ಅಥವಾ ಇಷ್ಟಸಾಧನನಾದುದರಿಂದ (ಇತಿ–ಎಂದರೆ ತಸ್ಮಾತ್ ಆದ್ದರಿಂದ) ಎಲ್ಲ ಅಧಿಕಾರಿಗಳಿಗೆ ಅವನನ್ನು ತಿಳಿದಂಕೊಳ್ಳಬೇಕೆಂಬ ಆಕಾಂಕ್ಷೆ (ಜಿಜ್ಞಾಸಾ) ಇರುತ್ತದೆ. ಅವನು ಸರ್ವಗತನಾದ್ದರಿಂದ ಸನ್ನಿಧಿಯೂ ಇದೆ. ಬಾಧಕಪ್ರಮಾಣಗಳಿಲ್ಲವಾದ್ದರಿಂದ ಯೋಗ್ಯತೆಯೂ ಇದೆ. ಆದ್ದರಿಂದ ಆ ಭಗವಾನ್ ನಾರಾಯಣನೇ ಸಕಲ ವೇದಗಳ ವಾಚ್ಯಾರ್ಥ, ಮುಖ್ಯಾರ್ಥ ಆಗುವದು ಯುಕ್ತ,

**ಇಷ್ಟೇ ವ್ಯುತ್ಪತ್ತಿರಿಷ್ಯತೇ ||೪೭||**

**ಅತ್ರ್ಯೈಪೂಪಾನ್ ತವ ಭ್ರಾತೇತ್ಯಾದಾವಾವಾಪಕೋಽಪಿ ಚ |**

**ಉದ್ವಾಪಾತ್ ವರ್ತಮಾನತ್ವಾತ್ ಆಕಾಂಕ್ಷಾದಿಬಲಾದಪಿ ||೪೮||**

**ಬಾಲೋ ವ್ಯುತ್ಪತ್ತಿಮಾಪ್ನೋತಿ (ನಾನಯೋತ್ಯಾದಿ ವಾಕ್ಯತಃ) ||೪೯ಅ||**

**ಅವತರಣಿಕೆ :** ಶಬ್ದಗಳಿಗೆ ಕಾರ್ಯಾನ್ವಿತದಲ್ಲಿಯೇ ವ್ಯುತ್ಪತ್ತಿ ಇದೆ. ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ ಇಲ್ಲ' ಎಂದು ಮೀಮಾಂಸಕರು (ಪ್ರಾಭಾಕರ) ಎತ್ತಿದ **ಎರಡನೇ ಬಾಧಕ** ಅಯುಕ್ತವಾಗಿದೆ, ಶಬ್ದಗಳಿಗೆ ಇಷ್ಟವೆನಿಸಿದ ಸಿದ್ಧವಿಶೇಷದಲ್ಲಿಯೂ ವ್ಯುತ್ಪತ್ತಿ ಇದೆ ಎಂದು ನಿರೂಪಿಸುತ್ತಾರೆ.

**ಅನುವಾದ :** ಇಷ್ಟವಾದ ಸಿದ್ಧವಸ್ತುವಿಶೇಷದಲ್ಲಿ ಕೂಡ ವ್ಯುತ್ಪತ್ತಿ ಇರುವದೆಂದು ಪ್ರಾಮಾಣಿಕರು ಒಪ್ಪಿದ್ದಾರೆ, (ನೋಡು), 'ನಿನ್ನ ಅಣ್ಣ ಭಕ್ಷ್ಯ ತಿನ್ನುತ್ತಾನೆ' ಈ ಮೊದಲಾದ ವಾಕ್ಯಗಳಲ್ಲಿ ಆ ಆ ಶಬ್ದಗಳನ್ನು ಪ್ರಯೋಗಿಸುವದು (ಆವಾಪಾತ್) ಮತ್ತು ಬಿಡುವದರಿಂದ (ಉದ್ವಾಪಾತ್) ಮತ್ತು ಆಕಾಂಕ್ಷಾದಿ ಸಾಮರ್ಥ್ಯದಿಂದ ಹುಡುಗನಿಗೆ ಸಿದ್ಧವಿಶೇಷದಲ್ಲಿ ವ್ಯುತ್ಪತ್ತಿ (ವಾಚ್ಯ–ವಾಚ್ಯಾರ್ಥಜ್ಞಾನ) ಆಗುತ್ತದೆ. (ಆಕಳನ್ನು ತಾ, ಮುಂತಾದ ವಾಕ್ಯಗಳಿಂದಲೇ ವ್ಯುತ್ಪತ್ತಿ ಎಂಬ ನಿಯಮವಿಲ್ಲ.)

**ವಿವರಣೆ :** ಲೋಕದಲ್ಲಿ ವೃದ್ಧವ್ಯವಹಾರ ಮೂಲಕ ಶಬ್ದಗಳಿಗೆ ಕಾರ್ಯ ಅಥವಾ ಅದಕ್ಕೆ ಸಂಬಂಧಿಸಿದುದನ್ನೇ ಹೇಳುವ ಶಕ್ತಿಯಿರುವದರಿಂದ, ವೇದ ಕಾರ್ಯತಾಪರವಾಗಿದೆ. ಅದು ಸಿದ್ಧರೂಪ ಬ್ರಹ್ಮನನ್ನು ಬೋಧಿಸುವದಿಲ್ಲ. ಆದ್ದರಿಂದ ಭಗವಂತನೇ ಸಕಲ ವೇದಾರ್ಥ ಎಂದು ಹೇಳಿದ್ದು ಅಯುಕ್ತ ಎಂಬ ಆಕ್ಷೇಪವನ್ನು ನಿರಾಕರಿಸಿ, ಶಬ್ದಗಳಿಗೆ ಇಷ್ಟವಾದ ಸಿದ್ಧವಿಶೇಷದಲ್ಲಿಯೂ ಶಕ್ತಿ ಇಧೆ ಎಂದು ತಿಳಿಸುತ್ತಾರೆ.

ಸಾಮಾನ್ಯ ಸಿದ್ಧವಸ್ತುವಿನಲ್ಲಿ ವ್ಯುತ್ಪತ್ತಿ ಇಲ್ಲದಿದ್ದರೂ ಇಷ್ಟವಾದ ಸಿದ್ಧವಿಶೇಷ

ದಲ್ಲಿ ವ್ಯುತ್ಪತ್ತಿ ಕಂಡಿದೆ. ಉದಾಹರಣಾರ್ಥವಾಗಿ ಚುಟ್ಟಿಗೆ ಹೊಡೆಯುವದರಿಂದ (ಘೋಟಿಕಾದಾವನಾದಿನಾ) ಮಗುವಿನ ಲಕ್ಷ್ಯವನ್ನು ತನ್ನೆಡೆಗೆ ಸೆಳೆದುಕೊಂಡು 'ನೋಡು ನಿನ್ನ ಅಣ್ಣಾ ಭಕ್ಷ್ಯ ತಿನ್ನುತ್ತಾನೆ' ಎಂದು ಬೆರಳಿನಿಂದ ತೋರಿಸಿದರೆ ಆ ಭಕ್ಷ್ಯ ಪ್ರತ್ಯಕ್ಷವಿರುವದರಿಂದ ಮತ್ತು ಅದರ ಬಗ್ಗೆ ಮಗುವಿಗೆ ಇಚ್ಛೆ ಇರುವದರಿಂದ ಬಾಲಕನಿಗೆ ವ್ಯುತ್ಪತ್ತಿ ಹುಟ್ಟುತ್ತದೆ. 'ಎಂದರೆ ಮಗುವಿಗೆ ಭಕ್ಷ್ಯ (ಅಪೂಪ) ಶಬ್ದದ ಅರ್ಥಜ್ಞಾನವಾಗುತ್ತದೆ, ಮುಂದೆ, ನಿನ್ನ ಅಣ್ಣಾ ಹಾಲು ಕುಡಿಯುತ್ತಾನೆ, (ಪಯಃ ಪಿಬತಿ) ಎಂದು ಶಬ್ದ ಬದಲಿಸಿದರೆ ಪಯಃ (ಹಾಲು) ಎಂಬ ಇನ್ನೊಂದು ಶಬ್ದದ ಅರ್ಥವೂ ತಿಳಿಯುತ್ತದೆ. ಹೀಗೆ ಬಾಲಕನಿಗೆ ಇಷ್ಟವಿರುವ, ಅದನಿಗೆ ಆಕಾಂಕ್ಷೆ ಇರುವ ವಸ್ತುಗಳ ಬಗ್ಗೆ ಶಬ್ದಗಳ ಆವಾಪ-ಉದ್ವಾಪಗಳಿಂದ (ಪ್ರಯೋಗಿಸುವದು ಮತ್ತು ತೆಗೆಯುವದು) ಅವನಿಗೆ ಸಿದ್ಧವಿಶೇಷದಲ್ಲಿ ವ್ಯುತ್ಪತ್ತಿ ಹುಟ್ಟುತ್ತದೆ.

ಇದರಂತೆ 'ಇಯಂ ತವ ಮಾತಾ (ಇವಳು ನಿನ್ನ ತಾಯಿ) ಅಯಂ ತವ ಪಿತಾ (ಇವನು ನಿನ್ನ ತಂದೆ) ಮುಂತಾದ ವಾಕ್ಯಗಳನ್ನು ಪ್ರಯೋಗಿಸಿದಾಗ ಬಾಲಕನಿಗೆ ವ್ಯುತ್ಪತ್ತಿ ಹುಟ್ಟುತ್ತದೆ. ಇನ್ನು 'ದೇವದತ್ತ ಪುತ್ರಸ್ತೇ ಜಾತಃ (ದೇವದತ್ತನೇ ನಿನಗೆ ಮಗ ಹುಟ್ಟಿದ್ದಾನೆ) ಎಂಬ ವಾಕ್ಯ ಕೇಳಿದೊಡನೆ ದೇವದತ್ತನ ಮುಖವು ಅರಳಿದುದನ್ನು ಆತನ ಪಕ್ಕದಲ್ಲಿರುವ (ವ್ಯುತ್ಪತ್ತಿ ಬಯಸುವವನು) ಕಂಡು ಸ್ವವಿಷಯಕ ಜ್ಞಾನ ಮೂಲಕ ದೇವದತ್ತನಿಗಾದ ಹರ್ಷವನ್ನು ಊಹಿಸುತ್ತಾನೆ. ಮತ್ತು ಸಾಮಾನ್ಯವಾಗಿ ಶಬ್ದಕ್ಕೆ ಪ್ರಿಯವಿಷಯದ ಬಗ್ಗೆ ಇರುವ ಶಕ್ತಿಯನ್ನು ತಿಳಿದುಕೊಳ್ಳುತ್ತಾನೆ, ನಂತರ ದೇವದತ್ತನಿಗೆ ಆಗ ಮಗ ಹುಟ್ಟಿದ್ದು ಬಿಟ್ಟು ಬೇರೆ ಪ್ರಿಯ ವಿಷಯಗಳಿಲ್ಲದಿರುವದನ್ನು ಗಮನಿಸಿ, 'ಪುತ್ರಜನ್ಮವೇ ಆ ಪ್ರಿಯ ವಿಷಯವಾಗಿದ್ದು ಆ ಬಗ್ಗೆ ಶಬ್ದ ಮೂಲಕ ಜ್ಞಾನ ಮಾಡಿಕೊಳ್ಳುತ್ತಾನೆ.

ಶಬ್ದವ್ಯುತ್ಪತ್ತಿಯು ಕೇವಲ ಕಾರ್ಯಾನ್ವಿತವಾಗಿಯೇ ಆಗಬೇಕೆಂಬ ನಿಯಮವಿಲ್ಲ. ಕೆಳಗಿನ ಕಾರಿಕಾ ಪ್ರಕಾರ ವ್ಯಾಕರಣ ಉಪಮಾನ, (ಸಾದೃಶ್ಯ) ಕೋಶ, ಆಪ್ತವಾಕ್ಯ ವೃದ್ಧವ್ಯವಹಾರ, ವಾಕ್ಯಶೇಷ, ವ್ಯಾಖ್ಯಾನ (ವಿವೃತಿ) ಸಿದ್ಧಪದದ ಸಾನ್ನಿಧ್ಯ. ಇವುಗಳಿಂದ ಶಬ್ದದ ಶಕ್ತಿಜ್ಞಾನವಾಗುತ್ತದೆಂದು ಜ್ಞಾನವೃದ್ಧರು ಹೇಳುತ್ತಾರೆ.

**ಶಕ್ತಿಗ್ರಹಂ ವ್ಯಾಕರಣೋಪಮಾನಕೋಶಾಪ್ತವಾಕ್ಯಾತ್ ।**
**ವಾಕ್ಯಸ್ಯ ಶೇಷಾತ್ ವಿವೃತೇರ್ವದಂತಿ ಸಾನ್ನಿಧ್ಯತಃ ಸಿದ್ಧಪದಸ್ಯ ವೃದ್ಧಾಃ**
**(ಕಾರಿಕಾ)**

ಆದರೆ ಈ ಉಪಾಯುಗಳು ಪ್ರಾಥಮಿಕ ವ್ಯುತ್ಪತ್ತಿಯು ಕಾರ್ಯಾನ್ವಿತದಲ್ಲಿ ಆದ ನಂತರವೇ ಎಂದು ಪೂರ್ವಪಕ್ಷಿ ವಾದಿಸುತ್ತಾನೆ. ಈ ವಾದ ಅಯುಕ್ತ, ಏಕೆಂದರೆ

ಬಾಲಕನಿಗೆ ಕೂಡ (ಇವಳು ನಿನ್ನ ತಾಯಿ, ಇವನು ನಿನ್ನ ತಂದೆ, ಇಕೋ ನಿನ್ನ ಅಣ್ಣ ಭಕ್ಷ್ಯ ತಿನ್ನುತ್ತಾನೆ. ಮೊದಲಾದ ವಾಕ್ಯಗಳಿಂದ ಪ್ರಾಥಮಿಕ ವ್ಯುತ್ಪತ್ತಿಯೇ ಸಿದ್ಧಾರ್ಥದಲ್ಲಿ ಆಗುವದು ಕಂಡಿದೆ.

**(ಬಾಲೋ ವ್ಯುತ್ಪತ್ತಿಮಪ್ಯೇತಿ) ನಾನಯೇತ್ಯಾದಿವಾಕ್ಯತಃ ।**
**ಆನೀಯಮಾನದೃಷ್ಟ್ಯೈವ ವ್ಯುತ್ಪತ್ತೇಃ ಸಂಭವೇ ಸತಿ ॥೪೯॥**
**ಏಷ್ಯದಾನಯನಾಯಾಯಂ ಕುತ ಏವ ಪ್ರತೀಕ್ಷತೇ ॥೫೦॥**

**ಅವತರಣಿಕೆ :** ಹೀಗೆ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಯುಕ್ತವೆಂದು ಸಮರ್ಥಿಸಿ ಈಗ ಪರರು ಹೇಳುವ ವ್ಯುತ್ಪತ್ತಿ ಪ್ರಕಾರವನ್ನು ನಿರಾಕರಿಸುತ್ತಾರೆ.

**ಅನುವಾದ :** 'ಆಕಳನ್ನು ತಾ' ಮೊದಲಾದ ವಾಕ್ಯಗಳಿಂದ ಬಾಲಕನಿಗೆ ವ್ಯುತ್ಪತ್ತಿ ಆಗುವದಿಲ್ಲ. ತರಲ್ಪಡುವ ಆಕಳನ್ನು ನೋಡುವದರಿಂದಲೇ ವ್ಯುತ್ಪತ್ತಿ ಉಂಟಾಗುವಾಗ ಮುಂದೆ ಆಕಳನ್ನು ತರುವವರೆಗೆ ಬಾಲಕನು ಅದೇಕೆ ಕಾಯುತ್ತಾನೆ ?

**ವಿವರಣೆ :** ಪರರು ಹೇಳುವ ವ್ಯುತ್ಪತ್ತಿಯ ಪ್ರಕ್ರಿಯೆಯು ಪ್ರೌಢ ಬುದ್ಧಿಯುಳ್ಳವರಿಗೂ ತಿಳಿಯುವದಿಲ್ಲ. ಆದ್ದರಿಂದ ಬಾಲಕನಿಗೆ ಈ ಸುದೀರ್ಘ ಕಠಿಣ ಕ್ರಮದಿಂದ ವ್ಯುತ್ಪತ್ತಿಯಾಗಲಾರದು. ಹೇಗೆಂದರೆ : ಆಕಳನ್ನು ತಾ ಎಂದು ಒಬ್ಬ ಹಿರಿಯನು ಹೇಳುತ್ತಾನೆ. ಇನ್ನೊಬ್ಬ ಹಿರಿಯನು ಆಕಳನ್ನು ತರುತ್ತಾನೆ. ಆಕಳನ್ನು ತರುವ ಇವನ ಪ್ರವೃತ್ತಿಯನ್ನು ಗಮನಿಸಿದ ಬಾಲಕನು ಆ ಪ್ರವೃತ್ತಿಯು ಜ್ಞಾನಪೂರ್ವಕವಾಗಿದೆಯೆಂದೂ ತನ್ನ ಸ್ತನಪಾನಾದಿಗಳಂತೆ ಕಾರ್ಯವಿಷಯಕವಾಗಿದೆಯೆಂದೂ ಶಬ್ದಜನ್ಯವೆಂದೂ ತಿಳಿಯುತ್ತಾನೆ. ಬಳಿಕ ಶಬ್ದಗಳ ಆವಾಪ–ಉದ್ವಾಪಗಳಿಂದ ಲಿಙ್ ಲೋಟ್ ಪ್ರತ್ಯಯಗಳು ಸಾಕ್ಷಾತ್ ಕಾರ್ಯತಾ ಬೋಧಕಗಳೆಂದೂ, ಉಳಿದವು ಕಾರ್ಯತಾಜ್ಞಾನಕ್ಕೆ ಸಹಾಯಕವೆಂದೂ ಅರಿಯುತ್ತಾನೆ. ಇಂತಹ ಕಠಿಣ ಪ್ರಕ್ರಿಯೆ ಬಾಲಕನ ಅಲ್ಪ ಬುದ್ಧಿಗೆ ಮೀರಿದ್ದು ಎಂಬುದು ಸ್ಪಷ್ಟವಿದೆ.

ಈ ಪ್ರಕ್ರಿಯೆಯನ್ನು ಕಲ್ಪಿಸುವ ಕಾರಣವೇನು ಎಂದು ಸುಧಾಕಾರರು ಪ್ರಶ್ನಿಸುತ್ತಾರೆ. ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ ಕೂಡುವದಿಲ್ಲವೆಂದೋ ಅಥವಾ ಅದು ಕೂಡಿದರೂ ಬಾಲಕನು ಅದನ್ನು ಅನಾದರಿಸಿ ಈ ಸುದೀರ್ಘ ಪ್ರಕ್ರಿಯೆಯನ್ನು ಆಶ್ರಯಿಸುವನೋ ? ಸಿದ್ಧಾರ್ಥ ವ್ಯುತ್ಪತ್ತಿಯು ಸುಲಭ ಉಪಾಯ, ಕಾರ್ಯತಾ ಪ್ರಕ್ರಿಯೆ ಸುದೀರ್ಘ. ದೇವದತ್ತನು ಆಕಳನ್ನು ತರುತ್ತಾನೆ. ಬಾಲಕನು ಅದನ್ನು ಪ್ರತ್ಯಕ್ಷ ನೋಡುತ್ತಾನೆ ಮತ್ತು ಶಬ್ದ–ಶಬ್ದಾರ್ಥ ಜ್ಞಾನ ಪಡೆಯುತ್ತಾನೆ.ಹೀಗೆ ತರಲ್ಪಡುವ ಆಕಳನ್ನು ನೋಡುವದರಿಂದಲೇ ವ್ಯುತ್ಪತ್ತಿ ಹುಟ್ಟುವಾಗ ಮಧ್ಯಮ (ಪ್ರಯೋಜ್ಯ) ವೃದ್ಧ ಮುಂದೆ ಆಕಳನ್ನು ತರುವವರೆಗೆ (ಆನಯನಾದಿ) ಕ್ರಿಯೆಯವರೆಗೆ ಬಾಲಕನು ಅದೇಕೆ ಕಾಯುತ್ತಾನೆ ? ಹೀಗೆ ಲಘು ಉಪಾಯವಾ

ಸಿದ್ಧಾರ್ಥ ವ್ಯುತ್ಪತ್ತಿ ಬಿಟ್ಟು ಆಕಳನ್ನು ತರುವ ಕ್ರಿಯೆಯನ್ನು ಪ್ರತೀಕ್ಷಿಸುವ ಸುದೀರ್ಘ ಮತ್ತು ಕಠಿಣವಾದ (ಗುರು) ಉಪಾಯವನ್ನು ಎಂದರೆ ಕಾರ್ಯತಾ ಪ್ರಕ್ರಿಯೆಯನ್ನು (ಗರೀಯಾಂಸಂಉಪಾಯಂ) ಕಲ್ಪಿಸುವದು ಅಸಮಂಜಸ.

**ವ್ಯುತ್ಪನ್ನೋ ವರ್ತಮಾನೇ ತು ಕ್ರಿಯಾಶಬ್ದೇ ಭವಿಷ್ಯತಿ ॥೫೦॥**
**ಪುನರ್ದೃಷ್ಟ್ವೈವ ಶಬ್ದಶ್ರುತ್ ಪಶ್ಚಾತ್ ವ್ಯುತ್ಪತ್ತಿಮೇಷ್ಯತಿ ॥೫೧॥**

**ಅವತರಣಿಕೆ :** ವರ್ತಮಾನ ಕಾಲದಲ್ಲಿ ವ್ಯುತ್ಪತ್ತಿ ಹುಟ್ಟಿದ ನಂತರ, ಭವಿಷ್ಯತ್ಕಾಲ ದಲ್ಲಿ ವ್ಯುತ್ಪತ್ತಿ ಹುಟ್ಟುತ್ತದೆ ಎಂದು ನಿರೂಪಿಸುತ್ತಾರೆ.

**ಅನುವಾದ :** ವರ್ತಮಾನಕಾಲ ವಾಚಕ ಶಬ್ದದ ವ್ಯುತ್ಪತ್ತಿಯುಳ್ಳವನು ಗಾಂ ಆನಯ – ಆಕಳನ್ನು ತಾ – ಎಂಬ ಭವಿಷ್ಯದರ್ಥ ಶಬ್ದವನ್ನು ಕೇಳಿ ಪುನಃ ತರುವ ಆಕಳನ್ನು ನೋಡಿ, ನಂತರ ಭವಿಷ್ಯದರ್ಥಕ ಶಬ್ದದ ವ್ಯುತ್ಪತ್ತಿಯನ್ನು ಹೊಂದು ತ್ತಾನೆ.

**ವಿವರಣೆ ;** ಪ್ರಯತ್ನ ಗೌರವ ಮೂಲಕ ಭವಿಷ್ಯತ್ ಕ್ರಿಯೆ, ಹಾಗೂ ಅದಕ್ಕೆ ಸಂಬಂಧಿಸಿದವುಗಳಲ್ಲಿ ವ್ಯುತ್ಪತ್ತಿ ಇಲ್ಲವೇ ಇಲ್ಲವೋ ? ಇಲ್ಲವಾದರೆ ಆ ಅರ್ಥ ಹೇಳುವ ವ್ಯವಹಾರ ಹೇಗೆ ಎಂಬುದನ್ನು ವಿವರಿಸುತ್ತಾರೆ. ಬಾಲಕನಿಗೆ ಮೊದಲು "ಆನಯತಿ" ತರುತ್ತಾನೆ ಎಂಬ ವರ್ತಮಾನ ಕಾಲದ ಕ್ರಿಯಾಪದದ ಅರ್ಥ ಜ್ಞಾನ ವಾಗುತ್ತವೆ. ನಂತರ "ಗಾಂ ಆನಯ" ಆಕಳನ್ನು ತಾ ಎಂಬ ಭವಿಷ್ಯದರ್ಥಕ ಶಬ್ದವನ್ನು ಕೇಳುತ್ತಾನೆ. ಆಕಳನ್ನು ತರುವದನ್ನು ನೋಡುತ್ತಾನೆ. ಆಗ ಅವನಿಗೆ 'ಆನಯ ಎಂಬ ಭವಿಷ್ಯದರ್ಥಕ' ರೂಪದ ಅರ್ಥ 'ತಾ' ಎಂದು ಶಬ್ದಜ್ಞಾನ (ವ್ಯುತ್ಪತ್ತಿ) ಆಗುತ್ತದೆ.

**ವರ್ತಮಾನಮತೀತಂ ಚ ಭವಿಷ್ಯದಿತಿ ಕ್ರಮಾತ್ ॥೫೧॥**
**ಆಕಾಂಕ್ಷಾದಿಯುತಂ ಯಸ್ಮಾತ್ ವಿಧೇರ್ವ್ಯಕ್ತ್ಯಪಾದನಂ ಕುತಃ ।**
**ದೃಷ್ಟ್ವಾ ಜ್ಞಾತ ಪದಾರ್ಥಸ್ಯ ಸ್ಯಾದಾಕಾಂಕ್ಷಾ ಭವಿಷ್ಯತಿ ॥೫೨॥**
**ವ್ಯುತ್ಪತ್ತಿಃ ಪ್ರಥಮಾ ತಸ್ಮಾತ್ ವರ್ತಮಾನೇಽಗತೇ ತತಃ ॥೫೩॥**

**ಅವತರಣಿಕೆ :** ಸ್ವಮತದ ವ್ಯುತ್ಪತ್ತಿಯ ಪ್ರಕ್ರಿಯೆಯನ್ನು ನಿರೂಪಿಸಿದ ನಂತರ ಈಗ ಪರರ ಕಾರ್ಯತಾವಾದದಲ್ಲಿ ವ್ಯುತ್ಪತ್ತಿ ಸರ್ವಥಾ ಕೂಡುವದಿಲ್ಲವೆಂದು ಪ್ರತಿ ಪಾದಿಸುತ್ತಾರೆ.

**ಅನುವಾದ :** ವರ್ತಮಾನ-ಭೂತ-ಭವಿಷ್ಯತ್ ಹೀಗೆ ಕಾಲತ್ರಯ ಸಂಬಂಧವುಳ್ಳ ವಸ್ತುವೇ ಆಕಾಂಕ್ಷಾ ಯೋಗ್ಯತಾ ಸನ್ನಿಧಿಯುಳ್ಳದ್ದು ಆಗುತ್ತದೆ. ಆದರೆ ಕಾಲ ತ್ರಯ ಸಂಬಂಧರಹಿತವಾದ ಲಿಙಾದಿ ವಿಧಿಗೆ ಕಾರ್ಯದಲ್ಲಿ ವ್ಯುತ್ಪತ್ತಿ ಹೇಗೆ ? ಅಥವಾ

ಆಕಾಂಕ್ಷಾರಹಿತವಾಗಿರುವದರಿಂದ ಕಾರ್ಯದಲ್ಲಿ ವ್ಯುತ್ಪತ್ತಿ ಹೇಗೆ ? ವರ್ತಮಾನ ಕಾಲದಲ್ಲಿ ನಡೆದುದನ್ನು ನೋಡಿ ಶಬ್ದಾರ್ಥ ತಿಳಿದುಕೊಂಡವನಿಗೆ ಭೂತ–ಭವಿಷ್ಯತ್ ವಸ್ತುಗಳ ಬಗ್ಗೆ ಆಕಾಂಕ್ಷಾದಿಗಳು ಹುಟ್ಟುತ್ತವೆ. ಆದ್ದರಿಂದ ಶಬ್ದದ ವ್ಯುತ್ಪತ್ತಿಯು ಮೊದಲು ವರ್ತಮಾನ ಕಾಲದಲ್ಲಿ ಆಗುತ್ತದೆ. ನಂತರ ಭೂತ–ಭವಿಷ್ಯತ್‌ಗಳಲ್ಲಿ ಉಂಟಾಗುತ್ತದೆ.

**ವಿವರಣೆ :** ಪರರು ಒಪ್ಪುವ ಕಾರ್ಯದಲ್ಲಿ ವ್ಯುತ್ಪತ್ತಿ ಹುಟ್ಟುವದೇ ಇಲ್ಲ ಎಂದು ಕಾರ್ಯತಾ ವಾದವನ್ನು ನಿರಾಕರಿಸುತ್ತಾರೆ. ವರ್ತಮಾನ–ಭೂತ–ಭವಿಷ್ಯತ್ ಹೀಗೆ ಕಾಲತ್ರಯ ಸಂಬಂಧವಿದ್ದ ವಸ್ತುವೇ ಆಕಾಂಕ್ಷಾ–ಯೋಗ್ಯತಾ ಸನ್ನಿಧಿಯುಳ್ಳದ್ದಾಗುತ್ತದೆ. ಆಕಾಂಕ್ಷಾದಿಗಳುಳ್ಳ ವಸ್ತುವಿನ ವಿಷಯದಲ್ಲಿಯೇ ವ್ಯುತ್ಪತ್ತಿ ಹುಟ್ಟುತ್ತದೆ. ಆಕಾಂಕ್ಷೆ ಇಲ್ಲದ ಸಹಸ್ರಾರು ಪ್ರವೃತ್ತಿಗಳನ್ನು ನೋಡಿದರೂ ಪ್ರವೃತ್ತಿ ಹುಟ್ಟುವದಿಲ್ಲ. ಇದು ಎಲ್ಲರ ಅನುಭವ. ಕಾರ್ಯತಾವಾದಿಯಾದರೋ ಕಾರ್ಯವು ಕಾಲತ್ರಯ ಸಂಬಂಧ ರಹಿತವೆಂದು ಹೇಳುತ್ತಾನೆ. (ಕಾರ್ಯಂ ಚ ಕಾಲತ್ರಯಾ–ಅಸಂಬದ್ಧಂ ಪರೇಣ ಇಷ್ಯತೇ) ಆದ್ದರಿಂದ ಕಾಲಸಂಬಂಧವಿಲ್ಲದ ಲಿಙಾದಿ ವಿಧಿಗೆ ಕಾರ್ಯದಲ್ಲಿ ವ್ಯುತ್ಪತ್ತಿ ಹುಟ್ಟಲಾರದು. ಇದಲ್ಲದೆ ವಿಧಿ (ಕಾರ್ಯ) ಕಾಲತ್ರಯ ಸಂಬಂಧ ರಹಿತವೆಂಬುದು ಅನುಭವ ವಿರುದ್ಧವಾಗಿದೆ. ಏಕೆಂದರೆ ಕಾರ್ಯ, ಕರ್ತವ್ಯ ಶಬ್ದಗಳಿಗೆ ಭವಿಷ್ಯತ್ಕಾಲೀನತೆ ತೋರುತ್ತದೆ.

ಸಾರಾಂಶವೆಂದರೆ, ಪ್ರಾಥಮಿಕ ವ್ಯುತ್ಪತ್ತಿಯು ಲಿಙಾದಿ ಪ್ರತ್ಯಯಗಳಿಂದ ಕಾರ್ಯಾನ್ವಿತವಾಗಿ ಹುಟ್ಟುವದಿಲ್ಲ. ಆದರೆ ವರ್ತಮಾನ ಕಾಲದಲ್ಲಿ ಹುಟ್ಟುತ್ತದೆ. ನಂತರ ಭೂತ ಭವಿಷ್ಯತ್‌ಗಳಲ್ಲಿ ಹುಟ್ಟುತ್ತದೆ. ಉದಾಹರಣಾರ್ಥವಾಗಿ ಇವನು ದೇವದತ್ತ; ಇದೂ ಆಕಳು ಎಂದು ಪ್ರತ್ಯಕ್ಷ ತೋರಿಸುವದರಿಂದ ದೇವದತ್ತ ಮತ್ತು ಆಕಳು (ಗೋ) ಶಬ್ದಗಳ ಜ್ಞಾನವಾಗುತ್ತದೆ. ನಂತರ ಶಬ್ದಗಳ ಆವಾಪ–ಉದ್ವಾಪಗಳಿಂದ ಮತ್ತು ಪ್ರತ್ಯಕ್ಷ ಕ್ರಿಯೆ ನೋಡುವದರಿಂದ 'ಆನಯತಿ ತರುತ್ತಾನೆ ಎಂಬ ಶಬ್ದದ' ಜ್ಞಾನವಾಗುತ್ತದೆ. ಇದರಿಂದಾಗಿ ಮಗುವಿಗೆ "ದೇವದತ್ತಃ ಗಾಂ ಆನಯತಿ" ಎಂಬ ವಾಕ್ಯಜ್ಞಾನ ಮೊದಲು ಆಗುತ್ತದೆ. ಈ ವಾಕ್ಯದಲ್ಲಿ ಮಗುವಿಗೆ ಆನಯನ ಕ್ರಿಯಾ ಮತ್ತು ಆನಯನಾನ್ವಿತ ಗೋಗಳಲ್ಲಿ ವ್ಯುತ್ಪತ್ತಿ ಹುಟ್ಟುತ್ತದೆ. ನಂತರ, "ದೇವದತ್ತ, ಗಾಂ ಆನಯ" (ದೇವದತ್ತನೇ ಆಕಳನ್ನು ತಾ) ಎಂದೊಡನೆ ಗೋ ಮತ್ತು ಆನಯನ ಶಬ್ದಗಳ ಅರ್ಥ ತಿಳಿದಿರುವದರಿಂದ ಆನಯ–ತಾ–ಎಂಬ ಆಜ್ಞಾರ್ಥದಲ್ಲಿ ಮಾತ್ರ ಆಕಾಂಕ್ಷಾ ಹುಟ್ಟಿ, ಅದರ ಜ್ಞಾನವು ಹುಟ್ಟುತ್ತದೆ. ಹೀಗೆ ವ್ಯುತ್ಪತ್ತಿಯು ಮೊದಲು ವರ್ತಮಾನ ಕಾಲದಲ್ಲಿ ನಂತರ ಭವಿಷ್ಯತ್ ಹಾಗೂ ಭೂತಕಾಲಗಳಲ್ಲಿ ಆಗುವದು ಅತ್ಯಂತ ಯುಕ್ತ.

**ಇಷ್ಟವನಾಕಾಂಕ್ಷತೇ ಸರ್ವೋ ನ ಪ್ರವೃತ್ತಿಮುಪೇಕ್ಷತೇ ||೫೩||**

**ಅಪರೋಕ್ಷಂ ಪರೋಕ್ಷಂ ವಾ ಜ್ಞಾನಮಿಷ್ಟಸ್ಯ ಸಾಧನಮ್ ।**
**ಕ್ವಾಪಿಚೇಷ್ಟಾ ತದರ್ಥಾ ಸ್ಯಾತ್ ಅತ್ತಿರ್ಹಿ ರಸವಿತ್ತ್ಯಯೇ ||೫೪||**
**ವಾಕ್ಯಾರ್ಥಜ್ಞಾನಮಾತ್ರೇಣ ಕ್ವಚಿದಿಷ್ಟಂ ಭವೇದಪಿ ||೫೫೪||**

**ಅವತರಣಿಕೆ :** ಶಾಸ್ತ್ರವು ಪ್ರವೃತ್ತಿ ನಿವೃತ್ತಿಗಳ ಉಪಾಯವಾಗಿದ್ದು ಈ ಪ್ರಯೋಜನವು, ವೇದ ಸಿದ್ಧಾರ್ಥ ಬೋಧಕವಾದರೆ ಕೂಡುವದಿಲ್ಲ ಎಂದು ಪೂರ್ವಪಕ್ಷಿಯು ಎತ್ತಿದ 3ನೇ ಬಾಧಕವನ್ನು ಇಲ್ಲಿ ಪರಿಹರಿಸುತ್ತಾರೆ.

**ಅನುವಾದ :** ಎಲ್ಲರೂ ಇಷ್ಟವನ್ನು ಅಪೇಕ್ಷಿಸುತ್ತಾರೆ. ಪ್ರವೃತ್ತಿಯನ್ನು ಅಪೇಕ್ಷಿಸುವದಿಲ್ಲ, ಅಪರೋಕ್ಷ ಅಥವಾ ಪರೋಕ್ಷ ಜ್ಞಾನವು ಇಷ್ಟ ಸಾಧನವಾಗಿದೆ. ಕೆಲವೆಡೆಗಳಲ್ಲಿ ಕ್ರಿಯೆಯು (ಚೇಷ್ಟೆ) (ಇಷ್ಟಾರ್ಥವಾದ) ಜ್ಞಾನದ ಸಲುವಾಗಿ ಇರುತ್ತದೆ. ಉದಾಹರಣಾರ್ಥವಾಗಿ ಕಬ್ಬನ್ನು ತಿನ್ನುವ ಅಥವಾ ಚರ್ವಣ ಕ್ರಿಯೆಯಿಂದ ರಸಜ್ಞಾನವಾಗುತ್ತದೆ. ಕೆಲವೆಡೆ ಕೇವಲ ವಾಕ್ಯಾರ್ಥಜ್ಞಾನದಿಂದಲೇ ಇಷ್ಟ ಉಂಟಾಗುತ್ತದೆ.

**ವಿವರಣೆ :** ಪೂರ್ವಪಕ್ಷಿಯು ಸಿದ್ಧಾರ್ಥ ವ್ಯುತ್ಪತ್ತಿಯಲ್ಲಿ ಬರುವದಾಗಿ ಹೇಳಿದ ಮೂರು ಬಾಧಕಗಳಲ್ಲಿ, 3ನೇ ಬಾಧಕವನ್ನು ಇಲ್ಲಿ ಪರಿಹರಿಸುತ್ತಾರೆ." ಪ್ರವೃತ್ತಿ–ನಿವೃತ್ತಿಗಳ ಉಪಾಯ ವಿಧಿಸುವದೇ ಶಾಸ್ತ್ರ, ಆದರೆ ಸಿದ್ಧಾರ್ಥ ಜ್ಞಾನವು ಪ್ರವೃತ್ತಿ–ನಿವೃತ್ತಿಗಳನ್ನು ಹುಟ್ಟಿಸುವದಿಲ್ಲ. ಕಾರ್ಯತಾ ಜ್ಞಾನದಿಂದ ಮಾತ್ರ ಇವು ಹುಟ್ಟುತ್ತವೆ. ಆದ್ದರಿಂದ ವೇದವು ಕಾರ್ಯತಾಪರ, ಸಿದ್ಧಾರ್ಥ ಪರವಲ್ಲ"–ಎಂದು ಪೂರ್ವಪಕ್ಷಿ ವಾದಿಸುತ್ತಾನೆ. ಇದರ ಉತ್ತರ ಹೀಗಿದೆ, ಪ್ರವೃತ್ತಿ–ನಿವೃತ್ತಿಗಳು ವೇದದ ಮುಖ್ಯ ಅಥವಾ ಅಮುಖ್ಯ ಪ್ರಯೋಜನ ಆಗಲಾರವು. ಪುರುಷರು ಅಪೇಕ್ಷಿಸುವದೇ ಪ್ರಯೋಜನ, ಪುರುಷರಾದರೋ ಇಷ್ಟಪ್ರಾಪ್ತಿ–ಅನಿಷ್ಟ ಪರಿಹಾರಗಳನ್ನು ಬಯಸುತ್ತಾರೆ. ಪ್ರವೃತ್ತಿ ನಿವೃತ್ತಿಗಳನ್ನಲ್ಲ. ಏಕೆಂದರೆ ಅವು ಕ್ಲೇಶಕರವಾಗಿವೆ. ಆದ್ದರಿಂದ ಪ್ರವೃತ್ತಿ–ನಿವೃತ್ತಿಗಳು ವೇದದ ಮುಖ್ಯ ಪ್ರಯೋಜನಗಳಲ್ಲ. ಇನ್ನು ಅವು ಅಮುಖ್ಯ ಪ್ರಯೋಜನಗಳೂ ಆಗುವದಿಲ್ಲ. ಏಕೆಂದರೆ ಮುಖ್ಯ ಪ್ರಯೋಜನ ಇಷ್ಟಪ್ರಾಪ್ತಿ: ಪರೋಕ್ಷ ಅಥವಾ ಅಪರೋಕ್ಷ ಜ್ಞಾನ ಅಮುಖ್ಯ ಪ್ರಯೋಜನ, ಪ್ರವೃತ್ತಿ–ನಿವೃತ್ತಿಗಳಲ್ಲ. ಉದಾಹರಣಾರ್ಥವಾಗಿ ಹೊಸದಾಗಿ ಹುಟ್ಟಿದ ಮಗುವನ್ನು ಪ್ರತ್ಯಕ್ಷ ನೋಡುವದರಿಂದ ಅಥವಾ ನಿನಗೆ ಮಗ ಹುಟ್ಟಿದ್ದಾನೆ ಎಂಬ ವಾಕ್ಯದಿಂದಾಗುವ ಪರೋಕ್ಷ ಜ್ಞಾನದಿಂದಲೂ ಅಭೀಷ್ಟ ಪುತ್ರೋತ್ಪತ್ತಿ ಸುಖ ಉಂಟಾಗುತ್ತದೆ. ಹಾಗಾದರೆ ಕ್ರಿಯೆ ಅಥವಾ ಉಪಾಸನೆಯನ್ನು ಶಾಸ್ತ್ರದಲ್ಲಿ ಉಪದೇಶಿಸಲೇ ಬಾರದೇನು ಎಂದರೆ, ಇಲ್ಲಿ ಉಪದೇಶಿಸಬಹುದು. ಏಕೆಂದರೆ ಕೆಲವೊಂದು ಸಲ, ಕ್ರಿಯೆಯೂ ಅಮುಖ್ಯ ಪ್ರಯೋಜನವಾದ ಜ್ಞಾನದ ಸಲುವಾಗಿ ಇರುತ್ತದೆ. ಉದಾ : ಕಬ್ಬನ್ನು ತಿನ್ನುವ ಅಥವಾ ಚರ್ವಣಕ್ರಿಯೆಯು

ಕಬ್ಬಿನ ರಸಾನುಭವಕ್ಕಾಗಿ ಇದೆ. ಎಂದರೆ ಚರ್ವಣಕ್ರಿಯೆಯಿಂದ ಜ್ಞಾನ ಹುಟ್ಟುತ್ತದೆ. ಶಾಸ್ತ್ರದಲ್ಲಿ ಕೆಲವೆಡೆ ಕರ್ಮವು ಜ್ಞಾನಕ್ಕೋಸ್ಕರ ವಿಧಿಸಲ್ಪಡುತ್ತದೆ.

ಒಟ್ಟಿನಲ್ಲಿ ಕಾರ್ಯಂ ಎಂದರೆ ಇಷ್ಟ ಅಥವಾ ಇಷ್ಟ ಸಾಧನ. ಭಗವಂತನು ಕೆಲವರಿಗೆ (ಒಳ್ಳೆಯ ಮನಸ್ಸುಳ್ಳ ಏಕಾಂತ ಭಕ್ತರಿಗೆ) ಇಷ್ಟನೂ ಕೆಲವರಿಗೆ ಇಷ್ಟ ಸಾಧನನೂ ಆಗಿದ್ದಾನೆ. ಈ ಉಭಯವಿಧ ಅಧಿಕಾರಿಗಳಿಗೆ ವೇದ ಮಾಡುವ ಉಪದೇಶ ಹೀಗಿದೆ.

**ಏಕಾಂತ ಭಕ್ತರಿಗೆ** : ಏಕಾಂತ ಭಕ್ತರು ಸಾತ್ವಿಕ ಸ್ವಭಾವದವರು. ಇವರು ಲೋಕ ರೂಢಿ ಅಥವಾ ಯುಕ್ತಿಗಳಿಂದ ಭಗವಂತನು ದೇಹ-ಗೇಹಾದಿ ಕರ್ತಾ ಎಂದು ಸಾಮಾನ್ಯವಾಗಿ ಅರಿತಿರುತ್ತಾರೆ. ಭಗವಂತನ ವಿಷಯಕ್ಕಿರುವ ಸ್ನೇಹ ಹಾಗೂ ಮಾಹಾತ್ಮ್ಯಜ್ಞಾನ ಮೂಲಕ, ಇವರ ಮನಸ್ಸು ಅವನನ್ನು ವಿಶೇಷವಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಹಾತೊರೆಯುತ್ತದೆ. ಅಂತೆಯೇ ಅವರು ಸಂಸ್ಕಾರ ಮೂಲಕ, ಭಗವಂತನನ್ನು ಬಿಟ್ಟು ಬೇರೊಂದನ್ನು ಪರಿಗಣಿಸುವದಿಲ್ಲ. ಇಂತಹ ಏಕಾಂತ ಭಕ್ತರಿಗೆ ಆಪ್ತ ಬಂಧುವಿನಂತೆ ಸಮಸ್ತ ವೇದವು ತನ್ನ **ಪ್ರಧಾನ ವಿಷಯವಾದ ಭಗವಂತನ ಸ್ವರೂಪವನ್ನೇ** ಪ್ರತಿಪಾದಿಸುತ್ತದೆ. ನಂತರ ವೇದವಾಕ್ಯಾರ್ಥ ಜ್ಞಾನದಿಂದ ಪರಮಾತ್ಮನನ್ನು ಹೊಂದಿದ ಈ ಏಕಾಂತ ಭಕ್ತನು ಭಗವಂತನ ಸಾಕ್ಷಾತ್ಕರವನ್ನು ಅಪೇಕ್ಷಿಸುತ್ತಾನೆ. ಆಗ ವೇದ ಅವನಿಗೆ **ಭಗವಂತನ ಸಾಕ್ಷಾತ್ಕರಕ್ಕಾಗಿ ಉಪಾಸನೆಯನ್ನು ವಿಧಿಸುತ್ತದೆ.** ಉಪಾಸನೆಯು ಶುದ್ಧಾಂತಃ ಕರಣವುಳ್ಳವರಿಗೆ ಮಾತ್ರ ಕೂಡುವದರಿಂದ **ಅಂತಃಕರಣಶುದ್ಧಿಗೋಸ್ಕರ ಕರ್ಮ ವಿಧಿಗಳಿವೆ.**

**ಸಾಮಾನ್ಯ ಭಕ್ತರಿಗೆ** : ಇವರು ಭಗವಂತನು ಇಷ್ಟವಾದ ಮೋಕ್ಷಕ್ಕೆ ಸಾಧನವೆಂದು ತಿಳಿದಿರುತ್ತಾರೆ, ಇವರೂ ಸಾತ್ವಿಕ ಸ್ವಭಾವದವರೇ. ಇವರು ಸಂಸಾರದ ವಿವಿಧ ದುಃಖಗಳನ್ನು ಕಳೆದುಕೊಳ್ಳಲು ಹಾಗೊ ಪರಮಾನಂದವನ್ನು ಪಡೆಯಲು ಬಯಸಿ, ಆ ಸಾಧನವನ್ನು ತಿಳಿಯಲಿಚ್ಛಿಸುತ್ತಾರೆ, **ಸುಪ್ರಸನ್ನನಾದ ಪರಮಾತ್ಮನೇ ಪರಮ ಇಷ್ಟ ಸಾಧನ** ಎಂದು ವೇದವು ಇವರಿಗೆ ಉಪದೇಶಿಸುತ್ತದೆ. ಹಾಗಾದರೆ ಅವನು ಪ್ರಸನ್ನನಾಗುವದು ಹೇಗೆ ? ಎಂಬ ಆಕಾಂಕ್ಷೆ ಹುಟ್ಟುತ್ತದೆ. ಆಗ **ಪ್ರಸಾದಕ್ಕಾಗಿ ಭಗವಂತನ ಸಾಕ್ಷಾತ್ಕಾರವನ್ನೂ** ಅದರ ಅಂಗವಾಗಿ ಶ್ರವಣ ಮಾನನಾದಿಗಳನ್ನೂ ಕರ್ಮಗಳನ್ನೂ ವೇದವು ಉಪದೇಶಿಸುತ್ತದೆ,

ಹೀಗೆ ಎರಡೂ ರೀತಿಯಿಂದ ಪ್ರಧಾನನಾದ ಪರಮೇಶ್ವರನೇ ವೇದಾರ್ಥ, ಪರಮಾತ್ಮನು ಮೋಕ್ಷಸಾಧನವಾದ್ದರಿಂದ ಅಪ್ರಧಾನ ಎಂದು ಭಾವಿಸಬಾರದು. ಏಕೆಂದರೆ ಪರಮಾತ್ಮನ ಸ್ವರೂಪ ಮತ್ತು ಪರಮಾತ್ಮ ವಿಷಯಕ ಜ್ಞಾನ ಇವು ಪ್ರಧಾನವಾಗಿವೆ. ಇನ್ನೊಂದು ಪ್ರಯೋಜನದ ಅಂಗವಲ್ಲ. ಆದ್ದರಿಂದ ಪರಮಾತ್ಮನ ಜ್ಞಾನವೇ ವೇದದ ಫಲ.

**ನ ಚ ಸ್ರುಕ್‌ಸ್ರುವವಹ್ನ್ಯಾದಾವತಾತ್ಪರ್ಯಂ ಶ್ರುತೇರ್ಭವೇತ್ ||೫೫||**
**ಯತ್ಕಿಂಚಿತ್ಕರಣಸ್ಯಾಪಿ ಯಜ್ಞತ್ವೈಪಾನ್ಯಥಾ ಭವೇತ್ ।**
**ತಸ್ಮಾದುಪಾಸನಾರ್ಥಂ ಚ ಸ್ವಾರ್ಥೇ ತಾತ್ಪರ್ಯವದ್ಭವೇತ್ ||೫೬||**

**ಅವತರಣಿಕೆ :** ವೇದವು ಕಾರ್ಯತಾ ಪರವಾದರೂ ಬ್ರಹ್ಮವಿಷಯಕ ವಿಚಾರ ಕೂಡುತ್ತದೆಂದು ಆಚಾರ್ಯರು ಇಲ್ಲಿ ಪ್ರತಿಪಾದಿಸುತ್ತಾರೆ. ಸ್ರುಕ್–ಸ್ರುವ–ವಹ್ನಿ ಮೊದಲಾದ ಸಿದ್ಧವಸ್ತುಗಳಲ್ಲಿ ವೇದಕ್ಕೆ ತಾತ್ಪರ್ಯವಿರುವಂತೆ ಬ್ರಹ್ಮೋಪಾಸನಾ ರೂಪ ಕಾರ್ಯಕ್ಕೆ ಕರ್ಮ ಆಗಿರುವ ಬ್ರಹ್ಮನ ಸ್ವರೂಪ–ಗುಣ–ಕ್ರಿಯಾದಿಗಳನ್ನು ಪ್ರತಿಪಾದಿಸುವ ವಾಕ್ಯಗಳೂ ಪ್ರಮಾಣ.

**ಅನುವಾದ :** ಸ್ರುಕ್ (ಯಜ್ಞದಲ್ಲಿ ತುಪ್ಪ ಮುಂತಾದವನ್ನು ಹಾಕಲು ಉಪಯೋಗಿಸುವ ಸೌಟು) ಸ್ರುವ (ತುಪ್ಪದ ಧಾರೆ, ಹನಿ ಪ್ರವಾಹ) ವಹ್ನಿ (ಬೆಂಕಿ) ಮೊದಲಾದ ಸಿದ್ಧವಸ್ತುಗಳಲ್ಲಿ (ಎಂದರೆ ಸಿದ್ಧವಸ್ತು ಬೋಧಕ ವಾಕ್ಯಗಳಲ್ಲಿ) ವೇದಕ್ಕೆ ತಾತ್ಪರ್ಯವಿಲ್ಲವೆಂದಲ್ಲ. (ಎಂದರೆ ತಾತ್ಪರ್ಯ ಇದ್ದೇ ಇದೆ.) ಹೀಗಾಗದಿದ್ದರೆ (ಅನ್ಯಥಾ) ಸ್ರುಕ್–ಸ್ರುವಾದಿಗಳಿಲ್ಲದೆ ಮಾಡಿದ ಕರ್ಮವೂ ಯಜ್ಞವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಇದೇ ನ್ಯಾಯಕ್ಕನುಗುಣವಾಗಿ ಬ್ರಹ್ಮೋಪಾಸನೆಗಾಗಿರುವ ಸಿದ್ಧರೂಪ ಬ್ರಹ್ಮಸ್ವರೂಪ, ಗುಣಕ್ರಿಯಾದಿ ಪ್ರತಿಪಾದಕ ವಾಕ್ಯಗಳಿಗೂ ವೇದಾರ್ಥವಾದ ಪರಬ್ರಹ್ಮನಲ್ಲಿ ತಾತ್ಪರ್ಯವಿದೆ.

**ವಿವರಣೆ :** ಕಾರ್ಯತಾ ವಾದಿಗಳು ಹೇಳುವಂತೆ ವೇದವು ಕಾರ್ಯತಾ ಪರ ಎಂದು ಒಪ್ಪಿದರೂ (ಅಸ್ತು ವಾ ಕಾರ್ಯಪರತ್ವಂ ವೇದಸ್ಯ) ಬ್ರಹ್ಮಜಿಜ್ಞಾಸಾ ಕೂಡುತ್ತದೆ ಎಂದು ಇನ್ನೊಂದು ಪಕ್ಷವನ್ನೂ ಮಂಡಿಸಲಾಗಿದೆ. ಆತ್ಮಾನಂ ಉಪಾಸೀತ (ಪರಬ್ರಹ್ಮನನ್ನು ಧ್ಯಾನ ಮಾಡಬೇಕು) ಎಂದು ಉಪಾಸನಾಕಾರ್ಯ ವಿಧಾಯಕ ವೇದವಾಕ್ಯವಿದೆಯಷ್ಟೇ. ಈ ವಾಕ್ಯವಂತೂ ಪ್ರಮಾಣ. ಬ್ರಹ್ಮನನ್ನು ಕುರಿತು ಉಪಾಸನೆ ಮಾಡುವುದರಿಂದ ಈ ಉಪಾಸನೆಯಲ್ಲಿ ಬ್ರಹ್ಮ ಕರ್ಮನಾಗಿದ್ದಾನೆ. ಬ್ರಹ್ಮೋಪಾಸನೆ ವಿಧಿಸುವ ವೇದವಾಕ್ಯ ಪ್ರಮಾಣವಾದ್ದರಿಂದ, ಸಿದ್ಧರೂಪ ಬ್ರಹ್ಮನ ಸ್ವರೂಪ, ಗುಣ–ಕ್ರಿಯಾದಿಗಳನ್ನು ತಿಳಿಸುವ "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಮೊದಲಾದ ವಾಕ್ಯಗಳಿಗೂ ವೇದಾರ್ಥವಾದ ಪರಬ್ರಹ್ಮನಲ್ಲಿ ತಾತ್ಪರ್ಯವಿರುವುದರಿಂದ ಇವೂ ಪ್ರಮಾಣವೇ. ಆದ್ದರಿಂದ ಬ್ರಹ್ಮಜಿಜ್ಞಾಸಾ ಯುಕ್ತವಾಗಿದೆ.

ಈ ವಿಷಯದಲ್ಲಿ ಕಾರ್ಯತಾ ವಾದಿಗಳಿಗೆ ಸಮ್ಮತವಾದ ದೃಷ್ಟಾಂತವನ್ನು ಕೊಡಲಾಗಿದೆ. ವೇದದಲ್ಲಿ ಯಜ್ಞ ವಿಧಿಸಲಾಗಿದೆ. ಉದಾ : 'ಜ್ಯೋತಿಷ್ಟೋಮೇನ ಸ್ವರ್ಗ ಕಾಮೋ ಯಜೇತ' ಯಜ್ಞವು ವಿಹಿತವಾದ್ದರಿಂದ ಯಜ್ಞದಲ್ಲಿ ಬಲಿ ಪಶುವಿನ ಬಂಧನಕ್ಕಾಗಿರುವ ಯೂಪವೂ (ಸ್ತಂಭ) ವಿಹಿತವೇ, ಏಕೆಂದರೆ ಈ ಯೂಪ

ಸಾಮಾನ್ಯ ಖಂಬವಲ್ಲ. 'ಖಾದಿರೋ ಯೂಪೋ ಭವತಿ' (ಯೂಪವು ಖಾದಿರ ಕಟ್ಟಿಗೆಯದು ಇರಬೇಕು.) 'ಯೂಪಂ ಅಷ್ಟಾಶ್ರೀಕರೋತಿ' (ಖಂಬವನ್ನು ಎಂಟು ಗಣ್ಣುಗಳುಳ್ಳದ್ದನ್ನಾಗಿ ಮಾಡುತ್ತಾನೆ) ಮುಂತಾದ ವಾಕ್ಯಗಳಿವೆ. ಇವೆಲ್ಲ ವಿಧಿಪರ ವಾಕ್ಯಗಳಲ್ಲದಿದ್ದರೂ ಪ್ರಮಾಣವೆಂದೇ ಮೀಮಾಂಸಕರ ಅಭಿಪ್ರಾಯ. ಏಕೆಂದರೆ ಸಂಸ್ಕಾರವಿಶಿಷ್ಟ ಖಂಬಕ್ಕೇನೇ ಪಶುವನ್ನು ಕಟ್ಟಿದರೆ, ಯಜ್ಞಫಲ ದೊರೆಯುತ್ತದೆ. ಹೀಗಾಗಿ ಈ ಎಲ್ಲ ವಾಕ್ಯಗಳೂ ಪ್ರಮಾಣ. ಇದರಂತೆ 'ಸ್ರುವೇಣ ಅಭಿಘಾರ ಯತಿ' ಮುಂತಾದ ವಾಕ್ಯಗಳಿಗೂ ಯಜ್ಞ ಸಾಮಗ್ರಿಗಳಾದ ಸ್ರುಕ್-ಸ್ರುವ-ವಹ್ನಿ ಮುಂತಾದವುಗಳಲ್ಲಿಯೂ ವೇದಕ್ಕೆ ತಾತ್ಪರ್ಯವಿದೆ ಎಂದು ಮೀಮಾಂಸಕರು ಒಪ್ಪುತ್ತಾರೆ. ಹೀಗೆ ಒಪ್ಪದಿದ್ದರೆ ಈ ಸಂಸ್ಕಾರ ವಿಶಿಷ್ಟ ಪದಾರ್ಥಗಳಿಲ್ಲದೆ ಸಾಮಾನ್ಯ ಚಮಚೆ ಮೊದಲಾದವುಗಳಿಂದ ಮಾಡಿದ ಕರ್ಮವೂ ಯಜ್ಞವೆನಿಸುವ ಅನಿಷ್ಟ ಪ್ರಸಂಗ ಬರುತ್ತದೆ.

ಹೀಗೆ ಸ್ರುಕ್-ಸ್ರುವ-ವಹ್ನಿ ಮುಂ. ಸಿದ್ಧವಸ್ತುಗಳಲ್ಲಿ ವೇದಕ್ಕೆ ಪ್ರಾಮಾಣ್ಯ ವಿರುವಂತೆ, ಬ್ರಹ್ಮೋಪಾಸನಾರೂಪವಾದ ಕಾರ್ಯಕ್ಕೆ ಕರ್ಮವಾದ ಸಿದ್ಧರೂಪ ಬ್ರಹ್ಮನ ಸ್ವರೂಪ ಹಾಗೂ ಗುಣಕ್ರಿಯಾದಿ ಪ್ರತಿಪಾದಕ ವೇದವಾಕ್ಯಗಳಲ್ಲಿಯೂ (ಸತ್ಯಂ ಜ್ಞಾನಂ ಅನಂತ ಬ್ರಹ್ಮ), ವೇದಕ್ಕೆ ತಾತ್ಪರ್ಯವಿದೆ.

**ಇತಿ ಶಬ್ದೋಽನ್ವಯೇಽಗ್ನಾವಿತ್ಯನ್ನೀತೇ ಸ್ಮೃತಿರ್ಭವೇತ್ ।**
**ಇತಿ ಶಬ್ದವ್ಯಪೇತಾನಿ ಹ್ಯಪಿ ಸಂತಿ ವಚಾಂಸ್ಯಲಮ್ ॥೫೭॥**
**ಆತ್ಮಾನಮಿತ್ಯೇವಾದೀನಿ ಯೋಗೇಽಗ್ನಾವಪಿ ತತ್ಸಮಮ್ ॥೫೮॥**

**ಅವತರಣಿಕೆ ;** "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಮುಂ, ವಾಕ್ಯಗಳಲ್ಲಿ ವೇದಕ್ಕೆ ತಾತ್ಪರ್ಯವಿಲ್ಲ. ಏಕೆಂದರೆ ಆತ್ಮೋಪಾಸನೆಗಾಗಿ ಆತ್ಮಸ್ವರೂಪದ ನಿರ್ಧಾರ ಬೇಕಿಲ್ಲ. ಆರೋಪಿತಾಕಾರದಿಂದ ಉಪಾಸನೆ ಕೂಡುತ್ತದೆ. "ಯೋಷಿತಂ ಅಗ್ನಿಂ ಧ್ಯಾಯೀತ" ಎಂಬಲ್ಲಿಯಂತೆ. ಇದಲ್ಲದೆ "ಆತ್ಮೇತ್ಯೇವೋಪಾಸೀತ ಎಂಬಲ್ಲಿ ಇತಿಶಬ್ದವು ವಿಪರೀತಾರ್ಥಕವಾಗಿದೆ" ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸಲಾಗಿದೆ,

**ಅನುವಾದ :** 'ಆತ್ಮೇತ್ಯುಪಾಸೀತ' ಎಂಬಲ್ಲಿ ಆತ್ಮ ಶಬ್ದದ ಮುಂದೆ ಇತಿ ಶಬ್ದ ಅನ್ವಯಿಸಿ (ಉನ್ನಯೇ-ಯೋಗೇ) ಅದಕ್ಕೆ ವಿಪರೀತಾರ್ಥ ಹೇಳಿದರೆ, 'ಅಗ್ನೌ ಜುಹೋತಿ' ಎಂಬಲ್ಲಿಯೂ ಅಗ್ನಿ ಶಬ್ದದ ಮುಂದೆ ವಿಪರೀತಾರ್ಥ ಬೋಧಕ. ಇತಿ ಶಬ್ದ ಅನ್ವಯಿಸಿದರೆ (ಉನ್ನೀತೇ-ಯೋಜನೇ) ಅಗ್ನಿಸ್ಮರಣೆಯಿಂದಲೇ ಯಜ್ಞಾದಿಗಳಾಗುವ ಪ್ರಸಂಗ ಬರುತ್ತದೆ. ಇನ್ನು ಇತಿ ಶಬ್ದವಿಲ್ಲದ 'ಆತ್ಮನಮೇವ ಉಪಾಸೀತ' ಮುಂತಾದ ಅನೇಕ ವೇದವಾಕ್ಯಗಳು (ಅಲಂವಚಾಂಸಿ) ಇವೆ. ಇಲ್ಲಿಯೂ ಅಧ್ಯಾಹೃತ ಇತಿ ಶಬ್ದ ಯೋಜಿಸಿದರೆ (ಯೋಗೇ) 'ಅಗ್ನೌ ಜುಹೋತಿ' ಎಂಬ

ಲ್ಲಿಯೂ ಅಧ್ಯಾಹೃತ ಇತಿ ಶಬ್ದದ ಯೋಜನೆ ಸಮಾನವಾಗಿವೆ. (ಇದರಿಂದಾಗಿ ಅಗ್ನಿಸ್ಮರಣದಿಂದ ಹೋಮವಾಗುವ ಪ್ರಸಂಗ ಬರುತ್ತದೆ.)

**ವಿವರಣೆ : ಪೂರ್ವಪಕ್ಷ :** ದೃಷ್ಟಾಂತ–ದಾರ್ಷ್ಟಾಂತಿಕಗಳಲ್ಲಿ ವ್ಯತ್ಯಾಸವಿದೆ. ಯೂಪಾದಿಗಳ ಸ್ವರೂಪ ನಿಶ್ಚಯವಾಗದಿದ್ದರೆ ಯಜ್ಞಾಂಗವಾದ ಪಶುಬಂಧವೇ ಕೂಡುವದಿಲ್ಲವಾದ್ದರಿಂದ ಯೂಪಸ್ವರೂಪ ನಿರ್ಣಯಿಸುವ 'ಖಾದಿರೋಯೂಪೋ ಭವತಿ, ಯೂಪಂ ಅಷ್ಟಾಶ್ರೀಕರೋತಿ ಮುಂತಾದ ವಾಕ್ಯಗಳಲ್ಲಿ ವೇದಕ್ಕೆ ತಾತ್ಪರ್ಯ ವಿದೆ. ಆದರೆ ಉಪಾಸನೆ ಹಾಗಲ್ಲ.ಏಕೆಂದರೆ ಯೋಷಿತಂ ಅಗ್ನಿಂ ಧ್ಯಾಯೀತ, ಎಂಬಲ್ಲಿ ಆರೋಪಿತಾಕಾರದಿಂದ ಉಪಾಸನೆ ಕೂಡುತ್ತದೆ. ಆತ್ಮ ಸ್ವರೂಪ ಅಥವಾ ಗುಣ ಕ್ರಿಯಾಬೋಧಕ ವಾಕ್ಯಗಳಲ್ಲಿ ವೇದಕ್ಕೆ ತಾತ್ಪರ್ಯವಿಲ್ಲ. ಇದಲ್ಲದೆ 'ಓಮಿತ್ಯೇವ ಉಪಾಸೀತ' ಎಂಬಲ್ಲಿರುವ ಇತಿ ಶಬ್ದ ವಿಪರೀತಾರ್ಥ ವಾಚಕವಿದೆ. ಆದ್ದರಿಂದ ಕೇವಲ ಸ್ಮರಣೆಯಿಂದ ಉಪಾಸನೆ ಎಂದು ವೇದದ ತಾತ್ಪರ್ಯ. ಸ್ರುಕ್-ಸ್ರುವಾದಿ ವಿಷಯು ಹಾಗಲ್ಲ.

**ಸಿದ್ಧಾಂತ :** ನಿನ್ನ ವಾದ ಅಯುಕ್ತ.

I) ಯಜ್ಞದಲ್ಲಿ ಬಲಿಪಶುವನ್ನು ಕಟ್ಟುವ ಯೂಪವು (ಕಂಬ) ಖಾದಿರ ಕಟ್ಟಿಗೆ ಯದ್ದೇ ಇರಬೇಕು; ಸ್ರುಕ್-ಸ್ರವಾದಿ ಯಜ್ಞ-ಪದಾರ್ಥಗಳು ಸಂಸ್ಕಾರ ಹೊಂದಿರ ಬೇಕು. ಇಲ್ಲವಾದರೆ ಅಪೂರ್ವ ಹುಟ್ಟುವದಿಲ್ಲ. ಅದರಂತೆ ಇಲ್ಲದಿದ್ದುದನ್ನು (ಅವಿದ್ಯಮಾನಂ) ಆರೋಪಿತಾಕಾರದಲ್ಲಿ ಉಪಾಸಿಸಿದರೆ, ಉಪಾಸನೆಯ ಫಲವಿಲ್ಲ ವೆಂದು ನಾವು ಹೇಳುತ್ತೇವೆ. ಈ ವಿಷಯು 'ನ ಪ್ರತೀಕೇ ನ ಹಿ ಸಃ (IV-1-4) ಎಂಬ ಬ್ರಹ್ಮಸೂತ್ರದಿಂದ ತಿಳಿದುಬರುತ್ತದೆ. ಆದ್ದರಿಂದ ಸ್ರುಕ್-ಸ್ರುವಾದಿಗಳಲ್ಲಿ ವೇದಕ್ಕೆ ತಾತ್ಪರ್ಯವಿರುವಂತೆ, 'ಸತ್ಯಂ ಜ್ಞಾನಂ', ಅನಂತಂ ಬ್ರಹ್ಮ ಮುಂತಾದ ಬ್ರಹ್ಮ ಸ್ವರೂಪ ನಿರೂಪಕ ವಾಕ್ಯಗಳಲ್ಲಿಯೂ ವೇದಕ್ಕೆ ತಾತ್ಪರ್ಯವಿದೆ.

II) 'ಓಮಿತ್ಯುಪಾಸೀತ', ಎಂಬಲ್ಲಿ ಇತಿ ಶಬ್ದ ಪ್ರಕಾರವಾಚಿಯಾಗಿದೆ. ವಿಪರೀತಾರ್ಥ ವಾಚಕವಲ್ಲ ಇನ್ನು ವಿಪರೀತಾರ್ಥ ತೆಗೆದುಕೊಂಡರೆ'ಅಗ್ನೌ ಜುಹೋತಿ' ಎಂಬಲ್ಲಿಯೂ ಅಗ್ನಿಯಲ್ಲಿ ಹೋಮ ಮಾಡುವ ಬದಲಾಗಿ ಅಗ್ನಿಸ್ಮರಣೆಯಿಂದಲೇ ಹೋಮ ಸಾಗಲಿ.

ಇನ್ನು 'ಅಗ್ನೌ ಜುಹೋತಿ'ಎಂಬಲ್ಲಿ ಇತಿ ಶಬ್ದವಿಲ್ಲವಾದ್ದರಿಂದ ವಿಪರೀತಾರ್ಥ ಪ್ರಸಕ್ತಿಯೇ ಇಲ್ಲವೆಂದು ನೀನು ವಾದಿಸಿದರೆ, ಇತಿ ಶಬ್ದರಹಿತವಾದ ಉಪಾಸನಾ ವಾಕ್ಯಗಳೂ ಅನೇಕ (ಅಲಂ) ಇವೆ. ಉದಾ : ಆತ್ಮಾನಂ ಉಪಾಸೀತ । ಆತ್ಮಾನ ಮೇವ ಉಪಾಸೀತ । ಉದ್ಗೀಥಂ ಉಪಾಸೀತ. ಒಂದು ವೇಳೆ ನೀನು ಈ ವಾಕ್ಯಗಳಲ್ಲಿ ಇತಿ ಶಬ್ದ ಅಧ್ಯಾಹಾರ ಮಾಡಿದರೆ, 'ಅಗ್ನೌ ಜುಹೋತಿ' ಎಂಬಲ್ಲಿಯೂ ಇತಿ ಶಬ್ದ ವನ್ನು ಅಧ್ಯಾಹಾರ ಏಕೆ ಮಾಡಬಾರದು ?

**ಏಕವಾಕ್ಯತ್ವಯೋಗೇ ತು ವೇದಸ್ಯಾಪಿ ಹ್ಯಶೇಷತಃ ॥೫೮॥**
**ವಾಕ್ಯಭೇದೋ ನ ಯುಕ್ತಃಸ್ಯಾದ್ಯೋಗಶ್ಚ ಸ್ಯಾನ್ಮಹಾಫಲೇ ॥೫೯॥**

**ಟೀಪು : ವಾಕ್ಯಾರ್ಥಚಂದ್ರಿಕಾಕಾರರು** ನಿರೂಪಿಸಿದಂತೆ ಈ ವರೆಗೆ ಸಕಲ ವೇದವು ಕಾರ್ಯತಾಪರ ಎಂಬ ಕಾರ್ಯತಾವಾದಿಗಳ ಮತವನ್ನು ನಿರಾಕರಿಸಿ ಸಮಸ್ತವೇದವು ಬ್ರಹ್ಮಪರ ಎಂಬುದನ್ನು **ಎರಡು** ರೀತಿಯಿಂದ ಪ್ರತಿಪಾದಿಸಲಾಯಿತು.

i) ಸಕಲವೇದವು ಸ್ವಪ್ರಧಾನತಯಾ, ಬ್ರಹ್ಮಪರ ಎಂದರೆ ಮುಖ್ಯವೃತ್ತಿಯಿಂದ ಬ್ರಹ್ಮವಾಚಕವಾಗಿದೆ.

ii) ವೇದ ಕಾರ್ಯತಾಪರ ಎಂದು ಒಪ್ಪಿದರೂ ಅದಕ್ಕೆ ಉಪಾಸನಾಕಾರ್ಯದ ಕರ್ಮಭೂತವಾದ ಬ್ರಹ್ಮನಲ್ಲಿ ತಾತ್ಪರ್ಯವಿದೆ. ಎಂದರೆ **"ಉಪಾಸನಾವಿಧಿಶೇಷತಯಾ" ವೇದ ಬ್ರಹ್ಮಪರವಾಗಿದೆ.**

ಇನ್ನು ಮುಂದೆ ಕಾರ್ಯತಾವಾದವನ್ನು ನಿರಾಕರಿಸಿದ ವೃತ್ತಿಕಾರರ (ಸೂತ್ರ ವ್ಯಾಖ್ಯಾನಕಾರರ) ಪರಿಹಾರ ಪ್ರಕಾರವು ಅಯುಕ್ತವೆಂದು ನಿರೂಪಿಸುತ್ತಾರೆ. (ವೃತ್ತಿ ಎಂದರೆ "ಸೂತ್ರಾನುಕಾರಿಭಿಃ ಪದ್ಯೈಃ ಸೂತ್ರಾರ್ಥವರ್ಣನಂ".

**ಅವತರಣಿಕೆ :** ವೃತ್ತಿಕಾರರಲ್ಲಿ ಒಬ್ಬರಾದ ಮಾಯಾವಾದಿಗಳ ಹೇಳಿಕೆ ಅಯುಕ್ತವೆಂದು ನಿರೂಪಿಸುತ್ತಾರೆ. ಅವರಾದರೋ ವೇದಾಂತ ಮಾತ್ರ ಬ್ರಹ್ಮನಿಷ್ಠವೆಂದೂ ಉಳಿದ ವೇದ ಕಾರ್ಯನಿಷ್ಠವೆಂದೂ ಹೇಳುತ್ತಾರೆ. ಆದರೆ ಇದು ಯುಕ್ತವಲ್ಲ.

**ಅನುವಾದ :** ಸಕಲ ವೇದಗಳಿಗೂ ಏಕವಾಕ್ಯತ್ವ ಕೂಡುವಾಗ ಬ್ರಹ್ಮನಿಷ್ಠ ಕಾರ್ಯನಿಷ್ಠ ಎಂಬ ವಾಕ್ಯಭೇಧ ಯುಕ್ತವಲ್ಲ. ಮೋಕ್ಷರೂಪ ಮಹಾಫಲವು ಯಾರಿಂದ ಆಗುವದೋ ಆ ಬ್ರಹ್ಮನಲ್ಲಿ (ಮಹಾಫಲೇ–ಮಹತ್–ಫಲಂ ಕೈವಲ್ಯಂ ಯಸ್ಮಾತ್ ತತ್, ತಸ್ಮಿನ್) ಸಮಗ್ರ ವೇದದ ಸಂಬಂಧವು (ಯೋಗ) ಆಗುತ್ತದೆ. ಎಂದರೆ ಸಕಲ ವೇದವು ಬ್ರಹ್ಮನನ್ನು ಪ್ರತಿಪಾದಿಸುವದರಿಂದ ವೇದಕ್ಕೆ ಬ್ರಹ್ಮನೊಡನೆ ಸಂಬಂಧ ಆಗುತ್ತದೆ.

**ವಿವರಣೆ :** ಸಕಲ ವೇದವು ಕಾರ್ಯನಿಷ್ಠ ಎಂಬ ಕಾರ್ಯತಾವಾದವನ್ನು ನಿರಾಕರಿಸುವ ಮಾಯಾವಾದಿಗಳು ವೇದದಲ್ಲಿ ಬ್ರಹ್ಮನಿಷ್ಠ ಕಾರ್ಯನಿಷ್ಠ ಎಂಬ ಭೇಧ ಮಾಡುತ್ತಾರೆ. ಅವರ ಪ್ರಕಾರ 'ಅಥಾತೋ ಧರ್ಮಜಿಜ್ಞಾಸಾ' ಎಂದು ಆರಂಭವಾಗುವ ಪೂರ್ವ ಮೀಮಾಂಸಾ ಕಾರ್ಯನಿಷ್ಠ ವೇದಭಾಗವನ್ನು ವಿಚಾರಿಸುತ್ತದೆ, ಮತ್ತು ಶಾರೀರಿಕ ಮೀಮಾಂಸಾ (ಬ್ರಹ್ಮಸೂತ್ರ) ಬ್ರಹ್ಮನಿಷ್ಠ ವೇದಭಾಗವನ್ನು ವಿಚಾರಿಸುತ್ತ ದೆ.

ಆದರೆ ವೇದದಲ್ಲಿ ಕರ್ಮನಿಷ್ಠ, ಬ್ರಹ್ಮನಿಷ್ಠ ಎಂಬ ವಿಭಾಗ ಮಾಡುವದೇಕೆ? ಸಕಲ ವೇದಕ್ಕೆ ಏಕ ವಾಕ್ಯತ್ವ ಅಸಂಭವವೆಂದೋ ? ಅಥವಾ ಏಕವಾಕ್ಯತ್ವ

ಕೊಡಿದರೂ ವೇದದಲ್ಲಿ ಭೇದ ಕಲ್ಪಿಸಲಾಗುತ್ತದೆಯೇ? ಎರಡೂ ವಿಕಲ್ಪ ಅಯುಕ್ತ, ಏಕವಾಕ್ಯತ್ವ ಕೊಡುತ್ತಿದ್ದರೂ ವಿಭಾಗ ಕಲ್ಪಿಸಿದರೆ ಕಲ್ಪನಾಗೌರವ ದೋಷ ಬರುತ್ತದೆ. ಇನ್ನು ಒಂದನೆಯ ವಿಕಲ್ಪವೂ ದೋಷಯುಕ್ತ. ಸಕಲವೇದಕ್ಕ ಏಕವಾಕ್ಯತ್ವ ಕೊಡಿಯೇ ಕೊಡುತ್ತದೆ. ಹಿಂದೆ ಹೇಳಿದಂತೆ, ಏಕಾಂತ ಭಕ್ತರು ಮತ್ತು ಸಾಮಾನ್ಯ ಭಕ್ತರು ಹೀಗೆ ಉಭಯತರಿಗೂ ವೇದವು ಮುಖ್ಯವೃತ್ತಿ ಯಿಂದ ಪರಬ್ರಹ್ಮಪ್ರತಿಪಾದಕವಾಗಿದೆ. ಮತ್ತು ಮುಂದೆ ಕೂಡ ಜ್ಞಾನಕ್ಕೋೀ ಸ್ಕರ ಕರ್ಮವಿದೆ. (ಜ್ಞಾನಫಲಾನ್ಯೇವ ಕರ್ಮಾಣಿ) ಎಂದು ಹೇಳಲಾಗುವದು.

ಮುಖ್ಯವಾಗಿ ವಾಕ್ಯಭೇದವೇ ಅಯುಕ್ತ. ಸಕಲ ವೇದವು ಕಾರ್ಯನಿಷ್ಠವೆನ್ನುವ ಕಾರ್ಯತಾವಾದಿಯನ್ನು ಖಂಡಿಸಲು ವೇದದ ಒಂದು ಭಾಗ ಮಾತ್ರ ಬ್ರಹ್ಮನಿಷ್ಠ ಎಂದು ತೋರಿಸಿದರ ಸಾಕು. ಇದನ್ನು ಬಿಟ್ಟು ವಾಕ್ಯಭೇಧವನ್ನೇಕೆ ಮಾಡುತ್ತೀ? [ಇನ್ನು ಕರ್ಮಕಾಂಡ ವೇದಕ್ಕೆ ಕರ್ಮಜ್ಞಾನವೇ ಫಲ ಎಂಬ ಮೀಮಾಂಸಕರ ವಾಕ್ಯ ವನ್ನು ಅನುಸರಿಸಿ ವೇದದಲ್ಲಿ ಬ್ರಹ್ಮನಿಷ್ಠ, ಕರ್ಮನಿಷ್ಠ ಎಂದು ವಿಭಾಗ ಮಾಡ ಲಾಗಿದೆ ಎಂದು ಮಾಯಾವಾದಿ ಹೇಳುವದು ಅನುಚಿತ, ಏಕೆಂದರೆ ಇನ್ನೊಬ್ಬ ಮೀಮಾಂಸಕ, ಉಪನಿಷತ್ತುಗಳು ವೇದದ ಮರುಭೂಮಿ, ಬಂಜೆ ಪ್ರದೇಶ, ವ್ಯರ್ಥ (ವೇದೋಷರಾಃ ವೇದಾಂತಾಃ) ಎನ್ನುತ್ತಾನೆ. ಅವನ ವಚನವನ್ನೇಕೆ ನೀನು ತೆಗೆದುಕೊಳ್ಳುವದಿಲ್ಲ ? ಎಂದು ಪ್ರಶ್ನಿಸಬೇಕಾಗುತ್ತದೆ. ಉಪಕ್ರಮಾದಿ ಭೇದ ಮೂಲಕ ವೇದವಿಭಾಗ ಎನ್ನುವದೂ ಅಯುಕ್ತವೇ. ಏಕೆಂದರೆ ಅವಾಂತರ ವೇದ ವಾಕ್ಯಗಳಲ್ಲಿಯೂ ಉಪಕ್ರಮಾದಿ ವ್ಯತ್ಯಾಸ ಮೂಲಕ ವಾಕ್ಯಭೇದ ಮಾಡಬೇಕಾ ದೀತು. ಕೊನೆಯದಾಗಿ ಸಕಾಮ-ನಿಷ್ಕಾಮ, ಸ್ವರ್ಗಕಾಮ-ಮೋಕ್ಷಕಾಮ ಮೊದಲಾದ ಅಧಿಕಾರಿ ಭೇದ ಮೂಲಕ ವೇದವಿಭಾಗ ಎಂಬುದು ಅಯುಕ್ತ. ಹಾಗೆ ಹೇಳುವದಾದರೆ ಉಪನಿಷತ್ತಿನಲ್ಲಿಯೂ ವಾಕ್ಯಭೇದ ಮಾಡಬೇಕಾದೀತು !]

ಇನ್ನು ನಿರೀಶ್ವರ ಸಾಂಖ್ಯನು ಹೇಳುವದೇನೆಂದರೆ (ಅಪರಃ ಆಹ) : ವೇದಕ್ಕೆ ಏಕವಾಕ್ಯತೆ ಇದೆ. ಏಕವಾಕ್ಯತೆ ಎಂದರೆ ಸಕಲ ವೇದ ಕರ್ಮಪರ. ಯಜ್ಞಾದಿ ಕರ್ಮದಿಂದ ಸ್ವರ್ಗಫಲ ದೊರೆಯುತ್ತದೆ. ಇದಕ್ಕಾಗಿ ದೇಹಭಿನ್ನನಾದ ಆತ್ಮನಿದ್ದಾನೆ ಎಂಬ ಆತ್ಮಜ್ಞಾನ ಬೇಕು. ಎಂದರೆ ಆತ್ಮಜ್ಞಾನವು ಕರ್ಮಾಂಗ ಎಂದು ಸಾಂಖ್ಯನ ಅಭಿಪ್ರಾಯ. ಅಥವಾ ಕರ್ಮಕ್ಕೆ ಅಂಗಭೂತರಾದ ದೇವತೆ ಗಳ ಸ್ಮರಣೆಗಾಗಿ ಆತ್ಮಜ್ಞಾನ ಬೇಕು ಎಂದು ಸಾಂಖ್ಯನ ವಾದ. ಆದರೆ ಈ ವಾದವೂ ಅಯುಕ್ತ. ಅಲ್ಪಫಲವಾದ ಕರ್ಮದಲ್ಲಿ ಸಕಲ ವೇದದ ತಾತ್ಪರ್ಯ ಹೇಳುವದು ಅಸಮಂಜಸ. ಹಿಂದೆ ನಿರೂಪಿಸಿದಂತೆ ಯಾರಿಂದ ಮೋಕ್ಷ ರೂಪವಾದ ಮಹಾ ಫಲ ದೊರೆಯುವದೋ, ಆ ಪರಬ್ರಹ್ಮನಲ್ಲಿಯೇ ಸಕಲ ವೇದದ ಸಂಬಂಧ(ಯೋಗ) ಅಥವಾ ಏಕವಾಕ್ಯತ್ವ ಹೇಳುವದೇ ಯುಕ್ತ. ಎಂದರೆ ಸಕಲ ವೇದಗಳು ಸಿದ್ಧರೂಪ

ಪರಬ್ರಹ್ಮ ಪ್ರತಿಪಾದಕ. ಅವು ಕಾರ್ಯನಿಷ್ಠವಲ್ಲ.

ಅಥವಾ

**೨ನೇ ವ್ಯಾಖ್ಯಾನ :** ಹಿಂದೆ 58(ಅ)ದಲ್ಲಿ ಯೋಗೇಗ್ನಾವಪಿ ತತ್ಸಮಂ 'ಎಂದು' ಹೇಳಿದ್ದು ಅಯುಕ್ತ. ಏಕೆಂದರೆ ಉಪಾಸನಾ ವಾಕ್ಯಗಳಲ್ಲಿ ಕೆಲವೆಡೆಯಲ್ಲಿಯಾದರೂ ಇತಿ ಶಬ್ದವಿರುವದರಿಂದ ಇತಿಶಬ್ದವಿಲ್ಲದ ಉಪಸನಾ ವಾಕ್ಯಗಳಲ್ಲಿ ಇತಿ ಶಬ್ದವನ್ನು ಅಧ್ಯಾಹಾರ ಮಾಡುವದು ಉಚಿತ. ಆದರೆ ಕರ್ಮಕಾಂಡ ವಾಕ್ಯಗಳಲ್ಲಿ ಎಲ್ಲಿಯೂ ಇತಿ ಶಬ್ದವಿಲ್ಲವಾದ್ದರಿಂದ ಅಲ್ಲಿ ಇತಿ ಶಬ್ದದ ಅಧ್ಯಾಹಾರ ಅಸಂಗತ. ಇನ್ನು ಉಪಸನಾ ವಾಕ್ಯಗಳಲ್ಲಿದ್ದ ಇತಿ ಶಬ್ದವನ್ನು ಕರ್ಮಕಾಂಡದ 'ಅಗ್ನೌ ಜುಹೋತಿ' ಎಂಬುದಕ್ಕೂ ಅನ್ವಯಿಸುವದು ಅನುಚಿತ. ಏಕೆಂದರೆ ಉಪನಿಷತ್ತು ಮತ್ತು ಕರ್ಮ ಕಾಂಡಗಳು ಪ್ರತ್ಯೇಕ. ವೇದದಲ್ಲಿ ಏಕವಾಕ್ಯತ್ವವಿಲ್ಲ– ಎಂಬ ವಾದವನ್ನು ಇಲ್ಲಿ ನಿರಾ ಕರಿಸುತ್ತಾರೆ. ಸಕಲ ವೇದಕ್ಕೆ ಏಕವಾಕ್ಯತ್ವ ಇದೆ. ವಾಕ್ಯಭೇದ ಉಚಿತವಲ್ಲ. ಸಕಲ ವೇದದ ಸಂಬಂಧ, ತಾತ್ಪರ್ಯ, ಏಕವಾಕ್ಯತ್ವ, ಮೋಕ್ಷರೂಪ ಫಲ ನೀಡುವ ಪರಬ್ರಹ್ಮನಲ್ಲಿ ಇದೆ.

**ಇತಿ ಬ್ರೂಯಾದಿತಿ ವಚೋ ಗತಮಗ್ನೌ ಸಮೀಪಗಂ ||೫೯||**

**ಕಲ್ಪನಾಗೌರವಂ ಚೇತ್ಸ್ಯಾತ್ ಪೃಥಕ್ತಾತ್ಪರ್ಯಕಲ್ಪನೇ ।**

**ಕಲ್ಪನಾಗೌರವಾದೇವ ಪದಾರ್ಥಾ ನ ಸ್ಮರೇನ ಹಿ ||೬೦||**

**ಪ್ರಮಾಣಾವಗತತ್ವಂ ಚೇತ್ ತಾತ್ಪರ್ಯಾಣಾಂ ತಥೈವ ಹಿ ।**

**ತಸ್ಮಾತ್ ಪದಾರ್ಥೇ ವಾಕ್ಯಾರ್ಥೇ ತಾತ್ಪರ್ಯಮುಭಯತ್ರ ಚ ||೬೧||**

**ಅವತರಣಿಕೆ :** ವೇದದಲ್ಲಿ ಕರ್ಮಕಾಂಡ ಬ್ರಹ್ಮಕಾಂಡ ಎಂಬ ಭೇದ ಒಪ್ಪಿದರೂ 'ಅಗ್ನೌ ಜುಹೋತಿ' ಎಂಬಲ್ಲಿ ಅಗ್ನಿ ಶಬ್ದದ ನಂತರ ಅಧ್ಯಾಹೃತ ಇತಿ ಶಬ್ದ ಇಟ್ಟು ಕೊಳ್ಳುವದು ಉಚಿತ ಎಂದು ನಿರೂಪಿಸುತ್ತಾರೆ. (ಇದರಿಂದಾಗಿ ಅಗ್ನಿಸ್ಮರಣೆ ಯಿಂದಲೇ ಹೋಮ ಸಾಗಲಿ ಎಂಬ ಅನಿಷ್ಟ ಪ್ರಸಂಗ ಕಾರ್ಯತಾವಾದಿಗೆ ತಪ್ಪುವ ದಿಲ್ಲ.)

**ಅನುವಾದ :** 'ನ ಗಿರಾ ಗಿರಾ ಇತಿ ಬ್ರೂಯಾತ್' ಎಂಬ(ಇತಿ ಶಬ್ದ ಯುಕ್ತವಾದ) ವಚನವು 'ಅಗ್ನೌ ಜುಹೋತಿ' ಎಂಬ ವಚನದ ಸಮೀಪದಲ್ಲಿಯೇ ಇದೆ ಎಂದು ತಿಳಿದು ಬರುತ್ತದೆ.

ಇನ್ನು ಬ್ರಹ್ಮಪರ ಎಂದರೆ ಬ್ರಹ್ಮ ಪ್ರತಿಪಾದಕ ವಾಕ್ಯಗಳಿಗೆ ಉಪಾಸನಾ ಕಾರ್ಯದಲ್ಲಿ ಮತ್ತು ಬ್ರಹ್ಮಸ್ವರೂಪದಲ್ಲಿ ತಾತ್ಪರ್ಯ ಕಲ್ಪಿಸಿದರೆ ಕಲ್ಪನಾ ಗೌರವ ದೋಷ ಬರುತ್ತದೆ ಎಂದು ಹೇಳಿದರೆ, ಯೂಪಾದಿ ವಾಕ್ಯಗಳಿಗೂ, ಪಶುಬಂಧಾದಿ ಕಾರ್ಯ ಮತ್ತು ಯೂಪಾದಿ ಸ್ವರೂಪಗಳಲ್ಲಿ ಬೇರೆ ಬೇರೆ ತಾತ್ಪರ್ಯ ಹೇಳಿದರೂ

ಕಲ್ಪನಾ ಗೌರವ ದೋಷ ಬರುತ್ತದೆ. ಈ ದೋಷ ಮೂಲಕ ಯೂಪಾದಿ ಪದಾರ್ಥ ಗಳೇ ಇಲ್ಲದಿರುವ ಪ್ರಸಂಗ ಬರುತ್ತದೆ,

ಯೂಪಾದಿ ವಾಕ್ಯಗಳಲ್ಲಿ ಪ್ರತ್ಯೇಕ ತಾತ್ಪರ್ಯವು ಪ್ರಮಾಣಸಿದ್ಧ ಎಂದು ವಾದಿಯು ಹೇಳಿದರೆ, ಬ್ರಹ್ಮ ಪ್ರತಿಪಾದಕ ವಾಕ್ಯಗಳಿಗೂ ಉಪಾಸನೆಯಲ್ಲಿ ಮತ್ತು ಬ್ರಹ್ಮಸ್ವರೂಪದಲ್ಲಿ ತಾತ್ಪರ್ಯ ಇದೆ ಎಂದು ನಮ್ಮ ಉತ್ತರ.ಆದ್ದರಿಂದ(ಕಲ್ಪನಾ ಗೌರವ ದೋಷವಿಲ್ಲವಾದ್ದರಿಂದ) 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'ಎಂಬಲ್ಲಿ ಸತ್ಯ-ಜ್ಞಾನಾದಿ ಪದಗಳಿಗೆ ಬ್ರಹ್ಮನಲ್ಲಿ (ಪದಾರ್ಥ) ಮತ್ತು ಉಪಸನಾ ಕಾರ್ಯದಲ್ಲಿ (ವಾಕ್ಯಾರ್ಥ) ಹೀಗೆ ಎರಡರಲ್ಲಿಯೂ ತಾತ್ಪರ್ಯವಿದೆ ಎಂದು ಒಪ್ಪಬೇಕು.

**ವಿವರಣೆ :** 1) ಹಿಂದೆ 57ನೇ ಶ್ಲೋಕದಲ್ಲಿ ಪ್ರಸಕ್ತವಾದ, ಉಪಾಸನಾ ವಾಕ್ಯ ಗಳಲ್ಲಿದ್ದ 'ಇತಿ' ಶಬ್ದದ ಪ್ರಯೋಗದ ಬಗ್ಗೆ ವಾದವನ್ನು ಮುಂದುವರಿಸಲಾಗಿದೆ. ಆತ್ಮೇತ್ಯುಪಾಸೀತ' ಮೊದಲಾದ ಉಪಾಸನಾ ವಾಕ್ಯಗಳಲ್ಲಿ 'ಇತಿ' ಶಬ್ದ ವಿಪರೀತಾ ರ್ಥದಲ್ಲಿರುವದರಿಂದ 'ಇತಿ' ಶಬ್ದವಿಲ್ಲದ ವಾಕ್ಯಗಳಲ್ಲಿ ಅದನ್ನು ಅಧ್ಯಾಹೃತ ಮಾಡುವದರಿಂದ, ಬ್ರಹ್ಮನ ಸ್ಮರಣೆ ಮಾತ್ರದಿಂದ ಉಪಾಸನೆ ಕೂಡುವದೆಂದೂ ಈ ವಾಕ್ಯಗಳಿಗೆ, ಯೂಪಾದಿ ವಾಕ್ಯಗಳಲ್ಲಿಯಂತೆ ಎರಡು ಕಡೆ (ಅಂದರೆ ಉಪಾಸನಾ ಕಾರ್ಯ ಮತ್ತು ಉಪಾಸನಾಕ್ಕೆ ಕರ್ಮವಾದ ಬ್ರಹ್ಮಸ್ವರೂಪಗಳಲ್ಲಿ) ತಾತ್ಪರ್ಯ ಕಲ್ಪಿಸುವದು ಅನುಚಿತವೆಂದೂ ಕಾರ್ಯತಾವಾದಿ ಹೇಳಿದರೆ ಅದು ಅಯುಕ್ತವೆಂದು ಈಗಾಗಲೇ ಸಾಧಿಸಿದ್ದಾಗಿದೆ. ಹೀಗೆ ಹೇಳುವದಾದರೆ 'ಅಗ್ನೌ ಜುಹೋತಿ' ಎಂಬಲ್ಲಿಯೂ ಅಗ್ನಿ ಶಬ್ದದ ಮುಂದೆ 'ಇತಿ' ಶಬ್ದ ಅಧ್ಯಾಹಾರ ಮಾಡಿಕೊಂಡು ಅಗ್ನಿಸ್ಮರಣೆಯಿಂದ ಹೋಮ ಸಾಗಲಿ ಎಂಬ ಅನಿಷ್ಟ ಆಪಾದಿಸಲಾಗಿತ್ತು. ಇದಕ್ಕೆ ಆತನು 'ಅಗ್ನೌ ಜುಹೋತಿ' ಎಂಬಲ್ಲಿ ಇತಿ ಶಬ್ದವಿಲ್ಲವೆಂದೂ ಉಪಾಸನಾ ವಾಕ್ಯ ಗಳಲ್ಲಿದ್ದ 'ಇತಿ' ಶಬ್ದವನ್ನು ಕರ್ಮಕಾಂಡಕ್ಕೆ ಅನ್ವಯಿಸುವದು ಅನುಚಿತವೆಂದೂ ಹೇಳಿದ್ದನು. ಈಗ 'ಕರ್ಮಕಾಂಡದಲ್ಲಿಯೇ ಅಗ್ನೌ ಜುಹೋತಿ' ಎಂಬ ವಾಕ್ಯದ ಸಮೀಪದಲ್ಲಿಯೇ 'ನ ಗಿರಾ ಗಿರಾ ಇತಿ ಬ್ರೂಯಾತ್' ಎಂಬ ವಾಕ್ಯವಿದೆ. ಇಲ್ಲಿಯ ಇತಿ ಶಬ್ದವನ್ನು 'ಅಗ್ನೌ ಜುಹೋತಿ' ಎಂಬ ವಾಕ್ಯದಲ್ಲಿ ಅಗ್ನಿ ಶಬ್ದದ ನಂತರ ಅಧ್ಯಾಹಾರ ಮಾಡಿಕೊಂಡು, ಅಗ್ನಿ ಸ್ಮರಣದಿಂದಲೇ ಹೋಮ ಸಾಗಲಿ ಎಂದು ಆಪಾದಿಸುತ್ತಾರೆ. (ನ ಗಿರಾ ಗಿರಾ ಇತಿ ಬ್ರೂಯಾತ್' ಎಂಬ ವಾಕ್ಯವು ಜ್ಯೋತಿ ಷ್ಟೋಮ ಪ್ರಕರಣದಲ್ಲಿ ಬಂದಿದೆ. "ಯಜ್ಞಾ ಯಜ್ಞವೋಗ್ನಯೇ ಗಿರಾ ಗಿರ್‍ಾ ಚ ರಕ್ಷಸೇ" ಎಂದು ಮಂತ್ರವಿದೆ. ಈ ಮಂತ್ರವನ್ನು **"ಗಿರಾ ಗಿರಾ ಎಂದು ಉಚ್ಚರಿಸಬಾರದು."** ಆದರೆ ಇರಾ ಇರಾ ಎಂದು ಉಚ್ಚರಿಸಬೇಕೆಂದು ಹೇಳ ಲಾಗಿದೆ.)

(2) ಬ್ರಹ್ಮಪ್ರತಿಪಾದಕ ವಾಕ್ಯಗಳಿಗೆ ಉಪಾಸನಾ ಕಾರ್ಯ ಮತ್ತು ಬ್ರಹ್ಮಸ್ವರಪದೆ ಹೀಗೆ ಎರಡರಲ್ಲಿಯೂ ತಾತ್ಪರ್ಯ ಕಲ್ಪಿಸಿದರೆ ಕಲ್ಪನಾ ಗೌರವ ದೋಷ ಬರುತ್ತ

ಎಂದು ವಾದಿಸಿದರೆ, ನೀವು ಯಜ್ಞ ಪ್ರಕರಣಗಳಲ್ಲಿ ಯೂಪಾದಿ ಶಬ್ದಗಳಿಗೆ ಪಶುಬಂಧಾದಿ ಕಾರ್ಯ ಮತ್ತು ಯೂಪಾದಿ ಸ್ವರೂಪಗಳಲ್ಲಿ ತಾತ್ಪರ್ಯ ಕಲ್ಪಿಸಿದಾಗಲೂ ಕಲ್ಪನಾಗೌರವ ದೋಷ ಬರತ್ತದೆಂದು ನಾವು ಹೇಳುತ್ತೇವೆ. ಈ ಕಲ್ಪನಾ ಗೌರವ ದೋಷ ತಪ್ಪಿಸಲು ಯೂಪಾದಿಗಳಲ್ಲಿ ತಾತ್ಪರ್ಯ ಹೇಳದಿದ್ದರೆ, ಈ ಪದಾರ್ಥಗಳ ಸ್ವರೂಪವು ವೇದವನ್ನು ಬಿಟ್ಟು ಇತರ ಪ್ರಮಾಣಗಳಿಂದ ಸಿದ್ಧವಾಗುವದಿಲ್ಲವಾದ್ದರಿಂದ ಈ ಯೂಪಾದಿ ಪದಾರ್ಥಗಳೇ ಇಲ್ಲದಿರುವ ಪ್ರಸಂಗ ಬರುತ್ತದೆ.

(3) ಯೂಪಾದಿಗಳಿಗೆ ಉಭಯತ್ರ ತಾತ್ಪರ್ಯ ಪ್ರಮಾಣಸಿದ್ಧವಾಗಿದ್ದರಿಂದ ಅದನ್ನು ಕಲ್ಪಿಸುವದಿಲ್ಲ. 'ಖಾದಿರೋ ಯೂಪೋ ಭವತಿ, ಯೂಪಂ ಅಷ್ಟಾಶ್ರೀ ಕರೋತಿ ಮೊದಲಾದ ವಾಕ್ಯಗಳಿಂದಲೇ ಯೂಪಾದಿ ವಸ್ತುಗಳ ಜ್ಞಾನ ಹುಟ್ಟುತ್ತದೆ. ಇದು ಬೇರೆ ಪ್ರಮಾಣಗಳಿಂದ ಹುಟ್ಟುವದಿಲ್ಲ. ಆದ್ದರಿಂದ ಯೂಪಾದಿಗಳಲ್ಲಿ ತಾತ್ಪರ್ಯ ಹೇಳಿದರೆ ಕಲ್ಪನಾ ಗೌರವ ದೋಷ ಬರುವದಿಲ್ಲ–ಎಂದು ವಾದಿಸಿದರೆ, ಬ್ರಹ್ಮಪರ ವಾಕ್ಯಗಳಿಗೂ, ಉಪಾಸನಾ ಕಾರ್ಯವಲ್ಲದೆ, ಬ್ರಹ್ಮನಲ್ಲಿಯೂ ತಾತ್ಪರ್ಯವಿರುವದು ಪ್ರಮಾಣಸಿದ್ಧ. ಆದ್ಧರಿಂದ ಇಲ್ಲಿಯೂ ಕಲ್ಪನಾಗೌರವ ದೋಷ ಬರುವದಿಲ್ಲ.

**ಉಪಸಂಹಾರ :** ಹೀಗೆ ಕಲ್ಪನಾಗೌರವ ದೋಷ ಇಲ್ಲವಾದ್ದರಿಂದ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬಲ್ಲಿಯ ಸತ್ಯ–ಜ್ಞಾನಾದಿ ಪದಗಳಿಗೆ ಬ್ರಹ್ಮನಲ್ಲಿ (ಪದಾರ್ಥ) ಮತ್ತು ಉಪಾಸನಾ ಕಾರ್ಯದಲ್ಲಿ (ವಾಕ್ಯಾರ್ಥ) ತಾತ್ಪರ್ಯವಿರುವದು ಪ್ರಮಾಣ ಸಿದ್ಧ.

**ಪೃಥಗೇವ ಚ ವಾಕ್ಯತ್ವಂ ಪೃಥಗಸ್ಯಯತೋ ಭವೇತ್ ।**
**ಅವಾಂತರತ್ವಾದ್ವಾಕ್ಯಾನಾಂ ವಾಕ್ಯಭೇದೋ ನ ದೂಷಣಮ್ ॥೬೨॥**
**ಅಂಗೀಕೃತತ್ವಾದಪಿ ತ್ವೈಃ ಪದಾನಾಂ ತು ಪೃಥಕ್ ಪೃಥಕ್ ।**
**ಕ್ರಿಯಾಪದೇನಾನ್ವಯಸ್ಯ ವಾಕ್ಯಭೇದೋ ಹಿ ದೂಷಣಮ್ ॥೬೩॥**

**ಅವತರಣಿಕೆ :** 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ವಾಕ್ಯದಲ್ಲಿಯ ಸತ್ಯ–ಜ್ಞಾನಾದಿ ಪದಗಳಿಗೆ ಬ್ರಹ್ಮಸ್ವರೂಪದಲ್ಲಿ ತಾತ್ಪರ್ಯವಿರಲಾರದು ಎಂಬ ಆಕ್ಷೇಪ ಎತ್ತಿಕೊಂಡು ಅದನ್ನು ಪರಿಹರಿಸುತ್ತಾರೆ.

**ಅನುವಾದ :** ಸತ್ಯಂ ಬ್ರಹ್ಮ, ಜ್ಞಾನಂ ಬ್ರಹ್ಮ, ಅನಂತಂ ಬ್ರಹ್ಮ' ಹೀಗೆ ಸತ್ಯಾದಿ ಪದಗಳಿಗೆ ಬ್ರಹ್ಮಪದದೊಡನೆ ಪ್ರತ್ಯೇಕ ಅನ್ವಯವಿರುವದರಿಂದ ಪ್ರತ್ಯೇಕ ವಾಕ್ಯಗಳಾಗುವವು. ಅವಾಂತರ ವಾಕ್ಯಗಳಾಗುವದರಿಂದ ಅವುಗಳಿಗೆ ವಾಕ್ಯಭೇದ ದೋಷವಲ್ಲ.

(ಕಾರ್ಯತಾವಾದಿಗಳಾದ) ಮೀಮಾಂಸಕರೂ ಸಹ 'ಅರುಣಯಾ ಪಿಂಗಾಕ್ಷ್ಯಾ

ಏಕಹಾಯನ್ಯಾ ಗವಾ ಸೋಮಂ ಕ್ರೀಣಾತಿ' ಎಂಬಲ್ಲಿ ಅರುಣಯಾ ಮುಂತಾದ ಪದಗಳಿಗೆ 'ಕ್ರೀಣಾತಿ' ಕ್ರಿಯಾಪದದೊಡನೆ ಅನ್ವಯವನ್ನು ಒಪ್ಪಿದ್ದಾರೆ. ಮಹಾವಾಕ್ಯ ಭೇದವೇ ದೋಷ. (ಅವಾಂತರ ವಾಕ್ಯಭೇದ ದೋಷವಲ್ಲ.)

**ವಿವರಣೆ :** 1) ಕಾರ್ಯತಾವಾದಿಯ ಆಕ್ಷೇಪವನ್ನೂ ಪರಿಹಾರವನ್ನೂ ನಿರೂಪಿಸುತ್ತಾರೆ.

**ಆಕ್ಷೇಪ :** 'ಯತ್ ಜ್ಞಾನಂ ಬ್ರಹ್ಮ ತತ್ ಸತ್ಯಂ. ಯತ್ ಸತ್ಯಂ ಬ್ರಹ್ಮ ತತ್ ಜ್ಞಾನಂ- ಎಂಬುದಾಗಿ ಶ್ರುತ್ಯರ್ಥವಿದೆ. ಇಲ್ಲಿ ಮೊದಲು ತತ್ ಸತ್ಯಂ ಎಂದು ಸತ್ಯತ್ವವು ವಿಧೇಯವಾಗಿದೆ. ಹಾಗೂ ಯತ್ ಜ್ಞಾನಂ' ಎಂದು ಜ್ಞಾನತ್ವ ಅನುವಾದಕವಾಗಿದೆ. ನಂತರದಲ್ಲಿ ಜ್ಞಾನತ್ವವು ವಿಧೇಯಕವಾಗಿ, ಸತ್ಯತ್ವವು ಅನುವಾದಕವಾಗಿದೆ. ಎಂದರೆ ಏಕಕಾಲಕ್ಕೆ ಸತ್ಯತ್ವ-ಜ್ಞಾನತ್ವಗಳು ವಿಧೇಯಕ-ಅನುವಾದಕಗಳಾಗುವುದು ಅನುಚಿತ. ಆದ್ದರಿಂದ ಸತ್ಯಜ್ಞಾನಾದಿ ಪದಗಳಿಗೆ ಸ್ವಾರ್ಥದಲ್ಲಿ (ಎಂದರೆ ಸತ್ಯತ್ವ-ಜ್ಞಾನತ್ವಗಳಲ್ಲಿ) ತಾತ್ಪರ್ಯವಿಲ್ಲ. ಹೀಗಾಗಿ ಉಪಾಸನಾ ಕಾರ್ಯಾಂಗಭೂತನಾದ ಬ್ರಹ್ಮನ ಸ್ವರೂಪ ಗುಣಾದಿಗಳಲ್ಲಿ ವೇದತಾತ್ಪರ್ಯವಿಲ್ಲ.

**ಪರಿಹಾರ :** ಹೀಗಲ್ಲ. (ಮೈವಂ) ನೀವು ಮಾಡಿದ ಅನ್ವಯವೇ ತಪ್ಪು. ಸತ್ಯಂ, ಬ್ರಹ್ಮ, ಜ್ಞಾನಂ ಬ್ರಹ್ಮ, ಅನಂತಂ ಬ್ರಹ್ಮ ಎಂದು ಪ್ರತ್ಯೇಕ ಅನ್ವಯವಿದೆ. ಇದರಿಂದ ವಾಕ್ಯಭೇದ ಮಾಡಿದ ದೋಷವು ಬರುವದಿಲ್ಲ. ಏಕೆಂದರೆ ಮಹಾವಾಕ್ಯದಲ್ಲಿ ವಾಕ್ಯಭೇದ ಮಾಡಿದರೆ ಮಾತ್ರ ದೋಷ. ಅವಾಂತರ ವಾಕ್ಯಗಳಲ್ಲಿ ವಾಕ್ಯಭೇದ ದೋಷವಲ್ಲ. ಪರಿಮಳಾಚಾರ್ಯರು ಹೇಳಿದಂತೆ ಭಿನ್ನ ಭಿನ್ನ ಅವಾಂತರ ವಾಕ್ಯಗಳ ಸಮುದಾಯವೇ ಮಹಾವಾಕ್ಯ.

(2) ಮೀಮಾಂಸಕರೂ ಸಹ ಈ ಪ್ರತ್ಯೇಕ ಅನ್ವಯವನ್ನು ಒಪ್ಪಿದ್ದಾರೆ. 'ಅರುಣಯಾ ಏಕಹಾಯನ್ಯಾ ಪಿಂಗಾಕ್ಷ್ಯಾ ಗವಾ ಸೋಮಂ ಕ್ರೀಣಾತಿ' ಎಂಬ ವಾಕ್ಯದಲ್ಲಿ ಅರುಣಯಾ ಗವಾ ಕ್ರೀಣಾತಿ (ಕೆಂಪು ಆಕಳಿಂದ ಸೋಮ ಬಳ್ಳಿಯನ್ನು ಕೊಳ್ಳುತ್ತಾನೆ, 'ಏಕಹಾಯನ್ಯಾ ಗವಾ ಕ್ರೀಣಾತಿ (ಒಂದು ವರ್ಷದ ಆಕಳಿಂದ ಸೋಮ ಬಳ್ಳಿಯನ್ನು ಕೊಳ್ಳುತ್ತಾನೆ. 'ಪಿಂಗಾಕ್ಷ್ಯಾ ಗವಾ ಕ್ರೀಣಾತಿ' (ಕೆಂಗಣ್ಣಿನ ಆಕಳಿಂದ ಸೋಮಬಳ್ಳಿಯನ್ನು ಕೊಳ್ಳುತ್ತಾನೆ) ಎಂದು ಅರುಣಯಾ ಮೊದಲಾದ ಪದಗಳನ್ನು 'ಕ್ರೀಣಾತಿ' ಕ್ರಿಯಾಪದದೊಡನೆ ಪ್ರತ್ಯೇಕ ಅನ್ವಯ ಮಾಡಿ ವಾಕ್ಯಭೇದ ಒಪ್ಪಿದ್ದಾರೆ. ಆದ್ದರಿಂದ ಅವಾಂತರ ವಾಕ್ಯಗಳಲ್ಲಿ ವಾಕ್ಯಭೇದ ದೋಷವಲ್ಲ. ಹೀಗೆ ಹೇಳುವ ಮೀಮಾಂಸಕರ ಮಾತು ನಮಗೂ ಸಮಾನವಾಗಿದೆ.

[ಪ್ರತ್ಯೇಕ ಅನ್ವಯ ಮಾಡಲಿಕ್ಕೆ ಮೀಮಾಂಸಕರು ಕೊಡುವ ಕಾರಣ ಹೀಗಿದೆ. 'ಗವಾ ಸೋಮಂ ಕ್ರೀಣಾತಿ' ಎಂಬಲ್ಲಿ 'ಗೋ' ಶಬ್ದ ಕ್ರಯಸಾಧನ ಮೂಲಕ ವಿಧೇಯಕವಾಗಿದೆ.ಮುಂದೆ ಅರುಣಯಾ ಗವಾ, ಏಕಹಾಯನ್ಯಾ ಗವಾ,ಪಿಂಗಾಕ್ಷ್ಯಾ

ಗವಾ ಎಂಬಲ್ಲಿ ಗೋ ಶಬ್ದವನ್ನು ಅನುವಾದ ಮಾಡಿ, ಆರುಣ್ಯ, ಏಕಹಾಯನತ್ವ, ಪಿಂಗಾಕ್ಷಿತ್ವ ಇವು ವಿಧೇಯವಾಗಿವೆ. ಹೀಗೆ ಗೋ ಶಬ್ದ ಮೊದಲು ವಿಧೇಯಕವೂ ನಂತರ ಅನುವಾದಕವೂ ಆಗಿದೆ. ಆದರೆ ವಿಧೇಯತ್ವ ಅನುವಾದಕತ್ವಗಳು ಪರಸ್ಪರ ವಿರುದ್ಧ. ಆದ್ದರಿಂದ ಈ ವಿರೋಧ ಪರಿಹರಿಸಲು ಆರುಣ್ಯಾದಿ ಧರ್ಮಗಳುಳ್ಳ 'ಗೋ' ಎಂದು ಹಿಂದಿನಿಂದ ತಿಳಿದು ಬರುತ್ತದೆ, ಇಲ್ಲಿ 'ಪಾರ್ಷ್ಣಿಕಾನ್ವಯ' ಎಂದರೆ ಅನಂತರ ಅಥವಾ ಹಿಂದಿನಿಂದಾಗುವ ಅನ್ವಯವಿದೆ. ಅರುಣಯಾ ಶಬ್ದದಲ್ಲಿಯ ತೃತೀಯಾ ವಿಭಕ್ತಿ ಸಾಧನತ್ವವಾಚಕ. ಆದ್ದರಿಂದ ಆರುಣ್ಯವೆಂಬ ಗುಣ ಕ್ರಯ ಸಾಧನ ಆಗುತ್ತವೆ. ಆದರೆ ಪ್ರತ್ಯಕ್ಷದಲ್ಲಿ "ಆರುಣ್ಯ" ಕೆಂಪುತನ ಸಾಕ್ಷಾತ್ತಾಗಿ ಕ್ರಯ ಸಾಧನವಾಗಲಾರದು. ಆದ್ದರಿಂದ ಗೋ ಮುಖಾಂತರ ಆರುಣ್ಯ ಕ್ರಯ ಸಾಧನ ಆಗುತ್ತದೆ. ಹೀಗೆ ಮೊದಲು ಅರುಣಯಾ ಕ್ರೀಣಾತಿ ಎಂದು ಅನ್ವಯ ಜ್ಞಾನವಾಗುತ್ತದೆ. ನಂತರ ವಿರೋಧ ಪರಿಹರಿಸಲು 'ಆರುಣ್ಯ ವಿಶಿಷ್ಟ ಗೋ', ಎಂದರೆ 'ಅರುಣಯಾ ಗವಾ ಕ್ರೀಣಾತಿ' ಎಂದು ಹಿಂದಿನಿಂದ ಅನ್ವಯ.]

**ಪ್ರತ್ಯಕ್ಷಾದಿವಿರೋಧೇ ತು ಗೌಣಾರ್ಥಸ್ಯಾಪಿ ಸಂಭವಾತ್ ।**
**ಅತಾತ್ಪರ್ಯಂ ಪದಾರ್ಥೇಽಪಿ ನ ಕಲ್ಪ್ಯಮವಿರೋಧತಃ ॥೬೪॥**

**ಅವತರಣಿಕೆ :** ಪ್ರತ್ಯಕ್ಷಾದಿ ವಿರೋಧ ಬರುವದರಿಂದ, ಸತ್ಯಜ್ಞಾನಾದಿ ಪದ ಗಳಿಗೆ ಸ್ವಾರ್ಥವಾದ ಬ್ರಹ್ಮನಲ್ಲಿ ತಾತ್ಪರ್ಯ ಕೂಡುವದಿಲ್ಲ ಎಂಬ ಆಕ್ಷೇಪ ವನ್ನು ಪರಿಹರಿಸುತ್ತಾರೆ.

**ಅನುವಾದ :** ಪ್ರತ್ಯಕ್ಷಾದಿ ಪ್ರಮಾಣ ವಿರೋಧ ಬರುವಾಗ ಅಮುಖ್ಯಾರ್ಥವು ಕೂಡುತ್ತಿದ್ದರೆ ಆ ಅಮುಖ್ಯಾರ್ಥಕ್ಕೆ ವಿರೋಧವಿಲ್ಲವಾದ್ದರಿಂದ ಶ್ರುತಿಗೆ ಅಮುಖ್ಯಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಕಲ್ಪಿಸಕೂಡದು. (ಎಂದರೆ ಉಪ ಜೀವ್ಯ ಪ್ರತ್ಯಕ್ಷ ವಿರೋಧವಿದ್ದರೆ ಶ್ರುತಿಗೆ ಅಮುಖ್ಯಾರ್ಥದಲ್ಲಿಯೇ ತಾತ್ಪರ್ಯ ವೆಂದು ಭಾವ.)

**ವಿವರಣೆ :** ಕಾರ್ಯತಾವಾದಿಯು ಕೆಳಗಿನಂತೆ ಆಕ್ಷೇಪಿಸುತ್ತಾನೆ. ಆದರೂ ಸತ್ಯ ಜ್ಞಾನಾದಿ ವೇದಾಂತ ಪದಗಳಿಗೆ ಸ್ವಾರ್ಥವಾದ ಬ್ರಹ್ಮನಲ್ಲಿ ತಾತ್ಪರ್ಯವಿಲ್ಲ. ಹೇಗೆಂದರೆ : ಸತ್ಯಂ ಬ್ರಹ್ಮ, ಜ್ಞಾನಂ ಬ್ರಹ್ಮ, ಅನಂತಂ ಬ್ರಹ್ಮ, ಎಂದು ನೀವು ಹೇಳುತ್ತೀರಿ, ಎಂದರೆ ಶ್ರುತಿ ವಾಕ್ಯಗಳು ಮೊದಲು ಬ್ರಹ್ಮನನ್ನು ಅನುವಾದ ಮಾಡಿ, ನಂತರ ಅವನಿಗೆ, ಆನಂದಾದಿತ್ವ, ಅದ್ವಿತೀಯತ್ವಾದಿ ಧರ್ಮಗಳನ್ನು ವಿಧಿಸುತ್ತವೆ. ಇದು ಪ್ರತ್ಯಕ್ಷ ವಿರುದ್ಧ, ಏಕೆಂದರೆ ಬ್ರಹ್ಮ ಎಂದರೆ ಜೀವ, ಜೀವ ದುಃಖಿಯಾಗಿರುವದು ಪ್ರತ್ಯಕ್ಷ ಸಿದ್ಧವಾಗಿದೆ. ಆದ್ದರಿಂದ ಶ್ರುತಿ ಹೇಳುವ

ಆನಂದಾದಿಗಳು ಬ್ರಹ್ಮನಿಗೆ ಕೂಡುವದಿಲ್ಲ. ಆದ್ದರಿಂದ ಸತ್ಯ-ಜ್ಞಾನಾದಿ ಪದಗಳಿಗೆ ಬ್ರಹ್ಮನಲ್ಲಿ ತಾತ್ಪರ್ಯವಿಲ್ಲ. ಅವು ಬ್ರಹ್ಮನನ್ನು ಬೋಧಿಸುವದಿಲ್ಲ.

**ಪರಿಹಾರ :** ವೇದದಲ್ಲಿ ಎಲ್ಲ ವಿಷಯಗಳಲ್ಲಿ ಪ್ರತ್ಯಕ್ಷಾದಿ ವಿರೋಧವಿಲ್ಲ. ಪ್ರಕೃತದಲ್ಲಿ ಬ್ರಹ್ಮ ಎಂದರೆ ಜೀವ ಅಲ್ಲ. ಪರಬ್ರಹ್ಮ ಎಂದು ಅರ್ಥ. ಇನ್ನು ಪ್ರತ್ಯಕ್ಷಾದಿ ವಿರೋಧ ಬಂದಾಗ ಪ್ರತೀತಾರ್ಥ ಬಿಟ್ಟು ಲಕ್ಷಣಾವೃತ್ತಿಯನ್ನು ಆಶ್ರಯಿಸಿ. ಗೌಣಾರ್ಥ ಮಾಡಲಾಗುತ್ತದೆ.ಉದಾಹರಣಾರ್ಥವಾಗಿ 'ಅಗ್ನಿರ್ಮಾಣವಕಃ' ಎಂಬಲ್ಲಿ ವಟು (ಬ್ರಹ್ಮಚಾರಿ) ಅಗ್ನಿಯಂತೆ ತೇಜಃಪುಂಜನಾಗಿದ್ದಾನೆ ಎಂದು ಅರ್ಥ. ಅದರಂತೆ 'ತತ್ವಮಸಿ' ಎಂದರೆ ನೀನು ಬ್ರಹ್ಮನಂತೆ ಇರುತ್ತೀ. ಬ್ರಹ್ಮನಂತೆ ಜ್ಞಾನಾನಂದ ಸ್ವರೂಪವುಳ್ಳವನು. ಆದರೆ ಈಗ ಮಾತ್ರ ಅವಿದ್ಯಾವರಣವಿರುವದರಿಂದ ಮೂಲ ಸುಖರೂಪ ಅಚ್ಛಾದಿತವಾಗಿದೆ. ಇದಲ್ಲದೆ ಯಾವಾಗಲೂ ವಾಚ್ಯಾರ್ಥವೇ ನಿಜವಾದ ಅರ್ಥ ಎಂಬ ನಿಯಮವಿಲ್ಲ. ಗೌಣಾರ್ಥದಲ್ಲಿ ತಾತ್ಪರ್ಯ ಒಪ್ಪಿದರೆ ಯಾವ ವಿರೋಧವೂ ಇಲ್ಲ. ಪ್ರಕೃತದಲ್ಲಿ ಪರಬ್ರಹ್ಮನು ಸತ್ಯಾತ್ಮಕ, ಜ್ಞಾನಾತ್ಮಕ ಮತ್ತು ಅನಂತ ಎಂದು ಹೇಳಿದರೆ ಯಾವ ಪ್ರತ್ಯಕ್ಷಾದಿಗಳ ವಿರೋಧವಿಲ್ಲ. ಆದ್ದರಿಂದ ವೇದದಲ್ಲಿಯ ಸತ್ಯಜ್ಞಾನಾದಿ ಪದಗಳು ಉಪಾಸನಾ ಕಾರ್ಯವನ್ನಲ್ಲದೆ ಪರಬ್ರಹ್ಮನನ್ನೂ ಪ್ರತಿಪಾದಿಸುತ್ತವೆ ಎಂದು ಭಾವ.

**ಅತೋ ಜ್ಞಾನಫಲಾನ್ಯೇವ ಕರ್ಮಾಣಿ ಜ್ಞಾನಮೇವ ಹಿ ।**
**ಮುಖ್ಯಪ್ರಸಾದದಂ ವಿಷ್ಣೋರ್ಜಿಜ್ಞಾಸಾಯಾತ್ತ ತದ್ಭವೇತ್ ॥೬೫॥**
**ಕರ್ತವ್ಯಾ ತೇನ ಜಿಜ್ಞಾಸಾ ಶ್ರುತಿಪ್ರಾಮಾಣ್ಯಯೋಗತಃ ॥೬೬॥**

**ಅವತರಣಿಕೆ :** ಅತಃ ಶಬ್ದಕ್ಕೆ ತಾವು ಹೇಳಿದ ಮೂರನೆಯ ಅರ್ಥ ಸೂತ್ರಾನುಗುಣವಾಗಿದೆ. ಅದು ಉತ್ಪ್ರೇಕ್ಷಿತವಲ್ಲ ಎಂದು ಉಪಸಂಹಾರ ಮಾಡುತ್ತಾರೆ.

**ಅನುವಾದ :** ಆದ್ದರಿಂದ ಅಂತಃಕರಣ ಶುದ್ಧಿ ಮೂಲಕ ಉಂಟಾಗುವ ಜ್ಞಾನವು ಯಜ್ಞ ಯಾಗಾದಿ ಕರ್ಮಗಳ ಫಲ. ಜ್ಞಾನವೇ ವಿಷ್ಣುವಿನ ಪ್ರಸಾದ ನೀಡುತ್ತದೆ. ಮತ್ತು ಆ ಜ್ಞಾನವು (ಬ್ರಹ್ಮ ವಿಷಯಕ) ವಿಚಾರದಿಂದಲೇ (ಜಿಜ್ಞಾಸಾ) ಆಗುತ್ತದೆ. ಆದ್ದರಿಂದ ವೇದಗಳಿಗೆ ಬ್ರಹ್ಮವಿಷಯದಲ್ಲಿ ಪ್ರಾಮಾಣ್ಯವು ಯುಕ್ತವಾದ್ದರಿಂದ ಆ ಬ್ರಹ್ಮವಿಷಯಕ ವಿಚಾರ ಮಾಡಬೇಕು.(ಬ್ರಹ್ಮಜಿಜ್ಞಾಸಾ ಕರ್ತವ್ಯಾ).

**ವಿವರಣೆ :** ಈ ಶ್ಲೋಕದಲ್ಲಿಯ 'ಜ್ಞಾನಫಲಾನಿ' ಎಂಬುದು ಹಿಂದೆ 59ನೇ ಶ್ಲೋಕದಲ್ಲಿ ಹೇಳಿದ 'ಯೋಗಶ್ಚ ಸ್ಯಾನ್ಮಹಾಫಲೇ' ಎಂಬುದರ ವಿವರಣೆಯಾಗಿದೆ, ಯಜ್ಞ ಯಾಗಾದಿ ಕರ್ಮಗಳ ಉದ್ದೇಶವೆಂದರೆ ಅಂತಃಕರಣಶುದ್ಧಿ ಮತ್ತು ಅದರಿಂದ ಜ್ಞಾನಸಂಪಾದನೆ, ಹೀಗೆ ಜ್ಞಾನವೇ ಯಜ್ಞ-ಯಾಗಾದಿಗಳ ಫಲ. (ಜ್ಞಾನಫಲಾನಿ, ಕರ್ಮಾಣಿ) ಮತ್ತು ಜ್ಞಾನವೇ ವಿಷ್ಣುವಿನ ಮುಖ್ಯ ಪ್ರಸಾದ ನೀಡುತ್ತದೆ.

(ಮುಖ್ಯಪ್ರಸಾದದಂ) ಈ ಜ್ಞಾನವು ಬ್ರಹ್ಮ ಜಿಜ್ಞಾಸಾದಿಂದಲೇ ಹುಟ್ಟುತ್ತದೆ. ಆದ್ದರಿಂದ ವೇದಗಳಿಗೆ ಬ್ರಹ್ಮವಿಷಯದಲ್ಲಿ ಪ್ರಾಮಾಣ್ಯವು ಯುಕ್ತವಾದ್ದರಿಂದ ಬ್ರಹ್ಮ ವಿಷಯಕ ವಿಚಾರವು ಮಾಡಲ್ಪಡಬೇಕು. (ಬ್ರಹ್ಮಜಿಜ್ಞಾಸಾ ಕರ್ತವ್ಯಾ.)



## 'ಅತಃ' ಶಬ್ದದ ನಾಲ್ಕನೆಯ ಅರ್ಥ

## (ಶಬ್ದಸ್ಯ ಅಪ್ರಮಾಣ್ಯಾತ್)

### (ಶಬ್ದ, ಶಬ್ದಾತ್ಮಕ ವೇದ ಪ್ರಮಾಣವಾದ್ದರಿಂದ)

ಅತಃ ಶಬ್ದದ ನಾಲ್ಕನೆಯ ಅರ್ಥವಿವೇಚನೆಯಲ್ಲಿ ಕ್ರಮವಾಗಿ ಕೆಳಗಿನ ವಿಷಯಗಳ ವಿವರಣೆ ಇದೆ.

I 'ವೇದ ಅಪ್ರಮಾಣ' ಎಂಬುದರ ನಿರಾಕರಣೆ. II ವೇದಪ್ರಾಮಾಣ್ಯದ ಸ್ವತಸ್ತ್ವ III ವೇದ ಅಪೌರುಷೇಯ.

### I ವೇದ ಅಪ್ರಮಾಣ ಎಂಬುದರ ನಿರಾಕರಣೆ

**ಪೂರ್ವಪಕ್ಷ :** ಶಬ್ದವೇ ಅಪ್ರಮಾಣ ಎಂದು ಬೌದ್ಧರ ವಾದ. ಅವರು ಶಬ್ದ ಪ್ರಮಾಣವಲ್ಲ ಎಂದು ಹೇಳುತ್ತಾರೆ. ಹೇಗೆಂದರೆ—

1) **ಪ್ರಮಾಕರಣತ್ವಾಭಾವಾತ್ :** ಜ್ಞಾನ ಹುಟ್ಟಿಸುವದಿಲ್ಲವಾದ್ದರಿಂದ. ಪ್ರಮಾಣವೆಂದರೆ ಯಥಾರ್ಥಜ್ಞಾನ ಹುಟ್ಟಿಸುವ ಸಾಧನ. 'ಪ್ರಮಾಕರಣಂ ಪ್ರಮಾಣಂ'. ಎಂದರೆ ಯಾವುದಿದ್ದರೆ ಯಥಾರ್ಥಜ್ಞಾನ ಹುಟ್ಟುತ್ತದೆಯೋ ಯಾವುದಿಲ್ಲದಿದ್ದರೆ, ಯಥಾರ್ಥಜ್ಞಾನ ಹುಟ್ಟುವದಿಲ್ಲವೋ ಅದು ಪ್ರಮಾಣ. ಕೆಲವೊಂದು ಸಲ ಶಬ್ದ, (ಅಜ್ಞಾತ ಶಬ್ದ) ಇದ್ದರೂ ಜ್ಞಾನ ಹುಟ್ಟುವದಿಲ್ಲ. ಆದ್ದರಿಂದ ಶಬ್ದವು ಅಪ್ರಮಾಣ. "ಶಬ್ದಃ ಅಪ್ರಮಾಣಂ, ಪ್ರಮಿತ್ಯಜನಕತ್ವಾತ್."

2) **ವಿಷಯಾಭಾವಾತ್ :** ವಿಷಯವಿಲ್ಲವಾದ್ದರಿಂದ, ಯಥಾರ್ಥ ಜ್ಞಾನ ಅಥವಾ ಪ್ರಮಾಣಕ್ಕೆ ಒಂದು ವಿಷಯ ಬೇಕು. ವಿಷಯವು ಅಪರೋಕ್ಷ (ಇಂದ್ರಿಯ ಗೋಚರ) ಮತ್ತು ಪರೋಕ್ಷ (ಇಂದ್ರಿಯ–ಅಗೋಚರ) ಎಂದು ಎರಡು ವಿಧ. ಇವುಗಳಲ್ಲಿ ಅಪರೋಕ್ಷ ವಿಷಯವು ಪ್ರತ್ಯಕ್ಷದಿಂದ ಆ ಆ ಇಂದ್ರಿಯಗಳಿಂದ ತಿಳಿಯುತ್ತದೆ. ಹಾಗೂ ಪರೋಕ್ಷ ವಿಷಯವು ಅನುಮಾನದಿಂದ ತಿಳಿದು ಬರುತ್ತದೆ. ಹೀಗೆ ಶಬ್ದಕ್ಕೆ ವಿಷಯವಿಲ್ಲವಾದ್ದರಿಂದ ಶಬ್ದವು ಅಪ್ರಮಾಣ. ವಿಷಯಾಭಾವಾತ್ ನ ಪ್ರಮಾಣಂ ಶಬ್ದಃ.

3) **ಅವಿಜ್ಞಾನಾತ್ಮಕತ್ವಾತ್ :** ಜ್ಞಾನಾತ್ಮಕವಲ್ಲವಾದ್ದರಿಂದ. ಪ್ರಮಾಣವು

ಜ್ಞಾನಾತ್ಮಕವಾಗಿರುತ್ತದೆ. ಉದಾ : ಭೂಮ ಜ್ಞಾನ. ಆದರೆ ಶಬ್ದ ವಿಜ್ಞಾನಾತ್ಮಕವಲ್ಲವಾದ್ದರಿಂದ ಅದು ಅಪ್ರಮಾಣ.

4) **ಬಾಹ್ಯಕರಣಪ್ರತ್ಯಕ್ಷತ್ವಾತ್ :** ಬಾಹ್ಯೇಂದ್ರಿಯಕ್ಕೆ ಗೋಚರವಾದ್ದರಿಂದ. ಜ್ಞಾನರೂಪ ಪ್ರಮಾಣವು ಬಾಹ್ಯ ಇಂದ್ರಿಯಕ್ಕೆ ಗೋಚರವಾಗುವದಿಲ್ಲ. ಆದರೆ ಶಬ್ದವು ಹಾಗಲ್ಲ, ಅದು ಬಾಹ್ಯೇಂದ್ರಿಯಕ್ಕೆ, ಕಿವಿಗೆ ಗೋಚರವಾಗುತ್ತದೆ. ಆದ್ದರಿಂದ ಶಬ್ದ ಅಪ್ರಮಾಣ.

5) **ಆತ್ಮನಿ-ಅನಾಶ್ರಿತತ್ವಾತ್ :** ಆತ್ಮನನ್ನು ಆಶ್ರಯಿಸಿಲ್ಲವಾದ್ದರಿಂದ. ಪ್ರಮಾಣವಾದ ವಿಜ್ಞಾನದಂತೆ ಶಬ್ದವು ಆತ್ಮನನ್ನು ಆಶ್ರಯಿಸಿಲ್ಲ. ಆದ್ದರಿಂದ ಶಬ್ದ ಅಪ್ರಮಾಣ.

6) **ಆಕಾಶಗುಣತ್ವಾತ್ :** ಆಕಾಶಗುಣವಾದ್ದರಿಂದ. ಶಬ್ದವು ಪರಿಮಾಣದಂತೆ ಆಕಾಶ ಗುಣವಾಗಿದೆ. ಆದ್ದರಿಂದ ಶಬ್ದವು ಅಪ್ರಮಾಣ.

7) **ಶಬ್ದಾರ್ಥಯೋಃ ಸಂಬಂಧಾಭಾವಾತ್ :** ಶಬ್ದವು ವಿಷಯ(ಅರ್ಥ)ದೊಡನೆ ಸಂಬದ್ಧವಾಗಿ ಜ್ಞಾನ ಹುಟ್ಟಿಸುತ್ತದೆಯಿಷ್ಟೇ ! (a) ಈ ಸಂಬಂಧ ತಾದಾತ್ಮ್ಯವಲ್ಲ. ಹಾಗಿದ್ದರೆ ಅಗ್ನಿ ಶಬ್ದ ಉಚ್ಚರಿಸಿದೊಡನೆ ಬಾಯಿ ಸುಡುತ್ತಿತ್ತು. (ಮುಖ ದಾಹಾದಿ ಪ್ರಸಂಗಾತ್) (b) ಈ ಸಂಬಂಧ ಸಂಯೋಗವೂ ಅಲ್ಲ. ಏಕೆಂದರೆ ಸಂಯೋಗ ಸಂಬಂಧ ಎರಡು ದ್ರವ್ಯಗಳ ನಡುವೆ ಇರುತ್ತದೆ. ಶಬ್ದವಾದರೋ ಗುಣ• ಆಕಾಶಗುಣವಾಗಿದೆ. ಆದ್ದರಿಂದ ಸಂಯೋಗ ಸಂಬಂಧವಿರಲಾರದು. ಇನ್ನು ಶಬ್ದ ದ್ರವ್ಯವೆಂದು ಒಪ್ಪಿದರೂ ಅದಕ್ಕೆ ವಿಷಯದೊಡನೆ ಸಂಯೋಗ ಸಂಬಂಧ ಕೂಡುವದಿಲ್ಲ. ಶಬ್ದವು ಪರಿಚ್ಛಿನ್ನ ಪರಿಮಾಣವುಳ್ಳ ಮೂರ್ತದ್ರವ್ಯವಾದರೆ, ಕ್ರಿಯೆಯಿಂದ ದೂರವಸ್ತು ವಿಷಯೀಕರಿಸುವಾಗ ಮಧ್ಯವರ್ತಿ ವಸ್ತುಗಳನ್ನು ವಿಷಯೀಕರಿಸುವ ಪ್ರಸಂಗ ಬರುತ್ತದೆ. ಇನ್ನು ಶಬ್ದವು ಅಮೂರ್ತ ದ್ರವ್ಯವಾದರೆ, ಅದು ಸರ್ವಗತವಾಗಿ ಸರ್ವ ಅರ್ಥಗಳನ್ನು ಪ್ರತಿಪಾದಿಸುವ ಪ್ರಸಂಗ ಬರುತ್ತದೆ. ಇದಲ್ಲದೆ ಶಬ್ದವು ಮೂರ್ತ ಅಥವಾ ಅಮೂರ್ತ ದ್ರವ್ಯವಿದ್ದರೂ ಈಗಿನ ಶಬ್ದಕ್ಕೆ ಹಿಂದಿನ ಪದಾರ್ಥದೊಡನೆ ಸಂಬಂಧವಿಲ್ಲದಿರುವದರಿಂದ ಅದು ಅತೀತಾರ್ಥ ಪ್ರತಿಪಾದಿಸದಿರುವ ಪ್ರಸಂಗ ಬರುತ್ತದೆ. (c) ಶಬ್ದ-ವಿಷಯಗಳ ನಡುವಿನ ಸಂಬಂಧ ಸಮವಾಯವೂ ಆಗಲಾರದು. ಏಕೆಂದರೆ ಆಕಾಶಗುಣವಾದ ಶಬ್ದಕ್ಕೆ ಬೇರೆಡೆ ಸಮವಾಯ ಸಂಬಂಧ ಇರಲಾರದು. ಶಬ್ದ ದ್ರವ್ಯವೆಂದು ಒಪ್ಪಿದರೂ ಅದಕ್ಕೆ ಘಟಾದಿ ಪದಾರ್ಥಗಳೊಡನೆ ಸಮವಾಯ ಸಂಬಂಧ ಇರಲಾರದು. ಇನ್ನು ಮೇಲಿನ ದೋಷ ಪರಿಹರಿಸಲು ಶಬ್ದವು ವಿಷಯದೊಡನೆ ಸಂಬದ್ಧವಾಗದೆ ಜ್ಞಾನ ಹುಟ್ಟಿಸುವದಾದರೆ, ಸರ್ವ ಶಬ್ದಗಳು ಸರ್ವಾರ್ಥಬೋಧಕವಾಗುವ ಅನಿಷ್ಟ ಪ್ರಸಂಗ ಬರುತ್ತದೆ. (ಸರ್ವೋಽಪಿ ಸರ್ವಂ ಬೋಧಯೇತ್)

8) **ಆಪ್ತ-ಅನಾಪ್ತವಾಕ್ಯಯೋಃ ವಿಶೇಷಾಭಾವಾತ್ :** ಆಪ್ತ-ಅನಾಪ್ತ ವಾಕ್ಯಗಳಲ್ಲಿ ಅಂತರವಿಲ್ಲವಾದ್ದರಿಂದ, ನದೀ ದಂಡೆಯಲ್ಲಿ ಐದು ಹಣ್ಣುಗಳಿವೆ ಎಂದು ಆಪ್ತ ಮತ್ತು ಅನಾಪ್ತ ಉಚ್ಚರಿಸಿದಾಗ ಅವುಗಳಲ್ಲಿ ವ್ಯತ್ಯಾಸವೇಕೆ ? ಆಪ್ತನ ವಾಕ್ಯ ಪ್ರಮಾಣ, ಅನಾಪ್ತನ ವಾಕ್ಯ ಅಪ್ರಮಾಣ ಏಕೆ ? ಆದ್ದರಿಂದ ಒಕ್ಕಲುತನದಲ್ಲಿಯಂತೆ, ಸಂದೇಹ ಮೂಲಕ ಶಬ್ದದಿಂದ ಪ್ರವೃತ್ತಿ ಉಂಟಾಗುತ್ತದೆ (ಕೃಷ್ಯಾದೌ ಇವ ಸಂಭಾವನಾಮಾತ್ರೇಣ ಪ್ರವೃತ್ತಿಃ)

ಒಟ್ಟಿನಲ್ಲಿ ಶಬ್ದವೇ ಅಪ್ರಮಾಣ ಎಂದ ಬಳಿಕ ಶಬ್ದ ವಿಶೇಷವಾದ ವೇದವೂ ಅಪ್ರಮಾಣ. ಆದ್ದರಿಂದ ವೇದವು ಸಿದ್ಧಾರ್ಥ ಬ್ರಹ್ಮನಲ್ಲಿ ಪ್ರಮಾಣವಾಗುವದಂತೂ ಬಹು ದೂರ, ಇನ್ನು ಆ ವೇದ ವಿಚಾರಕ ಮೀಮಾಂಸಾಶಾಸ್ತ್ರದ ಆರಂಭವಂತೂ ಅದಕ್ಕಿಂತ ದೂರ. (ತದೇವಂ ಶಬ್ದಸ್ಯೈವ ಅಪ್ರಾಮಾಣ್ಯಾತ್, ಕುತಃ ತದ್ವಿಶೇಷಸ್ಯ ವೇದಸ್ಯ ಪ್ರಾಮಾಣ್ಯಂ: ಕುತಸ್ತಮಾಂ ಚ ತನ್ಮೀಮಾಂಸಾರಂಭಃ)

**ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ ||೬೬||**

**ಅವತರಣಿಕೆ :** ಮೇಲೆ ನಿರೂಪಿಸಿದಂತೆ ಶಬ್ದವೇ ಅಪ್ರಮಾಣವಾದ್ದರಿಂದ ಶಬ್ದವಿಶೇಷವಾದ ವೇದವೂ ಅಪ್ರಮಾಣ ಎಂದು ಪೂರ್ವಪಕ್ಷ ಬಂದರೆ, ಅದರ ಸಮಾಧಾನವನ್ನು ಇಲ್ಲಿ ಹೇಳುತ್ತಾರೆ.

**ಅನುವಾದ :** ಪ್ರತ್ಯಕ್ಷದಂತೆಯೂ ಅನುಮಾನದಂತೆಯೂ ಶಬ್ದದ ಪ್ರಾಮಾಣ್ಯವು ಸ್ವತಃ ಇದೆ, ಎಂದರೆ ಸ್ವಾಭಾವಿಕವಾಗಿ ಸ್ವಶಕ್ತಿಯಿಂದ ಇದೆ, ಅನುಮಾನದಿಂದಲ್ಲ. ಇದು ಪ್ರಮಾಣ ಸಿದ್ಧವಾಗಿದೆ.

**ವಿವರಣೆ :** ಈ ಶ್ಲೋಕದಲ್ಲಿಯ ಶಬ್ದಗಳ ಅರ್ಥವನ್ನು ಟೀಕಾರಾಯರು ಕೆಳಗಿನಂತೆ ವಿವರಿಸಿದ್ದಾರೆ.

**'ಚ' ಶಬ್ದವು**

i) **ವ್ಯಾಖ್ಯಾನಾಂತರದ್ಯೋತಕ :** ಇನ್ನೊಂದು ವ್ಯಾಖ್ಯಾನವನ್ನು ಸೂಚಿಸುತ್ತದೆ. ಈ ವರೆಗೆ ಅತಃ ಶಬ್ದದ ಮೂರು ವ್ಯಾಖ್ಯಾನ ನಿರೂಪಿಸಲಾಗಿದೆ. ಇನ್ನು ಅದರ ನಾಲ್ಕನೆಯ ವ್ಯಾಖ್ಯಾನ ಆರಂಭವಾಗಂತ್ತದೆ. ನಾಲ್ಕನೆಯ ಅರ್ಥವೆಂದರೆ ಶಬ್ದ (ಶಬ್ದವಿಶೇಷವಾದ ವೇದ) ಪ್ರಮಾಣವಾದ್ದರಿಂದ.

ii) **ಸಮುಚ್ಚಾಯಕಾರ್ಥ :** 3ನೇ ವ್ಯಾಖ್ಯಾನದಲ್ಲಿ ನಿರೂಪಿಸಿದಂತೆ, ಆಗಮವು ಕೇವಲ ಸಿದ್ಧಬ್ರಹ್ಮವಿಷಯಕವಲ್ಲ. ಅದು ಪ್ರಮಾಣವೂ ಆಗಿದೆ.

iii) **ಸಮುಚ್ಚಾಯಕ :** ಆಗಮವು (ಶಬ್ದ) ಪ್ರತ್ಯಕ್ಷದಂತೆ ಮತ್ತು ಅನುಮಾನದಂತೆ ಪ್ರಮಾಣವಾಗಿದೆ.

iv) ಹೇತುಸಮುಚ್ಚಯೇ. ಆಗಮವು ಪ್ರಮಾಣವೇಕೆ ಎಂದರೆ ಅದು ಸಂಶಯ-ವಿಪರೀತ ಜ್ಞಾನ ಹುಟ್ಟಿಸದೆ ಸರಿಯಾದ ಜ್ಞಾನ ಹುಟ್ಟಿಸುತ್ತವೆ,

"ಹಿ" ಶಬ್ದ —ಪ್ರಸಿದ್ಧಿದ್ಯೋತಕಃ, ಆಗಮ ಪ್ರಮಾಣ ಎಂಬುದು ಸುಪ್ರಸಿದ್ಧ.

**ಸ್ವತಏವ**—(ಸ್ವೇನೈವ ರೂಪೇಣ, ನತು ಅನುಮಾನತ್ವೇನ) ಸ್ವತಃ ಎಂದರೆ ಸ್ವಾಭಾವಿಕ, ಸ್ವಶಕ್ತಿಯಿಂದ. ಪೂರ್ವಪಕ್ಷದ 8 ಆಕ್ಷೇಪಗಳನ್ನು ಈ ಶ್ಲೋಕ ಪರಿಹರಿಸುತ್ತದೆ. ಇದಲ್ಲದೆ ಈ ಶ್ಲೋಕಕ್ಕೆ ಬೇರೆ ವ್ಯಾಖ್ಯಾನಗಳೂ ಇವೆ.

**ಆಕ್ಷೇಪ ಪರಿಹಾರ** 1) **ಪ್ರಮಾಕರಣತ್ವಂ** : ಜ್ಞಾನ ಹುಟ್ಟಿಸುವದು. ಶಬ್ದದಿಂದ ಜ್ಞಾನ ಹುಟ್ಟುತ್ತದೆಯೋ ಇಲ್ಲವೋ ? ಇಲ್ಲವೆಂದರೆ ಅನುಭವ ವಿರೋಧ. ಶಬ್ದದಿಂದ ಜ್ಞಾನವು ಹುಟ್ಟುವದಿಲ್ಲ, ಶಬ್ದವು ಬೋಧಕವಲ್ಲವೆಂಬುದನ್ನು ಪರರಿಗೆ ತಿಳಿಸಲು ಶಬ್ದವನ್ನೇ ನೀನು ಏಕೆ ಪ್ರಯೋಗಿಸುತ್ತೀ ? ಇದರಿಂದ ನಿನಗೆ ಸ್ವಕ್ರಿಯಾ ವಿರೋಧ ದೋಷ ಬರುತ್ತದೆ. ಆದ್ದರಿಂದ ಶಬ್ದದಿಂದ ಜ್ಞಾನ ಹುಟ್ಟುತ್ತದೆ ಎನ್ನಬೇಕು. ಇದು ಎಲ್ಲರ ಅನುಭವವೇ. ಈ ಜ್ಞಾನ, ಸಂಶಯ ಅಥವಾ ಭ್ರಮವಲ್ಲವಾದ್ದರಿಂದ ಯಥಾರ್ಥವೇ. ಹೀಗೆ ಶಬ್ದದಿಂದ ಜ್ಞಾನ ಹುಟ್ಟುತ್ತದೆಯಾದ್ದರಿಂದ ಅದು ಪ್ರಮಾಣ. "ಶಬ್ದಃ ಪ್ರಮಾಣಂ, ಸಂಶಯ-ವಿಪರ್ಯಯಾ-ಅಜನಕತ್ವೇ ಸತಿ, ಜ್ಞಾನಜನಕತ್ವಾತ್, ಪ್ರತ್ಯಕ್ಷವತ್".

ಇನ್ನು ಶಬ್ದವಿದ್ದರೂ ಕೆಲವೊಂದು ಸಲ ಜ್ಞಾನ ಹುಟ್ಟುವದಿಲ್ಲವಾದ್ದರಿಂದ ಶಬ್ದವು ಅಪ್ರಮಾಣ ಎಂದು ನೀನು ಹೇಳಿದ್ದು ಅಯುಕ್ತ. ಕೆಲವೊಂದು ಸಲ ಪ್ರತ್ಯಕ್ಷ ಮತ್ತು ಅನುಮಾನದಿಂದಲೂ ಜ್ಞಾನ ಹುಟ್ಟುವದಿಲ್ಲವಾದ್ದರಿಂದ ಅವೂ ಅಪ್ರಮಾಣವಾಗಬೇಕಾದೀತು. ಇನ್ನು ಎಲ್ಲ ಶಬ್ದಗಳಿಂದ ಜ್ಞಾನ ಹುಟ್ಟುವದಿಲ್ಲವೆಂಬುದು ನಿಜ. ಆದರೆ ಹಿಂದೆ ಹೇಳಿದ ಮತ್ತು ವಾಚ್ಯ–ವಾಚಕಭಾವ ಸಂಬಂಧ ಸ್ಮರಣೆಗೆ ಬಂದ ಶಬ್ದವೇ ಜ್ಞಾನ ಹುಟ್ಟಿಸುತ್ತದೆ ಮತ್ತು ಪ್ರಮಾಣವಾಗಿದೆ. (ಶ್ರುತಃ ಅನುಸ್ಮೃತಸಂಬಂಧಶ್ಚ ಶಬ್ದಃ ಪ್ರಮಾಣಂ) ಪ್ರತ್ಯಕ್ಷದಲ್ಲಿ ಇಂದ್ರಿಯಾರ್ಥ ಸಂಬಂಧ ಅವಶ್ಯವಿರುವಂತೆ, ಅನುಮಾನದಲ್ಲಿ ವ್ಯಾಪ್ತಿಪಕ್ಷಧರ್ಮತಾ ಜ್ಞಾನ ಅವಶ್ಯವಿರುವಂತೆ, ಶಬ್ದದಲ್ಲಿ ವಾಚ್ಯವಾಚಕ ಸಂಬಂಧ ಸ್ಮರಣೆಗೆ ಬರುವದೂ ಆತ್ಯವಶ್ಯ. ಆದ್ದರಿಂದ ಪ್ರತ್ಯಕ್ಷ ಮತ್ತು ಅನುಮಾನದಂತೆ ಶಬ್ದವೂ ಪ್ರಮಾಣ. (ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ........ಆಗಮಸ್ಯ).

2) **ವಿಷಯಾಭಾವಾತ್** : ವಿಷಯವಿಲ್ಲವಾದ್ದರಿಂದ ಶಬ್ದ ಅಪ್ರಮಾಣ ಎಂಬ ನಿನ್ನ ಹೇಳಿಕೆ ಅಯುಕ್ತ. ನಿನ್ನ ವಾದಸರಣಿಯಂತೆ ಚಾಕ್ಷುಷ ಪ್ರತ್ಯಕ್ಷವೂ ಅಪ್ರಮಾಣವಾದೀತು. ಹೇಗೆಂದರೆ, ಪರೋಕ್ಷ ವಿಷಯ ಅನುಮಾನವೇದ್ಯ, ಮತ್ತು ಅಪರೋಕ್ಷ ವಿಷಯ ಕಿವಿ ಮೂಗು ಮೊದಲಾದ ಇಂದ್ರಿಯಗಳಿಂದ ಗ್ರಹಿಸಲ್ಪಡುತ್ತದೆ. ಆದ್ದರಿಂದ ಚಾಕ್ಷುಷ ಪ್ರತ್ಯಕ್ಷಕ್ಕೆ ವಿಷಯವಿಲ್ಲ. ಹೀಗಾಗಿ ಅದು ಅಪ್ರಮಾಣ, ಈ ಅನಿಷ್ಟ ಪ್ರಸಂಗ ಪರಿಹರಿಸಲು, ನೀನು ರೂಪಜ್ಞಾನವು ಕಣ್ಣಿನಿಂದ ಆಗುವದರಿಂದ ಚಾಕ್ಷುಷ ಪ್ರತ್ಯಕ್ಷಕ್ಕೆ ವಿಷಯವಿದೆ, ಅದು ಪ್ರಮಾಣ ಎಂದು ಹೇಳ

ಬೇಕು. ಅದರಂತೆ ಶಬ್ದದಿಂದ ಜ್ಞಾನ ಹುಟ್ಟುವದರಿಂದ ಅದು ಪ್ರಮಾಣವೇ. ಶಬ್ದದ ವಿಷಯವೆಂದರೆ ಅನುಮಾನಕ್ಕೆ ಗೋಚರವಾಗದ ಪರೋಕ್ಷ, ಇದಲ್ಲದೆ ಶಬ್ದಪ್ರಾಮಾಣ್ಯವನ್ನು ನಿರಾಕರಿಸಲು ಶಬ್ದವನ್ನೇ ಬಳಸುವ ನಿನಗೆ ಏನೆನ್ನ ಬೇಕು ? (ಕಿಂ ವಕ್ತವ್ಯಂ) ಇದೆಲ್ಲ ಅಭಿಪ್ರಾಯ 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ' ಎಂಬಲ್ಲಿಯ ಚ ಶಬ್ದದಿಂದ ತಿಳಿಯುತ್ತದೆ ಎಂದು ಟೀಕಾರಾಯರು ನಿರೂಪಿಸಿದ್ದಾರೆ.

3) **ಜ್ಞಾನಾತ್ಮಕವಲ್ಲವೆಂಬ ಆಕ್ಷೇಪ** : 'ಶಬ್ದ ವಿಜ್ಞಾನಾತ್ಮಕವಲ್ಲವಾದ್ದರಿಂದ ಅಪ್ರಮಾಣ' ಎಂಬ ನಿನ್ನ ಹೇಳಿಕೆ ಅಯುಕ್ತ. ಇಂದ್ರಿಯ ಅಥವಾ ಇಂದ್ರಿಯಾರ್ಥ ಸಂಬಂಧ (ಸನ್ನಿಕರ್ಷ) ರೂಪವಾದ ಪ್ರತ್ಯಕ್ಷವು ವಿಜ್ಞಾನಾತ್ಮಕವಲ್ಲದಿದ್ದರೂ ಹೇಗೆ ಪ್ರಮಾಣವೋ, ಧೂಮ ಮೊದಲಾದ ಅನುಮಾನಗಳು ವಿಜ್ಞಾನಾತ್ಮಕವಲ್ಲದಿದ್ದರೂ ಹೇಗೆ ಪ್ರಮಾಣವೋ, ಅದರಂತೆ ಶಬ್ದವೂ ಕೂಡ ವಿಜ್ಞಾನಾತ್ಮಕವಲ್ಲದಿದ್ದರೂ ಪ್ರಮಾಣವೇ. **ಅಥವಾ** ಶಬ್ದ ಪ್ರಮಾಣವೆಂದರೆ ಶಬ್ದಜ್ಞಾನ ಪ್ರಮಾಣ ಎಂದು ಅರ್ಥ. ಇದು ಜ್ಞಾನಾತ್ಮಕವೇ. ಆದ್ದರಿಂದ ನಿನ್ನ ಆಕ್ಷೇಪ ಅಯುಕ್ತ ಮತ್ತು ನಿನ್ನ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ.

4) **ಬಾಹ್ಯಕರಣ ಪ್ರತ್ಯಕ್ಷತ್ವದ ಆಕ್ಷೇಪ** : ಶಬ್ದವು ಬಾಹ್ಯೇಂದ್ರಿಯವಾದ ಕಿವಿಗೆ ಗೋಚರವಾಗುವದರಿಂದ ಅದು ಅಪ್ರಮಾಣ ಎಂದು ಹೇಳಿದ್ದು ಅಯುಕ್ತ. ಬಾಹ್ಯೇಂದ್ರಿಯಕ್ಕೆ ಗೋಚರವಾಗುತ್ತಿದ್ದರೂ ಧೂಮಾದ್ಯನುಮಾನ ಪ್ರಮಾಣ ವಿರುವಂತೆ, ಹೊರಗಿನ ಕಿವಿಗೆ ಗೋಚರವಾದರೂ ಶಬ್ದವು ಪ್ರಮಾಣವೇ. **ಅಥವಾ** ಶಬ್ದ ಪ್ರಮಾಣವೆಂದರೆ ಶಬ್ದಜ್ಞಾನ ಪ್ರಮಾಣ ಎಂದು ಅರ್ಥ. ಧೂಮಾನುಮಾನ ಎಂದರೆ ಧೂಮಜ್ಞಾನಾನುಮಾನ ಎಂದು ಅರ್ಥ. ಎಂದರೆ ಧೂಮಜ್ಞಾನದಿಂದಲೇ ಪರ್ವತವು ಅಗ್ನಿಯುಳ್ಳದ್ದು ಎಂಬ ಜ್ಞಾನ (ಅನುಮಿತಿ) ಹುಟ್ಟುತ್ತದೆ. ಅದರಂತೆ ಶಬ್ದಜ್ಞಾನದಿಂದ ಆದರ ಅರ್ಥಜ್ಞಾನವಾಗುತ್ತದೆ. ಇನ್ನು ಶಬ್ದಜ್ಞಾನವನ್ನು ಗ್ರಹಿಸುವದು ಬಾಹ್ಯಕರಣವಾದ ಕಿವಿಯಲ್ಲ. ಆದರೆ ಒಳಗಿನ ಸಾಕ್ಷಿ. ಆದ್ದರಿಂದ ನಿನ್ನ ಆಕ್ಷೇಪವೇ ಅಯುಕ್ತ. ಮತ್ತು ನಿನ್ನ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ.

5) **ಆತ್ಮನನ್ನು ಆಶ್ರಯಿಸದಿರುವ ಆಕ್ಷೇಪ** : ಪ್ರತ್ಯಕ್ಷ ಮತ್ತು ಅನುಮಾನ ಆತ್ಮನಲ್ಲಿ ಸಮವೇತವಾಗದಿದ್ದರೂ ಪ್ರಮಾಣವಾಗಿರುವಂತೆ, ಶಬ್ದವು ಆತ್ಮನನ್ನು ಆಶ್ರಯಿಸದಿದ್ದರೂ ಪ್ರಮಾಣ. **ಅಥವಾ** ಶಬ್ದ ಪ್ರಮಾಣ ಎಂದರೆ ಶಬ್ದಜ್ಞಾನ ಪ್ರಮಾಣ ಎಂದು ಅರ್ಥ. ತಾರ್ಕಿಕರು ಹೇಳುವಂತೆ, ಜ್ಞಾನವು ಆತ್ಮನನ್ನು ಆಶ್ರಯಿಸಿವೆ. ಆದ್ದರಿಂದ ನಿನ್ನ ಆಕ್ಷೇಪವೇ ಅಯುಕ್ತ. ನಿನ್ನ ಹೇತು ಪಕ್ಷದಲ್ಲಿ ಇಲ್ಲ ವಾದ್ದರಿಂದ ನಿನ್ನ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ.(ಸಿದ್ಧಾಂತರೀತ್ಯಾ ಶಬ್ದ ಜ್ಞಾನವು ವೃತ್ತಿಜ್ಞಾನವಾದ್ದರಿಂದ ಅದು ಅಂತಃಕರಣವನ್ನು ಆಶ್ರಯಿಸಿದೆ.)

6) **ಆಕಾಶಗುಣತ್ವಾತ್ ಎಂಬ ಆಕ್ಷೇಪ :** ಶಬ್ದವು ಆಕಾಶಗುಣವಾದ್ದರಿಂದ ಅಪ್ರಮಾಣ ಎಂದು ನೀನು ಹೇಳಿದ್ದು ತುಂಬಾ ಅಯುಕ್ತ. ಆಕಾಶಗುಣತ್ವ ಎಂಬ ನಿನ್ನ ಹೇತುವೇ ಅಸಿದ್ಧ. ಏಕೆಂದರೆ ಸಿದ್ಧಾಂತಿಗಳ ಪ್ರಕಾರ ಶಬ್ದ ಪ್ರಮಾಣ ಎಂದರೆ ವರ್ಣಾತ್ಮಕ ಶಬ್ದ ಪ್ರಮಾಣ. ಈ ವರ್ಣಾತ್ಮಕ ಶಬ್ದವು ಆಕಾಶಗುಣವಲ್ಲ. ವರ್ಣಗಳು ನಿತ್ಯ ಮತ್ತು ವ್ಯಾಪ್ತ. ಆದ್ದರಿಂದ ನಿನ್ನ ಅನುಮಾನಕ್ಕೆ ಅಸಿದ್ಧಿ ದೋಷ ಬರುತ್ತದೆ.

"ಶಬ್ದಃ ಪ್ರಮಾಣಂ ಪ್ರತ್ಯಕ್ಷವತ್" ಎಂದು ನಾವು ಹೇಳುತ್ತೇವೆ. ಪ್ರತ್ಯಕ್ಷವತ್ ಎಂಬುದು ವ್ಯತಿರೇಕ ದೃಷ್ಟಾಂತ, ಪ್ರತ್ಯಕ್ಷವು ಆಕಾಶಗುಣವಾಗದಿದ್ದರೂ ಹೇಗೆ ಪ್ರಮಾಣವೋ ಅದರಂತೆ ವರ್ಣಾತ್ಮಕ ಶಬ್ದವು ಆಕಾಶಗುಣವಾಗದಿದ್ದರೂ ಪ್ರಮಾಣವೇ ಎಂದು ನಮ್ಮ ಅಭಿಪ್ರಾಯ;

**ಟಿಪ್ಪು :** ಮೇಲಿನ 3, 4, 5, 6ರ ಹೇತುಗಳು ಅಪ್ರಯೋಜಕ. ಎಂದರೆ ಈ ಹೇತುಗಳಿಂದ ವಿಪಕ್ಷದಲ್ಲಿ ಬಾಧಕವಿಲ್ಲ. ಇದರಿಂದಾಗಿ ಸಿದ್ಧಾಂತಿಗಳಿಗೆ ಯಾವ ತೊಂದರೆಯೂ ಇಲ್ಲ. ಇದಲ್ಲದೆ ಈ ಹೇತುಗಳು ಸಿದ್ಧಾಂತರೀತ್ಯಾ ಪಕ್ಷದಲ್ಲಿ ಇಲ್ಲವಾದ್ದರಿಂದ ಪೂರ್ವಪಕ್ಷಿಯ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ.

7) **ಶಬ್ದ ಮತ್ತು ಅರ್ಥ (ವಿಷಯಗಳ) ನಡುವೆ ಸಂಬಂಧವಿಲ್ಲದಿರುವದು.** ಶಬ್ದ ಮತ್ತು ಅರ್ಥ (ಶಬ್ದಾರ್ಥ) ಗಳ ನಡುವೆ ಸಂಬಂಧವು ಇಲ್ಲವೆಂದು ಹೇಳುವದು ಅನುಚಿತ. ಶಬ್ದಾರ್ಥ ಜ್ಞಾನವಾಗಿದೆಯಾದ್ದರಿಂದ ಶಬ್ದ ಮತ್ತು ಅರ್ಥ (ಶಬ್ದಾರ್ಥ)ಗಳ ನಡುವೆ ಸಂಬಂಧವಿರಲೇಬೇಕು. ಪ್ರತ್ಯಕ್ಷದಲ್ಲಿ ಕಣ್ಣು ಮತ್ತು ಘಟಗಳ ನಡುವೆ ಸಂಯೋಗ ಸಂಬಂಧವಿರುವಂತೆ, ಕಿವಿಗೆ ಧ್ವನ್ಯಾತ್ಮಕ ಶಬ್ದದೊಡನೆ ಸಮವಾಯ ಸಂಬಂಧವಿರುವಂತೆ, ಅನುಮಾನದಲ್ಲಿ ಧೂಮ ಮತ್ತು ಅಗ್ನಿಗಳ ನಡುವೆ ವ್ಯಾಪ್ಯ-ವ್ಯಾಪಕಭಾವ ಸಂಬಂಧವಿರುವಂತೆ, ಶಬ್ದ ಮತ್ತು ಶಬ್ದಾರ್ಥಗಳ ನಡುವೆ ಸಂಬಂಧ ಇದ್ದೇ ಇದೆ.

**ಶಬ್ದ ಮತ್ತು ಶಬ್ದಾರ್ಥಗಳ ನಡುವಿನ ಸಂಬಂಧ ಯಾವುದು ?** ಈ ಬಗ್ಗೆ ಎರಡು ಅಭಿಪ್ರಾಯಗಳಿವೆ.

a) ಶಬ್ದ ಮತ್ತು ಅರ್ಥಗಳ ನಡುವಿನ ಸಂಬಂಧ ಪರಮೇಶ್ವರನ ಸಂಕೇತ ಎಂದು ತಾರ್ಕಿಕರು ಹೇಳುತ್ತಾರೆ. 'ಈ ಶಬ್ದದಿಂದ ಈ ಅರ್ಥವು ತಿಳಿಯಲ್ಪಡಬೇಕು' ಎಂಬ ಪರಮೇಶ್ವರನ ಇಚ್ಛಾರೂಪ ಸಂಕೇತವೇ ಶಬ್ದ-ಅರ್ಥಗಳ ನಡುವೆ ಇರುವ ಸಂಬಂಧವೆಂದು ತಾರ್ಕಿಕರ ಮತ.

b) ಜೈಮಿನಿ ಮತದವರಾದರೋ, ಶಬ್ದ-ಶಬ್ದಾರ್ಥಗಳ ನಡುವೆ ಇರುವ ವಾಚ್ಯ-ವಾಚಕಭಾವ ಸಂಬಂಧವು ಸ್ವಾಭಾವಿಕ (ಔತ್ಪತ್ತಿಕ) ಎಂದು ಹೇಳುತ್ತಾರೆ.

ನಮ್ಮ ಸಿದ್ಧಾಂತದಲ್ಲಿಯೂ ಶಬ್ದ-ಶಬ್ದಾರ್ಥಗಳ ನಡುವಿನ ಸಂಬಂಧ

ಸ್ವಾಭಾವಿಕವಾದುದು. (ಸ್ವತ ಏವ). ಈ ಸ್ವಾಭಾವಿಕ ಸಂಬಂಧ ಮೂಲಕ ಶಬ್ದವು ಅರ್ಥವನ್ನು ತಿಳಿಸುತ್ತದೆ. ಜೈಮಿನ್ಯಾಚಾರ್ಯರು ಹೇಳುವಂತೆ "ಔತ್ಪತ್ತಿಕಸ್ತು ಶಬ್ದಸ್ಯ ಅರ್ಥೇನ ಸಂಬಂಧಃ". ಆಚಾರ್ಯರೇ ಮುಂದೆ 'ಶಬ್ದಗಳಿಗೆ ಅರ್ಥಗಳೊಡನೆ ಇರುವ ನಿತ್ಯಸಂಬಂಧವು ನಿರಾಕರಿಸಲ್ಪಡುವುದಿಲ್ಲ' ಎಂದೂ ಹೇಳುತ್ತಾರೆ. ಹೀಗೆ ಶಬ್ದ-ಶಬ್ದಾರ್ಥಗಳ ನಡುವೆ ಸ್ವಾಭಾವಿಕ ಸಂಬಂಧವಿದ್ದರೆ, ಶಬ್ದಾರ್ಥಜ್ಞಾನವಿಲ್ಲದವನಿಗೂ (ಅವ್ಯುತ್ಪನ್ನಸ್ಯ) ಶಬ್ದದ ಅರ್ಥಜ್ಞಾನವಾಗಲಿ ! ಏಕೆಂದರೆ ಅಗ್ನಿಯು ತನ್ನ ಸುಡುವ ಶಕ್ತಿಯನ್ನರಿಯದವನನ್ನೂ ಸುಡುತ್ತದೆ. ಆದರೆ ಈ ವಾದಸರಣಿ ಸರಿಯಲ್ಲ. ಕಣ್ಣಿಗೆ ರೂಪಜ್ಞಾನದಲ್ಲಿ ಸ್ವಾಭಾವಿಕ ಶಕ್ತಿಯಿದ್ದರೂ ಅದುಘಟ ಮೊದಲಾದ ವಸ್ತುವಿನೊಡನೆ ಸಂಬಂಧ ಹೊಂದಿದ ನಂತರವೇ ರೂಪಜ್ಞಾನ ಮಾಡಿಕೊಡುತ್ತದೆ. ಆದರಂತೆ ಶಬ್ದಕ್ಕೆ ಅರ್ಥದೊಡನೆ ಸ್ವಾಭಾವಿಕ ಸಂಬಂಧವಿದ್ದರೂ,ಆ ಸಂಬಂಧವನ್ನು ಅರಿತವನಿಗೆ ಮಾತ್ರ ಅರ್ಥಜ್ಞಾನವಾಗುತ್ತದೆ. ಹಿಂದೆ ಹೇಳಿದಂತೆ "ನ ಶಬ್ದಮಾತ್ರಂ ಪ್ರಮಾಣಂ ಕಿಂತು ಶ್ರುತಃ ಅನುಸ್ಮೃತ ಸಂಬಂಧಶ್ಚ ಕೇವಲ ಶಬ್ದಪ್ರಮಾಣವಲ್ಲ; ಆದರೆ ಹಿಂದೆ ಕೇಳಲ್ಪಟ್ಟ ಮತ್ತು ವಾಚ್ಯವಾಚಕಭಾವ ಸಂಬಂಧ ಸ್ಮರಣೆಗೆ ಬಂದ ಶಬ್ದವೇ ಪ್ರಮಾಣ ಈ ಎಲ್ಲ ವಿಷಯ 'ಪ್ರತ್ಯಕ್ಷವಚ್ಚ' ಎಂಬಲ್ಲಿಯ ಚ ಶಬ್ದದಿಂದ ಸೂಚಿತವಾಗುತ್ತದೆ.

ಒಟ್ಟಿನಲ್ಲಿ ಶಬ್ದಕ್ಕೆ ಅರ್ಥದೊಡನೆ, ಶಬ್ದಾರ್ಥದೊಡನೆ ಸ್ವಾಭಾವಿಕ ಸಂಬಂಧವಿದೆ. ಈ ವಿಷಯದಲ್ಲಿ ಸಂಕೇತವಾದಿಗಳು ಎತ್ತುವ ಆಕ್ಷೇಪಗಳನ್ನು ಸುಧಾಕಾರರು ಪರಿಹರಿಸಿದ್ದಾರೆ.

**ಆಕ್ಷೇಪ :** (ಸಂಕೇತವಾದಿ) ಶಬ್ದಕ್ಕೆ ಅರ್ಥದೊಡನೆ,ಶಬ್ದಾರ್ಥದೊಡನೆ ಸ್ವಾಭಾವಿಕ ಸಂಬಂಧ ಹೇಳುವ ನೀವು, ಶಬ್ದವ್ಯವಸ್ಥೆಗೋಸ್ಕರ, ಒಂದು ಶಬ್ದಕ್ಕೆ ಒಂದು ಅರ್ಥದೊಡನೆ ಸ್ವಾಭಾವಿಕ ಸಂಬಂಧವಿದೆ ಎಂದು ಹೇಳಬೇಕು. ಆದರೆ ಇದು ಅನುಭವ ವಿರುದ್ಧವಾಗಿದೆ. ಹೇಗೆಂದರೆ— ಒಂದೇ ಶಬ್ದವನ್ನು ಬೇರೆ ಬೇರೆ ಜನರು ಬೇರೆ ಬೇರೆ ಅರ್ಥಗಳಲ್ಲಿ ಬಳಸುತ್ತಾರೆ. ಉದಾಹರಣೆಗಾಗಿ ಆರ್ಯರ ಪ್ರಕಾರ "ಯವ ಎಂದರೆ ಜವೆಗೋದಿ (ದೀರ್ಘಶೂಕ). ಮ್ಲೇಂಛರ ಪ್ರಕಾರ ಯವ ಎಂದರೆ ನವಣೆ (ಪ್ರಿಯಂಗು), ಇದರಂತೆ ಆರ್ಯರ ಪ್ರಕಾರ ತ್ರಿವೃತ್ ಎಂದರೆ ಒಂದು ಬಗೆಯ ಬಳ್ಳಿ (ಲತಾ ವಿಶೇಷಃ). ಋಷಿಗಳ ಪ್ರಕಾರ ತ್ರಿವೃತ್ ಎಂದರೆ ಸ್ತೋತ್ರೀಯ ಅನುವಾಕ್. ಹೀಗೆ ಒಂದೇ ಶಬ್ದಕ್ಕೆ ಪುರುಷಭೇದದಿಂದ ಅರ್ಥವ್ಯತ್ಯಾಸ ಕಂಡು ಬರುತ್ತದೆ. ಒಂದು ವೇಳೆ ಒಂದು ಶಬ್ದಕ್ಕೆ ತನ್ನ ಅರ್ಥದೊಡನೆ ಸ್ವಾಭಾವಿಕ ಸಂಬಂಧವಿದ್ದರೆ, ಈ ಅರ್ಥವ್ಯತ್ಯಾಸ ಉಂಟಾಗುತ್ತಿದ್ದಿಲ್ಲ. ಆದ್ದರಿಂದ ಶಬ್ದಕ್ಕೆ ಅರ್ಥದೊಡನೆ ಇರುವ ಸಂಬಂಧ, ಈಶ್ವರನ ಸಂಕೇತ ಮೂಲಕ ಎಂದು ಹೇಳಬೇಕು.

**ಪರಿಹಾರ** (ಸಿದ್ಧಾಂತಿ) — ಶಬ್ದಕ್ಕೆ ಅರ್ಥದೊಡನೆ ಸ್ವಾಭಾವಿಕ ಸಂಬಂಧ ಇದ್ದೇ

ಇದೆ. ಆದರೆ ಒಮ್ಮೊಮ್ಮೆ ಸಂಕೇತದಿಂದಲೂ ಶಬ್ದವು ಅರ್ಥಬೋಧಕವಾಗಿವೆ. ಶಬ್ದಾರ್ಥಜ್ಞಾನ ಕೆಲವೆಡೆ ಶಬ್ದದ ಸ್ವಾಭಾವಿಕ ಶಕ್ತಿಯಿಂದ ಮತ್ತು ಕೆಲವೆಡೆ ಸಂಕೇತದಿಂದ ತಿಳಿಯುತ್ತದೆ. ಅಥವಾ ಒಂದೇ ಶಬ್ದಕ್ಕೆ ಎರಡೂ ಅರ್ಥಗಳಲ್ಲಿ ಸ್ವಾಭಾವಿಕ ಶಕ್ತಿಯೇ ಇರಲಿ ಎಂದು ಹೇಳುತ್ತೇವೆ. ಸೈಂಧವ ಎಂದರೆ ಉಪ್ಪು ಮತ್ತು ಕುದುರೆ ಎಂಬ ಎರಡು ಅರ್ಥವಿರುವಂತೆ, ಯವ ಎಂದರೆ ಜವೆಗೋದಿ ಮತ್ತು ನವಣೆ ಎಂಬ ಎರಡೂ ಅರ್ಥ ಇವೆ. ಎರಡೂ ಅರ್ಥ ಸ್ವಾಭಾವಿಕ ಶಕ್ತಿ ಮೂಲಕವೇ. ವ್ಯವಹಾರ ಭೇದವಾದರೋ ವ್ಯುತ್ಪತ್ತಿ ಮೂಲಕ.

**ಇನ್ನೊಂದು ಆಕ್ಷೇಪ** (ಸಂಕೇತವಾದಿ) — ಶಬ್ದ ಅರ್ಥಗಳ ನಡುವೆ ಸ್ವಾಭಾವಿಕ ಸಂಬಂಧ ಹೇಳುವ ನೀವೂ ಕೂಡ, ಈ ಸಂಬಂಧಜ್ಞಾನವಾದರೇನೇ ಅರ್ಥಜ್ಞಾನವಾಗುತ್ತದೆ ಎಂದು ಹೇಳುತ್ತೀರಿ. ಈ ಸಂಬಂಧಜ್ಞಾನವಾಗಲಿಕ್ಕೆ ಎಂದರೆ ಈ ಶಬ್ದಕ್ಕೆ ಈ ಅರ್ಥ ಎಂಬ ಜ್ಞಾನವಾಗಲಿಕ್ಕೆ ಸಂಕೇತವೇ ಉಪಾಯ. ಸಂಕೇತಜ್ಞಾನ ವೃದ್ಧ ವ್ಯವಹಾರದಿಂದ ಆಗುತ್ತದೆ, ವೃದ್ಧವ್ಯವಹಾರವಾದರೋ, ಸಂಕೇತ ಪೂರ್ವಕವಾಗಿಯೇ ಇರುತ್ತದೆ, ಮನುಷ್ಯರಿಗೆ ದೇವದತ್ತ, ಯಜ್ಞದತ್ತ ಮೊದಲಾದ ಸಂಕೇತವಿರುವಂತೆ, ಆಕಳು ಎಂದರೆ ಗಂಗೆ ತೊಗಲು ಮೊದಲಾದವಿದ್ದ ಪ್ರಾಣಿ ಎಂದು ಸಂಕೇತವಿದೆ. ಎಂದರೆ ಗೋ (ಆಕಳ) ಮೊದಲಾದ ಶಬ್ದಗಳು ಸಂಕೇತಪೂರ್ವಕವಾಗಿಯೇ ಇವೆ. ಕೇವಲ ಸಂಕೇತದಿಂದಲೇ ಶಬ್ದ ಪ್ರಯೋಗ, ಶಬ್ದಜ್ಞಾನ ಮೊದಲಾದ ವ್ಯವಹಾರಗಳು ನಡೆಯುತ್ತವೆ.

"ಸಂಕೇತ ಮಾಡುವದೇ ಶಬ್ದಕ್ಕೆ ಅರ್ಥದೊಡನೆ ಇರುವ ಸ್ವಾಭಾವಿಕ ಸಂಬಂಧವನ್ನು ಸೂಚಿಸುತ್ತದೆ. ಏಕೆಂದರೆ ಕೆಲವು ಶಬ್ದಗಳಿಗೆ ಈ ಸ್ವಾಭಾವಿಕ ಸಂಬಂಧ ಇರದಿದ್ದರೆ ಸಂಕೇತವೇ ಕೂಡುವದಿಲ್ಲ. ಹಾಗೂ ಸೃಷ್ಟಿಯ ಪ್ರಾರಂಭದಲ್ಲಿ ಸಂಕೇತವಿಲ್ಲದಿರುವದರಿಂದ ಶಬ್ದಗಳು ಅರ್ಥಬೋಧಕವಾಗುವದಿಲ್ಲ"ಎಂದು ಸಿದ್ಧಾಂತಿಗಳಾದ ನೀವು ಆಕ್ಷೇಪಿಸಬಾರದು, ಏಕೆಂದರೆ ಈ ಶಬ್ದಕ್ಕೆ ಈ ಅರ್ಥ ಎಂದು ಸಂಕೇತ ಮಾಡಿದವ ಈಶ್ವರ. ಪರಮೇಶ್ವರನೇ, ಸೃಷ್ಟಿಯ ಪ್ರಾರಂಭದಲ್ಲಿದ್ದ ಮಹರ್ಷಿ ಹಾಗೂ ದೇವತೆಗಳನ್ನು ಕುರಿತು "ಈ ಶಬ್ದದಿಂದ ಈ ಅರ್ಥ ತಿಳಿಯಲ್ಪಡಬೇಕು" ಎಂದು ಸಂಕೇತ ಮಾಡಿದನು. ಈ ಸಂಕೇತಕ್ಕನುಗುಣವಾಗಿ ಮಹರ್ಷಿಗಳು ಮಾಡಿದ ವ್ಯವಹಾರದಿಂದ ಮತ್ತು ಉಪಲಕ್ಷಣಯಾ ಅವರ ಉಪದೇಶ ಪರಂಪರೆಯಿಂದ, ಶಬ್ದಾದಿಗಳ ಆವಾಪ–ಉದ್ವಾಪಗಳಿಂದ, ಸಂಕೇತವು ತಿಳಿದು ಬರುತ್ತದೆ. ಶಬ್ದಕ್ಕೆ ಅರ್ಥದೊಡನೆ ಸ್ವಾಭಾವಿಕ ಸಂಬಂಧವಿದ್ದ ಮಾತ್ರಕ್ಕೆ ಅರ್ಥಜ್ಞಾನವಾಗುವದಿಲ್ಲ;ಆದರೆ ಸಂಬಂಧಜ್ಞಾನವಾದ ನಂತರವೇ ಅರ್ಥಜ್ಞಾನವಾಗುತ್ತದೆ ಈ ಸಂಬಂಧಜ್ಞಾನ ವೃದ್ಧ ವ್ಯವಹಾರದಿಂದಲೇ ಎಂದು ನೀವು ಹೇಳಬೇಕಾಗುತ್ತದೆ. "ಶಬ್ದಗಳಿಗೆ ಸಾಂಕೇತಿಕ ಸಂಬಂಧವಿದ್ದರೆ ಶಬ್ದಗಳ ಸಾಧು ಪ್ರಯೋಗ ಅಸಾಧು

ಪ್ರಯೋಗ ಎಂಬ ವ್ಯಾಕರಣದ ವಿಭಾಗವೇ ಇಲ್ಲದಾಗುತ್ತದೆ" ಎಂದು ನೀವು ಆಕ್ಷೇಪಿಸ ಕೂಡದು. ಪರಮೇಶ್ವರನು ಮಾಡಿದ ಸಂಕೇತಕ್ಕೆ ಅನುಗುಣವಾದ ಶಬ್ದಪ್ರಯೋಗ ಸಾಧುಪ್ರಯೋಗ; ತದ್ವಿರುದ್ಧವಾದುದು. ಅಸಾಧು ಪ್ರಯೋಗ ಎಂದು ನಿಮ್ಮ ಆಕ್ಷೇಪವನ್ನು ನಿರಾಕರಿಸುತ್ತೇವೆ.

**ಸಿದ್ಧಾಂತಿ :** ಈ ವಿಷಯದಲ್ಲಿ ನಮ್ಮ ಉತ್ತರ ಹೀಗಿದೆ. (ಅತ್ರ ಬ್ರೂಮಃ) ಶಬ್ದದಿಂದ ಅರ್ಥಜ್ಞಾನವಾಗುವಲ್ಲಿ ಉಪಾಯವು ಈಶ್ವರ ಸಂಕೇತವೋ ಅಥವಾ ನಮ್ಮ-ನಿಮ್ಮ ಸಂಕೇತವೋ ? ಈಶ್ವರನ ಸಂಕೇತವೆಂದರೆ, ಆರ್ಯರು ಮತ್ತು ಮ್ಲೇಂಛರು ಮಾಡುವ ಯಾವ ಮುಂತಾಧ ಶಬ್ದ ಪ್ರಯೋಗದಲ್ಲಿಯು ಅರ್ಥ ವ್ಯತ್ಯಾಸವೇಕೆ ? ಅಲ್ಲದೆ ಈಶ್ವರಸಂಕೇತ ಮಾತ್ರದಿಂದ ಅರ್ಥಜ್ಞಾನವಾಗುವದಿಲ್ಲ. ಆದರೆ ಆ ಸಂಕೇತಜ್ಞಾನದಿಂದ ಅರ್ಥಜ್ಞಾನವಾಗುತ್ತದೆ, ಈ ಸಂಕೇತಜ್ಞಾನ ವಾದರೋ ನೀನು ಹೇಳುವಂತೆ ಉಪದೇಶದಿಂದ ಆಗುತ್ತವೆ. ಈ ಉಪದೇಶ ನಮ್ಮ-ನಿಮ್ಮದು ಇರಬಹುದು. ಅದೃಷ್ಟವಾದ ಈಶ್ವರಸಂಕೇತವನ್ನು ಒಪ್ಪು ವದೇಕೆ ? ಇನ್ನು ನಾವು-ನೀವು ಹೊಸದಾಗಿ ಸಂಕೇತ ಮಾಡುವದಿಲ್ಲ. ಆದರೆ ಈಶ್ವರ ಸಂಕೇತವನ್ನೇ ಉಪದೇಶದಿಂದ ಅರಿತು ತಿಳಿಸುತ್ತೇವೆ' ಎಂದು ನೀನು ಹೇಳುವದಾದರೆ, ಶಬ್ದಕ್ಕೆ ಅರ್ಥದೊಡನೆ ಸ್ವಾಭಾವಿಕ ಸಂಬಂಧ ಹೇಳುವ ನಮ್ಮ ಉತ್ತರವೂ ಅದೇ. ನಾವೂ ಕೂಡ, ವೃದ್ಧರು ಶಬ್ದದ ಸ್ವಾಭಾವಿಕ ಶಕ್ತಿಯನ್ನು ಉಪದೇಶದಿಂದ ತಿಳಿಸುತ್ತಾರೆ. (ಸ್ವಾಭಾವಿಕ ಶಕ್ತಿ; ಜ್ಞಾಪ್ಯತೇ ಏವ), ಹೊಸ ಸಂಕೇತ ಮಾಡುವದಿಲ್ಲ. ಹೀಗೆ ಈಶ್ವರ ಸಂಕೇತದಿಂದ ಅರ್ಥಜ್ಞಾನ ಎಂಬ ಮೊದಲನೇ ವಿಕಲ್ಪ ಕೂಡುವದಿಲ್ಲ. ಇನ್ನು ಈ ಸಂಕೇತ ನಮ್ಮ-ನಿಮ್ಮದ್ದು ಎಂಬ ಎರಡನೆಯ ವಿಕಲ್ಪವೂ ಅಯುಕ್ತ. ಏಕೆಂದರೆ, ಶಬ್ದದಿಂದ ಅರ್ಥ ಜ್ಞಾನವಾಗುವ ವಿಷಯದಲ್ಲಿ ನಮ್ಮ ನಿಮ್ಮ ಸಂಕೇತ ಉಪಾಯ ಎಂದು ಹೇಳಿ ದರೆ, ಈಶ್ವರನ ಸಂಕೇತಕ್ಕನುಗುಣವಾದ ಶಬ್ದಪ್ರಯೋಗ ಸಾಧು ಪ್ರಯೋಗ, ತದ್ವಿರುದ್ಧವಾದುದು ಅಸಾಧು ಪ್ರಯೋಗ ಎಂಬ ಶಬ್ದ ವಿಭಾಗವೇ ಇಲ್ಲದಾಗುತ್ತದೆ. ಮತ್ತು ಸಾಧು-ಅಸಾಧು ಪ್ರಯೋಗ ವಿವೇಚನೆ ಗಾಗಿ ಇರುವ ವ್ಯಾಕರಣಶಾಸ್ತ್ರ ವ್ಯರ್ಥವಾಗುತ್ತದೆ. ಅಲ್ಲದೆ ವ್ಯವಹಾರವೇ ಶಬ್ದದ ಪ್ರಯೋಜನ. ಈ ಪ್ರಯೋಜನವು ಸಂಕೇತ ಹೇಗಿದ್ದರೂ (ಈಶ್ವರ ಕೃತಃ ಅಸ್ಮದಾದಿಕೃತಃ) ಕೂಡುತ್ತದೆ. ಇನ್ನು ವ್ಯಾಕರಣವು ಅದೃಷ್ಟದ ಸಲು ವಾಗಿದ್ದು ಈಶ್ವರನ ಸಂಕೇತವಿದ್ದಲ್ಲಿ ಮಾತ್ರ, ಈಶ್ವರನ ಸಂಕೇತ ತಿಳಿದುಕೊಳ್ಳು ವವರಿಂದ ಅದೃಷ್ಟ ಪ್ರಯೋಜನ ಹುಟ್ಟುತ್ತದೆ ಎಂಬ ವಾದ ಅಸಮಂಜಸ. ಏಕೆಂದರೆ ವ್ಯಾಕರಣವು, ಅದೃಷ್ಟಜನಕ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. "ಏಕಃ ಶಬ್ದಃ ಸಮ್ಯಕ್‌ಜ್ಞಾತಃ ಸುಷ್ಠು ಪ್ರಯುಕ್ತಃ ಸ್ವರ್ಗಲೋಕೇ ಕಾಮಧುಕ್

ಭವತಿ । ಸಾಧುಭಿಃ ಭಾಷಿತವ್ಯಂ ಸಾಧೂನೇವ ಪ್ರಯುಂಜೀತ" ಮುಂತಾದ ಪ್ರಮಾಣಗಳಿವೆ ಎಂದು ಹೇಳುವದು ಅನುಚಿತ. ಏಕೆಂದರೆ, ಶ್ರುತ್ಯಾದಿಗಳು ಸಂಕೇತಪಕ್ಷ—ಸ್ವಾಭಾವಿಕ ಶಕ್ತಿ ಪಕ್ಷ ಈ ಉಭಯ ಪಕ್ಷಗಳಲ್ಲಿ ಉದಾಸೀನವಾಗಿವೆ. ಇದಲ್ಲದೆ ಅನಂತರ ಬರುವ ಸಹಕಾರಿಯನ್ನು, ಸಂಕೇತವನ್ನು ಅಂಗೀಕರಿಸಿ ಸ್ವಾಭಾವಿಕ ಶಕ್ತಿ ಪಕ್ಷವನ್ನು (ಎಂದರೆ ಶಬ್ದಕ್ಕೆ ಅರ್ಥದೊಡನೆ ಇರುವ ಸ್ವಾಭಾವಿಕ ಸಂಬಂಧ ವನ್ನು) ಅಪಲಾಪ ಮಾಡಿದರೆ, ಅತಿಪ್ರಸಂಗ ಬರುತ್ತದೆ. (ದಂಡ, ಚಕ್ರ ಮೊದಲಾದ ಸಹಕಾರಿ ಸಾಮಗ್ರಿಯನ್ನೊಪ್ಪಿ ಘಟ ಎಂಬ ಕಾರ್ಯದ್ರವ್ಯ ಇಲ್ಲ ಎನ್ನುವಂತಹ ಅತಿಪ್ರಸಂಗ ಬರುತ್ತದೆ) "ಶಬ್ದಕ್ಕೆ ಅರ್ಥದೊಡನೆ ಸ್ವಾಭಾವಿಕ ಸಂಬಂಧ ಇದೆ ಎಂಬುದಕ್ಕೆ ಪ್ರಮಾಣವೇನು ? ಶಬ್ದಾರ್ಥ ಜ್ಞಾನವು ಶಬ್ದ ಸ್ವರೂಪ ಹಾಗೂ ಸಹಕಾರಿಯಾದ ಸಂಕೇತಗಳಿಂದ ಆಗುತ್ತದೆ" ಎಂದು ನೀನು ಆಕ್ಷೇಪಿಸಿದರೆ ನಾವು ಪ್ರಶ್ನಿಸುತ್ತೇವೆ– ನಿನ್ನ ಆಕ್ಷೇಪದ ಅಭಿಪ್ರಾಯವೇನು ? (a) ಶಬ್ದ ಹಾಗೂ ಸಹಕಾರಿ ಸಂಕೇತ ಬಿಟ್ಟು ಬೇರೆ ಅತೀಂದ್ರಿಯ ಶಕ್ತಿ ಎಲ್ಲಿಯೂ ಇಲ್ಲವೋ ? (b) ಅಥವಾ ಶಬ್ದದಲ್ಲಿ ಮಾತ್ರ ಅತೀಂದ್ರಿಯ ಶಕ್ತಿ ಇಲ್ಲವೋ ? ಮೊದಲನೇಯ ಪಕ್ಷವನ್ನು ಎಂದರೆ ಅತೀಂದ್ರಿಯ ಶಕ್ತಿಯೇ ಇಲ್ಲವೆಂಬುದನ್ನು ಮುಂದೆ ನಿರಾಕ ರಿಸುವೆವು. ಇನ್ನು ಶಬ್ದದಲ್ಲಿ ಮಾತ್ರ ಅತೀಂದ್ರಿಯ ಶಕ್ತಿ ಇಲ್ಲವೆಂಬ ಎರಡನೆಯ ಪಕ್ಷವೂ ಅಯುಕ್ತ. ಶಬ್ದದ ಅರ್ಥಜ್ಞಾನವು ಶಬ್ದದ ಸ್ವರೂಪ ಮತ್ತು ಸಂಕೇತ ದಿಂದ ಆಗುತ್ತದೆಂದು ನೀನು ಹೇಳುತ್ತಿರುವೆ. ಈ ಸಂಕೇತವನ್ನು ಈಗಿನವರಂತೂ ಮಾಡಿಲ್ಲವೆಂದು ನೀನು ಒಪ್ಪುತ್ತೀ, ಲೋಕೋತ್ತರ ಈಶ್ವರನು ಸಂಕೇತ ಮಾಡಿ ದ್ದಾನೆ ಎಂಬುದರಲ್ಲಿ ಪ್ರಮಾಣವಿಲ್ಲ. ಅದ್ದರಿಂದ ಪರಿಶೇಷದಿಂದ ಶಬ್ದದ ಸ್ವಾಭಾ ವಿಕ ಶಕ್ತಿಯು ಶಬ್ದಾರ್ಥ ಜ್ಞಾನವಾಗಲು ಕಾರಣ ಎಂದು ತಿಳಿದು ಬರುತ್ತದೆ.

ಅನುಮಾನದಿಂದ ಸಂಕೇತವಾದವು ಸಿದ್ಧಿಸಲಾರದು. "ಗವಾದಿ ಶಬ್ದಾಃ ಸಾಂಕೇತಿಕಾಃ ಶಬ್ದತ್ವಾತ್ ದೇವದತ್ತಾದಿಶಬ್ದವತ್" — ಗೋ ಮುಂತಾದ ಶಬ್ದ ಗಳು ಸಾಂಕೇತಿಕ, ಶಬ್ದವಾದ್ದರಿಂದ, ದೇವದತ್ತ ಮುಂ. ಶಬ್ದದಂತೆ– ಎಂದು ನೀನು ಅನುಮಾನ ಪ್ರಯೋಗಿಸುತ್ತೀ. ಆದರೆ ಈ ಅನುಮಾನ ದೋಷಯುಕ್ತ ವಾಗಿದೆ. ಇಲ್ಲಿ ಸಾಧ್ಯವಾದ ಸಾಂಕೇತಿಕತ್ವವು ಪಕ್ಷವಾದ 'ಗೋ'ದಲ್ಲಿ ಇಲ್ಲ. ಏಕೆಂದರೆ ಗುಪ್ತಭಾಷೆಯಲ್ಲಿ ಗೋ ಶಬ್ದವನ್ನು ಫಲ ಮೊದಲಾದವುಗಳಲ್ಲಿಯೂ ಸಂಕೇತ ಮಾಡುವದುಂಟು.

ಅದ್ದರಿಂದ ಮೇಲೆ ನಿರೂಪಿಸಿದಂತೆ ಶಬ್ದಕ್ಕೆ ಅರ್ಥದೊಡನೆ ಸ್ವಾಭಾವಿಕ ಸಂಬಂಧವಿರುವದರಿಂಧ ಶಬ್ದ ಅಪ್ರಮಾಣವಲ್ಲ. ಶಬ್ದವು ಪ್ರಮಾಣವೇ.

**(೬) ಆಪ್ತ-ಅನಾಪ್ತ ವಾಕ್ಯಗಳಲ್ಲಿ ಅಂತರವಿಲ್ಲವೆಂಬ ಆಕ್ಷೇಪ—**

ಆಪ್ತ ವಾಕ್ಯ ಮತ್ತು ಅನಾಪ್ತ ವಾಕ್ಯಗಳಲ್ಲಿ ವ್ಯತ್ಯಾಸವಿದೆ. ಆದರೆ ಇದರಿಂದ

ಶಬ್ದ ಪ್ರಾಮಾಣ್ಯಕ್ಕೆ ಚ್ಯುತಿ ಇಲ್ಲ. ಪ್ರತ್ಯಕ್ಷವೂ ಕೆಲವೊಂದು ಸಲ ಸಮೀಚೀನ ಜ್ಞಾನವನ್ನು, ಕೆಲವೊಂದು ಸಲ ದೋಷ ಮೂಲಕ ಅಯಥಾರ್ಥ ಜ್ಞಾನವನ್ನು ಹುಟ್ಟಿಸಿದರೂ ಅದು ಪ್ರಮಾಣವೆನಿಸಿದೆ. ಅದರಂತೆ ಶಬ್ದವೂ ಪ್ರಮಾಣ. ಇಂದ್ರಿಯ ದೋಷ ಮೂಲಕ ಪ್ರತ್ಯಕ್ಷವು ಕಲುಷಿತವಾಗುವಂತೆ, ಹದನವಾದ ಖಡ್ಗವನ್ನು ಅಸ್ಥಾನವಾದ ಆಕಾಶದ ಮೇಲೆ ಪ್ರಯೋಗಿಸುವಂತೆ, ಅನಾಪ್ತನು ಅಯೋಗ್ಯ ಸ್ಥಾನದಲ್ಲಿ, ವಿಪರೀತ ವಿಷಯದಲ್ಲಿ ಶಬ್ದವನ್ನು ಪ್ರಯೋಗಿಸಿ ಅದನ್ನು ದುಷ್ಟವನ್ನಾಗಿ ಮಾಡುತ್ತಾನೆ.

ಸಾರಾಂಶವೇನೆಂದರೆ, ಪ್ರತ್ಯಕ್ಷದಂತೆ, ಅನುಮಾನದಂತೆ ಶಬ್ದವು ಪ್ರಮಾಣವಾಗಿದೆ. ಈ ಶಬ್ದಪ್ರಾಮಾಣ್ಯವು ಸ್ವತಃ. ಎಂದರೆ ಶಬ್ದತ್ವಧರ್ಮದಿಂದ, ಶಬ್ದದ ಸ್ವಾಭಾವಿಕ ಶಕ್ತಿಯಿಂದ ಇದೆ.

**ವೇದ ಅಪ್ರಮಾಣವೆಂಬ ಆಕ್ಷೇಪ :** ಶಬ್ದಪ್ರಾಮಾಣ್ಯವನ್ನು ನೀನು ಎಷ್ಟೇ ಸಮರ್ಥಿಸಿದರೂ ವೇದಪ್ರಾಮಾಣ್ಯ ಕೂಡುವದಿಲ್ಲ. ಏಕೆಂದರೆ ವೇದದಲ್ಲಿ ಅನೃತತ್ವಾದಿ ದೋಷಗಳಿವೆ. ಹೇಗೆಂದರೆ—

i) **ಅನೃತತ್ವ ದೋಷವು** ವೇದದಲ್ಲಿ ಕಂಡು ಬರುತ್ತದೆ. ಉದಾ— ಮಗನನ್ನು ಬಯಸುವವನು 'ಪುತ್ರ ಕಾಮೇಷ್ಟಿ' ಯಾಗವನ್ನು ಮಾಡಬೇಕೆಂದು ವೇದದಲ್ಲಿ ಹೇಳಿದೆ. ಆದರೆ ಈ ಯಾಗ ಮಾಡಿದರೂ ಪುತ್ರ ಸಂತಾನ ಎಷ್ಟೋ ಜನಕ್ಕೆ ದೊರೆಯುವದಿಲ್ಲ. ಆದ್ದರಿಂದ ವೇದ ಸುಳ್ಳು. ಸುಳ್ಳಾದ ವೇದ ಅಪ್ರಮಾಣ, ಠಕ್ಕನ ವಾಕ್ಯದಂತೆ.

ii) **ವ್ಯಾಘಾತ ದೋಷವೂ** ವೇದದಲ್ಲಿದೆ.ಉದಾ : "ಉದಿತೇ ಚ ಹೋತವ್ಯಂ" "ಅನುದಿತೇ ಚ ಹೋತವ್ಯಂ"— ಸೂರ್ಯೋದಯ ನಂತರ ಹೋಮ ಮಾಡಬೇಕು, ಸೂರ್ಯೋದಯಕ್ಕಿಂತ ಮೊದಲು ಹೋಮ ಮಾಡಬೇಕು. "ಅತಿರಾತ್ರೇ ಷೋಳಶಿನಂ ಗೃಹ್ಣಾತಿ" "ನಾತಿರಾತ್ರೇ ಷೋಳಶಿನಂ ಗೃಹ್ಣಾತಿ" ಅತಿರಾತ್ರವೆಂಬ ಜ್ಯೋತಿಷ್ಟೋಮ ಯಾಗದಲ್ಲಿ "ಷೋಳಶಿ" ಎಂಬ ಸೋಮಪಾತ್ರವನ್ನು ಸ್ವೀಕರಿಸುತ್ತಾನೆ. ಅತಿರಾತ್ರವೆಂಬ ಜ್ಯೋತಿಷ್ಟೋಮದಲ್ಲಿ ಷೋಳಶಿಯನ್ನು ಸ್ವೀಕರಿಸುವದಿಲ್ಲ. ಈ ರೀತಿ ಉನ್ಮತ್ತನ ವಾಕ್ಯದಂತೆ ವ್ಯಾಘಾತ ಅಥವಾ ಸ್ವವಚನ ವಿರೋಧವುಳ್ಳ ವೇದವು ಅಪ್ರಮಾಣ.

iii) **ಪುನರುಕ್ತಿ ದೋಷಗಳೂ** ಇವೆ. ಉದಾ— "ತ್ರಿಃ ಪ್ರಥಮಾಂ ಅನ್ವಾಹ, ತ್ರಿರುತ್ತಮಾಂ" ಮೊದಲನೇ ಋಕ್ಕನ್ನು 3ಸಲ ಮತ್ತು ಕೊನೆಯ ಋಕ್ಕನ್ನು 3 ಸಲ ಪಠಿಸಬೇಕು. ಹೀಗೆ ಪುನರುಕ್ತಿಯುಳ್ಳ ವೇದ ಅಪ್ರಮಾಣ.

**ಸಿದ್ಧಾಂತ :** ವೇದವು ಪ್ರಮಾಣವೇ. ವೇದ ಅಪ್ರಮಾಣವೆನ್ನುವ ನಿನ್ನ ಅಭಿಪ್ರಾಯವೇನು ? ಎಲ್ಲ ವೇದ ಅಪ್ರಮಾಣವೆನ್ನುವಿಯಾ ? ಅಥವಾ ವೇದದ ಏಕದೇಶ ಅಪ್ರಮಾಣವೆನ್ನುವಿಯಾ ? ಎಲ್ಲ ವೇದ ಅಪ್ರಮಾಣವಾಗಲಾರದು. ಯಾವ

ದೊಂದು ಪ್ರತ್ಯಕ್ಷ ಅಥವಾ ಅನುಮಾನ ವ್ಯಭಿಚರಿತವಾದರೆ ಅದನ್ನು ಬಿಟ್ಟು ಉಳಿದವುಗಳಿಗೆ ಪ್ರಾಮಾಣ್ಯವಿರುವಂತೆ ದೋಷ ಶಂಕಿತ ಭಾಗಬಿಟ್ಟು ಉಳಿದ ವೇದಕ್ಕೆ ಪ್ರಾಮಾಣ್ಯ ಯುಕ್ತವಾಗಿದೆ. ಇನ್ನು ಏಕದೇಶ ಅಪ್ರಮಾಣವೆಂದು ನಿನ್ನ ಅಭಿಪ್ರಾಯವಿದ್ದರೆ ಉಳಿದ ವೇದ ಪ್ರಮಾಣವೆಂದು ನೀನು ಒಪ್ಪಿದಂತಾಗುತ್ತದೆ. ಒಂದು ಭಾಗ (ಏಕದೇಶ) ಅಪ್ರಮಾಣವಾದರೆ ಸಕಲವೂ ಅಪ್ರಮಾಣವೆನ್ನುವದೂ ಅನುಚಿತ. ಏಕೆಂದರೆ ಒಂದು ಪ್ರತ್ಯಕ್ಷ ಅಥವಾ ಅನುಮಾನ ಅಪ್ರಮಾಣವಾದರೆ ಉಳಿದ ಪ್ರತ್ಯಕ್ಷ ಅನುಮಾನಗಳು ಅಪ್ರಮಾಣವಾಗುವದಿಲ್ಲ. ಅದರಂತೆ ವೇದದ ಒಂದು ಭಾಗ ಅಪ್ರಮಾಣವಾದರೆ ಸಕಲವೇದ ಅಪ್ರಮಾಣವಾಗಲಾರದು.

ವೇದದಲ್ಲಿ ನೀನು ಹೇಳಿದ **ಅನೃತತ್ವಾದಿ ದೋಷಗಳೇ ಇಲ್ಲ.** ಹೇಗೆಂದರೆ–

i) **ಅನೃತತ್ವ**– ವೇದದ ಏಕದೇಶದಲ್ಲಿ ಕೂಡ ಅನೃತತ್ವ ಇಲ್ಲವೇ ಇಲ್ಲವೆಂದು ಸೂತ್ರಕಾರರಾದ ವೇದವ್ಯಾಸರು "ಓಂ ದೃಶ್ಯತೇ ತು ಓಂ" ||–1–5 ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಪುತ್ರಕಾಮೇಷ್ಟಿಯಿಂದ ಪುತ್ರ (ಮಗ) ದೊರೆಯದಿದ್ದರೆ ಅದಕ್ಕೆ ಕರ್ತೃಗಳಲ್ಲಿರುವ ದೋಷ ಅಥವಾ ಕರಣಗಳಾದ ಯಜ್ಞಾಂಗದಲ್ಲಿಯ ವೈಗುಣ್ಯ ಕಾರಣವೆಂದು ಹೇಳಬೇಕು, ಯಾಗಕ್ಕೆ ಫಲ ಇಲ್ಲವೆಂದಲ್ಲ; ಇದ್ದೇ ಇದೆ.

ii) **ವ್ಯಾಘಾತ :** ವ್ಯಾಘಾತ (ವಿರೋಧ) ಇದ್ದರೆ ಎರಡೂ ವಾಕ್ಯಗಳು ಅಪ್ರಮಾಣ ಎಂದು ಹೇಳಲಾಗದು. ವಿರುದ್ಧವಾದ ಎರಡು ಪ್ರತ್ಯಕ್ಷ ಅಥವಾ ಅನುಮಾನಗಳಲ್ಲಿ ಒಂದು ಪ್ರಮಾಣವಿರುವಂತೆ, ವ್ಯಾಘಾತ ಶಂಕೆ ಇರುವ ಎರಡು ವಾಕ್ಯಗಳಲ್ಲಿ ಒಂದಂತೂ ಪ್ರಮಾಣ. ಇನ್ನು ಎರಡು ವಿರುದ್ಧ ವಾಕ್ಯಗಳಲ್ಲಿ ಯಾವುದು ನೀನು ಅಪ್ರಮಾಣವೆಂದು ಹೇಳುವೆಯೋ ಅದೇ ಪ್ರಮಾಣವಾಗಬಹುದು. ವಾಸ್ತವ ಅಂಶವೆಂದರೆ ವೇದದಲ್ಲಿ ವ್ಯಾಘಾತ ಇಲ್ಲವೇ ಇಲ್ಲವೆಂದು ಸೂತ್ರಕಾರರು ಮುಂದೆ "ಓಂ ನ ವಿಲಕ್ಷಣತ್ವಾತ್ ಓಂ" (||–1–4) ಎಂಬಲ್ಲಿ ಹೇಳುವರು. ಅಲ್ಲಿ ನಿರೂಪಿಸಿದ ನ್ಯಾಯವನ್ನು ಅನುಸರಿಸಿದರೆ ನೀನು ಉದಾಹರಿಸಿದ ವೇದ ವಾಕ್ಯಗಳಲ್ಲಿ ವಿರೋಧವಿಲ್ಲವೆಂದು ತಿಳಿದು ಬರುತ್ತದೆ, ಅಧಿಕಾರಿ ಭೇದದಿಂದ, ಶಾಖಾ ಭೇದದಿಂದ, ಸೂರ್ಯೋದಯದ ನಂತರ ಮತ್ತು ಸೂರ್ಯೋದಯಕ್ಕಿಂತ ಮೊದಲು ಹೋಮ ಕೊಡುತ್ತದೆ. ಅದರಂತೆ ಅಧಿಕಾರಿ ಭೇದ ಮೂಲಕ ಸೋಮಪಾತ್ರದ (ಷೋಳಶಿಯ) ಗ್ರಹಣ–ಅಗ್ರಹಣ ಕೊಡುತ್ತದೆ.

iii) **ಪುನರುಕ್ತಿ :** ಪುನರುಕ್ತಿ ಇದ್ದರೂ ಪ್ರತ್ಯಕ್ಷ ಅನುಮಾನಗಳಂತೆ ವೇದ ಪ್ರಾಮಾಣ್ಯ ಕೊಡುತ್ತದೆ. ಒಂದೇ ವಿಷಯದಲ್ಲಿರುವ ಪ್ರತ್ಯಕ್ಷಾದಿಗಳು ಅಪ್ರಮಾಣವಲ್ಲ. ಅರ್ಥ ವ್ಯತ್ಯಾಸವಿದ್ದರೆ ಮಾತ್ರ ಅವು ಅಪ್ರಮಾಣವಾಗುತ್ತವೆ. ಅದರಂತೆ ಅರ್ಥ ವಿರೋಧವಿಲ್ಲದಿರುವ ವೇದವಾಕ್ಯಗಳೂ ಪ್ರಮಾಣವೇ. ವೇದ ವ್ಯಾಖ್ಯಾನಕಾರರಾದ ಜೈಮಿನಿ ಮೊದಲಾದ ವೃದ್ಧರು (ಜ್ಞಾನವೃದ್ಧರು)ಸಹ, ವೇದದಲ್ಲಿ ಪುನರುಕ್ತಿ

ದೋಷವನ್ನು ಪರಿಹರಿಸಿದ್ದಾರೆ. ಹೇಗೆಂದರೆ– ಅಭ್ಯಾಸವು (ಅಶಕ್ಯದುಕ್ತಿ ಅಥವಾ ಪುನಃ ಪುನಃ ಹೇಳುವದು) ವಾಕ್ಯ ತಾತ್ಪರ್ಯಕ್ಕಾಗಿ ಇದೆ. ಅನುವಾದವು(ತನ್ಮೂಲಕ ಪುನರುಕ್ತಿ) ಅಧಿಕ ವಿಧಾನಕ್ಕಾಗಿ ಇದೆ. "ಅಭ್ಯಾಸಸ್ಯ ತಾತ್ಪರ್ಯಾವಧಾರಕತಯಾ ಅನುವಾದಸ್ಯ ಚ ಅಧಿಕವಿಧಾನಫಲಕತಯಾ ನ ವೈಯರ್ಥ್ಯಂ". ಶ್ರೀಮನ್ಮಧ್ವಾಚಾರ್ಯರೂ ಕೂಡ ಪುನರುಕ್ತಿಯು ದಾರ್ಢ್ಯಕ್ಕಾಗಿ ಇದೆ ಎಂದು ಹೇಳಿದ್ದಾರೆ. "ಪ್ರಮಾಣಸಂಪ್ಲವಶ್ಚ ದಾರ್ಢ್ಯಹೇತುರೇವ".

## II ವೇದಪ್ರಾಮಾಣ್ಯದ ಸ್ವತಸ್ತ್ವ

**ಆಕ್ಷೇಪ :** ಈ ವರೆಗೆ ವೇದಗಳ ಅಪ್ರಾಮಾಣ್ಯವನ್ನು ಪರಿಹರಿಸಿದ್ದಾಯಿತು. ಆದರೆ ವೇದ ಪ್ರಮಾಣ ಹೇಗೆ ? ಅಪ್ರಾಮಾಣ್ಯದ ನಿಷೇಧವೇ ಪ್ರಾಮಾಣ್ಯವೆನಿಸಲಾರದು. ಉದಾ : ದೇವದತ್ತನಲ್ಲಿ ರೋಗಾದಿ ದೋಷಗಳಿಲ್ಲವೆಂದ ಮಾತ್ರಕ್ಕೆ ಅವನು ತುಂಬಾ ಆರೋಗ್ಯವಂತ, ಸದೃಢ ಎಂದು ಅರ್ಥವಾಗುವದಿಲ್ಲ.

**ಪರಿಹಾರ :** ಈ ವಿಚಾರಧಾರೆ ಅಯುಕ್ತ. ಜ್ಞಾನಕ್ಕೆ ಕರಣ, ಎಂದರೆ ಅಸಾಧಾರಣ ಕಾರಣವಾದ ವೇದಕ್ಕೆ ಅಪ್ರಾಮಾಣ್ಯ ಶಂಕೆಯನ್ನು ಪರಿಹರಿಸಲಾಗಿ ಅದರ ಪ್ರಾಮಾಣ್ಯವು ಸ್ವತಃ ಸಿದ್ಧಿಸುತ್ತದೆಂದು ನಾವು ಹೇಳುತ್ತೇವೆ. "ಜ್ಞಾನಕರಣಸ್ಯ ಸತಃ ಅಪ್ರಾಮಾಣ್ಯೇ ನಿರಸ್ತೇ ಪ್ರಾಮಾಣ್ಯಂ ಸ್ವತ ಏವೇತಿ ಬ್ರೂಮಃ" — ಸುಧಾ. [ಆಗಮ ಎಂದರೆ ಜ್ಞಾನ ಸಾಧನ. ಯಾವುದರಿಂದ ಜ್ಞಾನವಾಗುವದೋ ಅದುವೇ ಆಗಮ. ಆಗಮ್ಯತೇ ಅವಗಮ್ಯತೇ ಅನೇನ ಇತಿ ಆಗಮಃ. ಅಥವಾ ಆ ಸಮಂತಾತ್ ಗಮಯತಿ ಧರ್ಮಾಧರ್ಮೌ, ಪರಂ ಪದಂ ವಾ ಇತಿ ಆಗಮಃ. ವೇದಯಂತಿ ಪರಮಾತ್ಮಾನಂ ಇತಿ ವೇದಾಃ. ಆಗಮ ಎಂದರೆ ಶಬ್ದ. ಶಬ್ದ ವಿಶೇಷವಾದ ವೇದ ಎಂಬ ಅರ್ಥದಲ್ಲಿ ಆಗಮ ಶಬ್ದವು ಹೆಚ್ಚಾಗಿ ಬಳಸಲ್ಪಡುತ್ತದೆ] ಹಿಂದೆ ಹೇಳಿದಂತೆ ಆಗಮ ಪ್ರಾಮಾಣ್ಯವು ಪ್ರತ್ಯಕ್ಷದಂತೆ ಮತ್ತು ಅನುಮಾನದಂತೆ ಸ್ವತಃ ಏವ ಇದೆ. ಎಂದರೆ ಶಬ್ದದ ಸ್ವಸಾಮರ್ಥ್ಯದಿಂದ ಇದೆ. "ಪ್ರತ್ಯಕ್ಷವಚ್ಚ ಸ್ವತ ಏವ." ಇಲ್ಲಿ ಪ್ರತ್ಯಕ್ಷವತ್ ಎಂಬ ಪದವನ್ನು ಎರಡು ದೃಷ್ಟಿಗಳಿಂದ ಬಳಸಲಾಗಿದೆ.

1) ಯಾರು ಪ್ರತ್ಯಕ್ಷ ಮತ್ತು ಅನುಮಾನಗಳ ಪ್ರಾಮಾಣ್ಯಸ್ವತಸ್ತ್ವವನು ಒಪ್ಪಿ ಆಗಮ–ಪ್ರಾಮಾಣ್ಯದ ಸ್ವತಸ್ತ್ವವನ್ನು ಒಪ್ಪುವದಿಲ್ಲವೋ ಅವರನ್ನು ಕುರಿತು ಪ್ರತ್ಯಕ್ಷವತ್ ಎಂಬುದು ದೃಷ್ಟಾಂತವಾಗಿದೆ. ಪ್ರತ್ಯಕ್ಷ ಪ್ರಾಮಾಣ್ಯದ ಸ್ವತಸ್ತ್ವದಂತೆ ಆಗಮ (ಶಬ್ದ) ಪ್ರಾಮಾಣ್ಯವೂ ಸ್ವತಃ ಎಂದರೆ ಸ್ವಸಾಮರ್ಥ್ಯದಿಂದಲೇ ಎಂದು ಅಭಿಪ್ರಾಯ.

2) ಯಾರು ಯಾವದೇ ಪ್ರಮಾಣದ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪುವದಿಲ್ಲವೋ ಅವರನ್ನು ಕುರಿತು ಪ್ರತ್ಯಕ್ಷವತ್ ಎಂಬುದನ್ನು ಪ್ರಸಂಗವಶಾತ್ ಹೇಳಲಾಗಿದೆ. ಎಂದರೆ ಆಗಮ ಪ್ರಾಮಾಣ್ಯ ಸ್ವತಃ ಎಂದು ಸಾಧಿಸುವ ಪ್ರಸಂಗದಿಂದ,

ಆನುಷಂಗಿಕವಾಗಿ ಪ್ರತ್ಯಕ್ಷ ಅನುಮಾನಗಳ ಪ್ರಾಮಾಣ್ಯವೂ ಸ್ವತಃ ಎಂದು ಹೇಳಲಾಗಿದೆ.

**ಜ್ಞಾನ ಪ್ರಾಮಾಣ್ಯದ ಅವಶ್ಯಕತೆ :** ಕೃಷಿ (ಒಕ್ಕಲುತನ, ಬೇಸಾಯ) ಮೊದಲಾದ ಸಾಮಾನ್ಯ ವ್ಯವಹಾರಗಳಲ್ಲಿ ಮಳೆ ಬೆಳೆಗಳ ಬಗ್ಗೆ ಸಂದೇಹವಿದ್ದರೂ ಪ್ರವೃತ್ತಿ ಕಂಡಿದೆ. ಆದರೆ ಬಹಳ ಹಣ. ಆಯಾಸ, ತ್ಯಾಗಗಳಿಂದ ಸಾಧ್ಯವಾಗುವ ಯಜ್ಞಯಾಗ, ಬ್ರಹ್ಮಜ್ಞಾನ ಮೊದಲಾದ ಪಾರಲೌಕಿಕ ವಿಷಯದಲ್ಲಿ ನಿಃಶಂಕ ಪ್ರವೃತ್ತಿ ಉಂಟಾಗಲು, ಹುಟ್ಟಿದ ಜ್ಞಾನವು ಅಪ್ರಮಾಣವಲ್ಲ, ಅದು ಯಥಾರ್ಥ ಎಂಬ ಅರಿವು ಬೇಕು. ಹೇಗೆಂದರೆ ಜ್ಞಾನವು ನಮಗೆ ಯಾವಾಗಲೂ ತಿಳಿಯಲಪೇಕ್ಷಿಸಿದ ವಿಷಯಗಳ ಬಗ್ಗೆಯೇ ಆಗುವದಿಲ್ಲ. ನಾವು ಇಚ್ಛಿಸದ ವಿಷಯಗಳ ಬಗ್ಗೆಯೂ ಜ್ಞಾನವಾಗುವದು ಕಂಡಿದೆ. ಉದಾಹರಣಾರ್ಥವಾಗಿ ದಾರಿಗುಂಟ ಹೋಗುವಾಗ ಎದುರಿಗೆ ಹುಲ್ಲಿನ ಹೊರೆ ಬಂದರೆ ಹುಲ್ಲಿನ ಜ್ಞಾನವಾಗುತ್ತದೆ. ಅದನ್ನು ತಿಳಿಯಲು ನಾವು ಅಪೇಕ್ಷಿಸಿದ್ದಿಲ್ಲ. ಇದರಂತೆ ನಾವು ಬಯಸದ ದುರ್ಗಂಧದ ಜ್ಞಾನವಾಗುತ್ತದೆ. ಆದರೆ ಯಜ್ಞ-ಯಾಗ, ವಿಹಿತಾನುಷ್ಠಾನ, ಬ್ರಹ್ಮಜ್ಞಾನ ಮೊದಲಾದವುಗಳಲ್ಲಿ ಪ್ರವೃತ್ತಿ ಹುಟ್ಟಲು ಅವುಗಳ ಸ್ವರೂಪ-ಸಾಧನ-ಫಲಗಳ ಬಗ್ಗೆ ನಿಶ್ಚಯಾತ್ಮಕ ಜ್ಞಾನ ಬೇಕು. ಈ ಜ್ಞಾನವಾಗುವದು ವೇದದಿಂದ ಮಾತ್ರ. ಆದ್ದರಿಂದ ವೇದವು ಪ್ರಮಾಣವೋ. ವೇದದಿಂದ ಹುಟ್ಟಿದ ಜ್ಞಾನ ಯಥಾರ್ಥವೋ ಮೊದಲಾದವನ್ನು ಖಚಿತಪಡಿಸಿಕೊಳ್ಳಬೇಕು. ಎಂದರೆ ವೇದಜನ್ಯ ಜ್ಞಾನದ ಪ್ರಾಮಾಣ್ಯವನ್ನು ನಾವು ಅರಿಯಬೇಕು.

**ಪ್ರಮಾಣಗಳು :** ಯಥಾರ್ಥವಾದುದು ಪ್ರಮಾಣ. ಎಂದರೆ ಜ್ಞಾನಕ್ಕೆ ವಿಷಯವಾದ ವಸ್ತುವನ್ನು (ಜ್ಞೇಯ) ಅದು ಇದ್ದಂತೆ ಗ್ರಹಿಸುವ ಜ್ಞಾನ, ಇಂದ್ರಿಯ. "ಯಥಾರ್ಥಂ ಪ್ರಮಾಣಂ" ಜ್ಞೇಯಂ ಅನತಿಕ್ರಮ್ಯ ವರ್ತಮಾನಂ(ವಿಷಯೀಕಾರಿ)– ಯಥಾವಸ್ಥಿತಿಮೇವ ಜ್ಞೇಯಂ ಯತ್ ವಿಷಯೀಕರೋತಿ. ನಾನ್ಯಥಾ ತತ್ ಪ್ರಮಾಣಂ"

ಪ್ರಮಾಣಗಳು ಕೇವಲ ಪ್ರಮಾಣ ಮತ್ತು ಅನುಪ್ರಮಾಣ ಎಂದು ಎರಡು ವಿಧ. ಕೇವಲ ಪ್ರಮಾಣ ಎಂದರೆ "ಯಥಾರ್ಥಜ್ಞಾನಂ" ಇದು ಪ್ರತ್ಯಕ್ಷ. ಅನುಮಿತಿ, ಶಬ್ದ ಎಂದು ಮೂರು ವಿಧ. ಅನುಪ್ರಮಾಣ ಎಂದರೆ "ಯಥಾರ್ಥಜ್ಞಾನ ಸಾಧನಂ" ಇದು ಕೂಡ ಪ್ರತ್ಯಕ್ಷ-ಅನುಮಾನ-ಆಗಮ ಎಂದು ಮೂರು ವಿಧ. ಪ್ರತ್ಯಕ್ಷ-ಅನುಮಾನ-ಆಗಮ ಶಬ್ದಗಳನ್ನು ಜ್ಞಾನ ಮತ್ತು ಜ್ಞಾನ ಸಾಧನ ಹೀಗೆ ಎರಡರಲ್ಲಿಯೂ ಪ್ರಯೋಗಿಸುತ್ತಾರೆ,

**ಪ್ರಾಮಾಣ್ಯ ಸ್ವತಸ್ತ್ವ ಎಂದರೇನು ?** ಪ್ರತ್ಯಕ್ಷ ಅನುಮಾನ ಆಗಮಗಳಿಂದ ಹುಟ್ಟಿದ ಜ್ಞಾನವು (ಕೇವಲ ಪ್ರಮಾಣವು) ಯಾವಾಗಲೂ ಯಥಾರ್ಥ ಎಂಬ

ನಿಯಮವಿಲ್ಲ. ಇಂದ್ರಿಯ ದೋಷಮೂಲಕ ಎದುರಿಗಿದ್ದ ಶಿಂಪನ್ನು ಬೆಳ್ಳಿ ಎಂದು ತಿಳಿಯುತ್ತೇವೆ. ಆದರೆ ಈ ಬೆಳ್ಳಿಯ ಜ್ಞಾನ ಯಥಾರ್ಥವಲ್ಲ. ಆದ್ದರಿಂದ ಹುಟ್ಟಿದ ಜ್ಞಾನವು ಯಥಾರ್ಥವಾದರೆ ಮಾತ್ರ, ಆ ಕೇವಲ ಪ್ರಮಾಣವು(ಜ್ಞಾನವು) ಪ್ರಮಾಣವೆಂದೂ. ಇಲ್ಲವಾದರೆ ಅಪ್ರಮಾಣವೆಂದೂ ಹೇಳಲಾಗುತ್ತದೆ. ಜ್ಞಾನವನ್ನು ಗ್ರಹಿಸುವದು ಸಾಕ್ಷಿ. ಜ್ಞಾನದ ಪ್ರಾಮಾಣ್ಯವನ್ನೂ ಸಾಕ್ಷಿಯೇ ಗ್ರಹಿಸುತ್ತದೆ. ಎಂದರೆ ಜ್ಞಾನವು ಯಾವುದರಿಂದ (ಸಾಕ್ಷಿಯಿಂದ) ಗ್ರಹಿಸಲ್ಪಡುವದೋ, ಆದರಿಂದಲೇ (ಸಾಕ್ಷಿಯಿಂದಲೇ) ಜ್ಞಾನದ ಪ್ರಾಮಾಣ್ಯವೂ ಗ್ರಹಿಸಲ್ಪಡುತ್ತದೆ. "ಯೇನ ಜ್ಞಾನಂ ಗೃಹ್ಯತೇ-ತೇನೈವ ತದ್ಗತಂ ಪ್ರಾಮಾಣ್ಯಮಪಿ ಗೃಹ್ಯತೇ". ಇದಕ್ಕೆ ಜ್ಞಾನ ಪ್ರಾಮಾಣ್ಯದ ಸ್ವತಸ್ತ್ವ ಎನ್ನುವರು. ಕೆಲವರು ಮಾತ್ರ ಜ್ಞಾನ ಅಥವಾ ಪ್ರಮಾಣದ ಪ್ರಾಮಾಣ್ಯವು ಜ್ಞಾನ ಗ್ರಾಹಕ ಸಾಕ್ಷಿಯಿಂದ ಗ್ರಹಿಸಲ್ಪಡದೆ, ಅನುಮಾನಾದಿ ಸಂವಾದಗಳಿಂದ ಗ್ರಹಿಸಲ್ಪಡುವದೆಂದು ಹೇಳುತ್ತಾರೆ.ಹೀಗೆ ಜ್ಞಾನ ಪ್ರಾಮಾಣ್ಯದ ಗ್ರಾಹಕವು ಜ್ಞಾನ ಗ್ರಾಹ್ಯದಿಂದ (ಸಾಕ್ಷಿಯಿಂದ) ಭಿನ್ನವಿರುವದರಿಂದ ಇವರ ವಾದಕ್ಕೆ ಜ್ಞಾನ ಪ್ರಾಮಾಣ್ಯಂ ಪರತಃ ಎನ್ನುತ್ತಾರೆ, ಜ್ಞಾನ ಪ್ರಾಮಾಣ್ಯದ ಸ್ವತಸ್ತ್ವದಲ್ಲಿ ಗಮನಿಸಬೇಕಾದ ಅಂಶವೇದರೆ- ಸಾಕ್ಷಿ ನೇರವಾಗಿ ಗ್ರಹಿಸುವ ಜ್ಞಾನವು ಯಾವಾಗಲೂ ಯಥಾರ್ಥವೇ. ಆದರೆ ಮನಸ್ಸು ಮೊದಲಾದ ಇಂದ್ರಿಯಗಳ ಮುಖಾಂತರ ಗ್ರಹಿಸುವ ಜ್ಞಾನವು ಎಂದರೆ ವೃತ್ತಿಜ್ಞಾನ ಅಥವಾ ಪರೋಕ್ಷ ಜ್ಞಾನ ಅಥವಾ ಬಾಹ್ಯ ಜ್ಞಾನವು ಇಂದ್ರಿಯಾದಿ ದೋಷ ಮೂಲಕ ಒಮ್ಮೊಮ್ಮೆ ಅಯಥಾರ್ಥ ಇರುತ್ತದೆ. ಇಂದ್ರಿಯಾದಿ ದೋಷಗಳಿಂದ ಸಾಕ್ಷಿಯ ಯಥಾರ್ಥಗ್ರಹಣ ಶಕ್ತಿಯು ಒಮ್ಮೊಮ್ಮೆ ಕುಂಠಿತವಾಗುತ್ತದೆ. ಆಗ ಉಂಟಾದ ಆತಂಕವನ್ನು ಯುಕ್ತಿಗಳಿಂದ, ಪರೀಕ್ಷೆಯಿಂದ ಪರಿಹರಿಸಿಕೊಳ್ಳಬೇಕು, ಉದಾಹರಣಾರ್ಥವಾಗಿ ಆನೆಗಿರುವ ಸ್ವಾಭಾವಿಕ ನಡಿಗೆಯ ಸಾಮರ್ಥ್ಯವು ನೆಗ್ಗಲು ಮುಳ್ಳಿನಿಂದ ಕುಂಠಿತವಾದಾಗ ಆ ಮುಳ್ಳನ್ನು ತೆಗೆಯುವದರಿಂದ ಆನೆಯ ಸ್ವಾಭಾವಿಕ ನಡಿಗೆಯ ಶಕ್ತಿ ಮತ್ತೆ ವ್ಯಕ್ತವಾಗುತ್ತದೆ. ಸಾಕ್ಷಿಯು ಒಮ್ಮೆ ಪರೀಕ್ಷಿಸಿ, "ಹುಟ್ಟಿದ ಜ್ಞಾನವು ಯಥಾರ್ಥ" ಎಂದು ನಿರ್ಧರಿಸಿದ ಬಳಿಕ, ಆ ಜ್ಞಾನದ ಬಗ್ಗೆ ಸಂಶಯ ಉಳಿಯುವದಿಲ್ಲ. ಮತ್ತೆ ಪರೀಕ್ಷೆಯ ಅವಶ್ಯಕತೆ ಇಲ್ಲ. (ಸಾಕ್ಷಿಸಿದ್ಧೇತ್ವಸಂಶಯಾತ್- ಸುದೃಢೋ ನಿರ್ಣಯೋ ಯತ್ರ ಜ್ಞೇಯಂ ತತ್ ಸಾಕ್ಷಿದರ್ಶನಂ। ಯತ್ಕಿಂಚಿತ್ ವ್ಯಭಿಚಾರಿಸ್ಯಾತ್ ದರ್ಶನಂ ಮಾನಸಂ ಹಿ ತತ್ ॥)

**ಪ್ರಾಮಾಣ್ಯ ಸ್ವತಸ್ತ್ವದ ಅವಶ್ಯಕತೆ :** ಜ್ಞಾನ ಪ್ರಾಮಾಣ್ಯವು ಜ್ಞಾನವನ್ನು ಗ್ರಹಿಸುವ ಸಾಕ್ಷಿಯಿಂದಲೇ ಎಂಬುದನ್ನು, ಎಂದರೆ ಜ್ಞಾನ ಪ್ರಾಮಾಣ್ಯದ ಸ್ವತಸ್ತ್ವವನ್ನು ಮೇಲೆ ವಿವರಿಸಿದ್ದಾಯಿತು. ಇನ್ನು ಜ್ಞಾನ ಪ್ರಾಮಾಣ್ಯವು ಸ್ವತಃ ಎಂದು ಒಪ್ಪದಿದ್ದರೆ,ಆ ಪ್ರಾಮಾಣ್ಯವು ಅನುಮಾನಾದಿ ಸಂವಾದದಿಂದ ಎಂದು ಹೇಳಬೇಕು. ಆ ಸಂವಾದವು ಪ್ರಮಾಣವೆಂದು ಹೇಳಲು ಮತ್ತೊಂದು ಸಂವಾದ ಬೇಕು ಈ

ಸಂವಾದಕ್ಕೆ ಮತ್ತೊಂದು ಸಂವಾದ. ಹೀಗೆ ಅನವಸ್ಥಾ ದೋಷ ಪರಿಹರಿಸಲು ಜ್ಞಾನ ಪ್ರಾಮಾಣ್ಯವು ಜ್ಞಾನ ಗ್ರಾಹಕ ಸಾಕ್ಷಿಯಿಂದಲೇ ಎಂದು ಹೇಳಬೇಕು. ಅರ್ಥಾತ್ ಜ್ಞಾನ ಪ್ರಾಮಾಣ್ಯವು ಸ್ವತಃ ಎಂದು ಒಪ್ಪಬೇಕು. ಆದರೆ ಜ್ಞಾನದ ಅಪ್ರಾಮಾಣ್ಯ ಮಾತ್ರ ಜ್ಞಾನಕಾರಣದಿಂದ ಭಿನ್ನವಾದ ದೋಷವನ್ನವಲಂಬಿಸಿರುವ ದರಿಂದ, ಜ್ಞಾನದ ಅಪ್ರಾಮಾಣ್ಯವು ಪರತಃ ಎಂದು ಹೇಳಬೇಕು. "ಜ್ಞಾನ ಪ್ರಾಮಾಣ್ಯಂ ಸ್ವತಃ, ಅಪ್ರಾಮಾಣ್ಯಂ ಪರತಃ".

ಮೇಲೆ ನಿರೂಪಿಸಿದ ಪ್ರಾಮಾಣ್ಯ ಸ್ವತಸ್ತ್ವ ವಿಷಯವಾದವುಗಳ ಬಗ್ಗೆ ಸುಧಾ ಕಾರರ ನಿರ್ಣಯವನ್ನು ಕೆಳಗೆ ಕೊಡಲಾಗಿದೆ. ಸಾಧಕ, ಬಾಧಕಗಳನ್ನು ಮೂಲ ಗ್ರಂಥದಿಂದ ಅರಿಸಿಕೊಳ್ಳಬೇಕು.

ಪ್ರಮಾಣದ ಪ್ರಾಮಾಣ್ಯವು ಯಾವುದರಿಂದ ಹುಟ್ಟುತ್ತದೆ ಮತ್ತು ಯಾವುದ ರಿಂದ ಗ್ರಹಿಸಲ್ಪಡುತ್ತದೆ ಹೀಗೆ ಎರಡನ್ನೂ ಅರಿಯಬೇಕು. ಇವುಗಳಿಗೆ ಕ್ರಮ ವಾಗಿ 'ಉತ್ಪತ್ತಿ' ಮತ್ತು 'ಜ್ಞಪ್ತಿ' ಎನ್ನುತ್ತಾರೆ. ಪ್ರಮಾಣಪ್ರಾಮಾಣ್ಯದ ವಿವರ ಕೆಳಗಿನಂತಿದೆ.

**1) ಜ್ಞಾನ ಪ್ರಾಮಾಣ್ಯಂ (ಉತ್ಪತ್ತೌ ಜ್ಞಪ್ತೌ ಚ ಸ್ವತಃ)**

(a) ಉತ್ಪತ್ತೌ ಸ್ವತಸ್ತ್ವ ಎಂದರೆ ಜ್ಞಾನವು ಯಾವುದರಿಂದ ಹುಟ್ಟುತ್ತದೆಯೋ, ಅದರಿಂದಲೇ ಅದರ ಪ್ರಾಮಾಣ್ಯವೂ ಹುಟ್ಟುತ್ತದೆ. ಈ ಜ್ಞಾನ ಹುಟ್ಟುವಾಗ ಆ ಜ್ಞಾನದ ಪ್ರಾಮಾಣ್ಯವೂ ಆ ಆ ಕರಣಗಳಿಂದಲೇ (ಇಂದ್ರಿಯಾದಿಗಳಿಂದಲೇ) ಹುಟ್ಟುತ್ತದೆ. ಎಂದರೆ ಜ್ಞಾನಜನಕವೇ ಪ್ರಾಮಾಣ್ಯಜನಕವೂ ಆಗಿದೆ. ಜ್ಞಾನ ಜನಕ (ಸಾಮಗ್ರೀ) ಮಾತ್ರ–ಅಧೀನ ಜನ್ಯತ್ವಂ ಉತ್ಪತ್ತೌ ಸ್ವತಸ್ತ್ವಂ "ಜ್ಞಾನಜನಕ ಮಾತ್ರಜನ್ಯತ್ವಂ ಉತ್ಪತ್ತೌ ಸ್ವತಸ್ತ್ವಂ.

(b) ಜ್ಞಪ್ತೌ ಸ್ವತಸ್ತ್ವ– ಯಾವ ಸಾಕ್ಷಿಯಿಂದ ಜ್ಞಾನವು ಗ್ರಹಿಸಲ್ಪಡುತ್ತದೆಯೋ ಅದೇ ಸಾಕ್ಷಿಯಿಂದ ಜ್ಞಾನದ ಪ್ರಾಮಾಣ್ಯವೂ ಗ್ರಹಿಸಲ್ಪಡುತ್ತದೆ. "ಜ್ಞಾನಗ್ರಾಹಕ ಮಾತ್ರ ಗ್ರಾಹ್ಯತ್ವಂ ಜಪ್ತೌ ಸ್ವತಸ್ತ್ವಂ".

[ಜ್ಞಾನದ ಅಪ್ರಾಮಾಣ್ಯವು ಉತ್ಪತ್ತಿಯಲ್ಲಿ ಮತ್ತು ಜ್ಞಪ್ತಿಯಲ್ಲಿ ಪರತಃ ಇದೆ ಎಂದು ನಮ್ಮ ಸಿದ್ಧಾಂತ. ಎಂದರೆ ಜ್ಞಾನವು ಇಂದ್ರಿಯಾದಿಗಳಿಂದ ಮತ್ತು ಅದರ ಅಪ್ರಾಮಾಣ್ಯವು ಇಂದ್ರಿಯಾದಿ ದೋಷಗಳಿಂದ ಹುಟ್ಟುತ್ತದೆ, ಎಂದರೆ ಜ್ಞಾನಜನಕಾತಿರಿಕ್ತಕಾರಣಜನ್ಯತ್ವಂ ಎಂದು ಭಾವ. ಅಯಥಾರ್ಥ ಜ್ಞಾನವನ್ನೂ ಗ್ರಹಿಸುವದು ಸಾಕ್ಷಿ. ಆದರೆ ಅದರ ಅಪ್ರಾಮಾಣ್ಯವು ವಿಸಂವಾದಾದಿ ಲಿಂಗಗಳಿಂದ ಅನುಮೇಯವಾಗಿದೆ. ಇವು ಪರಸ್ಪರ ಭಿನ್ನ ಇವೆ. ಆದ್ದರಿಂದ "ಜ್ಞಾನಗ್ರಾಹಕಾ ರಿಕ್ತಗ್ರಾಹ್ಯತ್ವಂ ಜ್ಞಪ್ತೌ ಪರತಸ್ತ್ವಂ.]

**2) ಕರಣ ಪ್ರಾಮಾಣ್ಯಂ** :(ಉತ್ಪತ್ತೌ ಸ್ವತಃ,ಜ್ಞಪ್ತೌ ಪರತಃ) (a)ಉತ್ಪತ್ತೌ

ಸ್ವತಸ್ತ್ವಂ- ಎಂದರೆ ಜ್ಞಾನಜನಕ ಶಕ್ತಿಯಿಂದಲೇ ಅದರ ಪ್ರಾಮಾಣ್ಯವು ಹುಟ್ಟುತ್ತದೆ. ಅರ್ಥಾತ್ ಜ್ಞಾನಜನಕತ್ವ ಶಕ್ತಿ, ಪ್ರಾಮಾಣ್ಯ ಜನಕತ್ವ ಶಕ್ತಿ ಇವೆರಡೂ ಒಂದೇ ಎಂದು ಅಭಿಪ್ರಾಯ. "ಕರಣಾನಾಂಚ ಜ್ಞಾನಜನನ ಶಕ್ತ್ಯೈವ ತದ್ಯಾಥಾರ್ಥ್ಯ-ಜನಕತ್ವಂ ಸ್ವತಸ್ತ್ವಂ"

(b) "ಜ್ಞಪ್ತೌ ಪರತಸ್ತ್ವಂ- ಕರಣಗಳೆಂದರೆ ಇಂದ್ರಿಯ-ಲಿಂಗ-ಶಬ್ದ ಇವುಗಳನ್ನು ಕ್ರಮವಾಗಿ ಅನುಮಾನ-ಪ್ರತ್ಯಕ್ಷ-ಶ್ರೋತ್ರೇಂದ್ರಿಯ ಗ್ರಹಿಸುತ್ತವೆ. ಇನ್ನು ಈ ಕರಣಗಳ ಪ್ರಾಮಾಣ್ಯ ಗೊತ್ತಾಗುವುದು ಸಂವಾದಾದಿಗಳಿಂದ, ಹೀಗೆ "ಕರಣ ಗ್ರಾಹಕಾತಿರಿಕ್ತ ಗ್ರಾಹ್ಯತ್ವಮೇವ ಜ್ಞಪ್ತೌ ಪರತಸ್ತ್ವಂ". ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕರಣ ಪ್ರಾಮಾಣ್ಯವು ಜ್ಞಪ್ತಿಯಲ್ಲಿ ಸ್ವತಃ ಕೂಡ ಇರಬಹುದೆಂದು ಸುಧಾಕಾರರು ಪಕ್ಷಾಂತರವನ್ನು ವಿವಕ್ಷಾಭೇದದಿಂದ ಹೇಳಿದ್ದಾರೆ. [ಕರಣದ ಅಪ್ರಾಮಾಣ್ಯವು ಉತ್ಪತ್ತಿಯಲ್ಲಿ ಮತ್ತು ಜ್ಞಪ್ತಿಯಲ್ಲಿ ಪರತಃ ಇದೆ. ಉತ್ಪತ್ತೌ ಪರತಃ ಎಂದರೆ, ಜ್ಞಾನಜನಕತ್ವ ಶಕ್ತಿ ಮತ್ತು ಅಪ್ರಾಮಾಣ್ಯಜನಕತ್ವ ಶಕ್ತಿ ಇವೆರಡೂ ಭಿನ್ನವಿರುತ್ತವೆ. ಅಪ್ರಾಮಾಣ್ಯವು ದೋಷಾದಿ ಮೂಲಕ ಹುಟ್ಟುತ್ತದೆ. ಕರಣದ ಅಪ್ರಾಮಾಣ್ಯವು ಜ್ಞಪ್ತಿಯಲ್ಲಿಯೂ ಪರತಃ ಇದೆ.]

**ಅನವಸ್ಥಾऽನ್ಯಥಾ ಹಿ ಸ್ಯಾತ್, ಅಪ್ರಾಮಾಣ್ಯಂ ತಥಾನ್ಯತಃ**
**ಮಿಥ್ಯಾಜ್ಞಪ್ತಿಪ್ರಲಂಭಾದೇಸ್ತೇನ ವೇದವಿರೋಧಿ ಯತ್ ||೬೭||**

**ಅವತರಣಿಕೆ : ನಮಾನಮಪಿ** ಜ್ಞಾನ ಪ್ರಾಮಾಣ್ಯವು "ಜ್ಞಪ್ತೌ ಸ್ವತಃ" ಎಂದು ಮೇಲೆ ವಿವರಿಸಿದ್ದಾಯಿತು. ಹೀಗೆ ಒಪ್ಪದಿದ್ದರೆ ಬರುವ ದೋಷಗಳನ್ನು ನಿರೂಪಿಸುತ್ತಾರೆ.

**ಅನುವಾದ :** ಜ್ಞಾನ ಪ್ರಾಮಾಣ್ಯವು ಸ್ವತಃ ಎಂದು ಒಪ್ಪದಿದ್ದರೆ ಅನವಸ್ಥಾ ದೋಷ ಬರುತ್ತದೆ. ಆದ್ದರೆ ಜ್ಞಾನದ ಅಪ್ರಾಮಾಣ್ಯವು ಪರತಃ, ಎಂದರೆ ದೋಷ ಮೂಲಕ (ಅನ್ಯತಃ). ಅದು ಅಸ್ವಾಭಾವಿಕ. ಅಪ್ರಾಮಾಣ್ಯವು ದೋಷ ಮೂಲಕ (ಪರತಃ) ಇರುವದರಿಂದ ಮಿಥ್ಯಾಜ್ಞಾನ, ವಿಪ್ರಲಂಭ ಜ್ಞಾನ(ವಂಚನೆ) ಮೊದಲಾದ ದೋಷಮೂಲಕ ಹುಟ್ಟುವ ಜ್ಞಾನವು ವೇದವಿರೋಧಿಯಾಗಿದೆ. ಮತ್ತು ಅಪ್ರಮಾಣವೂ ಆಗಿದೆ. (ನಮಾನಂ ಅಪಿ).

**ವಿವರಣೆ :** (1) ಜ್ಞಾನಪ್ರಾಮಾಣ್ಯವು ಜ್ಞಪ್ತೌ ಸ್ವತಃ ಎಂದು ಒಪ್ಪದಿದ್ದರೆ ಅನವಸ್ಥಾ ದೋಷ ಬರುತ್ತದೆ. ನಮ್ಮ ಪ್ರಕಾರ ಜ್ಞಾನವನ್ನೂ, ಜ್ಞಾನಪ್ರಾಮಾಣ್ಯವನ್ನೂ ಗ್ರಹಿಸುವದು ಸಾಕ್ಷಿ. ಇದನ್ನು ಅಂಗೀಕರಿಸದೆ ಜ್ಞಾನ ಪ್ರಾಮಾಣ್ಯವು ಅನುಮಾನದಿಂದಾಗುವದಾಗಿಯೂ ಆ ಅನುಮಾನ ಸ್ವತಃ ಪ್ರಮಾಣವೆಂದೂ ಹೇಳುವದು ಅಸಮಂಜಸ. ಏಕೆಂದರೆ ಈ ಅನುಮಾನದ ಪ್ರಾಮಾಣ್ಯ ಸ್ವತಃ ಇರದೆ

ಪರಾಧೀನವಾಗಿದೆ. ಅದು ಪಕ್ಷ (ಧರ್ಮಿ), ಹೇತು (ಲಿಂಗ), ಮತ್ತು ದೃಷ್ಟಾಂತಗಳ ಜ್ಞಾನ ಪ್ರಾಮಾಣ್ಯದ ನಿಶ್ಚಯವನ್ನವಲಂಬಿಸಿದೆ. ಇದಲ್ಲದೆ ಈ ಅನುಮಾನದ ಪ್ರಾಮಾಣ್ಯವು ಯಾವ ಜ್ಞಾನದಿಂದ ತಿಳಿಯಲ್ಪಡುವದೋ ಆ ಜ್ಞಾನಪ್ರಾಮಾಣ್ಯವು ಬೇರೊಂದು ಅನುಮಾನದಿಂದ, ಅದು ಮತ್ತೊಂದು ಅನುಮಾನದಿಂದ.......... ಹೀಗೆ ಹೇಳಬೇಕು, ಇದರಿಂದಾಗಿ ಅನವಸ್ಥಾ ದೋಷ ಬರುತ್ತದೆ.

ಆದರೆ ಜ್ಞಾನ ಪ್ರಾಮಾಣ್ಯವು ಸ್ವತಃ, ಸಾಕ್ಷಿಯಿಂದ ಎಂಬ ನಮ್ಮ ಪಕ್ಷದಲ್ಲಿ ಅನವಸ್ಥಾ ದೋಷವಿಲ್ಲ.ಏಕೆಂದರೆ ಸಾಕ್ಷಿಯು ಇಂದ್ರಿಯ ಮುಖಾಂತರ ವಸ್ತುವನ್ನು ಗ್ರಹಿಸುತ್ತದೆ. ಈ ವೃತ್ತಿಜ್ಞಾನವನ್ನು ಗ್ರಹಿಸುವಾಗಲೇ ಸಾಕ್ಷಿ ಸ್ವಪ್ರಕಾಶವಾದ್ದರಿಂದ ತನ್ನ ಪ್ರಾಮಾಣ್ಯವನ್ನು ತಾನೇ ವಿಷಯೀಕರಿಸುತ್ತದೆ. ಇದರಿಂದ ಅನವಸ್ಥಾದಿ ದೋಷಗಳಿಲ್ಲ.ಸಾಕ್ಷಿಯು ಸ್ವತಃ ಪ್ರಮಾಣ. ಅದು ನಿಯಮೇನ ಯಥಾರ್ಥವಾಗಿದೆ.

ಜ್ಞಾನ ಕರಣಗಳಾದ (ಸಾಧನಗಳಾದ) ಇಂದ್ರಿಯ-ಲಿಂಗ-ಶಬ್ದಗಳು ಯಾವಾಗಲೂ ಯಥಾರ್ಥ ಜ್ಞಾನವನ್ನೇ (ಪ್ರಾಮಾಣ್ಯವನ್ನೇ) ಹುಟ್ಟಿಸುತ್ತವೆ ಎಂಬ ನಿಯಮವಿಲ್ಲ, ಇವುಗಳಿಗೆ ಯಥಾರ್ಥ ಜ್ಞಾನ ಹುಟ್ಟಿಸುವ ಸ್ವಾಭಾವಿಕ ಶಕ್ತಿ ಇದ್ದರೂ. ಅವು ದೋಷ ಮೂಲಕ ಅಯಥಾರ್ಥ ಜ್ಞಾನವನ್ನೂ ಹುಟ್ಟಿಸುತ್ತವೆ. ದೋಷಗಳು ಸಹಜ ಶಕ್ತಿಯನ್ನು ಪ್ರತಿಬಂಧಿಸುತ್ತವೆ. ಕೆಲವೊಂದು ಸಲ ವಿಪರೀತ ಶಕ್ತಿಯನ್ನೂ ಹುಟ್ಟಿಸುತ್ತವೆ.

(2) ಅಪ್ರಾಮಾಣ್ಯವು ಅನ್ಯತಃ, ಪರತಃ, ಎಂದರೆ ದೋಷಮೂಲಕ ಎಂದು ಹೇಳುವದರಿಂದ, ಮಿಥ್ಯಾಜ್ಞಾನ, ವಂಚನೆ (ವಿಪ್ರಲಂಭ), ಇಂದ್ರಿಯಗಳ ಅಸಾಮರ್ಥ್ಯ (ಅಪಟುಕರಣತ್ವ) ಮೊದಲಾದ ವಕ್ತೃನ ದೋಷಗಳಿಂದ ಹುಟ್ಟಿದ ಜ್ಞಾನವು ಅಯಥಾರ್ಥವೇ, ಅಪ್ರಮಾಣವೇ. ಇದಲ್ಲದೆ ಅಪೌರುಷೇಯ ಹಾಗೂ ಕ್ರಮ ವಿಶಿಷ್ಟವಾದ ವೇದವಿರೋಧಿಯಾದ್ದರಿಂದಲೂ, ಆ ಜ್ಞಾನವು ಅಪ್ರಮಾಣ.

**ಆಕ್ಷೇಪ :** ಜ್ಞಾನ ಪ್ರಾಮಾಣ್ಯವು ಸ್ವತಃ ಇರುವದರಿಂದ ವೇದಜನ್ಯ ಜ್ಞಾನ ಮತ್ತು ಬೌದ್ಧಾಗಮಜನ್ಯಜ್ಞಾನ ಎರಡೂ ಪ್ರಮಾಣವಾಗಲಿ! ಇವೆರಡರಲ್ಲಿ ಒಂದೇ ಪ್ರಮಾಣವಾಗುವದಾದರೆ ವೇದವೇ ಏಕೆ ಪ್ರಮಾಣ ? ಬೌದ್ಧಾಗಮ ಏಕೆ ಪ್ರಮಾಣವಲ್ಲ ?

**ಪರಿಹಾರ :** ಜಿಜ್ಞಾಸ್ಯನಾದ ಬ್ರಹ್ಮನ ಸ್ವರೂಪ ಒಂದೇ. ಅದಕ್ಕೆ ದ್ವೈರೂಪ್ಯ ಅಥವಾ ದ್ವಿಸ್ವಭಾವ ಇರುವದು ಅಸಂಭವ. ಆದ್ದರಿಂದ ಪರಸ್ಪರ ವಿರುದ್ಧವಾದ ವೇದಜನ್ಯಜ್ಞಾನ-ಬೌದ್ಧಾಗಮ ಜನ್ಯಜ್ಞಾನ ಎರಡೂ ಪ್ರಮಾಣವಾಗಲಾರವು. ಇವೆರಡರಲ್ಲಿ ಒಂದು ಮಾತ್ರ ಪ್ರಮಾಣ. ಕ್ರಮವಿಶಿಷ್ಟವಾದ ವೇದವಾದರೋ ಅಪೌರುಷೇಯ. ಅದನ್ನು ಯಾರೂ ರಚಿಸಿಲ್ಲ. ಹೀಗಾಗಿ ಅದರಲ್ಲಿ ಪುರುಷರಲ್ಲಿರುವ ಮಿಥ್ಯಾಜ್ಞಾನ, ಮೋಸ, ಅಸಮರ್ಥ ಇಂದ್ರಿಯ ಮೊದಲಾದ ದೋಷ

ಗಳಿಂದ ಹುಟ್ಟುವ ಅಯಥಾರ್ಥಜ್ಞಾನಕ್ಕೆ ಅವಕಾಶವಿಲ್ಲ. ಬೌದ್ಧಾಗಮವಾದರೋ ಪೌರುಷೇಯ. ಪುರುಷ ವಿರಚಿತವಾದ್ದರಿಂದ ಅದರಲ್ಲಿ ಕರ್ತೃವಿನ ಅಜ್ಞಾನಾದಿ ದೋಷಗಳು ಇರಬಹುದಾಗಿವೆ. ಆದ್ದರಿಂದ ಬೌದ್ಧಾಗಮ ಅಪ್ರಮಾಣ, ವೇದ ಪ್ರಮಾಣ.

### III ವೇದಾಪೌರುಷೇಯತ್ವ

**ಅಪಿ ವೇದಾನಾಂ ಅಂಗೀಕಾರ್ಯಾ ಹಿ ನಿತ್ಯತಾ ।**

**ನ ಹಿ ಧರ್ಮಾದಿಸಿದ್ಧಿಃ ಸ್ಯಾನ್ನಿತ್ಯವಾಕ್ಯಂ ವಿನಾ ಕ್ವಚಿತ್ ॥೬೮॥**

**ಅವತರಣಿಕೆ :** ವೇದ ವಿರೋಧಿಯಾದ್ದರಿಂದ ಬೌದ್ಧಾಗಮದಿಂದ ಹುಟ್ಟುವ ಜ್ಞಾನವು ಅಯಥಾರ್ಥ ಎಂದು ಹೇಳುವವೇಕೆ ? ವೇದಜ್ಞಾನವೇ ಏಕೆ ಮಿಥ್ಯಾ ಅಥವಾ ಅಯಥಾರ್ಥವಾಗಬಾರದು ? ಎಂಬ ಶಂಕೆಯನ್ನು ಪರಿಹರಿಸುತ್ತಾರೆ.

**ಅನುವಾದ :** ವೇದದ ಪ್ರಾಮಾಣ್ಯವನ್ನೂ (ಮಾನಂ-ಹಿಂದಿನ ಶ್ಲೋಕದ್ದು) ನಿತ್ಯತ್ವವನ್ನೂ (ಅಪೌರುಷೇಯತ್ವವನ್ನೂ) ಒಪ್ಪಬೇಕು. ಏಕೆಂದರೆ ಅಪೌರುಷೇಯ ನಿತ್ಯ ವಾಕ್ಯವಿಲ್ಲದಲೆ ಬೇರೆ ಯಾವದೇ ಪ್ರಮಾಣದಿಂದ (ಕ್ವಚಿತ್ ಕೇನಾಪಿ . ಪ್ರಮಾಣೇನ) ಧರ್ಮಾದಿಗಳು ಸಿದ್ಧಿಸುವದಿಲ್ಲ.

**ವಿವರಣೆ :** (1)(a) ಇಲ್ಲಿ "ಅಪಿ" ಶಬ್ದಕ್ಕೆ 'ಮತ್ತು' ಎಂಬ ಅರ್ಥ (ಪ್ರಾಮಾಣ್ಯಂ ನಿತ್ಯತಾಪಿ) (b) ನಿತ್ಯತಾ ಶಬ್ದವು ಅಪೌರುಷೇಯತ್ವ ಎಂಬ ಅರ್ಥದಲ್ಲಿದೆ. (c) 'ಹಿ' ಶಬ್ದವು ಪ್ರಸಿದ್ಧಿದ್ಯೋತಕ.ವೇದ ನಿತ್ಯತ್ವವು"ವಾಚಾ ವಿರೂಪ ನಿತ್ಯಯಾ" ಮೊದಲಾದ ಶ್ರುತಿಗಳಿಂದ ಪ್ರಸಿದ್ಧವಿದೆ.

(2) ವೇದಜನ್ಯ ಜ್ಞಾನವೇ ಏಕೆ ಪ್ರಮಾಣವೆಂದರೆ-ವೇದ ಅಪೌರುಷೇಯವಾಗಿದೆ. ಅಪೌರುಷೇಯವಾದ್ದರಿಂದ ಅದರಲ್ಲಿ ಪುರುಷರಲ್ಲಿರುವ ವಂಚನೆ, ಮಿಥ್ಯಾಜ್ಞಾನ ಮೊದಲಾದ ದೋಷಗಳ ಸಂಭವವೇ ಇಲ್ಲ.

**ವೇದ ಎಂದರೇನು ? ವೇದದ ಅಪೌರುಷೇಯತ್ವ ಎಂದರೇನು ?**

"ಕ್ರಮವಿಶೇಷವಿಶಿಷ್ಟವರ್ಣಾಃ ವೇದಃ । ತಸ್ಯ ನಿಯತೈಕಪ್ರಕಾರತ್ವಂ ಅಪೌರುಷೇಯತ್ವಂ । ಸ್ವತಂತ್ರಪುರುಷಪೂರ್ವಕತ್ವಾಭಾವಃ ಇತಿ ಯಾವತ್"— ಸುಧಾ, ವಿಶಿಷ್ಟ ಕ್ರಮದಲ್ಲಿರುವ ವರ್ಣಗಳೇ ವೇದ. ವರ್ಣಗಳ ಕ್ರಮವು (ಎಂದರೆ ಆನುಪೂರ್ವಿ, ಈ ವರ್ಣವಾದ ನಂತರ ಈ ವರ್ಣ ಎಂಬ ಕ್ರಮ) ಬದಲಾಗದೆ ಯಾವಾಗಲೂ ಏಕ ಪ್ರಕಾರವಾಗಿರುವದೇ ಅಪೌರುಷೇಯತ್ವ. ಸ್ವತಂತ್ರ ಪುರುಷ ನಿಂದ ಬುದ್ಧಿಪೂರ್ವಕವಾಗಿ ರಚಿಸಲ್ಪಡದಿರುವದೇ ಅಪೌರುಷೇಯತ್ವ ಎಂದು ಭಾವ.

**ವಿವರಣೆ :** ಸ್ವತಂತ್ರ ಪುರುಷ, "ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ" ಎಂಬುದು ಕಾಳಿದಾಸನ ಕುಮಾರ ಸಂಭವ

ದಲ್ಲಿಯ ವಾಕ್ಯ. ಈ ವಾಕ್ಯವು ಕಾಲಿದಾಸನಿಗಿಂತ ಮೊದಲು ಇದ್ದಿರಲಿಲ್ಲ. ಇದನ್ನು ಮೊದಲು ಉಚ್ಚರಿಸಿದವನು ಕಾಲಿದಾಸ. ಬೇರೆಯವರು ಎಂದರೆ– ಸಜಾತೀಯ ಪುರುಷರು ಇದರ ಉಚ್ಚಾರವನ್ನು ಮೊದಲು ಮಾಡಿರಲಿಲ್ಲ. ಹೀಗೆ ಸಜಾತೀಯ ಉಚ್ಚಾರವನ್ನು ಅಪೇಕ್ಷಿಸದೆ ಸ್ವತಂತ್ರವಾಗಿ ಕಾಲಿದಾಸನೇ ಉಚ್ಚರಿಸಿದ ವಾಕ್ಯವಿದಾಗಿದೆ. ಆದ್ದರಿಂದ ಕಾಲಿದಾಸನಿಗೆ ಸ್ವತಂತ್ರ ಪುರುಷ ಎನ್ನುತ್ತಾರೆ. ಇದರಂತೆ ನಾವೆಲ್ಲರೂ ನಮ್ಮವೇ ಆದ ವಾಕ್ಯಗಳ ಬಗ್ಗೆ ಸ್ವತಂತ್ರ ಪುರುಷರು. "ಸ ಜಾತೀಯ– ಉಚ್ಚಾರಣಂ. ಅನಪೇಕ್ಷ್ಯ ಉಚ್ಚಾರಯಿತಾ ಪುರುಷಃ ಸ್ವತಂತ್ರಃ" (ಶ್ರೀನಿವಾಸ ತೀರ್ಥರು). ವೇದೋಚ್ಚಾರಣವಾದರೋ ಕಾಲಿದಾಸಾದಿ ವಾಕ್ಯಗಳಂತೆ ಸ್ವತಂತ್ರ ಪುರುಷರಿಂದ ಆಗಿಲ್ಲ, ಅಧ್ಯಾಪಕರು ಹೇಳಿದ ವಾಕ್ಯಗಳನ್ನೇ ಶಿಷ್ಯರು ಉಚ್ಚರಿಸುತ್ತಾರೆ. ಹೀಗೆ ಅಧ್ಯಾಪಕ– ಅಧ್ಯೇತೃಗಳ (ಕಲಿಯುವವರ) ಪರಂಪರೆಯಿಂದಲೇ ವೇದವು ಅನಾದಿ ಕಾಲದಿಂದ ಬಂದಿದೆ. ವೇದವನ್ನು ಯಾರೂ ರಚಿಸಿಲ್ಲ. ಪುರುಷ ಕೃತವಲ್ಲವಾದ್ದರಿಂದ ವೇದ ಅಪೌರುಷೇಯ. ಇದರಿಂದಾಗಿ ಪುರುಷರಲ್ಲಿರುವ ಅಜ್ಞಾನಾದಿ ದೋಷಗಳು ವೇದದಲ್ಲಿಲ್ಲ, ವೇದವು ನಿರ್ದುಷ್ಟ.

**ಗಮನಿಸಿರಿ :** (i) "ಅಕರ್ತೃಕತ್ವ ಪ್ರಸಿದ್ಧಿಮತ್ತ್ವಂ ವೇದತ್ವಂ." "ಇದಕ್ಕೆ ಕರ್ತಾ ಇಲ್ಲ" ಎಂಬ ಪ್ರಸಿದ್ಧಿಯೇ ವೇದದ ಲಕ್ಷಣ. ಇನ್ನು ಯಾರಾದರೂ ತಾವೇ ವಾಕ್ಯ ರಚಿಸಿ, ಅದು ವೇದ ಎಂದು ಹೇಳಿದರೆ, ಅಥವಾ ಗೂಢ ಕರ್ತೃಕ ವಾಕ್ಯಗಳು ವೇದವಾಗಲಾರವು. ಏಕೆಂದರೆ ಅವುಗಳಿಗೆ ಅಧ್ಯಯನ ಪರಂಪರೆ ಇಲ್ಲ. ಹಿಂದೆ ಹಿಂದೆ ವಿಮರ್ಶಿಸುತ್ತ ಹೋದಂತೆ, ಆ ಪರಂಪರೆ ಒಂದೆಡೆ ನಿಲ್ಲುತ್ತದೆ. ಅಧ್ಯಯನ ಮಾಡುವವರಿಗೆ ಮತ್ತು ಅಧ್ಯಯನ ಮಾಡಿಸುವವರಿಗೆ "ನಾವು ಹಿಂದಿನದನ್ನೇ ಕಲಿಯುತ್ತೇವೆ, ಕಲಿಸುತ್ತೇವೆ" ಎಂಬ ತಿಳುವಳಿಕೆ ಇರುತ್ತದೆ. ಈ ಪರಂಪರೆ ಅನಾದಿಯಾಗಿದೆ. ಇದಕ್ಕೆ ಎಲ್ಲಿಯೂ ವಿಚ್ಛೇದ ಇಲ್ಲ. ಪ್ರಳಯ ಕಾಲದಲ್ಲಿ ವೇದಗಳು ಪರಮಾತ್ಮನ ಬುದ್ಧಿಸ್ಥವಾಗಿರುತ್ತವೆ. ಮುಂದೆ ಸೃಷ್ಟಿಯಾದ ನಂತರ ಭಗವಂತನು ಬ್ರಹ್ಮಾದಿಗಳಿಗೆ ಉಪದೇಶಿಸುತ್ತಾನೆ. ಹಾಗೂ ಅವರಿಂದ ಪರಂಪರೆ ಮುಂದುವರೆಯುತ್ತದೆ.

(ii) "ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ । ಸರ್ಗೇ ಸರ್ಗೇ ಅಮುನೈವ ಉದ್ಗೀರ್ಯಂತೇ ತಥೈವ ಚ"– ಬ್ರಹ್ಮಾಂಡ ಪುರಾಣ. ಸಮಸ್ತ ವೇದಗಳು ನಿತ್ಯ ಮತ್ತು ಶಾಶ್ವತ. ಎಂದರೆ ಯಾವಾಗಲೂ ಏಕಪ್ರಕಾರವಾದವು. ಪ್ರಳಯ ಕಾಲದಲ್ಲಿ ಇವು ನಾಶ ಹೊಂದದೆ ವಿಷ್ಣುಬುದ್ಧಿಯಲ್ಲಿರುತ್ತವೆ. ಆದ್ದರಿಂದ ಇವಕ್ಕೆ ವಿಚ್ಛೇದವಿಲ್ಲ. ಪ್ರತಿಯೊಂದು ಸೃಷ್ಟಿಯ ಆರಂಭದಲ್ಲಿ ಪರಮಾತ್ಮನು ಬ್ರಹ್ಮಾದಿಗಳಿಗೆ ಉಪದೇಶಿಸುತ್ತಾನೆ. ಹೀಗೆ ಪರಮಾತ್ಮನು ಮಹಾ ಮಹೋಪಾಧ್ಯಾಯ.

iii) ವೇದಗಳು ಯಾವಾಗಲೂ ಇರುವುದರಿಂದ ಇವುಗಳಿಗೆ ವೇದ ಎನ್ನುವರು. ("ವೇದಾಸ್ತೇ ನಿತ್ಯವಿನ್ನತ್ವಾತ್") ಎಲ್ಲರಿಂದ ಶ್ರುತವಾಗಿವೆ, ಕೇಳಲ್ಪಟ್ಟಿವೆ. ಯಾರಿಂದಲೂ ಮಾಡಲ್ಪಟ್ಟಿಲ್ಲ. ಆದ್ದರಿಂದ ಇವುಗಳಿಗೆ 'ಶ್ರುತಿ' ಎನ್ನುತ್ತಾರೆ, ("ಶ್ರುತಾ ಏವ ಯತೋಽಖಿಲೈಃ । "ಶ್ರುತಯಶ್ಚ ಅಖಿಲೈಃ ಶ್ರುತೇಃ") ಎಲ್ಲರಿಂದ ಒಂದೇ ರೀತಿಯಿಂದ ಪಠಿಸಲ್ಪಡುವುದರಿಂದ ಇವುಗಳಿಗೆ "ಆಮ್ನಾಯ" ಎನ್ನುತ್ತಾರೆ. "ಆಮ್ನಾಯಃ ಅನನ್ಯಥಾಪಾಠಾತ್."

**ವೇದ ಅಪೌರುಷೇಯ ಏಕೆ?** ಸಾರಾಸಾರ ವಿವೇಕ ಜ್ಞಾನವುಳ್ಳ ಎಲ್ಲರೂ ಒಪ್ಪಿದ ಧರ್ಮಾದಿಗಳ ಸಿದ್ಧಿಗೋಸ್ಕರ ವೇದ ಅಪೌರುಷೇಯ ಮತ್ತು ನಿತ್ಯ ಎಂದು ಒಪ್ಪಬೇಕಾಗುತ್ತದೆ. ಅಪೌರುಷೇಯ, ನಿತ್ಯವಾಕ್ಯಗಳಿಲ್ಲದೆ ಧರ್ಮಾದಿಗಳು ಸಿದ್ಧಿಸಲಾರವು. ಹೇಗೆಂದರೆ—

ಎಲ್ಲ ವಾದಿಗಳು, ದಾರ್ಶನಿಕರು ಧರ್ಮಾಧರ್ಮ, ಸ್ವರ್ಗನರಕ, ಪುಣ್ಯಪಾಪ ಮೊದಲಾದ ಅತೀಂದ್ರಿಯ ಪದಾರ್ಥಗಳನ್ನು ಒಪ್ಪಿದ್ದಾರೆ. ಇವುಗಳನ್ನು ಒಪ್ಪದ ಚಾರ್ವಾಕನಿಂದಲೂ ಧರ್ಮಾದಿಗಳನ್ನು ಯುಕ್ತಿಯಿಂದ ಒಪ್ಪಿಸುತ್ತೇವೆ. ಎಲ್ಲರೂ ಒಪ್ಪಿದ ಧರ್ಮಾಧರ್ಮಗಳಿಗೆ ಒಂದು ಪ್ರಮಾಣ ಬೇಕು. ಇಲ್ಲವಾದರೆ ಅವುಗಳ ನಿಶ್ಚಯವಾಗುವದಿಲ್ಲ. ಹೀಗೆ ಧರ್ಮದ ಬಗ್ಗೆ ಒಂದು ಪ್ರಮಾಣವಿರುವದು ಸಿದ್ಧಿಸುತ್ತದೆ. (ಏವಂ ಸಾಮಾನ್ಯತಃ ಪ್ರಮಾಣಂ ಸಿದ್ಧಂ)

ಇನ್ನು ಈ ಪ್ರಮಾಣವು ಯಾವುದೆಂಬುದನ್ನು ವಿಮರ್ಶಿಸುವಾ.

(i) ಈ ಪ್ರಮಾಣ ಪ್ರತ್ಯಕ್ಷವಲ್ಲ. ಏಕೆಂದರೆ ಧರ್ಮಾದಿಗಳು ಅತೀಂದ್ರಿಯ. ಬಾಹ್ಯಪ್ರತ್ಯಕ್ಷವು ಬಾಹ್ಯವಸ್ತುಗಳನ್ನು ಮಾತ್ರ ಗ್ರಹಿಸುತ್ತದೆ. ಅತೀಂದ್ರಿಯವಾದ ಧರ್ಮಾದಿಗಳು ಬಾಹ್ಯಪ್ರತ್ಯಕ್ಷಕ್ಕೆ ಅಗೋಚರ. ಇನ್ನು ಮಾನಸ ಪ್ರತ್ಯಕ್ಷವೂ ಧರ್ಮಾದಿಗಳನ್ನು ಗ್ರಹಿಸಲಾರದು. ಸುಖಾದಿಗಳನ್ನು ಗ್ರಹಿಸುವ ಮಾನಸ ಪ್ರತ್ಯಕ್ಷವು ಒಂದು ವೇಳೆ ಧರ್ಮಾದಿಗಳನ್ನು ಗ್ರಹಿಸಿದರೆ– ''ನಾನು ಸುಖ ಅನುಭವಿಸಿದೆ'' ಎಂಬ ಅನುಭವ ಬರುವಂತೆ, ''ನಾನು ಧರ್ಮಾದಿಗಳನ್ನು ಅನುಭವಿಸಿದೆ'' ಎಂಬ ಅನುಭವ ಬರಬೇಕು. ಆದರೆ ಇಂತಹ ಅನುಭವ ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಮಾನಸ ಪ್ರತ್ಯಕ್ಷಕ್ಕೆ ಧರ್ಮಾದಿಗಳು ವಿಷಯವಲ್ಲ.

ಧರ್ಮಾದಿಗಳು ಯೋಗಿಗಳಿಗೆ ಯೋಗ ಬಲದಿಂದ ಸಿದ್ಧಿಸಿದರೂ ಅವು ನಮ್ಮ ಪ್ರತ್ಯಕ್ಷಕ್ಕೆ ಗೋಚರವಲ್ಲ. ಇನ್ನೊಬ್ಬರ ಪ್ರತ್ಯಕ್ಷದಿಂದ ನಮಗೆ ಧರ್ಮಾದಿಗಳ ನಿಶ್ಚಯ ಮತ್ತು ಅನುಷ್ಠಾನ ಸಿದ್ಧಿಸುವದಿಲ್ಲ.

(ii) ಅನುಮಾನವೂ ಧರ್ಮಾಧರ್ಮಗಳ ಬಗ್ಗೆ ಪ್ರಮಾಣವಾಗಲಾರದು. ಏಕೆಂದರೆ ಧರ್ಮಾದಿಗಳೊಡನೆ ನಿಯತ ಸಂಬಂಧವುಳ್ಳ ಹೇತು ಇಲ್ಲ. ಸಾಮಾನ್ಯತಃ ದೃಷ್ಟಾನುಮಾನದಿಂದ ಧರ್ಮಾದಿಗಳ ಸಾಮಾನ್ಯ ಸ್ವರೂಪ ಸಿದ್ಧಿಸಿದರೂ, ಅನು

ಜ್ಞಾನ ಯೋಗ್ಯವಾದ ಸಾಧನ ಮತ್ತು ಇಂತಹ ಧರ್ಮಕ್ಕೆ ಇಂತಹ ಫಲ ಎಂಬ ಫಲ ನಿರ್ಣಯವು ಅನುಮಾನದಿಂದ ಆಗುವದಿಲ್ಲ. ಮೇಲಾಗಿ ಕಾಮಚಾರಿಯಾದ ಕೇವಲ ಅಥವಾ ಸ್ವತಂತ್ರ ಅನುಮಾನವು ಪ್ರಮಾಣವಲ್ಲ. ಪ್ರತ್ಯಕ್ಷ ಅಥವಾ ಆಗಮವನ್ನು ಆಶ್ರಯಿಸಿದರೇನೇ ಅದು ಪ್ರಮಾಣ. "ಅನುಸೃತ್ಯ ಮಾನಂ ಅನುಮಾನಂ."

(iii) ಪೌರುಷೇಯ ವಾಕ್ಯದಿಂದಲೂ ಧರ್ಮಾದಿಗಳು ಸಿದ್ಧಿಸುವದಿಲ್ಲ. ಏಕೆಂದರೆ ಪುರುಷರಲ್ಲಿ ಅಜ್ಞಾನ–ಸಂಶಯ–ಮೋಸ–ಅಸಮರ್ಥ ಇಂದ್ರಿಯ, ಮೊದಲಾದ ದೋಷಗಳು ಹೆಚ್ಚಾಗಿ ಇರುತ್ತವೆ. ಈ ದೋಷಗಳು ಅವರ ವಾಕ್ಯಗಳಲ್ಲಿ ನ ಸುಳುವದರಿಂದ ಪುರುಷವಾಕ್ಯಗಳು ಪ್ರಮಾಣವಾಗಲಾರವು.

ಆದ್ದರಿಂದ ಪರಿಶೇಷದಿಂದ ಧರ್ಮಾದಿ–ಸಿದ್ಧಿಗೋಸ್ಕರ ಅಪೌರುಷೇಯುವಾದ ಯಾವದೋ ಒಂದು ವಾಕ್ಯವನ್ನು ಪ್ರಮಾಣ ಹಾಗೂ ಧರ್ಮಾದಿ ಪ್ರತಿಪಾದಕ ಎಂದು ಒಪ್ಪಬೇಕು. ಅದು ಪ್ರಸಿದ್ಧವಾದ ಅಪೌರುಷೇಯ ನಿತ್ಯ ವೇದ,

**ಅವಿಪ್ರಲಂಭಸ್ತತ್ ಜ್ಞಾನಂ ತತ್ಕೃತತ್ವಾದಯೋ ಹಿ ಚ ।**
**ಕಲ್ಪ್ಯಾ ಗೌರವದೋಷೇಣ ಪುಂವಾಕ್ಯಂ ಜ್ಞಾಪಕಂ ನ ತತ್ ॥೬೯॥**

**ಅವತರಣಿಕೆ :** ಧರ್ಮಾದಿಗಳನ್ನು ಸಾಮಾನ್ಯ ಪುರುಷರ ವಚನಗಳಿಂದ ನಿರ್ಣಯಿಸಲಿಕ್ಕಾಗದಿದ್ದರೂ ಬುದ್ಧ–ಋಷಭ–ಜಿನ–ಕಪಿಲ–ಪಶುಪತಿ ಮೊದಲಾದ ಆಪ್ತರು ರಚಿಸಿದ ಆಗಮಗಳಿಂದ ಧರ್ಮಾದಿಗಳು ಸಿದ್ಧಿಸುತ್ತವೆ— ಎನ್ನುವದೂ ಅಯುಕ್ತ ಎಂದು ಇಲ್ಲಿ ಪ್ರತಿಪಾದಿಸುತ್ತಾರೆ.

**ಅನುವಾದ :** ಬುದ್ಧ ಮೊದಲಾದವರಲ್ಲಿ ನಿರ್ವಂಚನೆ, ಧರ್ಮಾದಿ ಜ್ಞಾನ (ತತ್‌ಜ್ಞಾನಂ) (ಇಂದ್ರಿಯ ಸಾಮರ್ಥ್ಯ),ಇವರಿಂದಲೇ ಧರ್ಮೋಪದೇಶಕ ಆಗಮ ರಚಿತವಾಯಿತು, ಮೊದಲಾದುವನ್ನು ಕೇವಲ ಕಲ್ಪಿಸಬೇಕಾಗುತ್ತದೆ. ಹೀಗೆ ಕಲ್ಪನಾ ಗೌರವ ದೋಷ ಬರುವದರಿಂದ ಬುದ್ಧಜಿನಾದಿ ಪುರುಷವಾಕ್ಯಗಳು ಧರ್ಮಾದಿ ವಿಷಯದಲ್ಲಿ ನಿಶ್ಚಾಯಕವಾಗುವದಿಲ್ಲ. (ಜ್ಞಾಪಕಂ ನ).

**ವಿವರಣೆ :** ಧರ್ಮಾದಿಗಳು ಸಾಮಾನ್ಯ ಪುರುಷರ ವಚನಗಳಿಂದ ಸಿದ್ಧಿಸದಿದ್ದರೂ ಪರಮ ಆಪ್ತರಾದ ಬುದ್ಧ–ಋಷಭ–ಜಿನ ಮೊದಲಾದ ಆಪ್ತರು ರಚಿಸಿದ ಆಗಮಗಳಿಂದ ಧರ್ಮಾದಿಗಳನ್ನು ನಿರ್ಣಯಿಸಬಹುದು. ಏಕೆಂದರೆ ಅವರ ಬಗ್ಗೆ ಮೇಲ್ಕಾಣಿಸಿದ ಅಜ್ಞಾನಾದಿಗಳಿಲ್ಲ ಎಂದು ಊಹಿಸುವದು ಅಯುಕ್ತ, ಹೇಗೆಂದರೆ, ಅವರು ಆಪ್ತರೆಂಬ ಬಗ್ಗೆ ಮೊದಲು ನಿಶ್ಚಯವೇ ಇಲ್ಲ. ಏಕೆಂದರೆ ಅವರು ಆಪ್ತರೆಂಬ ಬಗ್ಗೆ ಯಾವ ಪ್ರಮಾಣವೂ ಇಲ್ಲ. ಆಪ್ತನಲ್ಲಿರಬೇಕಾದ ಧರ್ಮಗಳು ಎಂದರೆ ಪ್ರತಿಪಾದಿಸಬೇಕಾದ ವಿಷಯದ ಸರಿಯಾದ ಜ್ಞಾನ, ನಿರ್ವಂಚನೆ, ಹೇಳಬೇಕೆಂಬ ಇಚ್ಛೆ– ಇಂದ್ರಿಯ ಸಾಮರ್ಥ್ಯ, ಇವೆಲ್ಲ ಮನೋಧರ್ಮವಾದ್ದರಿಂದ ಅವು ನಮ್ಮ ಪ್ರತ್ಯಕ್ಷಕ್ಕೆ

ಗೋಚರವಲ್ಲ. ಹಾಗೂ ಅನುಮಾನದಿಂದ ಈ ಧರ್ಮಗಳು ಅವರಲ್ಲಿದ್ದುದನ್ನು ತಿಳಿಯಲು ಶಕ್ಯವಿಲ್ಲ. ಈ ಬಗ್ಗೆ ಶಬ್ದ ಪ್ರಮಾಣವೂ ಇಲ್ಲ. ಆದ್ದರಿಂದ ನಿರ್ವಂಚನೆ ಮೊದಲಾದ ದರ್ಮಗಳು ಒಬ್ಬ ಪುರುಷನಲ್ಲಿವೆ ಎಂದು ಕಲ್ಪಿಸಬೇಕು. ಇದಲ್ಲದೆ ವಿವಕ್ಷಿತ ವಾಕ್ಯವು ಈ ಪುರುಷನಿಂದಲೇ ರಚಿತವಾಯಿತೆಂಬುದನ್ನೂ ಕಲ್ಪಿಸಬೇಕು. ಹೀಗಾಗಿ ಕಲ್ಪನಾ ಗೌರವ ದೋಷ ಬರುತ್ತದೆ. ಪ್ರಮಾಣವಿಲ್ಲದಲೆ ಯಾರೋ ಒಬ್ಬರಲ್ಲಿ ಈ ಗುಣಧರ್ಮಗಳಿವೆಯೆಂದೂ ಅವನು ಆಪ್ತನೆಂದೂ ಕಲ್ಪಿಸುವದು ಉಚಿತವಲ್ಲ. ಅಪಾರವಿತ್ತತ್ಯಾಗ, ಭೋಗತ್ಯಾಗಗಳಿಂದ, ಮಹಾಯಾಸ ಸಾಧ್ಯವಾದ ಧರ್ಮಾಚರಣೆಯ ವಿಷಯದಲ್ಲಿ ಪ್ರಾಮಾಣ್ಯ ನಿಶ್ಚಯವಿಲ್ಲದೆ ಯಾರೂ ಪ್ರವರ್ತಿಸಲಾರರು.

**ಪ್ರತ್ಯಕ್ಷಃ ಕಸ್ಯಚಿತ್ ಧರ್ಮೋ ವಸ್ತುತ್ವಾದಿತಿ ಚೋದಿತೇ |**
**ನ ಬುದ್ಧೋ ಧರ್ಮದರ್ಶೀ ಸ್ಯಾತ್ಪುಂಸ್ತ್ವಾದಿತ್ಯನುಮಾಹತಿಃ ||೭೦||**

**ಅವತರಣಿಕೆ :** ವಸ್ತುವಾದ್ದರಿಂದ ಧರ್ಮಾದಿಗಳು ಯಾರೊಬ್ಬರ ಪ್ರತ್ಯಕ್ಷಕ್ಕೆ ಗೋಚರವಾಗಬೇಕು; ಆ ಧರ್ಮಾದಿ ದ್ರಷ್ಟಾ ನಮ್ಮಂತಹ ಸಾಮಾನ್ಯ ಅಜ್ಞನಾಗಿರದಿದ್ದರೂ ಬುದ್ಧನಾಗಬಹುದಾದ್ದರಿಂದ ಬೌದ್ಧಾಗಮ ಪ್ರಮಾಣ ಎಂಬ ವಾದವನ್ನು ನಿರಾಕರಿಸುತ್ತಾರೆ.

**ಅನುವಾದ :** "ಧರ್ಮಾದಿಗಳು ಯಾರೊಬ್ಬರ ಪ್ರತ್ಯಕ್ಷಕ್ಕೆ ಗೋಚರವಾಗಿವೆ, ಏಕೆಂದರೆ ವಸ್ತುಗಳಾಗಿವೆ(ಹಾಗೂ ಧರ್ಮಾದಿ ಪ್ರತ್ಯಕ್ಷ ಜ್ಞಾನವುಳ್ಳವನು ಬುದ್ಧನು) ಎಂದು ಶಂಕಿಸಿದರೆ," ಬುದ್ಧನು ಧರ್ಮದರ್ಶಿಯಲ್ಲ, ಏಕೆಂದರೆ ಅವನು ಪುರುಷನಾಗಿದ್ದಾನೆ" ಎಂಬ ಅನುಮಾನದಿಂದ ಪೂರ್ವಪಕ್ಷಿಯ ಅನುಮಾನವು ಬಾಧಿತವಾಗುತ್ತದೆ, ಎಂದು ಸಿದ್ಧಾಂತಿಯು ಹೇಳಬೇಕು.

**ವಿವರಣೆ : ಆಕ್ಷೇಪ :** "ಧರ್ಮಾದಿಗಳು ಯಾರೊಬ್ಬರ ಪ್ರತ್ಯಕ್ಷಕ್ಕೆ ಗೋಚರವಾಗಿವೆ; ವಸ್ತುವಾದ್ದರಿಂದ ಘಟದಂತೆ" ಎಂಬ ಅನುಮಾನದಿಂದ ಒಬ್ಬ ಸಾಮಾನ್ಯ ಧರ್ಮಾದಿದ್ರಷ್ಟಾ ಸಿದ್ಧಿಸುತ್ತಾನೆ. ಆ ಧರ್ಮಾದಿ ದ್ರಷ್ಟಾ ನಮ್ಮಂಥ ಸಾಮಾನ್ಯ ಅಜ್ಞರು ಆಗಲಾರರು. ಜಿನ ಮೊದಲಾದಲಾದವರೂ ಧರ್ಮಾದಿ ದ್ರಷ್ಟಾರರಲ್ಲ. ಏಕೆಂದರೆ ಅವರೂ ಮಾತಿನಲ್ಲಿ ಎಡವಿದ್ದಾರೆ. (ಸ್ಖಲದ್ವಚನತ್ವೇನ) ಆದ್ದರಿಂದ ಪರಿಶೇಷ ಪ್ರಮಾಣದಿಂದ ಬುದ್ಧನೇ ಧರ್ಮಾದಿ ದ್ರಷ್ಟಾ, "ಧರ್ಮಾದಿ ದ್ರಷ್ಟೃತ್ವಂ ಬುದ್ಧನಿಷ್ಠಂ,ಅನ್ಯತ್ರ ವೃತ್ತೌ ಬಾಧಕೋಪಪನ್ನತ್ವೇ ಸತಿ ಕ್ವಚಿತ್ ವೃತ್ತಿಮತ್ವಾತ್" ಎಂಬುದು ಪರಿಶೇಷ–ಇಂತಹ ಧರ್ಮಾದಿ–ದ್ರಷ್ಟಾನಿಗೆ ಅಜ್ಞಾನ ಮೂಲಕ ಬರುವ ರಾಗದ್ವೇಷಾದಿಗಳಿರಲಾರವು, ರಾಗಾದಿಗಳಿಲ್ಲವಾದ್ದರಿಂದ ಅವುಗಳಿಂದ ಹುಟ್ಟುವ ಮೋಸ ಮೊದಲಾದ ದೋಷಗಳಿರಲಾರವು. ಇಂತಹ ಮಹಾನುಭಾವ ಬುದ್ಧನು ಹಿತಪ್ರಾಪ್ತಿ ಮತ್ತು ಅಹಿತನಿವೃತ್ತಿಗಳ ಉಪಾಯಗಳನ್ನರಿಯದೆ ವ್ಯರ್ಥವಾಗಿ

ಸಂಸಾರದಲ್ಲಿ ತೊಡಗಿ ನಾನಾ ದುಃಖಗಳಿಂದ ಬಳಲುತ್ತಿದ್ದ ಜೀವಿಗಳನ್ನು ಕಂಡು ಉಪದೇಶ ಮಾಡುತ್ತಾನೆ. ಇಂತಹ ಮಹಾತ್ಮನಿಗೆ ಇಂದ್ರಿಯ ಸಾಮರ್ಥ್ಯ ಇರಲೇ ಬೇಕು. ಹೀಗೆ ಸಾಮಾನ್ಯವಾಗಿ ಬುದ್ಧ ಧರ್ಮಾದಿದ್ರಷ್ಟಾ ಸಿದ್ಧಿಸುತ್ತಾನೆ. ಅವನ ವಚನಗಳೆಂದರೆ ಬೌದ್ಧಾಗಮ. ಆದ್ದರಿಂದ ಬೌದ್ಧಾಗಮವು ಧರ್ಮ ನಿರೂಪಕ ವಾಗಿದೆ. ಇದರಿಂದ ಕಲ್ಪನಾಗೌರವ ದೋಷವಿಲ್ಲ.

ಇದರಂತೆ ಜೈನರು ಪಾಶುಪತರು ಹಾಗೂ ಬೇರೆಯವರು ತಮ್ಮ ತಮ್ಮ ಮತಸ್ಥಾಪಕರು ಧರ್ಮಾದಿ ದ್ರಷ್ಟಾರರೆಂದೂ, ಅವರಿಂದ ರಚಿತವಾದ ಆಗಮಗಳು ಪ್ರಮಾಣವೆಂದೂ ವಾದಿಸುತ್ತಾರೆ.

**ಪರಿಹಾರ :** "ಬುದ್ಧನು ಧರ್ಮದರ್ಶಿಯಲ್ಲ ಏಕೆಂದರೆ ಪುರುಷನಾಗಿದ್ದಾನೆ" ಎಂಬ ಅನುಮಾನದಿಂದ ನಿನ್ನ ಅನುಮಾನವು ಬಾಧಿತವಾಗುತ್ತದೆ. ಹೇಗೆಂದರೆ -- ನೀನು ಮಾಡಿದ ಅನುಮಾನದಿಂದ, ಧರ್ಮಾದಿಗಳು ಯಾರೊಬ್ಬರ ಪ್ರತ್ಯಕ್ಷಗೋಚರ ಎಂದು ಮಾತ್ರ ಸಿದ್ಧವಾಗುತ್ತದೆ. ಬುದ್ಧನೇ ಧರ್ಮದರ್ಶಿ ಎಂದು ಸಿದ್ಧವಾಗುವ ದಿಲ್ಲ. ಬುದ್ಧನು ಧರ್ಮದರ್ಶಿ ಎಂದು ಹೇಳಲು ನೀನು ಪರಿಶೇಷ ಯುಕ್ತಿಯನ್ನು ಆಶ್ರಯಿಸುತ್ತೀ. ಆದರೆ "ಬುದ್ಧನು ಧರ್ಮದರ್ಶಿಯಲ್ಲ, ಏಕೆಂದರೆ ಪುರುಷ ನಾಗಿದ್ದಾನೆ" ಎಂಬ ನಮ್ಮ ಅನುಮಾನದಿಂದ ನಿನ್ನ ಪರಿಶೇಷ ಅನುಮಾನವು ಅಪ್ರಮಾಣವಾದ್ದರಿಂದ ಅದನ್ನೇ ಉಪಜೀವಿಸಿದ ನಿರ್ವಂಚನೆ (ಅವಿಪ್ರಲಿಪ್ಸಾ) ಇಂದ್ರಿಯ ಸಾಮರ್ಥ್ಯ ಮೊದಲಾದ ಧರ್ಮಗಳು ಸಿದ್ಧಿಸುವದಿಲ್ಲ. ಹೀಗಾಗಿ ಧರ್ಮಾದಿಗಳು ಪುರುಷವಾಕ್ಯದಿಂದ ಸಿದ್ಧಿಸುತ್ತವೆ ಎಂದರೆ ಕಲ್ಪನಾಗೌರವ ದೋಷ ಬಂದೇ ಬರುತ್ತದೆ.

ಇನ್ನು "ಧರ್ಮಾದಿಗಳು ಯಾರೊಬ್ಬರ ಪ್ರತ್ಯಕ್ಷಕ್ಕೆ ಗೋಚರವಾಗಿವೆ. ವಸ್ತುವಾದ್ದರಿಂದ ಎಂಬ ನಿನ್ನ ಸಾಮಾನ್ಯ ಅನುಮಾನವೇ ನಿರ್ದುಷ್ಟವಲ್ಲ. ಏಕೆಂದರೆ ಅದಕ್ಕೆ ಉಪಾಧಿದೋಷ ಬರುತ್ತದೆ. ''ಪ್ರತ್ಯಕ್ಷತಾ ಸಾಮಗ್ರೀ ಸದ್ಭಾವ" ಎಂಬುದೇ ಉಪಾಧಿ. ಧರ್ಮಾದಿಗಳು ಪ್ರತ್ಯಕ್ಷಕ್ಕೆ ಗೋಚರವೇ ಅಲ್ಲ. ಅವು ನಮ್ಮಂತಹ ಸಾಮಾನ್ಯರ ಪ್ರತ್ಯಕ್ಷಕ್ಕೆ ಹೇಗೆ ಗೋಚರವಲ್ಲವೋ, ಅದರಂತೆ ಇತರರ ಎಂದರೆ ಬುದ್ಧ ಮೊದಲಾದವರ ಪ್ರತ್ಯಕ್ಷಕ್ಕೂ ಗೋಚರವಲ್ಲ. ಏಕೆಂದರೆ ಬುದ್ಧ ಮೊದಲಾದವರು ಪುರುಷರೇ. ಆದ್ದರಿಂದ ''ಬುದ್ಧನು ಧರ್ಮದರ್ಶಿಯಲ್ಲ ಏಕೆಂದರೆ ಪುರುಷನಾಗಿದ್ದಾನೆ" ಎಂದು ನಾವು ಮಾಡಿದ ಅನುಮಾನವು ಪ್ರಬಲ ವಾಗಿದೆ, ಅದು ನಿನ್ನ ಅನುಮಾನವನ್ನು ಬಾಧಿಸುತ್ತದೆ.

ಇನ್ನು ಧರ್ಮಾದಿ ಸಿದ್ಧಿಯು ಈಶ್ವರನ (ರುದ್ರನ) ವಾಕ್ಯದಿಂದ ಆಗುತ್ತದೆ ಎಂಬ ವಾದವೂ ಅಯುಕ್ತ. ಇದರಲ್ಲಿಯ ಅನುಮಾನದ ದೋಷಗಳನ್ನು ''ಓಂ ಶಾಸ್ತ್ರಯೋನಿತ್ವಾತ್ ಓಂ'' ಎಂಬ ಮೂರನೆಯ ಅಧಿಕರಣದಲ್ಲಿ ನಿರೂಪಿಸಲಾಗಿದೆ.

ಒಟ್ಟಿನಲ್ಲಿ ಅಪೌರುಷೇಯ ವಾಕ್ಯವಿಲ್ಲದೆ, ಸರ್ವವಾದಿಗಳಿಗೆ ಸಮ್ಮತವಾದ ಧರ್ಮಾದಿಗಳು ಸಿದ್ಧಿಸುವದಿಲ್ಲ. ಆದ್ದರಿಂದ ಧರ್ಮಾದಿ– ಸಿದ್ಧಿಗೋಸ್ಕರ ಅಪೌರುಷೇಯ ವಾಕ್ಯವನ್ನು ಒಪ್ಪಬೇಕು. ವೇದ ವ್ಯತಿರಿಕ್ತ ವಾಕ್ಯಗಳಿಗೆ ಕರ್ತೃತ್ವ ಪ್ರಸಿದ್ಧಿ ಇದೆ. ವೇದಕ್ಕಾದರೋ ಕರ್ತೃತ್ವ ಪ್ರಸಿದ್ಧಿ ಇಲ್ಲ. ಆದ್ದರಿಂದ ಅಪೌರುಷೇಯ ವಾಕ್ಯ ವೇದವೇ. ಇದರಿಂದಲೇ ಧರ್ಮಾದಿಗಳು ಸಿದ್ಧಿಸುತ್ತವೆ.

ಅಪೌರುಷೇಯ ವೇದದ ಪ್ರಾಮಾಣ್ಯವನ್ನು ಒಪ್ಪಿದವರಲ್ಲಿ ಕೂಡ ಧರ್ಮಾದಿ ಸಾಮಾನ್ಯದ ಬಗ್ಗೆ ಏಕಾಭಿಪ್ರಾಯವಿದ್ದರೂ, ಧರ್ಮ ವಿಶೇಷಗಳ ಬಗ್ಗೆ ಭಿನ್ನಾಭಿಪ್ರಾಯ ಕಂಡು ಬರುತ್ತದೆ. ಇದಕ್ಕೆ ಅವರವರ ಬುದ್ಧಿ ದೋಷವೇ (ಸ್ವಮತಿ ದೋಷಃ) ಕಾರಣ.

**ವೇದ ಅಪೌರುಷೇಯವಲ್ಲ, ವೇದ ಸಕರ್ತೃಕನೆಂಬ ಪೂರ್ವಪಕ್ಷ**

ವೇದ ಅಪೌರುಷೇಯವೆಂದು ಒಪ್ಪಬೇಕಿಲ್ಲ, ವೇದಕ್ಕೂ ಒಬ್ಬ ಕರ್ತಾ ಇದ್ದಾನೆ ಎಂಬುದು ಅನುಮಾನ ಮತ್ತು ಆಗಮಗಳಿಂದ ಸಿದ್ಧಿಸುತ್ತದೆ. ಹೇಗೆಂದರೆ—

**ಅನುಮಾನಗಳು (i)** ''ವೇದವಾಕ್ಯಾನಿ ಪೌರುಷೇಯಾಣಿ, ವಾಕ್ಯತ್ವಾತ್ ಕಾಲಿದಾಸವಾಕ್ಯವತ್,'' ವೇದವಾಕ್ಯಗಳು ಪುರುಷಕೃತವಾಗಿವೆ, ವಾಕ್ಯವಾದ್ದರಿಂದ, ಕಾಲಿದಾಸನ ವಾಕ್ಯದಂತೆ.

(ii) ಅಯಂಕಾಲ : ವೇದವ್ಯತಿರಿಕ್ತ–ಇಧಾನೀಂತನತ್ವರಹಿತ–ಪೌರುಷೇಯವಾನ್–ಕಾಲತ್ವಾತ್ ಅನ್ಯಕಾಲವತ್– ಈ ವರ್ತಮಾನ ಕಾಲವು ವೇದ ಭಿನ್ನವಾದ ಈಗಿನ ಕಾಲದವಲ್ಲದ (ಲೌಕಿಕವಾಕ್ಯವಲ್ಲದ) ಪೌರುಷೇಯ (ವೇದ) ಗ್ರಂಥವುಳ್ಳದ್ದು. ಕಾಲವಾದ್ದರಿಂದ, ಇತರ ಕಾಲವಂತೆ [ಪೌರುಷೇಯಃ ವೇದಃ ಏವ–''ಸತ್ಯವ್ರತರು "ವೇದರೂಪ ಪೌರುಷೇಯವಾನ್''–ಯಾದವಾರ್ಯರು] ವೇದವ್ಯತಿರಿಕ್ತವೆಂಬುದು ಇದಾನೀಂತನತ್ವಕ್ಕೆ ವಿಶೇಷಣವಾಗಿದೆ. ಕಾಲವು ಪೌರುಷೇಯ ಎಂದರೆ, ಕಾಲವು ಪುರುಷಕೃತಗ್ರಂಥವುಳ್ಳದ್ದು ಎಂದು ಭಾವ.

(iii) ಆಕಾಶಃ ವೇದವ್ಯತಿರಿಕ್ತ– ಆಕಾಶನಿಷ್ಠತ್ವರಹಿತ ಪೌರುಷೇಯವಾನ್, ದ್ರವ್ಯತ್ವಾತ್ ತಂತುವತ್– ಆಕಾಶವು ವೇದಭಿನ್ನ– ಆಕಾಶಗತವಲ್ಲದ ವೇದರೂಪ ಪೌರುಷೇಯ ಶಬ್ದವುಳ್ಳದ್ದು, ದ್ರವ್ಯವಾದ್ದರಿಂದ, ಪಟದಲ್ಲಿರುವ ತಂತುಗಳಂತೆ, (ಇಲ್ಲಿ ವೇದವ್ಯತಿರಿಕ್ತವೆಂಬುದು ಆಕಾಶನಿಷ್ಠತ್ವಕ್ಕೆ ವಿಶೇಷಣವಾಗಿದೆ.)

(iv) ಶ್ರೋತ್ರಂ ವೇದವ್ಯತಿರಿಕ್ತ–ಶ್ರೋತ್ರಗ್ರಾಹ್ಯತ್ವರಹಿತ–ಪೌರುಷೇಯಗ್ರಾಹಕಂ, ಇಂದ್ರಿಯತ್ವಾತ್ ಚಕ್ಷುರ್ವತ್. ಶ್ರೋತ್ರೇಂದ್ರಿಯವು ವೇದಭಿನ್ನ–ಶ್ರೋತ್ರಗ್ರಾಹ್ಯವಲ್ಲದ ವೇದರೂಪ ಪೌರುಷೇಯ ಶಬ್ದಗ್ರಾಹಕವಾಗಿವೆ, ಇಂದ್ರಿಯ

ವಾದ್ದರಿಂದ, ರೂಪ ಗ್ರಾಹಕ ಕಣ್ಣಿನಂತೆ. (ಇಲ್ಲಿಯೂ ವೇದವ್ಯತಿರಿಕ್ತ ಶಬ್ದವು ಶ್ರೋತ್ರಗ್ರಾಹ್ಯತ್ವಕ್ಕೆ ವಿಶೇಷಣವಾಗಿದೆ.)

**ಆಗಮ :** ''ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸೀತ್, ನಾಹರಾಸೀತ್, ನ ರಾತ್ರಿ ರಾಸೀತ್–ಸ ತಪೋ ತಪ್ಯತಃ,"ತಸ್ಮಾತ್ ತಪಸ್ತೇಪಮಾನಾತ್ ಚತ್ವಾರೋ ವೇದಾಃ ಅಜಾಯಂತ." ಪ್ರಜಾಪತಿಯೊಬ್ಬನೇ ಈ ಸೃಷ್ಟಿಯ ಆದಿಯಲ್ಲಿ ಇದ್ದನು. ಹಗಲು ಇರಲಿಲ್ಲ, ರಾತ್ರಿ ಇರಲಿಲ್ಲ. ಅವನು ತಪಸ್ಸು ಮಾಡಿದನು. ತಪಸ್ಸು ಮಾಡುವ ಅವನಿಂದ ನಾಲ್ಕು ವೇದಗಳು ಹುಟ್ಟಿದವು.

ಹೀಗೆ ಯುಕ್ತಿ ಮತ್ತು ಆಗಮ ವಾಕ್ಯವಿರುವಾಗ, ಧರ್ಮಾದಿ ಸಿದ್ಧಿಗಾಗಿ ಒಂದು ಸಾಮಾನ್ಯ ಪ್ರಮಾಣ ಮತ್ತು ಪರಿಶೇಷಯುಕ್ತಿಯಿಂದ ವೇದದ ಅಪೌರುಷೇಯತ್ವವು ಅದು ಹೇಗೆ ಸಿದ್ಧಿಸುತ್ತದೆ ?

**ಸಿದ್ಧಾಂತ :** ನಿನ್ನ ವಾದ ಅಯುಕ್ತ ಹೇಗೆಂದರೆ—

(i) ನಿನ್ನ ಅನುಮಾನಗಳು ಅಪ್ರಯೋಜಕವಾಗಿವೆ. ಹೇತುಗಳನ್ನು ಒಪ್ಪಿದರೂ ಸಾಧ್ಯವು ಸಿದ್ಧಿಸುವದಿಲ್ಲ. ಇದರ ಪರಿಹಾರಕ್ಕಾಗಿ ನೀನು ಪ್ರತಿ ತರ್ಕ ಹೇಳಲಾರಿ.

ನಿನ್ನ ವ್ಯತಿರೇಕಿ ಅನುಮಾನಗಳಲ್ಲಿ ''ಪೌರುಷೇಯ'' ಪದದ ಬದಲಾಗಿ ಅಪೌರುಷೇಯ ಎಂಬ ಪದವಿಟ್ಟರೆ ಅವು ಪ್ರತಿಪಕ್ಷ ಅನುಮಾನಗಳಾಗುತ್ತವೆ. ಹಾಗೂ ಅವುಗಳಿಂದ ನಿನ್ನ ಅನುಮಾನಗಳಿಗೆ ವಿರೋಧ ಬರುತ್ತದೆ.

(ii) ವೇದ ಪೌರುಷೇಯ ಎಂದು ಒಪ್ಪಿದರೂ ಆ ಪುರುಷನು ಆಪ್ತನೆಂಬ ನಿಶ್ಚಯವಿಲ್ಲವಾದ್ದರಿಂದ ಅಂತಹ ವೇದಗಳಿಂದ ಧರ್ಮಾದಿಗಳ ನಿಶ್ಚಯವಾಗುವದಿಲ್ಲ.

**ಪೂರ್ವಪಕ್ಷಿ :** ವೇದಗಳು ಧರ್ಮಾದಿ ನಿಶ್ಚಾಯಕವಾಗಿವೆ. ಆದರೆ ಅವು ಅಪೌರುಷೇಯ ಎಂದು ಒಪ್ಪಬೇಕಿಲ್ಲ. ವೇದಗಳು ಈಶ್ವರ ಪ್ರಣೀತ ಎನ್ನುತ್ತೇನೆ ಮತ್ತು ಈಶ್ವರನಿಗೆ ಜ್ಞಾನವಿದೆ ಹಾಗೂ ಅವನಲ್ಲಿ ವಂಚನಾದಿಗಳಿಲ್ಲ ಎಂದು ಕೆಳಗಿನ ಅನುಮಾನಗಳಿಂದ ಸಾಧಿಸುತ್ತೇನೆ. ಆದ್ದರಿಂದ ವೇದ ಅಪೌರುಷೇಯವಲ್ಲ ಎಂದು ಒಪ್ಪಬೇಕಿಲ್ಲ.

**ಅನುಮಾನಗಳು :** (i) ''ಈಶ್ವರಃ ಪ್ರಮಾವಾನ್, ಪುರುಷತ್ವಾತ್ ಅಹಮಿವ'' ಈಶ್ವರನು ಜ್ಞಾನವುಳ್ಳವನು, ಪುರುಷನಾದ್ದರಿಂದ ನನ್ನಂತೆ,

(ii) ಈಶ್ವರಃ ನ ವಿಪ್ರಲಿಪ್ಸಾವಾನ್ ಈಶ್ವರತ್ವಾತ್–ನ ಯದೇವಂ ನ ತದೇವಂ, ಯಥಾ ಅಹಂ ಇತಿ। ಈಶ್ವರನು ವಂಚನೇಚ್ಛಾರಹಿತನು, ಈಶ್ವರನಾದ್ದರಿಂದ, ಯಾವನು ಈಶ್ವರನಾಗಿರುವದಿಲ್ಲವೋ ಅವನು ಹೀಗೆ ಎಂದರೆ ವಂಚನೇಚ್ಛಾರಹಿತನಲ್ಲ ನನ್ನಂತೆ. ಎಂದರೆ ನನ್ನಂತೆ ಮೋಸಗೊಳಿಸುವ ಇಚ್ಛೆಯುಳ್ಳವನು ಈಶ್ವರನಲ್ಲ.

**ಸಿದ್ಧಾಂತಿ :** (i) ಮೇಲಿನ ಅನುಮಾನಗಳಿಂದ ಈಶ್ವರನ ಆಪ್ತತ್ವವು ಸಿದ್ಧಿಸು

ತ್ರದೆಂದು ಹೇಳಲಿಕ್ಕಾಗದು. ಈಶ್ವರನು ಪುರುಷನಾದ್ದರಿಂದ ಪುರುಷರಲ್ಲಿ ಕಂಡು ಬರುವ ಅಜ್ಞಾನ, ಮೋಸ ಮೊದಲಾದವು ಈಶ್ವರನಲ್ಲಿವೆ ಎಂದು ಸುಲಭವಾಗಿ ಸಾಧಿಸಬಹುದು.

(ii) ನಿನ್ನ ಮೇಲಿನ ಒಂದನೇ ಅನುಮಾನಕ್ಕೆ ಸಿದ್ಧಸಾಧನವೆಂಬ ದೋಷ ಬರುತ್ತದೆ. ಇದಲ್ಲದೆ ಈಶ್ವರನು ಸಿದ್ಧಿಸುವಾಗ ಸರ್ವಜ್ಞನೆಂದೇ ಸಿದ್ಧಿಸುತ್ತಾನೆ. ಜ್ಞಾನವಿದ್ದ ಮಾತ್ರಕ್ಕೆ ಈಶ್ವರನು ಆಪ್ತನಾಗಲಾರನು. ಅನಾಪ್ತನಲ್ಲಿ ಜ್ಞಾನವೇ ಇಲ್ಲವೆಂದು ನಾವು ಹೇಳುವದಿಲ್ಲ; ಅವನಲ್ಲಿ ಒಮ್ಮೊಮ್ಮೆ ಯಥಾರ್ಥ ಜ್ಞಾನವೂ ಇರಬಹುದು. ಇದರಿಂದಾಗಿ ಈಶ್ವರನ ಆಪ್ತಿ ಸಿದ್ಧಿಸುವದಿಲ್ಲ.

(iii) ನಿನ್ನ ಎರಡನೇ ಅನುಮಾನಕ್ಕೆ ಬಾಧದೋಷ ಬರುತ್ತದೆ. ಹೇಗೆಂದರೆ, ಈಶ್ವರನಿಗೆ ವಂಚನೇಚ್ಛೆ ಇಲ್ಲ, ಯಥಾಸ್ಥಿತವಾದುದನ್ನೇ ತಿಳಿಸುವ ಇಚ್ಛೆ ಅವನಿಗೆ ಸದಾ ಇರುತ್ತದೆ ಎಂದು ನೀನು ಹೇಳುತ್ತೀ. ಆದರೆ ಈಶ್ವರನ ಅವತಾರಗಳಾದ ಬುದ್ಧ, ಋಷಭ ಮೊದಲಾದವರಲ್ಲಿ ವಂಚನೇಚ್ಛೆ ಕಂಡು ಬಂದಿದೆ.

(iv) ಈಶ್ವರನು ಆಪ್ತನೆಂದು ಒಪ್ಪಿದರೂ. ವೇದಗಳು ಈಶ್ವರ ಪ್ರಣೀತ ವೆಂಬಲ್ಲಿ ಪ್ರಮಾಣವಿಲ್ಲ. ಇದನ್ನು ಅನುಮಾನದಿಂದಲೂ ಸಾಧಿಸಲು ಬರುವದಿಲ್ಲ, ನಿನ್ನ ಅನುಮಾನ ಕೆಳಗಿನಂತಿದೆಯಷ್ಟೇ ? "ವೇದಃ ಈಶ್ವರಪ್ರಣೀತಃ ವೇದತ್ವಾತ್ ವ್ಯತಿರೇಕೇಣ ಗಗನವತ್"– ವೇದವು ಈಶ್ವರ ಪ್ರಣೀತ, ವೇದವಾದ್ದರಿಂದ. ಇದರಲ್ಲಿ ಆಕಾಶ ವ್ಯತಿರೇಕ ದೃಷ್ಟಾಂತ. ಇಲ್ಲಿ ನಾವು ನಿನ್ನ ಅನುಮಾನಕ್ಕೆ ಪ್ರತಿ ಯಾಗಿ, ''ವೇದವು ಈಶ್ವರ ಪ್ರಣೀತವಲ್ಲ, ವೇದವಾದ್ದರಿಂದ ಈಶ್ವರ ನಿರ್ಮಿತ ವಾದ ಅಂಕುರಾದಿಗಳು ವ್ಯತಿರೇಕ ದೃಷ್ಟಾಂತವೆಂದು ಹೇಳುತ್ತೇವೆ. ಇದಲ್ಲದೆ ವೇದತ್ವವೆಂಬ ಹೇತು ಸಪಕ್ಷವಾದ ಇತಿಹಾಸ ಪುರಾಣಗಳಲ್ಲಿ ಇಲ್ಲವಾದ್ದರಿಂದ ನಿನ್ನ ಅನುಮಾನಕ್ಕೆ ''ಅಸಾಧಾರಣ್ಯ" ದೋಷ ಬರುತ್ತದೆ.

(v) ವೇದಗಳು ಈಶ್ವರ ಪ್ರಣೀತವೆಂದು ನೀನು ಹೇಳುತ್ತೀ. ಸೃಷ್ಟಿಯ ಆದಿ ಯಲ್ಲಿ ಈಶ್ವರನು ಯಾವ ವೇದವನ್ನು ರಚಿಸಿ ಒಬ್ಬ ಶಿಷ್ಯನಿಗೆ ಉಪದೇಶಿಸಿದನೋ ಅದೇ ವೇದವನ್ನು ಇನ್ನೊಬ್ಬ ಶಿಷ್ಯನಿಗೆ ಉಪದೇಶಿಸಿದನೋ, ಅಥವಾ ಬೇರೆ ವೇದ ರಚಿಸಿ ಉಪದೇಶಿಸಿದನೋ ? ನೀನಾದರೋ ಅದೇ ವೇದವನ್ನು ಉಪದೇಶಿಸುತ್ತಾನೆ ಎಂದು ಹೇಳುತ್ತೀ. ಇದಕ್ಕೆ ನೀನು ಕೊಡುವ ಕಾರಣವೆಂದರೆ, ಈಶ್ವರನಿಗೆ ಹಿಂದಿನ ವೇದದ ವಿಸ್ಮರಣೆ ಇಲ್ಲ. ಮತ್ತು ಬೇರೊಂದು ವೇದ ರಚಿಸಿದ ಎಂಬುದಕ್ಕೆ ಜ್ಞಾಪಕ ಯುಕ್ತಿಗಳಿಲ್ಲ. (ವೇದಾಂತರ–ಕಲ್ಪಕಾಭಾವಾತ್.) ಆದರೆ ನಿನ್ನ ಈ ವಾದ ಅಸಮಂಜಸ. ಈಶ್ವರನು ಈ ಕಲ್ಪದ ಆದಿಯಲ್ಲಾದರೋ ವೇದ ರಚಿಸಿದ್ದೇಕೆ ? ಹಿಂದಿನ ಕಲ್ಪದಲ್ಲಿಯ ವೇದವನ್ನೇ ಈಗಲೂ ಉಪದೇಶಿಸಿದನೆಂದು ಹೇಳಬೇಕು.

ಹೀಗೆ ಹಿಂದೆ, ಅದರ ಹಿಂದೆ, ವೇದ ಇದ್ದಿತೆಂದು ಹೇಳುವ ಬದಲಾಗಿ ವೇದ ಅನಾದಿ ಎಂದು ಹೇಳುವದೇ ಲೇಸು.

ಇನ್ನು ನಮ್ಮ ಈ ವಾದಸರಣಿಯಿಂದ ಪುರುಣಾದಿಗಳೂ ಅಪೌರುಷೇಯ ವಾಗಲಿ, ಎಂದು ಆಪಾದಿಸಲು ಬರುವದಿಲ್ಲ. ಏಕೆಂದರೆ ಅವುಗಳಿಗೆ ಕರ್ತಾರರು ಇರುವದು ಪುರಾಣ ಪ್ರಸಿದ್ಧವಿದೆ. ಹಾಗಾದರೆ ಹಿಂದಿನ ಪುರಾಣಗಳು ಈಶ್ವರ ಬುದ್ಧಿಸ್ಥವಾದ್ದರಿಂದ ಅವುಗಳ ಪುನಃ ಪುನಃ ರಚನೆ ಏಕೆ ಎಂದರೆ, ಈಶ್ವರನಿಗೆ ಅನೇಕ ಪ್ರಯೋಜನಗಳಿರುತ್ತವೆ. ಸ್ಥೂಲಮತಿಗಳಾದ ನಮಗೆ ಅವು ತಿಳಿಯುವುದಿಲ್ಲ. ಕಾರ್ಯಕ್ಕೆ ಅನುಗುಣವಾದ ಪ್ರಯೋಜನಗಳನ್ನು ನಾವು ಕೇವಲ ಊಹಿಸುತ್ತೇವೆ. ಇಲ್ಲವಾದರೆ ಮುಳ್ಳಿನ ಬಿಳಿ ತುದಿಯನ್ನು ಅಲ್ಲಗಳೆಯುವ ಪ್ರಸಂಗ ಬರುತ್ತದೆ.

(vi) ತಪಸ್ಸನ್ನು ಮಾಡುವ ಪ್ರಜಾಪತಿಯಿಂದ ವೇದಗಳು ಹುಟ್ಟಿದವೆಂದು ನೀನು ಶ್ರುತಿಯನ್ನು ಉದಾಹರಿಸಿದ್ದೀ. ಆದರೆ ಇದಕ್ಕೆ ವಿರುದ್ಧವಾಗಿ ಅಗ್ನಿಯಿಂದ ಋಗ್ವೇದ, ವಾಯುವಿನಿಂದ ಯಜುರ್ವೇದ, ಸೂರ್ಯನಿಂದ ಸಾಮವೇದ, ಹುಟ್ಟಿದವೆಂದು ತಿಳಿದು ಬರುತ್ತದೆ. ಈ ವಿರೋಧವನ್ನು ಪರಿಹರಿಸಲು ಈ ಶ್ರುತಿ ಸಾವಕಾಶವೆಂದೂ, ಅಗ್ನಿ–ವಾಯು–ಸೂರ್ಯರು ಆ ಆ ವೇದಗಳ ಸಂಪ್ರದಾಯ ಪ್ರವರ್ತಕರು ಮಾತ್ರ ಎಂದು ಹೇಳಿದರೆ, ಪ್ರಜಾಪತಿಯಿಂದ ವೇದಗಳು ಹುಟ್ಟಿದವೆಂಬುದಾಗಿ ನೀನು ಉದಾಹರಿಸಿದ ಶ್ರುತಿಯೂ ಸಾವಕಾಶ,ಪ್ರಜಾಪತಿಯೂ (ಪರಮೇಶ್ವರನು) ಸಂಪ್ರದಾಯ ಪ್ರವರ್ತಕ ಹಾಗೂ "ವಾಚಾ ನಿರೂಪ ನಿತ್ಯಯಾ" ಎಂಬ ಶ್ರುತಿಯೊಂದೇ ನಿರವಕಾಶ ಹಾಗೂ ಈ ಶ್ರುತಿ, ವೇದ ನಿತ್ಯತ್ವವನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ ಎಂದು ನಾವು ಸಮಂಜಸವಾಗಿ ಹೇಳುತ್ತೇವೆ. ಇದಲ್ಲದೆ ಈ ಶ್ರುತಿಗೆ "ನ ಹಿ ಧರ್ಮಾದಿ ಸಿದ್ಧಿಃಸ್ಯಾತ್ ನಿತ್ಯವಾಕ್ಯಂ ವಿನಾ ಕ್ವಚಿತ್" ಎಂಬುದನ್ನು ಸಾಧಿಸಲು ಬಳಸಲಾದ ಸಾಮಾನ್ಯ ಅನುಮಾನ ಮತ್ತು ಪರಿಶೇಷ ಯುಕ್ತಿಗಳ ಬೆಂಬಲವೂ ಇದೆ.

## ವರ್ಣನಿತ್ಯತ್ವ

**ಪ್ರಬಲ ಆಕ್ಷೇಪ :** ವೇದವೆಂದರೆ ವರ್ಣಗಳ ಸಮೂಹ. ವರ್ಣಗಳಾದರೋ ಉಚ್ಚರಿಸಿದೊಡನೆ ಹುಟ್ಟಿ ಒಂದೆರಡು ಕ್ಷಣಗಳಲ್ಲಿ ನಾಶಹೊಂದುತ್ತದೆ. ಎಂದರೆ ವರ್ಣಗಳು ಅನಿತ್ಯ. ಆದ್ದರಿಂದ ಅನಿತ್ಯವರ್ಣಗಳ ಸಮೂಹವಾದ ವೇದವು ಅಪೌರುಷೇಯ ಮತ್ತು ನಿತ್ಯ ಹೇಗೆ ?

**ಪರಿಹಾರ :** (ಸಿದ್ಧಾಂತ) (i) ಅಭ್ಯುಪಗಮ್ಯವಾದ–'ಅಭ್ಯುಪಗಮ್ಯ ಸಮಾಧತ್ತೇ' ವರ್ಣಗಳು ಉಚ್ಚಾರದಿಂದ ಹುಟ್ಟುತ್ತವೆಯಾದ್ದರಿಂದ ಅನಿತ್ಯವೆಂದು ಒಪ್ಪಿದರೂ ವೇದ ನಿತ್ಯತ್ವಕ್ಕೆ ಬಾಧವಿಲ್ಲ. ವೇದವು ಆಕಾಶದಂತೆ ಕೂಟಸ್ಥನಿತ್ಯ, ಸನಾತನನಿತ್ಯ ಎಂದು ನಾವು ಹೇಳುವದೇ ಇಲ್ಲ. ಆದರೆ ನಿಯತವಾದ, ಒಂದೇ ಪ್ರಕಾರದ

ಕ್ರಮವುಳ್ಳದ್ದು, ಎಂದು ಹೇಳುತ್ತೇವೆ. ಇದರಲ್ಲಿ ವರ್ಣನಿತ್ಯತ್ವದ ಉಪಯೋಗವೇ ಇಲ್ಲ. (ನ ಹಿ ವಯಂ ವೇದಂ ಕೂಟಸ್ಥ ನಿತ್ಯತ್ವಂ ಬ್ರೂಮಃ ಕಿಂತು ನಿಯತೈಕ ಪ್ರಕಾರಮ್– ತತ್ರ ಕೋಃ ವರ್ಣನಿತ್ಯತ್ವಸ್ಯ ಉಪಯೋಗಃ) ವೇದಗಳ ಆನುಪೂರ್ವಿ ಕ್ರಮ ನಿತ್ಯವಾಗಿದೆ. ಪ್ರವಾಹತಃ ನಿತ್ಯವಾಗಿದೆ. ಆ ಕ್ರಮವು ಉಚ್ಚಾರದಿಂದ ಅಭಿವ್ಯಕ್ತವಾಗುತ್ತದೆ. ಗುರುಗಳು ಉಚ್ಚರಿಸುವದು ಹಾಗೂ ಅದನ್ನು ಅನುಸರಿಸಿ ಶಿಷ್ಯರು ಉಚ್ಚರಿಸುವದು, — ಹೀಗೆ ಗುರು ಶಿಷ್ಯರ ಅನಾದಿ ಪರಂಪರೆಯಿಂದ ಯಾವ ಬದಲಾವಣೆಯೂ ಇಲ್ಲದೆ ಒಂದೇ ರೀತಿಯಿಂದ ಒಂದೇ ಕ್ರಮದಿಂದ ಬಂದಿರುವ ವಾಕ್ಯಗಳ ಸಮುದಾಯವಾಗಿದೆ ವೇದ.

(ii) ವಸ್ತುತಃ ಹೇಳುವದಾದರೆ ವರ್ಣಗಳು ನಿತ್ಯ. ಅವು ಆಕಾಶದಂತೆ ಕೂಟಸ್ಥ ನಿತ್ಯ. ಅದೇ ಈ 'ಗಕಾರ' (ಸ ಏ ವಾಯಂ ಗಕಾರಃ), (ತದೇವ ಇದಂ ವಚನಂ) ಅದೇ ಈ ಮಾತು ಎಂದು ಪ್ರತಿಭಿಜ್ಞ ಬರುವದರಿಂದ ವರ್ಣಗಳು ನಿತ್ಯವೆಂದು ಹೇಳಲಾಗುತ್ತದೆ. ಪ್ರತ್ಯಭಿಜ್ಞೆ ಯಾವಾಗಲೂ ಅಭೇದ ಬೋಧಕ. (ಅತ್ಯಂತಾ ಭೇದಾವಗಾಹಿನೀ) ಆಗಿದೆ. ಅವನೇ ಈ ದೇವದತ್ತ ಎಂದರೆ, ಹಿಂದೆ ನೋಡಿದ ಮತ್ತು ಈಗ ನೋಡುವ ದೇವದತ್ತ ಒಂದೇ ಎಂದು ಭಾವ. **ಉಚ್ಚಾರದಿಂದ ಹುಟ್ಟುವದು ಧ್ವನಿ. ಆದ್ದರಿಂದ ಧ್ವನಿ ಅನಿತ್ಯ. ಧ್ವನಿಯಿಂದ ನಿತ್ಯ ವಾದ ವರ್ಣಗಳು ಅಭಿವ್ಯಕ್ತವಾಗುತ್ತವೆ.**

ಹೀಗೆ ವರ್ಣಗಳು ಕೂಟಸ್ಥ ನಿತ್ಯವಾಗಿವೆ. ಆದ್ದರಿಂದ ವರ್ಣಗಳ ಸಮು ದಾಯವಾದ ವೇದವೂ ನಿತ್ಯ. ತತ್ವಸಂಖ್ಯಾನದಲ್ಲಿ ಹೇಳಿದಂತೆ— ವೇದಗಳು ನಿತ್ಯ. ನಿತ್ಯ ಎಂದರೆ ನಿರ್ವಿಕಾರವಾಗಿ ಆದ್ಯಂತವಿಲ್ಲದ್ದು. ವೇದಗಳ ನಿತ್ಯತ್ವವು "ನಿತ್ಯಾವೇದಾಃ ಸಮಸ್ತಾಶ್ಚ ಶಾಶ್ವತಾಃ ವಿಷ್ಣುಬುದ್ಧಿಗಾಃ'' ಎಂಬ ಪ್ರಮಾಣ ದಿಂದ ಸಿದ್ಧವಾಗಿದೆ. (ನಿತ್ಯಾಃ ವೇದಾಃ ಎಂಬಲ್ಲಿ ನಿತ್ಯತ್ವ ಎಂದರೆ— ಕೂಟಸ್ಥ ತಯಾ ಆದ್ಯಂತ ಶೂನ್ಯತ್ವಂ ಎಂದು ಅಭಿಪ್ರಾಯ.) ಇಲ್ಲಿಯ ಅಭಿಪ್ರಾಯ ಹೀಗಿದೆ — ಸಕಲ ವೇದಗಳು ನಿತ್ಯ ಮತ್ತು ಶಾಶ್ವತ. ಎಂದರೆ ಒಂದೇ ತೆರನಾಗಿವೆ. ಇವು ವಿಷ್ಣು ಬುದ್ಧಿಸ್ಥವಾಗಿವೆ. ಆದ್ದರಿಂದ ಪ್ರಳಯ ಕಾಲದಲ್ಲಿಯೂ ಇವುಗಳಿಗೆ ವಿಚ್ಛೇದವಿಲ್ಲ. ಪ್ರತಿಯೊಂದು ಸೃಷ್ಟಿಯ ಆರಂಭದಲ್ಲಿ ವೇದಗಳು ವಿಷ್ಣುವಿನಿಂದ ಚತುರ್ಮುಖ ಬ್ರಹ್ಮನಿಗೆ ಒಂದೇ ರೀತಿಯಿಂದ, ಒಂದೇ ಕ್ರಮದಿಂದ, ವರ್ಣ ಕ್ರಮದ ವ್ಯತ್ಯಾಸವಿಲ್ಲದೆ ಉಚ್ಚರಿಸಲ್ಪಟ್ಟು ಉಪದೇಶಿಸಲ್ಪಡುತ್ತವೆ. ಇವುಗಳಲ್ಲಿ ಯಾವದೇ ವಿಧದ ವ್ಯತ್ಯಾಸ, ಬದಲಾವಣೆ ಇಲ್ಲ.

**ಇನ್ನೊಂದು ಆಕ್ಷೇಪ :** ವೇದಪ್ರಾಮಾಣ್ಯಸ್ಥಾಪನೆ ಗಜ–ಸ್ನಾನದಂತೆ ವ್ಯರ್ಥ. ಹೇಗೆಂದರೆ– ವೇದವು ಸಂಸ್ಕೃತವಾಗಿ ಎಂದರೆ ಲಕ್ಷಣಪೂರ್ವಕವಾಗಿ ಉಚ್ಚರಿಸಲ್ಪಟ್ಟು ಸಂಪ್ರದಾಯ ಪೂರ್ವಕವಾಗಿ ವ್ಯಾಖ್ಯಾನಿಸಲ್ಪಡುವದರಿಂದ ಬೋಧಕವಾಗಿದೆಯೋ?

ಅಥವಾ ಸಂಸ್ಕೃತವಾಗದೆ ಬೋಧಕವಾಗಿದೆಯೋ ? ಅಸಂಸ್ಕೃತವಾಗಿ ಎಂದು ಹೇಳಲಿಕ್ಕಾಗದು. ಹಾಗೆ ಹೇಳಿದರೆ ವೇದವು ಯಾವಾಗಲೂ ಅರ್ಥಬೋಧಕ ವಾಗುವ ಪ್ರಸಂಗ ಬರುತ್ತದೆ. ಇನ್ನು ಸಂಸ್ಕಾರ ಕೊಡುವವರಲ್ಲಿ ವಿಶ್ವಾಸ ವಿಡಲು ಕಾರಣವಿಲ್ಲವಾದ್ದರಿಂದ ನಿಮ್ಮ ವೇದಪ್ರಾಮಾಣ್ಯಸ್ಥಾಪನೆ ಗಜಸ್ನಾನ ದಂತೆ ವ್ಯರ್ಥ.

**ಪರಿಹಾರ** (ಸಿದ್ಧಾಂತ) : ನಿನ್ನ ವಾದ ಅಯುಕ್ತ. ಸಂಸ್ಕಾರಕರೆಂದರೆ ಉಚ್ಚಾರ ಮಾಡುವವರು ಮತ್ತು ವ್ಯಾಖ್ಯಾನ ಮಾಡುವವರು. ವೇದಪಾಠಕರಲ್ಲಿ ನಿರ್ದುಷ್ಟ ವಾದ ಪ್ರಾಮಾಣಿಕ ಸಂವಾದವಿದೆ. ಎಲ್ಲರೂ ಒಂದೇ ಬಗೆಯಿಂದ ವೇದ ಉಚ್ಚ ರಿಸುತ್ತಾರೆ. ಆದ್ದರಿಂದ ಇವರಲ್ಲಿ ವಿಶ್ವಾಸ ಯುಕ್ತವಾಗಿದೆ. ಇನ್ನು ವೇದ ವ್ಯಾಖ್ಯಾನಕಾರರು ಶಬ್ದಶಕ್ತಿ ಹಾಗೂ ಲೋಕ ಪ್ರಸಿದ್ಧಿ, ತಾತ್ಪರ್ಯ ತಿಳಿಯುವ ಉಪಾಯಗಳನ್ನನುಸರಿಸಿ ಅರ್ಥ ಮಾಡುವದರಿಂದ ಅವರಲ್ಲಿಯೂ ವಿಶ್ವಾಸ ಯುಕ್ತ ವಾಗಿದೆ. ಆದ್ದರಿಂದ ನಿನ್ನ ಆಕ್ಷೇಪ ಅಯುಕ್ತ.

**ಅಥರ್ವಾದಿನೋ ವಾಕ್ಯಂ ಅಪ್ರಯೋಜಕಮೇವ ಹಿ ।**
**ಧರ್ಮಾಭಾವೋಽಪಿ ನೋ ಕೇನ ಪ್ರತ್ಯಕ್ಷ್ಯಾವಗತೋ ಭವೇತ್ ॥೭೦॥**
**ಅತಃ ಸಂಶಯಸಂಪತ್ತೌ ವಾಕ್ಯಂ ಪ್ರತ್ಯಕ್ಷವತ್ಪ್ರಮಾ ॥೭೧॥**

**ಅವತರಣಿಕೆ** : ಧರ್ಮಾದಿ ಸಿದ್ಧಿಗೋಸ್ಕರ ಅಪೌರುಷೇಯ ವಾಕ್ಯ (ವೇದ) ಒಪ್ಪಬೇಕೆಂಬುದು ಧರ್ಮಾದಿಗಳನ್ನು ಒಪ್ಪಿದವರ ವಿಷಯದಲ್ಲಿ ಸರಿ ಹೋಗು ತ್ತದೆ. ಆದರೆ ಧರ್ಮಾದಿಗಳನ್ನೇ ಒಪ್ಪದ ಚಾರ್ವಾಕನ ಬಗ್ಗೆ ವೇದಾಪೌರು ಷೇಯತ್ವದ ಸಮರ್ಥನೆ ವ್ಯರ್ಥ ಎಂಬ ಆಕ್ಷೇಪವನ್ನು ಪರಿಹರಿಸುತ್ತಾರೆ. ಚಾರ್ವಾಕನಿಂದ ಧರ್ಮಾದಿಗಳನ್ನು ಒಪ್ಪಿಸಿ ನಂತರ ವೇದಾಪೌರುಷೇಯತ್ವವನ್ನು ಸ್ಥಾಪಿಸಲಾಗುತ್ತದೆ.

**ಅನುವಾದ** : ಧರ್ಮಾದಿಗಳನ್ನು ಒಪ್ಪದ ವಾದಿ ಚಾರ್ವಾಕನ ಶಾಸ್ತ್ರ, ವಾಕ್ಯ ರೂಪ ಶಾಸ್ತ್ರ, ಪ್ರಯೋಜನ ಮತ್ತು ವಿಷಯ ರಹಿತವಾಗಿದೆ. (ನಿಷ್ಪ್ರಯೋಜನಂ) ಧರ್ಮದ ಅಭಾವವೂ ಸಹ ಚಾರ್ವಾಕನಿಗೆ ಪ್ರತ್ಯಕ್ಷದಿಂದ ತಿಳಿಯಲಾರದು. ಆದ್ದರಿಂದ ಸಂಶಯ ಉಂಟಾದಾಗ ಅಪೌರುಷೇಯ ವೇದವಾಕ್ಯವು ಪ್ರತ್ಯಕ್ಷ ದಂತೆ ಪ್ರಮಾಣ.

**ವಿವರಣೆ** : ವೇದಗಳು ಅಪೌರುಷೇಯ. ಅವುಗಳಿಂದಲೇ ಎಲ್ಲ ದಾರ್ಶನಿಕರೂ ಒಪ್ಪಿದ ಧರ್ಮಾದಿಗಳು ಸಿದ್ಧಿಸುತ್ತವೆಯೆಂದು ನಿರೂಪಿಸಿದ್ದಾಯಿತು. ಆದರೆ ಧರ್ಮಾದಿ ಅತೀಂದ್ರಿಯ ಪದಾರ್ಥಗಳನ್ನೇ ಒಪ್ಪದ ಚಾರ್ವಾಕನ ವಿಷಯವಾಗಿ ವೇದಾಪೌರುಷೇಯತ್ವ ಸಮರ್ಥನೆ ವ್ಯರ್ಥ ಎಂದು ಶಂಕಿಸಕೂಡದು. ಅವನಿಂದ

ಧರ್ಮಾದಿಗಳನ್ನು ಒಪ್ಪಿಸುತ್ತೇವೆ. ಹಾಗೂ ನಂತರ ವೇದ ಅಪೌರುಷೇಯವೆಂದು ಸಾಧಿಸುತ್ತೇವೆ.

ಚಾರ್ವಾಕ ಎಂದರೆ ಸುಂದರವಾದ ಲೋಕಸಮ್ಮತವಾದ ಮಾತುಳ್ಳವ. ಚಾರುಃ, ಲೋಕಸಮ್ಮತಃ, ವಾಕಃ ವಾಕ್ಯಂ ಯಸ್ಯಸಃ ಅಥವಾ ಒಳ್ಳೆಯ ಬುದಿಯುಳ್ಳವ (ಚಾರ್ವೀ ಬುದ್ಧಿಃ ಯಸ್ಯಸಃ). ಚಾರ್ವಾಕನು ಬೃಹಸ್ಪತ್ಯಾಚಾರ್ಯರ ಶಿಷ್ಯ. ಪ್ರತ್ಯಕ್ಷವೊಂದೇ ಪ್ರಮಾಣವೆಂದು ಹೇಳುವ ಇವನ ಪ್ರಕಾರ, ಕಣ್ಣಿಗೆ ಕಾಣದ ಈಶ್ವರ, ಧರ್ಮಾಧರ್ಮ ಪುಣ್ಯ ಪಾಪ, ಸ್ವರ್ಗ ನರಕ ಮೊದಲಾದವು ಇಲ್ಲವೇ ಇಲ್ಲ. ಅತೀಂದ್ರಿಯ ವಸ್ತುಗಳನ್ನೇ ಇವನು ಒಪ್ಪುವದಿಲ್ಲ. ಧರ್ಮಾಭಾವವೇ ಇವನ ಶಾಸ್ತ್ರಕ್ಕೆ ವಿಷಯ. ನಿರಂಕುಶ ಸ್ವಚ್ಛಂದ ಕಾಮೋಪಭೋಗ ಮತ್ತು ವ್ರತ ನಿಯಮಗಳಿಂದಾಗುವ ಕ್ಲೇಶ ನಿವಾರಣೆ ಇವೇ ಇವನ ಶಾಸ್ತ್ರದ ಪ್ರಯೋಜನ. ಆದರೆ ಧರ್ಮಾದಿಗಳನ್ನು ಒಪ್ಪದೆ ಸ್ವಚ್ಛಂದ ವೃತ್ತಿಯಿಂದ ವರ್ತಿಸಿದರೆ ಜನರಿಗೆ ಹಿತ ಮತ್ತು ಉಪಕಾರವಾಗುವ ಬದಲು, ಉಪದ್ರವ, ಹಿಂಸೆ ಹೆಚ್ಚಿ, ಅಪಕಾರವೇ ಆಗುತ್ತದೆಂದು ವಿಷ್ಣುತತ್ವನಿರ್ಣಯದಲ್ಲಿ ನಿರೂಪಿಸಲಾಗಿದೆ. ಆದ್ದರಿಂದ ಅಧರ್ಮವನ್ನು ಪ್ರತಿಪಾದಿಸುವ ಅವನ ಶಾಸ್ತ್ರಕ್ಕೆ ವಿಷಯ ಮತ್ತು ಪ್ರಯೋಜನಗಳು ಇಲ್ಲವಾದ್ದರಿಂದ ಅವನ ಶಾಸ್ತ್ರವು ವ್ಯರ್ಥ. ಇದಲ್ಲದೆ ಧರ್ಮಾಭಾವವೇ ಶಾಸ್ತ್ರ ವಿಷಯವೆಂದು ಹೇಳುವ ಚಾರ್ವಾಕನಿಗೆ ಧರ್ಮಾದ್ಯಭಾವವೂ ಅವನು ಒಪ್ಪಿದ ಪ್ರತ್ಯಕ್ಷ ಪ್ರಮಾಣದಿಂದ ತಿಳಿಯುವದಿಲ್ಲ. ಈ ಎಲ್ಲ ವಿಷಯವನ್ನು ವಿವರವಾಗಿ "ಓಂ ಅಭ್ಯುಪಗಮೇಪ್ಯರ್ಥಾಭಾವಾತ್ ಓಂ'' (II-2-6) ಎಂಬ ಸೂತ್ರದಲ್ಲಿ ನಿರೂಪಿಸಲಾಗಿದೆ.

ಇನ್ನು ಘಟಾದ್ಯಭಾವವು ಪ್ರತ್ಯಕ್ಷದಿಂದ ತಿಳಿಯುವಂತೆ ಧರ್ಮಾದ್ಯಭಾವವು ಪ್ರತ್ಯಕ್ಷಕ್ಕೆ ಏಕೆ ಗೋಚರವಲ್ಲ ಎಂದರೆ, ಧರ್ಮಾದಿಗಳು ಅತೀಂದ್ರಿಯವಾದ್ದರಿಂದ ಪ್ರತ್ಯಕ್ಷಕ್ಕೆ ವಿಷಯವಲ್ಲ, ಕಣ್ಣಿಗೆ ರಸ ವಿಷಯವಾಗದಂತೆ ಎಂಬುದೇ ಉತ್ತರ. (ಅಯೋಗ್ಯತಯಾ ಚಕ್ಷುಷಾಂ ರಸ ಇವ).

(i) ಕಣ್ಣಿಗೆ ಕಾಣುವದಿಲ್ಲವಾದ್ದರಿಂದ ಧರ್ಮಾದಿಗಳು ಇಲ್ಲವೋ ?

(ii) ಅಥವಾ ಕಣ್ಣಿಗೆ ಕಾಣದಿದ್ದರೂ, ರಸನೇಂದ್ರಿಯಕ್ಕೆ ಗೋಚರವಾದ ರಸವಿರುವಂತೆ, ಧರ್ಮಾದಿಗಳು ಪ್ರತ್ಯಕ್ಷ ಗೋಚರವಾಗದಿದ್ದರೂ ಬೇರೊಂದು ಪ್ರಮಾಣಗೋಚರವಾಗಿವೆಯೋ ? ಎಂಬ ಸಂಶಯ ಉಂಟಾದಾಗ, ಆ ಸಂಶಯ ನಿವಾರಿಸುವದಕ್ಕಾಗಿ ವಾಕ್ಯವನ್ನು ಪ್ರಮಾಣವನ್ನಾಗಿ ಅಂಗೀಕರಿಸಬೇಕು. ಪುರುಷನ ವಾಕ್ಯದಲ್ಲಿ ಅವನ ಅಜ್ಞಾನಾದಿ ದೋಷಗಳು ನುಸುಳುವದರಿಂದ, ನಿರ್ದುಷ್ಟವಾದ ಅಪೌರುಷೇಯ ವೇದವನ್ನು ಒಪ್ಪಬೇಕು.

ಹೀಗೆ ವೇದವು ಅಪೌರುಷೇಯವಾದ್ದರಿಂದ ಅದರಲ್ಲಿ ಕರ್ತೃ ದೋಷಗಳಿಲ್ಲ. ಆದ್ದರಿಂದ ವೇದದ ಸ್ವತಃಪ್ರಾಮಾಣ್ಯವು ಸಿದ್ಧಿಸುತ್ತದೆ.

# ಅತಃ ಶಬ್ದದ ಐದನೆಯ ಅರ್ಥ

## (ಸಾಮಾನ್ಯ ಅನ್ವಿತಾಭಿಧಾನವಾದ)

### (ಶಬ್ದವು ಇತರ ಶಬ್ದಗಳ ಅರ್ಥದೊಡನೆ ಸಂಬದ್ಧವಾಗಿ ತನ್ನ ಅರ್ಥ ಹೇಳುವದರಿಂದ)

ಶಬ್ದವು ಯಥಾರ್ಥಜ್ಞಾನ ಹುಟ್ಟಿಸುವದರಿಂದ ಪ್ರಮಾಣವಾಗಿದೆ. ಮತ್ತು ಆ ಶಬ್ದಪ್ರಾಮಾಣ್ಯವು ಸ್ವತಃ ಎಂದರೆ ಸ್ವಾಭಾವಿಕ ಶಕ್ತಿಯಿಂದ ಇದೆ ಎಂದೂ ಪ್ರಾಮಾಣ್ಯಕ್ಕಾಗಿ ಅದು ಸಂವಾದಾದಿ ಇತರ ಪ್ರಮಾಣಗಳನ್ನು ಅಪೇಕ್ಷಿಸುವದಿಲ್ಲ ವೆಂದೂ ಈವರೆಗೆ, ವಿವರಿಸಲಾಯಿತು. ಈಗ ಶಬ್ದವು ಅರ್ಥವನ್ನು ಹೇಗೆ ತಿಳಿಸಿ ಕೊಡುತ್ತದೆ. ಅದು ಬೋಧಕೋಪಾಯ ಹೇಗೆ ಆಗಿದೆ ಎಂಬುದನ್ನು ಪರಾಮ ರ್ಶಿಸಲಾಗಿದೆ.

**ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ ಶಬ್ದಾನಾಂ ಅನುಭೂಯತೇ ॥೭೩॥**
**ಅತೋಽನ್ವಿತಾಭಿಧಾಯಿತ್ವಂ ಗೌರವಂ ಕಲ್ಪನೇಽನ್ಯಥಾ ॥೭೩ಅ॥**

**ಅವತರಣಿಕೆ :** ವೇದವು ಪ್ರಮಾಣವೇ ಅಲ್ಲ, ಏಕೆಂದರೆ ಅದು ಪದಾರ್ಥ ಇಲ್ಲವೆ ವಾಕ್ಯಾರ್ಥ ತಿಳಿಸುವದಿಲ್ಲ. ಜ್ಞಾನ ಬೋಧಕವಲ್ಲ ಎಂಬ ಪೂರ್ವಪಕ್ಷವನ್ನು ಇಲ್ಲಿ ನಿರಾಕರಿಸುತ್ತಾರೆ. ಶಬ್ದವು ಪ್ರಮಾಣ, ಏಕೆಂದರೆ ಅದು ಇತರ ಶಬ್ದಗಳ ಅರ್ಥದೊಡನೆ ಸಂಬದ್ಧವಾಗಿ ತನ್ನ ಅರ್ಥ ಹೇಳುತ್ತದೆ ಎಂಬುದಾಗಿ ಅತಃ ಶಬ್ದದ ಐದನೆಯ ಅರ್ಥವನ್ನು ವಿವೇಚಿಸುತ್ತಾರೆ.

**ಅನುವಾದ ;** ಶಬ್ದಗಳಿಗೆ (ಯೋಗ್ಯವಾದ) ಇತರ ಪದಗಳ ಅರ್ಥದೊಡನೆ ಸಂಬದ್ಧವಾಗಿ (ಅನ್ವಿತ) ತಮ್ಮ ಅರ್ಥ (ಸ್ವಾರ್ಥ) ಹೇಳುವ ಸಾಮರ್ಥ್ಯ ಇರು ವದರಿಂದ ಅವುಗಳಿಗೆ ಇತರ ಪದಾರ್ಥಗಳೊಡನೆ ಅನ್ವಿತವಾದ ಸ್ವಾರ್ಥದಲ್ಲಿ ಶಕ್ತಿ ಯನ್ನು (ಅನ್ವಿತಾಭಿಧಾನ) ಒಪ್ಪಬೇಕು. ಅನ್ಯಥಾ ಕಲ್ಪನೆ ಮಾಡಿದರೆ ಕಲ್ಪನಾ ಗೌರವ ದೋಷ ಬರುತ್ತದೆ.

**ವಿವರಣೆ : ಅನ್ವಿತಶಕ್ತಿ ನಿರೂಪಣೆ** (ಸಾಮಾನ್ಯಾನ್ವಿತಾಭಿಧಾನವಾದ)

**ಪೂರ್ವಪಕ್ಷ :** ವೇದವು ಜ್ಞಾನ ಹುಟ್ಟಿಸುವದಿಲ್ಲವಾದ್ದರಿಂದ ಪ್ರಮಾಣವಲ್ಲ. ನ ವೇದಃ ಪ್ರಮಾಣಂ (ಪ್ರಮಿತಿ ಜನಕಂ). ವೇದದಿಂದ ಪದಗಳ ಅರ್ಥಜ್ಞಾನ ಅಥವಾ ವಾಕ್ಯಾರ್ಥಜ್ಞಾನ ಆಗುವದೇ ಇಲ್ಲ. ಹೇಗೆಂದರೆ–

**ಪದಾರ್ಥ ಜ್ಞಾನ :** ಪದಾರ್ಥಜ್ಞಾನವೆಂದರೆ ಪದವಿಷಯಕ ಅರ್ಥಜ್ಞಾನ. ಶಬ್ದ ಶಬ್ದಾರ್ಥಗಳ ನಡುವಿನ ವಾಚ್ಯ ವಾಚಕ ಸಂಬಂಧ ಜ್ಞಾನ. ಸಂಬಂಧ ಜ್ಞಾನಕ್ಕೆ ಸಂಬಂಧಿಗಳ ಜ್ಞಾನ ಬೇಕು. ಉದಾ : ಘಟ ಶಬ್ದದ ಅರ್ಥಜ್ಞಾನವಾಗಲು ಘಟ

ಶಬ್ದ, ಘಟರೂಪ ವಸ್ತು ಇವೆರಡರ ಜ್ಞಾನ ಬೇಕು. ಇವೆರಡೂ ಮೊದಲೇ ವೃದ್ಧ ವ್ಯವಹಾರದಿಂದ ತಿಳಿದಿರುತ್ತವೆ. ಆದ್ದರಿಂದ ವೇದ ಬೋಧಕವಾಗಬೇಕಾದರೆ ಅದು ಮೊದಲೇ ಗೊತ್ತಿದ್ದುದರ ಜ್ಞಾನ ಮಾಡಿಕೊಡುತ್ತದೆ (ಜ್ಞಾತ ಜ್ಞಾಪಕ) ಎಂದು ಹೇಳಬೇಕು. ಆದರೆ ಇದು ದೋಷ. ಹೀಗಾಗಿ ವೇದವು ಸ್ವೀಕಾರಕ್ಕೆ ಅನರ್ಹ ವಾಗುತ್ತದೆ, (ಅನುಪಾದೇಯ).

**ವಾಕ್ಯಾರ್ಥ ಜ್ಞಾನ :** ವಾಕ್ಯಾರ್ಥ ಜ್ಞಾನವಾಗಲಿಕ್ಕೆ ವಾಕ್ಯದ ಘಟಕಗಳಾದ ವರ್ಣ–ಪದಗಳ, ಪ್ರಕೃತಿ ಪ್ರತ್ಯಯಗಳ ಹಾಗೂ ಅವುಗಳ ಸಂಬಂಧದ ಜ್ಞಾನ ಅವಶ್ಯ. ಇವುಗಳಿಂದ ಪ್ರತ್ಯೇಕವಾಗಿ ವಾಕ್ಯಾರ್ಥ ಜ್ಞಾನವಾಗಲಾರದು. ಏಕೆಂದರೆ ಹೀಗೆ ಆಗುವದಾದರೆ, ವಾಕ್ಯದ ಉಳಿದ ಭಾಗ ವ್ಯರ್ಥವಾಗುತ್ತದೆ. ಇನ್ನು ಇವು ಗಳ ಸಮುದಾಯದಿಂದಲೂ ವಾಕ್ಯಾರ್ಥ ಜ್ಞಾನವಾಗುತ್ತದೆಂದು ಹೇಳಲು ಬರುವ ದಿಲ್ಲ, ಏಕೆಂದರೆ ಬೇಗ ನಾಶ ಹೊಂದುವ (ಆಶುವಿನಾಶಿನಾಂ) ವರ್ಣಾದಿಗಳ ಸಮುದಾಯವೇ ಸಂಭವಿಸುವದಿಲ್ಲ. ಇದಲ್ಲದೆ ಮೇಲೆ ನಿರೂಪಿಸಿದಂತೆ ಪದಗಳ ಅರ್ಥಜ್ಞಾನವೇ ಆಗದಿರುವಾಗ ಪದ ಸಮೂಹವಾದ ವಾಕ್ಯದ ಅರ್ಥಜ್ಞಾನ ಸರ್ವಥಾ ಆಗಲಾರದು. ಎಂದರೆ ವೇದವು ವಾಕ್ಯಾರ್ಥಜ್ಞಾನ ಹುಟ್ಟಿಸುವ ಉಪಾಯವಲ್ಲ. ಇನ್ನು ಸಾಪೇಕ್ಷವಾದ ಕ್ರಿಯಾಪದ ಅಥವಾ ಕಾರಕಪದದಿಂದ ಯೋಗ್ಯವಾದ ಬೇರೊಂದು ಪದದ ಜ್ಞಾನವಾಗುತ್ತದೆಂದು ಹೇಳಿದರೆ, ಆವೆರಡು ಶಬ್ದಗಳ ಸಂಬಂಧ ಜ್ಞಾನ ಆಗುವದು ಹೇಗೆ ಎಂಬ ಪ್ರಶ್ನೆ ಉಳಿಯುತ್ತದೆ. ವಾಕ್ಯಾರ್ಥ ಜ್ಞಾನವಾಗಲಿಕ್ಕೆ ಕಾರಣವೇನು ಎಂಬುದನ್ನು ನಿರೂಪಿಸದಲೇ ವಾಕ್ಯಾರ್ಥ ಜ್ಞಾನ ಆಗಲಾರದು. ಹೀಗಾಗಿ ಆಕಾಂಕ್ಷಾ-ಯೋಗ್ಯತಾ–ಸನ್ನಿಧಿಗಳುಳ್ಳ ಪದಗಳೇ ವಾಕ್ಯಾರ್ಥವೆಂದು ಹೇಳಲು ಬರುವದಿಲ್ಲ. ಆದ್ದರಿಂದ ವಾಕ್ಯಾರ್ಥವಾಗಲು ನಿರ್ದಿಷ್ಟ ಕಾರಣ ಇಲ್ಲವಾದ್ದರಿಂದ, ವಾಕ್ಯಾರ್ಥ ಜ್ಞಾನವು ಆಕಸ್ಮಿಕವಾಗಿ ಅಥವಾ ಉತ್ಪ್ರೇಕ್ಷಾ ಮೂಲಕವಾಗಿ ಎಂದು ಹೇಳುವ ಪ್ರಸಂಗ ಬರುತ್ತದೆ. ಹೀಗೆ ವೇದ ಬೋಧಕ ವಲ್ಲವಾದ್ದರಿಂದ ಅದು ಪ್ರಮಾಣವಲ್ಲ,

**ಸಿದ್ಧಾಂತ :** ನಿನ್ನ ವಾದಸರಣಿ ತಪ್ಪು. ವೇದ ಬೋಧಕವಾಗಿದೆ.

(i) ವೇದ ಬೋಧಕವಾಗುವ ವಿಷಯದಲ್ಲಿ ಅಡಕವಾದ ಸಮಸ್ಯೆ ಹೀಗಿದೆ. ಬೇರೆ ಬೇರೆ ಪದಗಳಿಂದ ಬೇರೆ ಬೇರೆ ಅರ್ಥ ತಿಳಿಯಲ್ಪಟ್ಟರೂ ಆ ಆ ಅರ್ಥ ಗಳನ್ನು ಒಂದುಗೂಡಿಸಿ ಒಟ್ಟಾಭಿಪ್ರಾಯ ತಿಳಿಯುವದು ಹೇಗೆ ಎಂಬುದು. ಇದಕ್ಕೆ ನಮ್ಮ ಉತ್ತರ ಹೀಗಿದೆ.

ವೃದ್ಧರ ವ್ಯವಹಾರಾದಿಗಳಿಂದ ಶಬ್ದ ಶಕ್ತಿಯು ನಿರ್ಧಾರವಾಗುತ್ತದೆ. ವ್ಯವ ಹಾರದಲ್ಲಿ ಅನೇಕ ಶಬ್ದಗಳನ್ನು ಬಳಸಲಾಗುತ್ತದೆ. ಈ ಶಬ್ದಗಳು ತಮ್ಮ ಅರ್ಥ ವನ್ನು (ಸ್ವ–ಅರ್ಥವನ್ನು) ಇತರ ಪದಾರ್ಥಗಳೊಡನೆ ಸಂಬದ್ಧವಾಗಿಯೇ ತಿಳಿಸು

ವದು ಕಂಡು ಬರುತ್ತದೆ. ಅವು ಕೇವಲ ಸ್ವ-ಅರ್ಥವನ್ನು ಹೇಳುವದಿಲ್ಲ. ಉದಾ– ಗಾಂ ಆನಯ, ಗಾಂ ಬಧಾನ, ಗಾಂ ಪಶ್ಯ (ಆಕಳನ್ನು ತೆಗೆದುಕೊಂಡು ಬಾ, ಆಕಳನ್ನು ಕಟ್ಟು, ಆಕಳನ್ನು ನೋಡು) ಮೊದಲಾದ ವಾಕ್ಯಗಳಲ್ಲಿ ಗೋ ಶಬ್ದವು ಕೇವಲ ಆಕಳ ಎಂದು ಅರ್ಥವನ್ನು ತಿಳಿಸದೆ, ತರುವ–ಕಟ್ಟುವ–ನೋಡುವ ಕ್ರಿಯೆಗೆ ಸಂಬಂಧಿಸಿದ ಆಕಳ ಎಂಬ ಬೋಧಿಸುತ್ತದೆ. ಹೀಗೆ ಶಬ್ದಗಳ ವಾಚ್ಯ ವಾಚಕ ಸಂಬಂಧ ಜ್ಞಾನ ಆಗುವಾಗಲೇ (ವ್ಯುತ್ಪತ್ತಿ ಸಮಯೇ ಏವ) ಆ ಆ ಶಬ್ದಗಳ ಅರ್ಥಜ್ಞಾನವು ಇತರ ಪದಗಳ ಅರ್ಥಗಳೊಡನೆ ಸಂಬದ್ಧವಾಗಿ ಆಗುವದು ಕಂಡು ಬರುತ್ತದೆ. ಆದ್ದರಿಂದ ಶಬ್ದಗಳು ಇತರ ಪದಾರ್ಥಗಳೊಡನೆ ಸಂಬದ್ಧವಾಗಿ ತಮ್ಮ ಅರ್ಥವನ್ನು ಹೇಳುತ್ತವೆ ಎಂದು ಒಪ್ಪಬೇಕು. (ಅತಃ ಅನ್ವಿತ ಸ್ವಾರ್ಥಾಭಿಧಾಯಿತ್ವಂ ಶಬ್ದಾನಾಂ ಅಭ್ಯುಪೇಯಂ)ಎಂದರೆ ಶಬ್ದಗಳಿಗೆ ಇತರ ಪದಾರ್ಥಗಳೊಡನೆ ಅನ್ವಿತವಾದ ಸ್ವ ಅರ್ಥದಲ್ಲಿ ಶಕ್ತಿ ಇದೆ ಎಂಬುದು ಯುಕ್ತವೇ ಆಗಿದೆ. ಯೋಗ್ಯೇತರಾನ್ವಿತೇ ಸ್ವಾರ್ಥೇ ಶಕ್ತಿ ಗ್ರಹಣಾ ಉಪಪದ್ಯತೇ ಏವ.

ಈ ರೀತಿ ಶಬ್ದಶಕ್ತಿಯು "ಅನ್ವಿತ ಸ್ವಾರ್ಥದಲ್ಲಿ'' ಇರುವದರಿಂದ ವಾಕ್ಯಾರ್ಥ ಜ್ಞಾನವು ಪದಗಳ ಪೂರ್ವಾಪರ ಜೋಡಣೆಯಿಂದ ಸುಲಭವಾಗಿ ಆಗುತ್ತದೆ. ವಾಕ್ಯಾರ್ಥವೆಂದರೆ ಅಂಗಾಂಗಿಭಾವ. (ಗುಣ ಪ್ರಧಾನ ಭಾವ.) ಅಥವಾ ವಿಶೇಷಣ ವಿಶೇಷ್ಯ ಭಾವದಿಂದ ಪರಸ್ಪರ ಸಂಬದ್ಧವಾದ ಪದಗಳ ಅರ್ಥ. ಅಥವಾ ಆ ಆ ಪದಾರ್ಥಗಳ ಸಂಬಂಧಜ್ಞಾನ. ಹೀಗೆ ಪದಗಳು ಇತರ ಪದಾರ್ಥಗಳೊಡನೆ ಸಂಬದ್ಧವಾಗಿಯೇ ತಮ್ಮ ಅರ್ಥ ಹೇಳುವದರಿಂದ ವಾಕ್ಯಾರ್ಥಜ್ಞಾನವಾಗುತ್ತದೆ ಎಂದು ಹೇಳಿದಂತಾಯಿತು. ಆದ್ದರಿಂದ ವಾಕ್ಯಾರ್ಥ ಜ್ಞಾನವಾಗಲಿಕ್ಕೆ ನಿರ್ದಿಷ್ಟ ಕಾರಣವಿಲ್ಲವೆಂಬ ನಿನ್ನ ಹೇಳಿಕೆ ಅಯುಕ್ತ, ಹೀಗೆ ಶಬ್ದಗಳಿಗೆ "ಅನ್ವಿತಸ್ವಾರ್ಥಾಭಿಧಾಯಿತ್ವ" ಇರುವಂತೆ ಪ್ರಕೃತಿ ಪ್ರತ್ಯಯಗಳಿಗೂ ಅನ್ವಿತಾಭಿಧಾನ ಸಾಮರ್ಥ್ಯವಿದೆ,

**ಅನ್ವಿತ ವಾದದಲ್ಲಿಯ ಅವಾಂತರ ಭೇದಗಳು :**

(i) ಕೆಲವರು ಒಂದೇ ಪದ, ಮೊದಲನೆಯ ಪದ ಅಥವಾ ಪ್ರಧಾನ ಪದ,ಅನ್ವಿತ ಸ್ವ ಅರ್ಥವನ್ನು ಹೇಳುತ್ತದೆ ಮತ್ತು ಇತರ ಪದಗಳು ಆ ಅರ್ಥದ ಸಂಬಂಧಕ್ಕೆ ಪ್ರತಿಯೋಗಿ ಅಥವಾ ಸಂಬಂಧಿ ಪದಾರ್ಥಗಳನ್ನು ತೋರಿಸುತ್ತದೆ. (ಪ್ರತಿಯೋಗಿ ಸನ್ನಿಧಾಪನಂ) ಎಂದು ಹೇಳುತ್ತಾರೆ. ಅವರ ಈ ವಾದ ಅಯುಕ್ತ. ನಾವು ನಿರೂಪಿಸಿದಂತೆ ಎಲ್ಲ ಪದಗಳಿಗೆ ಅನ್ವಿತ ಸ್ವ ಅರ್ಥ ಬೋಧಕಶಕ್ತಿ ಇರುವಾಗ ಒಂದು ಪದಕ್ಕೇನೇ ಆ ಶಕ್ತಿ ಇದೆಯೆಂದು ಏಕೆ ಒಪ್ಪಬೇಕು ? ಇದಲ್ಲದೆ ಪದಗಳ ಪ್ರಾಥಮ್ಯವು, ಪ್ರಯೋಗಾನುಸಾರವಾಗಿ ಬದಲಾಗುತ್ತದೆ. ಉದಾ– "ಗಾಂ ಪಶ್ಯ'' ಅಥವಾ "ಪಶ್ಯ ಗಾಂ'' ಎನ್ನಬಹುದು. ಇದಲ್ಲದೆ ಪ್ರಧಾನ ಪದವನ್ನು ಗುರುತಿಸುವದು ಹೇಗೆ ?

(ii) ಇನ್ನು ಕೆಲವರು ಶಬ್ದಗಳಿಗೆ ಸಾಮಾನ್ಯ ಸಂಬಂಧವನ್ನು (ಸಾಮಾನ್ಯ–ಅನ್ವಿತಾಭಿಧಾನ) ಒಪ್ಪದೆ, ಅವುಗಳಿಗೆ ಅಕ್ಕ ಪಕ್ಕದ ಶಬ್ದಗಳೊಡನೆ ಮಾತ್ರ ವಿಶೇಷ ಸಂಬಂಧವಿದೆ ಎನ್ನುತ್ತಾರೆ. (ವಿಶೇಷಾನ್ವಯಃ). ಈ ವಾದ ಕೂಡ ಅಯುಕ್ತ. ಏಕೆಂದರೆ ಇದರಲ್ಲಿ ಅನ್ಯೋನ್ಯಾಶ್ರಯ ದೋಷ ಮತ್ತು ಇತರ ಶಬ್ದಗಳ ವೈಯರ್ಥ್ಯ ದೋಷ ಬರುವದೆಂದು ಇದೀಗ ತಾನೇ ಮುಂದೆ (ಅನುಪದಮೇವ) ನಿರೂಪಿಸಲಾಗುವದು.

**ಸಿದ್ಧಾಂತದ ಬಗ್ಗೆ ಆಕ್ಷೇಪ :**

(ಅ) **ವೈಯರ್ಥ್ಯ ಶಂಕಾ :** ಸಿದ್ಧಾಂತಿಗಳ ಪ್ರಕಾರ, "ಗಾಂ ಆನಯ" ಎಂಬಲ್ಲಿ ಗೋ ಶಬ್ದದ ಅರ್ಥ ಆನಯಯನಾನ್ವಿತ 'ಗೋ'. (ಆನಯನ ಕ್ರಿಯೆಗೆ ಸಂಬಂಧಿಸಿದ ಆಕಳು). ಆದ್ದರಿಂದ ಗೋ ಪದದ ಮುಂದೆ ಇರುವ ಆನಯನ ಪದ ವ್ಯರ್ಥ. ಇನ್ನು ಆನಯ ಪದವು ತನ್ನ ಅರ್ಥವನ್ನು ಹೇಳಿದ ನಂತರವೇ ಗೋ ಪದಕ್ಕೆ ಆನಯಾನಾನ್ವಿತ ಗೋ ಎಂದು ಅರ್ಥವಾಗುವದರಿಂದ ಆನಯ ಪದ ವ್ಯರ್ಥವಲ್ಲವೆಂದು ಸಮರ್ಥಿಸುವದು ಅನುಚಿತ. ಏಕೆಂದರೆ ಆನಯ ಪದವು ತರುವಿಕೆ ಎಂಬ ತನ್ನ ಅರ್ಥವನ್ನು ಮಾತ್ರ ಹೇಳುವದರಿಂದ ಅದಕ್ಕೆ ಅನ್ವಿತ ಅರ್ಥವಿಲ್ಲ ಎಂದು ಆಗುತ್ತದೆ. ಮತ್ತು ಆನಯ ಪದದಂತೆ ಉಳಿದ ಪದಗಳೂ ತಮ್ಮ ಅರ್ಥ ಮಾತ್ರ ಹೇಳುತ್ತವೆಂದೂ ಅವುಗಳಿಗೆ ಅನ್ವಿತಾರ್ಥವಿಲ್ಲವೆಂದೂ ಆಗುತ್ತದೆ. ಹೀಗಾಗಿ ಮುಖ್ಯವಾದ ಅನ್ವಿತಾಭಿಧಾನ ವಾದಕ್ಕೆ ತಿಲಾಂಜಲಿ ಕೊಟ್ಟಂತಾಗುತ್ತದೆ.

(ಬ) **ಅನ್ಯೋನ್ಯಾಶ್ರಯ ಶಂಕಾ :** 'ಗಾಂ ಆನಯ' ಎಂಬಲ್ಲಿ ಗೋ ಶಬ್ದದ ಅರ್ಥ ಆನಯಾನ್ವಿತ ಗೋ, ಈ ಅರ್ಥವು ಆನಯ ಶಬ್ದದ ಅರ್ಥವನ್ನು ಅವಲಂಬಿಸಿದೆ. ಏಕೆಂದರೆ ಆನಯ ಶಬ್ದವು ತನ್ನ ಅರ್ಥವನ್ನು ಹೇಳುವವರೆಗೆ ಗೋ ಶಬ್ದದ ಅನ್ವಿತಾರ್ಥ ಆಗುವದಿಲ್ಲ. ಇದರಂತೆಯೇ ಆನಯ ಶಬ್ದದ ಅರ್ಥ ಎಂದರೆ 'ಗವಾನ್ವಿತ ಆನಯನ'ವು ಗೋ ಶಬ್ದದ ಅರ್ಥವನ್ನು ಅವಲಂಬಿಸಿದೆ. ಹೀಗೆ ಗೋ ಶಬ್ದದ ಅರ್ಥವು ಆನಯನ ಶಬ್ದವನ್ನೂ, ಆನಯನ ಶಬ್ದದ ಅರ್ಥವು ಗೋ ಶಬ್ದವನ್ನೂ ಅವಲಂಬಿಸಿರುವದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಈ ದೋಷವನ್ನು ಪರಿಹರಿಸಲು ಶಬ್ದಗಳು ತಮ್ಮ ಅರ್ಥವನ್ನೇ ಮೊದಲು ಹೇಳುತ್ತವೆ. ನಂತರ ಆ ಶಬ್ದಗಳೇ ಪರಸ್ಪರ ಅನ್ವಿತವಾದ ಸ್ವ–ಅರ್ಥವನ್ನು ಹೇಳುತ್ತವೆ ಎಂದು ಹೇಳಬೇಕು. ಆದರೆ ಇದು ಅಯುಕ್ತ. ಏಕೆಂದರೆ ಪದಗಳಿಗೆ ಎರಡು ಶಕ್ತಿಗಳನ್ನು (ಸ್ವಾರ್ಥ, ಅನ್ವಿತಸ್ವಾರ್ಥ) ಕಲ್ಪಿಸುವಲ್ಲಿ ಪ್ರಮಾಣವಿಲ್ಲ. ಅಲ್ಲದೆ ಅಚೇತನವಾದ ಪದಗಳಿಗೆ "ವಿರಮ್ಯ ವ್ಯಾಪಾರ" ಎಂದರೆ ತಡೆದು ತಡೆದು ಅರ್ಥ ಪ್ರತಿಪಾದಿಸುವದು ಕೂಡುವದಿಲ್ಲ.

**ಪರಿಹಾರ :** (i) ಮೇಲಿನ ಎರಡು ದೋಷ ಪರಿಹರಿಸಲು ವಿಶೇಷ ಅನ್ವಿತಾಭಿಧಾನವಾದಿಗಳು ಹೇಳುವದೇನೆಂದರೆ ಪದಗಳು ಸಾಹಚರ್ಯ ಮೂಲಕ ಮೊದಲು

ಅನ್ವಿತವಾಗದ ತಮ್ಮ ಅರ್ಥಗಳನ್ನು ಸ್ಮರಣೆಗೆ ತಂದು ಕೊಡುತ್ತವೆ. ನಂತರ ಪರಸ್ಪರ ಸ್ಮರಣೆಗೆ ಬಂದ ಅನ್ವಿತ ಸ್ವ–ಅರ್ಥವನ್ನು ಹೇಳುತ್ತವೆ. ಆದರೆ ಈ ಪರಿಹಾರ ಅಸಮಂಜಸ. ಏಕೆಂದರೆ ಪದಗಳಿಗೆ ಯಾವಾಗಲೂ ಅನ್ವಿತ ಸ್ವಾರ್ಥಗಳೊಡನೆ ಸಾಹಚರ್ಯವಿರುತ್ತದೆ. ಕೇವಲ ಸ್ವಾರ್ಥಗಳೊಡನೆ ಅಲ್ಲ. ಆದ್ದರಿಂದ ಪದಗಳು ಕೇವಲ ತಮ್ಮ ಅರ್ಥಗಳನ್ನು ಸ್ಮರಣೆಗೆ ತಂದು ಕೊಡಲಾರವು. ಇದಲ್ಲದೆ ಲೋಕದಲ್ಲಿ ಶಬ್ದಗಳ ವ್ಯವಹಾರವೂ ಕೂಡ ಅನ್ವಿತ ಸ್ವಾರ್ಥದಲ್ಲಿಯೇ ಇದೆ. ಉದಾ: ಗಾಂ ಪಶ್ಯ, ಪ್ರಾಸಾದಂ ಪಶ್ಯ; (ಆಕಳನ್ನು ನೋಡು, ಅರಮನೆಯನ್ನು ನೋಡು) ಆದ್ದರಿಂದ ಶಬ್ದಗಳಿಗೆ ಅನ್ವಿತ ಸ್ವಾರ್ಥವನ್ನು ಹೇಳುವದು ಉಚಿತ.

(ii) **ನಿಜವಾದ ಪರಿಹಾರ :** ಸಿದ್ಧಾಂತ ಹೀಗಿದೆ— (ವಯಂ ತು ಬ್ರೂಮಃ) ನಾವು ಸಾಮಾನ್ಯ ಅನ್ವಿತಾಭಿಧಾನ ವಾದಿಗಳು. ವಿಶೇಷ ಅನ್ವಿತಾಭಿಧಾನವಾದಿಗಳ ದೋಷವು ನಮಗೆ ಬರುವದಿಲ್ಲ. ಪದಗಳು ಪ್ರತ್ಯೇಕವಾಗಿ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿಗಳುಳ್ಳ ಇತರ ಪದಾರ್ಥಗಳಿಂದ ಅನ್ವಿತವಾದ ತಮ್ಮ ಅರ್ಥವನ್ನು ಹೇಳಲು ಸಮರ್ಥವಾಗಿವೆ. ಇದಕ್ಕಾಗಿ ಉಳಿದ ಪದಾರ್ಥಗಳ ಅಪೇಕ್ಷೆ ಇಲ್ಲ. ಇದರಿಂದಾಗಿ ಅನ್ಯೋನ್ಯಾಶ್ರಯ ದೋಷವಿಲ್ಲ. ಅನ್ವಿತ ಸ್ವಾರ್ಥ ಹೇಳುವ ಪದಗಳ ಜೋಡಣೆಯಿಂದ (ಪದಾಂತರ–ಸಮಭಿಹಾರಾತ್) ವಾಕ್ಯಾರ್ಥ ಜ್ಞಾನವಾಗುತ್ತದೆ ಹೀಗೆ ವಿಶೇಷಾನ್ವಯ ತಿಳಿಸಲು ಮತ್ತು ತನ್ಮೂಲಕ ವಾಕ್ಯಾರ್ಥ ಜ್ಞಾನವಾಗಲು ಉಳಿದ ಪದಗಳ ಉಪಯೋಗವಿದೆ. ಇದರಿಂದ ಇತರ ಪದಗಳು ವ್ಯರ್ಥವಲ್ಲ. ಇನ್ನು ಇದರ ಬದಲಾಗಿ ಪದಗಳಿಗೆ ಸ್ವಾರ್ಥಮಾತ್ರ ತಿಳಿಸುವ ಶಕ್ತಿ ಇದೆಯೆಂದೂ, ಪದಗಳ ಜೋಡಣೆಯಿಂದ ವಿಶೇಷವಾದ ಪದಾರ್ಥ ಸಂಬಂಧವುಳ್ಳ ವಾಕ್ಯಾರ್ಥ ಜ್ಞಾನವಾಗುತ್ತದೆಯೆಂದು ಹೇಳುವದು ಅನುಚಿತ. ಏಕೆಂದರೆ ವಾಚ್ಯ ವಾಚಕ ಸಂಬಂಧ ಗ್ರಹಿಸುವಾಗಲೇ ಸಾಮಾನ್ಯ ಅನ್ವಿತಾರ್ಥದಲ್ಲಿಯೇ ಪದದ ಶಕ್ತಿಯ ಜ್ಞಾನವಾಗುತ್ತದೆ. ನಂತರ ಪದಗಳ ಜೋಡಣೆಯು ಹೊಸದಾಗಿ ವಿಶೇಷಾನ್ವಯ ಬೋಧನ ಶಕ್ತಿಯನ್ನು ತಂದು ಕೊಡುವದಿಲ್ಲ. ನಮ್ಮ ಈ ವಾದದಲ್ಲಿ ಪುನರುಕ್ತಿ ದೋಷವನ್ನು ಶಂಕಿಸಕೂಡದು. ಏಕೆಂದರೆ "ಆನಯನಾನ್ವಿತ ಗೋ ಮತ್ತು ಗವಾನ್ವಿತ ಆನಯನ"ಗಳಲ್ಲಿ ಅನ್ವಯ ಭೇದವಿರುವದರಿಂದ ಪುನರುಕ್ತಿ ದೋಷವಿಲ್ಲ. ಆರ್ಥಿಕ ಪುನರುಕ್ತಿಯಂತೂ ದೋಷವೇ ಅಲ್ಲ. ಏಕೆಂದರೆ ಆರ್ಥಿಕ ಅರ್ಥವು (Implied Meaning) ವಿಧಿ ವಾಕ್ಯದ ಅರ್ಥವಲ್ಲ. (ಅರ್ಥಾದರ್ಥಃ ನ ಚೋದನಾರ್ಥಃ) ಇದಲ್ಲದೆ ಮೇಲೆ ನಿರೂಪಿಸಿದಂತೆ ವಿಶೇಷ ಅನ್ವಯಕ್ಕಾಗಿ ಉಳಿದ ಪದಗಳು ಅವಶ್ಯವಿರುವದರಿಂದ ಆ ಪದಗಳು ವ್ಯರ್ಥವಲ್ಲ.

ಒಟ್ಟಿನಲ್ಲಿ ಸಿದ್ಧಾಂತದ ಪ್ರಕಾರ ವಾಕ್ಯಾರ್ಥ ಗ್ರಹಣದಲ್ಲಿ ಸಾಮಾನ್ಯ ಅನ್ವಯ, ವಿಶೇಷಾನ್ವಯ ಎಂಬ ಎರಡು ಹಂತಗಳಿವೆ. ಮೊದಲನೆಯ ಹಂತದಲ್ಲಿ ಶಬ್ದ

ಗಳು ತಮ್ಮ ಅರ್ಥವನ್ನು ಇತರ ಯೋಗ್ಯ ಶಬ್ದಾರ್ಥಗಳೊಡನೆ ಸಂಬದ್ಧವಾಗಿಯೇ ತಿಳಿಸುತ್ತವೆ. ನಂತರ ಎರಡನೆಯ ಹಂತದಲ್ಲಿ, ಪದಗಳ ಜೋಡಣೆಯಿಂದ, ಪದಗಳ ಅಂಗಾಂಗಿ ಭಾವ ಅಥವಾ ವಿಶೇಷಣ ವಿಶೇಷ್ಯಭಾವ ತಿಳಿಯುತ್ತದೆ. ಮತ್ತು ವಾಕ್ಯಾರ್ಥ ಜ್ಞಾನವಾಗುತ್ತದೆ.

(2) ಮೇಲೆ ನಿರೂಪಿಸಿದ ಸಾಮಾನ್ಯ ಅನ್ವಿತಾಭಿಧಾನ ಬಿಟ್ಟು ಶಬ್ದಶಕ್ತಿಯನ್ನು ಬೇರೆ ರೀತಿಯಿಂದ ಕಲ್ಪಿಸಿದರೆ ಕಲ್ಪನಾಗೌರವ ದೋಷ ಬರುತ್ತದೆ. (ಗೌರವಂ ಕಲ್ಪನೇಽನ್ಯಥಾ) ಉದಾಹರಣಾರ್ಥವಾಗಿ ವರ್ಣ–ಪದ ವಿಭಾಗವಿಲ್ಲದ ನಿರವಯುವ (ಅಖಂಡ) ವಾಕ್ಯವೇ, ವಾಕ್ಯರೂಪ ಸ್ಫೋಟವೇ ವಾಕ್ಯಾರ್ಥ ಪ್ರತಿಪಾದಕವೆಂದು ಹೇಳಿದರೆ ಕಲ್ಪನಾಗೌರವ ದೋಷ ಬರುತ್ತದೆ. ಹೇಗೆಂದರೆ, ಮೊದಲು ವರ್ಣ–ಪದ ರಹಿತವಾದ ನಿರವಯವ (ಅಖಂಡ) ವಾಕ್ಯ ಒಂದಿದೆ ಎಂಬಲ್ಲಿಯೇ ಪ್ರಮಾಣವಿಲ್ಲ. ಹೀಗೆ ಅಪ್ರಾಮಾಣಿಕ ಅಖಂಡ ವಾಕ್ಯವನ್ನು ಕಲ್ಪಿಸಿ ಅದಕ್ಕೆ ವಾಕ್ಯಾರ್ಥ ಬೋಧಕ ಶಕ್ತಿ ಇದೆ ಎಂಬುದೂ ಕೂಡ ಕಲ್ಪನೆಯೇ. ಈ ರೀತಿ ಕಲ್ಪನಾಗೌರವ ದೋಷ ಬರುತ್ತದೆ.

**ವಾಕ್ಯಾರ್ಥ ಬೋಧದ ಬಗ್ಗೆ ಇರುವ ಇತರ ವಾದಗಳು.**

ಶಬ್ದಗಳಿಗೆ ಯೋಗ್ಯ ಇತರ ಶಬ್ದಗಳೊಡನೆ ಸಂಬದ್ಧವಾದ ತಮ್ಮ ಅರ್ಥ ಹೇಳುವ ಶಕ್ತಿ (ಅನ್ವಿತ ಸ್ವಾರ್ಥ) ಇರುವುದರಿಂದ ಪದಗಳ ಯೋಗ್ಯ ಜೋಡಣೆಯಿಂದ ವಾಕ್ಯಾರ್ಥ ಜ್ಞಾನವಾಗುತ್ತವೆ, ಎಂದು ಈ ಮೊದಲು ನಮ್ಮ ಸಾಮಾನ್ಯ ಅನ್ವಿತಾಭಿಧಾನವಾದ"ವನ್ನು ವಿವೇಚಿಸಿದ್ದಾಯಿತು. ನಮ್ಮ ಪ್ರಕ್ರಿಯೆಯಲ್ಲದೆ ವಾಕ್ಯಾರ್ಥ ಬೋಧದ ಬಗ್ಗೆ ಬೇರೆ ಕೆಲವು ವಾದಗಳೂ ಇವೆ.ಆದರೆ ಈ ವಾದಗಳು ಅಸಮಂಜಸ. ಇವುಗಳನ್ನು ಅಂಗೀಕರಿಸಿದರೆ ಕಲ್ಪನಾಗೌರವ ದೋಷ ಬರುತ್ತದೆಂದು ಶ್ರೀಮದಾಚಾರ್ಯರು ಸಾಮಾನ್ಯವಾಗಿ "ಗೌರವಂ ಕಲ್ಪನೇಽನ್ಯಥಾ" ಎಂದು ನಿರೂಪಿಸಿದ್ದಾರೆ. ಈಗ ಆ ಬೇರೆ ವಾದಗಳಾವು, ಅವುಗಳಲ್ಲಿಯ ದೋಷಗಳಾವು ಎಂಬುದರ ಅತಿಸ್ಥೂಲ ವಿವರಣೆ ಕೆಳಗೆ ಇದೆ. ವಿವರಗಳಿಗಾಗಿ ಮೂಲಗ್ರಂಥ ನೋಡಬೇಕು.

(1) **ಸ್ಫೋಟವಾದ** (ವೈಯಾಕರಣರ ಮತ) — ಸ್ಫೋಟದಲ್ಲಿ ವರ್ಣ–ಪದ–ವಾಕ್ಯ–ಅಖಂಡ ಪದ–ಅಖಂಡ ವಾಕ್ಯವೆಂಬ ಐದು ವ್ಯಕ್ತಿಸ್ಫೋಟ ಮತ್ತು ವರ್ಣ–ಪದ–ವಾಕ್ಯವೆಂಬ ಮೂರು ಜಾತಿ ಸ್ಫೋಟ, ಹೀಗೆ ಒಟ್ಟು 8 (ಎಂಟು) ಅವಾಂತರ ಭೇದಗಳಿವೆ. ಈ ಎಂಟರಲ್ಲಿ ವಾಕ್ಯಾರ್ಥವನ್ನು ತಿಳಿಯಲು ಮುಖ್ಯವಾದುದು ಅಖಂಡ ವಾಕ್ಯಸ್ಫೋಟ ಮತ್ತು ಆನುಷಂಗಿಕವಾಗಿ ಅಖಂಡ ಪದಸ್ಫೋಟ. ಧ್ವನಿ ಕೇಳಿದೊಡನೆ ಹೊಳೆಯುವ ವಿಚಾರ ಅಥವಾ ಮನಸ್ಸಿನಲ್ಲಿ ಮೂಡುವ ವಿಚಾರ ಅಥವಾ ತೋರುವ ಅರ್ಥಕ್ಕೆ ಸ್ಫೋಟ ಎನ್ನುವರು. "ಸ್ಫುಟ್ಯತೇ ವ್ಯಜ್ಯತೇ ಅರ್ಥಃ ಇತಿ ಸ್ಫೋಟಃ — ಅಥವಾ ಸ್ಫುಟಯತಿ, ಸ್ಫುಟೀಭವತಿ ಅರ್ಥಃ ಇತಿ ಸ್ಫೋಟಃ.

**ಪದಸ್ಫೋಟ :** ವರ್ಣಗಳಿಂದಾಗಲಿ, ವರ್ಣ ಸಮೂಹದಿಂದಾಗಲಿ, ತಿಳಿಯದ, ವರ್ಣಭಿನ್ನವಾದ, ಆದರೆ ವರ್ಣಗಳಿಂದ ಅಭಿವ್ಯಕ್ತವಾಗುವ, ಅರ್ಥ ತಿಳಿಸುವ ನಿತ್ಯವಾದ ಅಖಂಡ ಶಬ್ದವೇ ಸ್ಫೋಟ. "ವರ್ಣಾತಿರಿಕ್ತಃ ವರ್ಣಾಭಿವ್ಯಂಗ್ಯಃ ಅರ್ಥ ಪ್ರತ್ಯಾಯಕಃ ನಿತ್ಯಃ ಶಬ್ದಃ ಸ್ಫೋಟಃ ಪದಸ್ಫೋಟಃ.

**ವಾಕ್ಯಸ್ಫೋಟ :** ಕೇವಲ ಪದಗಳಿಂದ ತಿಳಿಯದ, ಪದಸಮುದಾಯದೀದ ಅಭಿವ್ಯಕ್ತವಾಗುವ ವಾಕ್ಯಭಿನ್ನವಾದ, ವಾಕ್ಯಾರ್ಥ ತಿಳಿಸುವ ಅಖಂಡವಾಕ್ಯವೇ ವಾಕ್ಯಸ್ಫೋಟ. ಎಂದರೆ ವರ್ಣ–ಪದ ಭೇದವಿಲ್ಲದ ವಾಕ್ಯಾರ್ಥ ತಿಳಿಸುವ ಅಖಂಡ ವಾಕ್ಯವೇ ವಾಕ್ಯಸ್ಫೋಟ.

ಸ್ಫೋಟವಾದದಲ್ಲಿ ಕಲ್ಪನಾ ಗೌರವ ದೋಷ ಬರುತ್ತದೆ. ಪ್ರಮಾಣವಿಲ್ಲದ ಸ್ಫೋಟದ ಕಲ್ಪನೆ, ಆ ಸ್ಫೋಟ ಅಖಂಡ (ನಿರವಯವ) ವಾಕ್ಯ ಮತ್ತು ವರ್ಣ ಪದ ವಿಭಾಗವಿಲ್ಲದ್ದು ಎಂದು ಕಲ್ಪಿಸುವದು ಮತ್ತು(ಕಲ್ಪಿತ)ಸ್ಫೋಟಕ್ಕೆ ವಾಕ್ಯಾರ್ಥ ಬೋಧಕ ಶಕ್ತಿ ಇದೆ ಎಂದು ಕಲ್ಪಿಸುವದು ಇವೇ ಕಲ್ಪನಾ ಗೌರವ ದೋಷಗಳು. ಈ ದೋಷ ಪರಿಹರಿಸಲು ಸ್ಫೋಟವಾದಿಗಳು ಹೇಳುವ ಯುಕ್ತಿಗಳು ಅಸಮಂಜಸವಾಗಿವೆ. ಆದ್ದರಿಂದ ಸ್ಫೋಟವಾದ ಅಗ್ರಾಹ್ಯ.

(2) ಸ್ಮರ್ಯಮಾಣ ವರ್ಣಮಾಲಾ (ಕೆಲವು ಮೀಮಾಂಸಕರ ಮತ) ಸ್ಮರಣೆಗೆ ಬಂದ ವರ್ಣ ಸಮೂಹವೇ (ವರ್ಣಮಾಲೆಯ) ವಾಕ್ಯಾರ್ಥ ಜ್ಞಾನವನ್ನು ಹುಟ್ಟಿಸುತ್ತದೆಂದು ಇವರು ಹೇಳುತ್ತಾರೆ. ಆದರೆ ಈ ವಾದ ಅಯುಕ್ತ. ಏಕೆಂದರೆ ಇಲ್ಲಿಯೂ ಕಲ್ಪನಾಗೌರವ ದೋಷವಿದೆ. ವಾಕ್ಯಾರ್ಥ ಜ್ಞಾನವಾಗಲು ಮುಖ್ಯವಾಗಿ ಶಬ್ದಗಳ ವ್ಯುತ್ಪತ್ತಿಜ್ಞಾನ (ವಾಚ್ಯ ವಾಚಕ ಸಂಬಂಧ ಜ್ಞಾನ) ಅವಶ್ಯ. ಶಬ್ದಗಳಿಂದಲೇ ಜ್ಞಾನವಾಗುವಾಗ ವರ್ಣಮಾಲೆಯ ಕಲ್ಪನೆ ಏಕೆ ? ಇದಲ್ಲದೆ ಕ್ರಮದಲ್ಲಿರುವ 2-3 ಅಥವಾ 5–6 ವರ್ಣಗಳ ಸ್ಮರಣೆ ಬರಬಹುದು. ಆದರೆ ಮಹಾವಾಕ್ಯದಲ್ಲಿರುವ ನೂರಾರು, ಸಹಸ್ರಾರು ವರ್ಣಗಳ ಸ್ಮರಣೆ ಅಶಕ್ಯವೇ. ಮಹಾಪ್ರಯಾಸದಿಂದ ಕೂಡ ಇದು ಅಸಾಧ್ಯ, ಇತರ ಪದಗಳ ಅರ್ಥಗಳೊಡನೆ ಸಂಬದ್ಧವಾದ ಸ್ವ–ಅರ್ಥ ತಿಳಿಸುವ ಶಕ್ತಿ ಶಬ್ದಗಳಿಗೆ ಇದೆ ಎಂಬ ಸುಲಭ ಉಪಾಯವಿರುವಾಗ ಅಧಿಕ ಪ್ರಯಾಸ ಏಕೆ ?

(3) ವಾಕ್ಯಾಂತ್ಯ ವರ್ಣಮಾಲೆ (ಪ್ರಾಚೀನ ಮೀಮಾಂಸಕರ ಮತ). ವಾಕ್ಯದ ಕೊನೆಯ ವರ್ಣವು ವಾಕ್ಯಾರ್ಥವನ್ನು ತಿಳಿಸುತ್ತದೆಂದು ಪ್ರಾಚೀನ ಮೀಮಾಂಸಕರು ಹೇಳುತ್ತಾರೆ. ಆದರೆ ಈ ವಾದವು ಅಯುಕ್ತ, ಅಂತ್ಯ ವರ್ಣವೊಂದೇ ವಾಕ್ಯಾರ್ಥ ಬೋಧಕವಾದರೆ ಉಳಿದ ವರ್ಣಗಳ ಉಚ್ಚಾರ ವ್ಯರ್ಥವಾಗುತ್ತದೆ. ಇನ್ನು ಅಂತ್ಯ ವರ್ಣದಿಂದ ಹಿಂದಿನ ವರ್ಣಗಳ, ಪದಗಳ ಸ್ಮರಣೆ ಬರುವದರಿಂದ ವಾಕ್ಯಾರ್ಥ ಜ್ಞಾನವಾಗುತ್ತದೆಂದು ಹೇಳಿದರೂ ಕಲ್ಪನಾಗೌರವ ದೋಷ ಬರುತ್ತದೆ.

(4) "ಪದಸಮೂಹಪ್ರಯೋಗಾತ್ ವಾಕ್ಯಾರ್ಥನುಮಾನಂ" ಎಂಬ ವಾದ

(ವೈಶೇಷಿಕರ ಮತ).ಈ ವಾದದಲ್ಲಿ ಪದಗಳ ಪ್ರಯೋಗವು ಪದಾರ್ಥಗಳ ಸಂಬಂಧ ತಿಳಿಸುವದಕ್ಕಾಗಿದೆ. (ಪದಾರ್ಥಸಂಸರ್ಗ ಪ್ರತಿಪಾದನಂ) ಎಂಬುದು ಮುಖ್ಯತತ್ವ, ಇಲ್ಲಿ ಪದಗಳಿಂದ ವಾಕ್ಯಾರ್ಥವನ್ನು ಅನುಮಾನದಿಂದ ತಿಳಿಯಲಾಗುತ್ತದೆ. ಇದರಲ್ಲಿ ಎರಡು ಹಂತಗಳಿವೆ.

(i) ಯಾರು ಯಾವ ಪದಗಳನ್ನು ಪ್ರಯೋಗಿಸುವರೋ ಅವರಿಗೆ ಆ ಪದಾರ್ಥಗಳ ಸಂಬಂಧವನ್ನು ಹೇಳುವ ಅಭಿಪ್ರಾಯವಿದೆ ಎಂಬ ಸಾಮಾನ್ಯ ನಿಯಮವನ್ನು ತನ್ನಲ್ಲಿ ತಿಳಿಯುತ್ತಾನೆ.

(ii) ನಂತರ ಬೇರೊಬ್ಬರು ಪ್ರಯೋಗಿಸಿದ ಪದಗಳಿಂದ ಅವರಿಗಭಿಮತವಾದ ಪದಾರ್ಥಸಂಬಂಧವನ್ನೂ ವಾಕ್ಯಾರ್ಥವನ್ನೂ ಅನುಮಾನದಿಂದ ತಿಳಿಯುತ್ತಾನೆ. ಈ ವಾದವೂ ಅಯುಕ್ತ. ಆಕಾಂಕ್ಷಾದಿಗಳಿಲ್ಲದ "ಗೌಃ ಅಶ್ವಃ ಪುರುಷಃ ಹಸ್ತೀ" ಮೊದಲಾದ ಶಬ್ದ ಸಮುದಾಯ ಪ್ರಯೋಗ ದಿಂದಂತೂ ಅರ್ಥವಾಗುವದಿಲ್ಲ, ಆದ್ದರಿಂದ ಪದಗಳಲ್ಲಿ ಆಕಾಂಕ್ಷಾ ಸನ್ನಿಧಿ ಯೋಗ್ಯತಾ ಇರಬೇಕು. ಇದಲ್ಲದೆ ಆಕಾಂಕ್ಷಾದಿಗಳುಳ್ಳ ಪದಗಳಿಂದಲೇ ನೇರವಾಗಿ ವಾಕ್ಯಾರ್ಥ ಜ್ಞಾನವಾಗುವಾಗ ಪದಗಳಿಂದ ಅನುಮಾನ ಮಾಡಿ ಆ ಅನುಮಾನದಿಂದ ವಾಕ್ಯಾರ್ಥಜ್ಞಾನವಾಗುತ್ತದೆಂದು ಹೇಳಿದರೆ ಕಲ್ಪನಾಗೌರವ ದೋಷ ಬರುತ್ತದೆ. ಇದು "ಬಕಬಂಧ ರೀತಿ" ಎಂದು ಮೂದಲಿಸಲಾಗಿದೆ. (ಸುಮ್ಮನೆ ಕುಳಿತ ಬಕಪಕ್ಷಿಯನ್ನು ನೇರವಾಗಿ ಹಿಡಿಯುವ ಬದಲು ಅದರ ಕಣ್ಣಿಗೆ ಬೆಣ್ಣೆ ಹಚ್ಚಿ, ಆ ಬೆಣ್ಣೆ ಬಿಸಿಲಿನಿಂದ ಕರಗಿ ಕಣ್ಣಲ್ಲಿ ಇಳಿದಾಗ ಆ ಪಕ್ಷಿ ಕಣ್ಣು ಮುಚ್ಚಿದ ಸಂದರ್ಭದಲ್ಲಿ ಆ ಬಕಪಕ್ಷಿಯನ್ನು ಹಿಡಿಯಬೇಕು— ಎನ್ನುವಂತೆ ಇದೆ ನಿನ್ನ ರೀತಿ)

(5) ಅಭಿಹಿತಾನ್ವಯ ವಾದ : (ಭಾಟ್ಟ ಮತ) ಪದಗಳಿಂದ ಹೇಳಲ್ಪಟ್ಟ ಅರ್ಥಗಳೇ ಆಕಾಂಕ್ಷಾದಿ ಮೂಲಕ ಪರಸ್ಪರ ಸಂಬಂಧವನ್ನು (ಅನ್ವಯ) ತಿಳಿಸುತ್ತವೆ. ಎಂದು ಇವರ ವಾದ. "ಪದಾಭಿಹಿತಾಃ ಪದಾರ್ಥಾ ಏವ ಅನ್ಯೋನ್ಯಾನ್ವಯಂ ಬೋಧಯಂತಿ." ಈ ವಾದವೂ ಅಯುಕ್ತ. ಏಕೆಂದರೆ ಪದಾರ್ಥಗಳಿಗೆ ಅನ್ವಯ ಬೋಧಕತ್ವ ಶಕ್ತಿ ಎಲ್ಲಿಯೂ ಕಂಡಿಲ್ಲ. ಇದು ಅವರ ಕಲ್ಪನೆ ಮಾತ್ರ. ಇದಲ್ಲದೆ ನಾವು ಹೇಳುವಂತೆ ಪದಗಳಿಗಿರುವ ಒಂದು ಸ್ವಾಭಾವಿಕ ಶಕ್ತಿಯಿಂದ ವಾಕ್ಯಾರ್ಥ ಜ್ಞಾನವಾಗುವಾಗ ಅದನ್ನು ಬಿಟ್ಟು (i) ಪದಾರ್ಥಗಳಿಗೆ ಅನ್ವಯ ಬೋಧಕತ್ವ ಶಕ್ತಿಯನ್ನೂ (ii) ಪದಗಳಿಗೆ ಪದಾರ್ಥಗಳಲ್ಲಿ ಅನ್ವಯ ಬೋಧಕತ್ವ ಶಕ್ತಿಯನ್ನು ತಂದುಕೊಡುವ ಶಕ್ತಿಯನ್ನು ಹೀಗೆ ಎರಡು ಶಕ್ತಿಗಳನ್ನೂ ಒಪ್ಪುವದರಿಂದ ಕಲ್ಪನಾ ಗೌರವ ದೋಷ ಬರುತ್ತದೆ.

**ಸಿದ್ಧಾಂತದ ಮೇಲೆ ಬರುವ ಮೂರು ಆಕ್ಷೇಪಗಳ ಪರಿಹಾರ :**

(i) (ಸಾಮಾನ್ಯ ಅನ್ವಿತಾಭಿಧಾನವಾದಿಗಳಾದ ಸಿದ್ಧಾಂತಿಗಳೂ ಕೂಡ ಪದಾರ್ಥಗಳಲ್ಲಿ ಮತ್ತು ಪದಾರ್ಥಗಳ ಸಂಬಂಧಗಳಲ್ಲಿ (ಪದಾರ್ಥೇ, ಅನ್ವಯೇ ಚ) ಹೀಗೆ

ಎರಡು ಶಕ್ತಿಗಳನ್ನು ಒಪ್ಪುವ ಮೂಲಕ ಅನರಿಗೂ ಶಕ್ತಿದ್ವಯ ಕಲ್ಪನೆಯು ಕಲ್ಪನಾ ಗೌರವ ದೋಷ ಬರುತ್ತದೆಂದು ಹೇಳಕೂಡದು. ಏಕೆಂದರೆ ನಾವು ಒಂದೇ ಶಕ್ತಿಯನ್ನು ಒಪ್ಪಿದ್ದೇವೆ, ಪದಗಳು ಅನ್ವಿತ ಸ್ವಾರ್ಥವಾಚಕವಾಗಿವೆ. (ಏಕಯಾ ಏವ ಶಕ್ತ್ಯಾ ಅನ್ವಿತಾರ್ಥಸ್ಯ ಏವ ಅಭಿಧಾನ–ಅಂಗೀಕಾರಾತ್)

(2) ಆದರೂ ಸಿದ್ಧಾಂತಿಗಳ ಸಾಮಾನ್ಯ ಅನ್ವಿತಾಭಿಧಾನ ವಾದದಲ್ಲಿ ಮೂರು ಶಕ್ತಿಗಳನ್ನು ಕಲ್ಪಿಸಲಾಗಿದೆ. ಹೇಗೆಂದರೆ (i) ಸಾಮಾನ್ಯ ಅನ್ವಯದಲ್ಲಿ ಪದಗಳಿಗಿರುವ ಸ್ವಾಭಾವಿಕ ಶಕ್ತಿ. (ii) ಬೇರೆ ಪದಗಳ ಸನ್ನಿಧಾನ ಮೂಲಕ ಬಂದ ವಿಶೇಷಾನ್ವಯ ಶಕ್ತಿ. (iii) ಬೇರೆ ಪದಗಳಿಗೆ ವಿಶೇಷ ಶಕ್ತಿಯನ್ನು ತಂದುಕೊಡುವ ಒಂದು ಶಕ್ತಿ ಆದರೆ ಈ ಆಕ್ಷೇಪ ಅಸಮಂಜಸ. ಏಕೆಂದರೆ ಶಬ್ದಗಳಿಗೆ ನಾವು ಒಂದೇ ಶಕ್ತಿಯನ್ನು ಒಪ್ಪಿದ್ದೇವೆ ಪದಗಳಿಗೆ ಅನ್ವಿತ ಸ್ವಾರ್ಥ ಹೇಳುವ ಒಂದೇ ಶಕ್ತಿ ಇವೆ. ಇದರಿಂದ ಪದಗಳು ಆಕಾಂಕ್ಷಾ–ಸನ್ನಿಧಿ–ಯೋಗ್ಯತಾವುಳ್ಳ ಯೋಗ್ಯ ಇತರ ಪದಾರ್ಥಗಳೊಡನೆ ಸಂಬದ್ಧವಾಗಿ ಸ್ವ–ಅರ್ಥ ಹೇಳುತ್ತವೆ. ಹಾಗೂ ಪದಗಳ ಜೋಡಣೆಯಿಂದ ವಾಕ್ಯಾರ್ಥ ಜ್ಞಾನವಾಗುತ್ತದೆ. ಇದನ್ನು ನಾವು ಪ್ರಾರಂಭದಲ್ಲಿಯೇ "ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ ಶಬ್ದಾನಾಂ ಅನುಭೂಯತೇ" ಎಂದು 72ನೆಯ ಶ್ಲೋಕದಲ್ಲಿ ಹೇಳಿದ್ದೇವೆ.

(3) ಸಿದ್ಧಾಂತಿಗಳು ಪದಗಳಿಗೆ ಅನ್ವಯಬೋಧಕ ಶಕ್ತಿಯನ್ನು ಹೇಳುತ್ತಾರೆ. ಆದರೆ ಇದರ ಬದಲಾಗಿ ಪದಗಳ ಅರ್ಥಗಳಿಗೆ ಅನ್ವಯಬೋಧಕ ಶಕ್ತಿಯನ್ನು ಒಪ್ಪುವದು ಉಚಿತ. ಏಕೆಂದರೆ ಪದಸಮೂಹ (ಪದಕದಂಬ) ಕೇಳಿದೊಡನೆ ಪದಗಳ ಅರ್ಥ ಸ್ಮರಣೆಯಾಗಿ ವಾಕ್ಯಾರ್ಥ ಜ್ಞಾನವಾಗುತ್ತದೆ. ಆದರೆ ಮನಸ್ಸು ಬೇರೆಡೆ, ಬೇರೆ ವಿಷಯದತ್ತ ಸಂಚರಿಸಿದಾಗ (ಮಾನಸಾಪರಾಧಾತ್) ಪದಗಳ ಅರ್ಥಸ್ಮರಣೆ ಆಗುವದಿಲ್ಲ. ಮತ್ತು ವಾಕ್ಯಾರ್ಥ ಜ್ಞಾನವೂ ಆಗುವದಿಲ್ಲ. ಹೀಗೆ ಪದಾರ್ಥ ಸ್ಮರಣೆ ಇದ್ದರೆ ವಾಕ್ಯಾರ್ಥ–ಜ್ಞಾನವಾಗುತ್ತದೆ. ಸ್ಮರಣೆ ಇಲ್ಲದಿದ್ದರೆ ವಾಕ್ಯಾರ್ಥ ಜ್ಞಾನವಾಗುವದಿಲ್ಲ. ಆದ್ದರಿಂದ ಪದಗಳಿಂದ ಸ್ಮರಣೆಗೆ ಬಂದ ಪದಗಳ ಅರ್ಥಗಳಿಗೆ ಅನ್ವಯಬೋಧಕ ಶಕ್ತಿ ಇವೆ ಎಂದು ಸಿದ್ಧವಾಗುತ್ತದೆ.

ಆದರೆ ಈ ಆಕ್ಷೇಪ ಸಮಂಜಸವಲ್ಲ. ಏಕೆಂದರೆ ಪದಗಳ ಅರ್ಥಸ್ಮರಣೆ ಇಲ್ಲದೆ ಬೇರೆ ರೀತಿಯಿಂದ (ಅನ್ಯಥಾ) ಎಂದರೆ ಪದಗಳಿಗಿರುವ ಶಕ್ತಿ ಸ್ಮರಣದಿಂದ (ಸಂಗತಿ ಸ್ಮರಣದಿಂದ) ವಾಕ್ಯಾರ್ಥ ಜ್ಞಾನವಾಗುತ್ತದೆ. ಪದ ಸಮೂಹ ಕೇಳಿದೊಡನೆ ಪದಗಳಿಗಿರುವ ಶಕ್ತಿ ಸ್ಮರಣೆಯಾಗಿ ವಾಕ್ಯಾರ್ಥ ಜ್ಞಾನವಾಗುತ್ತದೆ. ಆದ್ದರಿಂದ ಪದಗಳ ಶ್ರವಣ ಮತ್ತು ವಾಕ್ಯಾರ್ಥ ಜ್ಞಾನಗಳ ನಡುವೆ ಪದಾರ್ಥ ಸ್ಮರಣೆಯೊಂದನ್ನು ತರುವದು ನಮಗೆ ಸಮ್ಮತವಿಲ್ಲ. ಇನ್ನು ಇಷ್ಟಾದರೂ ನೀನು ಪದಾರ್ಥಗಳೇ ಅನ್ವಯ ಬೋಧಕವೆಂದು ಒಪ್ಪಿದರೆ ಪ್ರತ್ಯಕ್ಷ–ಅನುಮಾನ–ಆಗಮ–ಉಪಮಾನ–

ಅರ್ಥಾಪತ್ತಿ-ಅಭಾವ ಎಂಬ ಆರು ಪ್ರಮಾಣಗಳಲ್ಲದೆ ಪದಾರ್ಥ (ಪದಗಳ ಅರ್ಥ) ಎಂಬ ಏಳನೆಯ ಪ್ರಮಾಣವನ್ನು ಅಂಗೀಕರಿಸುವ ಅನಿಷ್ಟ ಪ್ರಸಂಗ ಬರುತ್ತದೆ, ಆದ್ದರಿಂದ ಪದಗಳಿಗಿರುವ ಒಂದೇ ಶಕ್ತಿಯಿಂದ (ಅನ್ವಿತ ಸ್ವಾರ್ಥ) ವಾಕ್ಯಾರ್ಥ ಜ್ಞಾನವಾಗುತ್ತದೆ. ಪದಗಳ ವಾಚ್ಯ ವಾಚಕ ಸಂಬಂಧ ಜ್ಞಾನ (ವ್ಯುತ್ಪತ್ತಿ) ಆಗುವಾಗಲೇ ಅನ್ವಿತ ಅರ್ಥ ಗ್ರಹಣವಾಗುವದು ಅನುಭವ ಸಿದ್ಧ. ಇದನ್ನು ಬಿಟ್ಟು ಪದಗಳ ಅರ್ಥಗಳಿಗೆ ಅನ್ವಯಬೋಧಕ ಶಕ್ತಿಯನ್ನು ಒಪ್ಪಿದರೆ ಕಲ್ಪನಾಗೌರವ ದೋಷ ಬರುತ್ತದೆ.

**ನ ಚಾಶಕ್ತ್ಯಾಭಿಧಾಯಿತ್ವಂ ಪ್ರವೃತ್ತಿಶ್ಚ ದ್ವಿಧಾನ್ಯಥಾ ||೭೩||**

**ಅವತರಣಿಕೆ :** (ಕಣ್ಣಿಗೆ ರೂಪಜ್ಞಾನವು ವಸ್ತುವಿನ ಸಂಬಂಧ ದ್ವಾರಾ ಆಗುವಂತೆ ಶಬ್ದಗಳು ಶಬ್ದಾರ್ಥ ಪ್ರತಿಪಾದಕವೆಂಬ ಅವಾಂತರ ವ್ಯಾಪಾರ ಮೂಲಕ ಅನ್ವಯ ಬೋಧಕವಾಗಿವೆ. ಹಾಗೂ ಇದರಿಂದ ವಾಕ್ಯಾರ್ಥ ಜ್ಞಾನವಾಗುತ್ತದೆ ಎಂದು ಹೇಳಿದರೆ ಹಿಂದೆ ಹೇಳಿದ ದೋಷಗಳ (ಶಕ್ತಿದ್ವಯ ಕಲ್ಪನೆ, ಏಳನೇ ಪ್ರಮಾಣದ ಅಂಗೀಕಾರ) ಪರಿಹಾರವಾಗುವದಿಲ್ಲವೆಂದು ಪ್ರತಿಪಾದಿಸುತ್ತಾರೆ.

**ಅನುವಾದ :** ಶಬ್ದಗಳು ಸ್ವಾಭಾವಿಕ ಶಕ್ತಿ ಇಲ್ಲದಲೇ ಅನ್ವಯ ಹೇಳುತ್ತವೆ, (ಅಶಕ್ತ್ಯಾ ಅಭಿಧಾಯಿತ್ವಂ) ಎಂಬುದು ಯುಕ್ತವಲ್ಲ. ಇನ್ನು ಶಬ್ದಗಳು ಪದಗಳ ಅರ್ಥಗಳನ್ನೂ ಅನ್ವಯವನ್ನೂ ಕ್ರಮೇಣ ಹೇಳುತ್ತವೆ ಎಂದು ವಿಪರೀತವಾಗಿ (ಅನ್ಯಥಾ) ಅಂಗೀಕರಿಸಿದರೆ, ಶಬ್ದಗಳಿಗೆ "ದ್ವಿಧಾ ಪ್ರವೃತ್ತಿ" ಎಂದರೆ ವಿರಮ್ಯ ವ್ಯಾಪಾರ ಉಂಟಾಗುವ ಪ್ರಸಂಗ ಬರುತ್ತದೆ.

**ವಿವರಣೆ :** ಸಿದ್ಧಾಂತಿಗಳ ಪ್ರಕಾರ, ಶಬ್ದಗಳ ವಾಚ್ಯ ವಾಚ್ಯಾರ್ಥ ಸಂಬಂಧ ಜ್ಞಾನ (ವ್ಯುತ್ಪತ್ತಿ) ಆಗುವಾಗಲೇ ಅನ್ವಯ ಜ್ಞಾನಉಂಟಾಗುವದರಿಂದ ಶಬ್ದಗಳು ವಾಕ್ಯಾರ್ಥಬೋಧಕವಾಗಿವೆ. ಈಗ ಪೂರ್ವಪಕ್ಷಿಯು ಶಬ್ದಗಳಿಂದ ಶಬ್ದಾರ್ಥದ್ವಾರಾ ಅನ್ವಯವಾಗಿ ವಾಕ್ಯಾರ್ಥ ಜ್ಞಾನವಾಗುತ್ತದೆಂದು ವಾದಿಸುತ್ತಾನೆ. ಕಣ್ಣಿಗೆ ರೂಪ ಜ್ಞಾನವು ವಸ್ತುವಿನ ಸಂಬಂಧದ್ವಾರಾ (ಅರ್ಥಸನ್ನಿಕರ್ಷ) ಆಗುವಂತೆ ಶಬ್ದಗಳಿಗೆ ಶಬ್ದಾರ್ಥ ಪ್ರತಿಪಾದನೆ ಎಂಬ ಅವಾಂತರ ವ್ಯಾಪಾರ ಮೂಲಕ ಅನ್ವಯವಾಗಿ ವಾಕ್ಯಾರ್ಥ ಜ್ಞಾನಉಂಗುತ್ತದೆಂದು ಹೇಳುತ್ತಾನೆ, ಹೀಗೆ ಹೇಳುವದರಿಂದ ಹಿಂದೆ ಪ್ರಸಕ್ತವಾದ ಶಕ್ತಿದ್ವಯ ಕಲ್ಪನೆ ಬರುವದಿಲ್ಲವೆಂದು ಹೇಳುತ್ತಾನೆ. (ನಾಯಂ ದೋಷಃ)ಆದರೆ ಈ ಪೂರ್ವಪಕ್ಷ ಅಯುಕ್ತವೆಂದು ಅದನ್ನು ಇಲ್ಲಿ ನಿರಾಕರಿಸಲಾಗಿದೆ.

**ನಿರಾಕರಣೆ :** ಪದಗಳ ಅರ್ಥಗಳಿಗೆ ಅನ್ವಯಬೋಧಕ ಶಕ್ತಿಯನ್ನು ನೀನು ಹೇಳುತ್ತೀ. ಇಲ್ಲಿ ನಾವು ಪ್ರಶ್ನಿಸುತ್ತೇವೆ. ಪದಾರ್ಥಗಳಂತೆ ಪದಗಳಿಗೆ ಅನ್ವಯದಲ್ಲಿ ಶಕ್ತಿ ಇದೆಯೋ, ಇಲ್ಲವೋ ? ಆ ಶಕ್ತಿ ಇರದಿದ್ದರೆ ಪದಗಳು ಶಕ್ತಿಯಿಲ್ಲದಲೇ (ಅಶಕ್ತ್ಯಾ) ಅರ್ಥವನ್ನು ಹೇಳುತ್ತವೆಯೆಂಬುದು ವ್ಯಾಘಾತ. (ಅರ್ಥ ಹೇಳು

ತ್ತವೆ ಎಂದರೆ ಶಕ್ತಿ ಇದೆ ಎಂದು ಅರ್ಥ, ಮುಂದೆ ಶಕ್ತಿ ಇಲ್ಲವೆನ್ನುವದರಿಂದ ವ್ಯಾಘಾತ.) ಇದರಿಂದ ಹಿಂದೆ ಹೇಳಿದ ದೋಷಗಳು (ಏಳನೇ ಪ್ರಮಾಣದ ಅಂಗೀಕಾರ ಮುಂತಾದವು) ಹಾಗೆಯೇ ಉಳಿಯುತ್ತವೆ.

ಇನ್ನು ಪದಗಳಿಗೆ ಅನ್ವಯದಲ್ಲಿ ಶಕ್ತಿ ಇದೆಯೆಂದು ಹೇಳಿದರೆ, ನಾವು ಪುನಃ ಕೇಳುತ್ತೇವೆ. ಪದಗಳು ಪದಾರ್ಥಗಳನ್ನೂ ಅನ್ವಯವನ್ನೂ ಏಕ ಕಾಲಕ್ಕೆ ಪ್ರತಿಪಾದಿಸುತ್ತವೆಯೋ ? ಅಥವಾ ಕ್ರಮೇಣ ಪ್ರತಿಪಾದಿಸುತ್ತವೆಯೋ ? ಏಕ ಕಾಲಕ್ಕೆ ಎಂದು ಹೇಳಿದರೆ, ಅನ್ವಿತಾಭಿಧಾನ ವಾದವನ್ನು ಸ್ವೀಕರಿಸಿದಂತೆ ಆಗುತ್ತದೆ, ಮತ್ತು ಪದಾರ್ಥ ಪ್ರತಿಪಾದನೆ ಎಂಬ ಅವಾಂತರ ವ್ಯಾಪಾರ ಕೂಡುವದಿಲ್ಲ. ಆದ್ದರಿಂದ ಪದಗಳು ಮೊದಲು ತಮ್ಮ ಅರ್ಥಗಳನ್ನೂ ನಂತರ ಅನ್ವಯವನ್ನೂ ಪ್ರತಿಪಾದಿಸುತ್ತವೆ ಎಂದರೆ 'ದ್ವಿಧಾ ಪ್ರವೃತ್ತಿ' ಅಥವಾ 'ವಿರಮ್ಯ ವ್ಯಾಪಾರ' ಎಂಬ ದೋಷ ಬರುತ್ತದೆ) ಹೀಗಾಗಿ ಶಬ್ದ ಉಚ್ಚರಿಸಿದೊಡನೆ ಅರ್ಥಜ್ಞಾನ ವಾಗದೆ ತುಸು ತಡೆದು (ವಿರಮ್ಯ) ತುಸು ಕಾಲದ ನಂತರ ಆ ಅರ್ಥಜ್ಞಾನವಾಗುವ ಪ್ರಸಂಗ ಬರುತ್ತದೆ.

[ಇನ್ನು ಆನೆ ಎಂದೊಡನೆ ಆನೆಯೊಂದಿಗೆ ಇರುವ ಮಾವುತನ ಸ್ಮರಣೆ ಬರುವಂತೆ ಶಬ್ದಗಳಿಗೆ ಅರ್ಥವಿಷಯಕ ಸಾಮರ್ಥ್ಯವಿರದಿದ್ದರೂ ಅವು ಸಾಹಚರ್ಯ ಮೂಲಕ ತಮ್ಮ ಅರ್ಥವನ್ನು ಸ್ಮರಣೆಗೆ ತಂದು ಕೊಡುತ್ತವೆ ಎಂದು ಹೇಳುವದೂ ಅಯುಕ್ತ. ಏಕೆಂದರೆ ಪದಾರ್ಥ ವಿಷಯಕ ಶಕ್ತಿ ಇರದಿದ್ದರೆ ಪದಗಳು ಅರ್ಥ ವನ್ನು ಪ್ರತಿಪಾದಿಸುವದು ಕೂಡುವದಿಲ್ಲ.]

ಶಬ್ದಗಳಿಗೆ ಅರ್ಥ ವಿಷಯಕ ಅನ್ವಯ ಮತ್ತು ತನ್ಮೂಲಕ ವಾಕ್ಯಾರ್ಥ ಜ್ಞಾನ ಎಂಬ ವಾದವೂ ಅಸಮಂಜಸ. ಏಕೆಂದರೆ ಹಾಗೆ ಹೇಳುವದಾದರೆ ಪದಗಳು (ಆನೆ-ಮಾವುತ-ಎಂಬಲ್ಲಿಯಂತೆ) ಸಾಹಚರ್ಯ ಮೂಲಕ ಅರ್ಥವನ್ನು ಕೇವಲ ಸ್ಮರಣೆಗೆ ತಂದು ಕೊಡುತ್ತವೆ, ಹಾಗೂ ಲಕ್ಷಣಾ ಮೂಲಕ ಅನ್ವಯ ಮತ್ತು ಅರ್ಥ ಹೇಳುತ್ತವೆ ಎಂದಾಗುತ್ತದೆ. ಇದರಿಂದಾಗಿ ಶಬ್ದಗಳಿಗೆ ಎಲ್ಲಿಯೂ ವಾಚಕತ್ವ ಶಕ್ತಿ (ಅಭಿಧಾನ ವೃತ್ತಿಃ) ಇಲ್ಲದಾಗುತ್ತದೆ. ಅಭಿಧಾನ ವೃತ್ತಿ ಇರದಿದ್ದರೆ ಲಕ್ಷಣಾ ವೃತ್ತಿಯೂ ಕೂಡುವದಿಲ್ಲ. ಏಕೆಂದರೆ ಲಕ್ಷಣಾ ವೃತ್ತಿಯು ಮುಖ್ಯಾರ್ಥ ಹೇಳುವ ಅಭಿಧಾ ವೃತ್ತಿಯನ್ನು ಅವಲಂಬಿಸಿದೆ. (ಮುಖ್ಯಾರ್ಥಕ್ಕೆ ಬಾಧ ಬಂದರೆ ಮಾತ್ರ ಲಕ್ಷಣಾವೃತ್ತಿ. ಮುಖ್ಯಾರ್ಥ ಪ್ರತಿಪಾದಕ ಅಭಿಧಾನವೃತ್ತಿ ಇಲ್ಲದಿದ್ದರೆ ಲಕ್ಷಣಾ ವೃತ್ತಿಯೂ ಕೂಡುವದಿಲ್ಲ. ಇದರಿಂದಾಗಿ ಶಬ್ದಗಳು ಎಲ್ಲಿಯೂ ಅರ್ಥ ಬೋಧಕವಾಗುವದಿಲ್ಲ).

**ಟೀಪು :** ಮೇಲಿನ ಎರಡು ವಾದಗಳು ಎಂದರೆ (i) ಶಕ್ತಿ ಇಲ್ಲದಲೆ ಶಬ್ದಗಳು ಪದಾರ್ಥಗಳನ್ನು ಸ್ಮರಣೆಗೆ ತಂದುಕೊಡುತ್ತವೆ ಎಂಬ ವಾದ (ii) ಶಕ್ತಿಯನ್ನು ಒಪ್ಪದೆ ಲಕ್ಷಣಾ ವೃತ್ತಿಯಿಂದ ಶಬ್ದಗಳು ಶಬ್ದಾರ್ಥ ಬೋಧಕ ಎಂಬ ವಾದ 73

ನೆಯ ಶ್ಲೋಕದಲ್ಲಿಯ "ನ ಚಾಶಕ್ತ್ಯಾಭಿಧಾಯಿತ್ವಂ" ಎಂಬುದರಿಂದ ಸೂಚಿತ ವಾಗಿವೆ ಎಂದು ಟೀಕಾರಾಯರು ಹೇಳಿದ್ದಾರೆ.

ಕೊನೆಯದಾಗಿ ಪದಗಳಿಂದಾಗುವ ಪದಾರ್ಥ ಸ್ಮರಣೆಯೇ ಪದಗಳಿಗಿರುವ ಅಭಿಧಾಯಕತ್ವ, ವಾಚ್ಯತ್ವ ಎಂದರೆ ಅತಿ ಪ್ರಸಂಗ ಬರುತ್ತದೆ. ಉದಾ : ಆನೆ ಯೆಂದೊಡನೆ ಮಾವುತ ಎಂಬ ಸ್ಮರಣೆ ಬರುವದರಿಂದ ಆನೆ (ಹಸ್ತಿ) ಶಬ್ದಕ್ಕೆ ಮಾವುತ (ಹಸ್ತಿಪ) ಎಂಬ ಅರ್ಥವಾಗಲಿ ! ಧೂಮ (ಹೊಗೆ) ಎಂದೊಡನೆ ಹೊಗೆ ಯಿರುವ ಅಡಿಗೆಯ ಮನೆಯ ಸ್ಮರಣೆ ಬರುವದರಿಂದ, ಧೂಮ ಶಬ್ದಕ್ಕೆ ಅಡಿಗೆ ಮನೆ ಎಂಬ ಅರ್ಥವಾಗಲಿ !

**ಉಪಸಂಹಾರ :** ಪದಗಳಿಗೆ ಅರ್ಥವಾಚಕತ್ವ ಶಕ್ತಿಯು ಸ್ವಾಭಾವಿಕವಾದುದು. ಸಾಮಾನ್ಯವಾಗಿ ಶಬ್ದಗಳು ಯೋಗ್ಯ ಇತರ ಶಬ್ದಗಳ ಅರ್ಥಗಳೊಡನೆ ಸಂಬದ್ಧವಾದ ತಮ್ಮ ಅರ್ಥ (ಯೋಗ್ಯೇತರಾನ್ವಿತಸ್ವಾರ್ಥ) ತಿಳಿಸುತ್ತವೆ. ಸಾಮಾನ್ಯವಾಗಿ ತೋರಿದ ಸಂಬಂಧವನ್ನು ವಿಶೇಷ ರೂಪದಲ್ಲಿ ತಿಳಿಸುವದಕ್ಕಾಗಿ ಉಳಿದ ಪದಗಳ ಯೋಗ್ಯ ಜೋಡಣೆ (ಸಮಭಿವ್ಯಾಹಾರ) ಅವಶ್ಯಕ. ಈ ಜೋಡಣೆಯಿಂದ ವಾಕ್ಯಾರ್ಥ ಜ್ಞಾನ ವಾಗುತ್ತದೆ. ಈ ಸಾಮಾನ್ಯ ಅನ್ವಿತಾಭಿಧಾನವಾದದಲ್ಲಿ ಯಾವ ದೋಷವೂ ಇಲ್ಲ. ಹೀಗೆ ಪದಗಳ ಸ್ವಶಕ್ತಿಯಿಂದಲೇ ವಾಕ್ಯಾರ್ಥಜ್ಞಾನ ಉಂಟಾಗುವದರಿಂದ ಪದ ಸಮೂಹವಾದ ವೇದದಿಂದ ಜ್ಞಾನ ಹುಟ್ಟುತ್ತದೆ. ಆದ್ದರಿಂದ ಯಥಾರ್ಥ ಜ್ಞಾನ ಹುಟ್ಟಿಸುವ (ಪ್ರಮಿತಿ ಜನಕ) ವೇದವು ಪ್ರಮಾಣ. ಮತ್ತು ಬ್ರಹ್ಮ ವಿಷ ಯಕ ವಿಚಾರವು ಅತ್ಯಂತ ಯುಕ್ತವಾಗಿದೆ.



**ಅತಃ ಶಬ್ದದ ಅರ್ಥಗಳು :** ಇಲ್ಲಿಯ ವರೆಗೆ ಬ್ರಹ್ಮ ವಿಷಯಕ ವಿಚಾರವನ್ನು (ಜಿಜ್ಞಾಸಾ) ಏಕೆ ಮಾಡಬೇಕು ಎಂಬುದಕ್ಕೆ ಯುಕ್ತಿಗಳನ್ನು ಸೂತ್ರದಲ್ಲಿಯ ಅತಃ ಶಬ್ದದಿಂದ ವಿವರಿಸಲಾಯಿತು. ಅತಃ ಶಬ್ದದ ಅರ್ಥವೇ ಆದ ಆ ಯುಕ್ತಿ ಗಳೆಂದರೆ—

1) ಅಕಾರ ವಾಚ್ಯನಾದ ಪ್ರಸನ್ನನಾದ ಬ್ರಹ್ಮನಿಂದ (ವಿಷ್ಣುವಿನಿಂದ) ವಿಚಾರದಿಂದ ಹುಟ್ಟಿದ ಜ್ಞಾನದಿಂದ ಉತ್ಪನ್ನವಾದ ಪ್ರಸಾದದಿಂದ ಮೋಕ್ಷರೂಪ ಫಲ ಇರುವ ದರಿಂದ (ಅಕಾರವಾಚ್ಯಾತ್ ಪ್ರಸನ್ನಾತ್ ಬ್ರಹ್ಮಣಃ ಜಿಜ್ಞಾಸಾಜನ್ಯ-ಜ್ಞಾನಜನ್ಯ ಪ್ರಸಾದಜನ್ಯ ಮೋಕ್ಷಾಖ್ಯ ಫಲಸದ್ಭಾವಾತ್)

2) (ಸಂಸಾರ) ಬಂಧವು ಸತ್ಯವಾದ್ದರಿಂದ (ಬಂಧಸ್ಯ ಸತ್ಯತ್ವಾತ್)

3) ಶಬ್ದವು (ವೇದವು) ಇಷ್ಟವಾದ ಸಿದ್ಧಾರ್ಥ ವಸ್ತುಪರವಾದ್ದರಿಂದ-ಕಾರ್ಯತಾ ಪರವಾಗದಿದ್ದುದರಿಂದ.

4) ಶಬ್ದವು (ವೇದವು) ಪ್ರಮಾಣವಾದ್ದರಿಂದ.

5) ಶಬ್ದವು ಯೋಗ್ಯ ಇತರ ಪದಗಳ ಅರ್ಥಗಳೊಡನೆ ಸಂಬದ್ಧವಾದ ತನ್ನ ಅರ್ಥ ಹೇಳುವದರಿಂದ.

**ಸೂತ್ರದಲ್ಲಿಯೂ ಅಥ ಮತ್ತು ಅತಃ ಶಬ್ದಗಳ ಅರ್ಥದಲ್ಲಿ ಪುನರುಕ್ತಿ ಇಲ್ಲ.**

(ಸೂತ್ರಾನುಸಾರಿ ಪದಗಳಿಂದ ಸೂತ್ರಾರ್ಥ ವಿವರಿಸುವ) ವೃತ್ತಿಕಾರರಾದ ಭಾಸ್ಕರಾಚಾರ್ಯರಂತೆ ಮತ್ತು ಉಪಲಕ್ಷಣಯಾ ವಿವರಣಕಾರರು, ಭಾಮತೀ ಕಾರರಂತೆ ಶ್ರೀಮನ್ಮಧ್ವಾಚಾರ್ಯರ ಸೂತ್ರಾರ್ಥ ವಿವರಣೆಯಲ್ಲಿ ಅಥ ಮತ್ತು ಅತಃ ಶಬ್ದಗಳ ಅರ್ಥಗಳಲ್ಲಿ ಪುನರುಕ್ತಿ ದೋಷ ಎಳ್ಳಷ್ಟೂ ಇಲ್ಲ. ಹೇಗೆಂದರೆ—

**ಪುನರುಕ್ತಿ ಶಂಕಾ :** ಅಥ ಶಬ್ದವು ಅನಂತರ ಎಂದರೆ ಶಮ ದಮಾದಿ ಅಧಿಕಾರ ಸಂಪತ್ತ್ಯನಂತರ ಎಂಬ ಅರ್ಥವನ್ನು ಹೇಳುವ ಮೂಲಕ ಮೊದಲು ಇರುವ ಶಮ ದಮಾದಿಗಳು ಬ್ರಹ್ಮ ವಿಚಾರಕ್ಕೆ ಕಾರಣವೆಂದೇ ಹೇಳಬೇಕು. ಇಲ್ಲವಾದರೆ ಅಥ ಶಬ್ದ ವ್ಯರ್ಥವಾಗುತ್ತದೆ. ಹೀಗೆ ಅಥ ಶಬ್ದವು ಬ್ರಹ್ಮ ವಿಚಾರಕ್ಕೆ ಕಾರಣವಾದ ಶಮ ದಮಾದಿಗಳನ್ನು ನಿರೂಪಿಸುತ್ತದೆ. ಅಥ ಶಬ್ದದ ನಂತರ ಇರುವ ಅತಃ ಶಬ್ದವೂ ಶಮ ದಮಾದಿ ಸಂಪನ್ನನಾದುದರಿಂದ (ಅಧಿಕಾರಾದೇಃ ಸಂಪನ್ನತ್ವಾತ್) ಎಂಬ ಅರ್ಥವನ್ನು ಸೂಚಿಸುತ್ತದೆ. ಈ ಅರ್ಥ ಮೊದಲೇ ಅಥ ಶಬ್ದದಿಂದ (ಅಧಿಕಾರ ಸಂಪತ್ತ್ಯನಂತರಂ ಎಂಬುದರಿಂದ) ನಿರೂಪಿತವಾದ್ದರಿಂದ ಅಥ ಮತ್ತು ಅತಃ ಶಬ್ದ ಗಳಲ್ಲಿ ಪುನರುಕ್ತಿ ಇದೆ.

**ಪುನರುಕ್ತಿ ಶಂಕಾ ಪರಿಹಾರ :** ಶ್ರೀಮದಾಚಾರ್ಯರ ಸೂತ್ರಾರ್ಥ ವಿವರಣೆ ಯಲ್ಲಿ ಪುನರುಕ್ತಿ ಶಂಕೆಗೆ ಅವಕಾಶವೇ ಇಲ್ಲ. ವೃತ್ತಿಕಾರರು ಮೈ ಸುಟ್ಟುಕೊಂಡಿ ದ್ದಾರೆಂದು ತಾವೂ ಸುಟ್ಟುಕೊಂಡರೆ ದಾಹ ದುಃಖ ಹೋಗುವದಿಲ್ಲ ಎಂದು, ಟೀಕಾರಾಯರು (ನ ಹಿ ಪರಾಂಗಂ ದಗ್ಧಮಿತಿ ಸ್ವಾಂಗದಾಹದುಃಖಂ ನಿವರ್ತತೇ) ಉದ್ಗಾರ ತೆಗೆದಿದ್ದಾರೆ. ಸಿದ್ಧಾಂತಿಗಳ ಪ್ರಕಾರ ಅಥ ಶಬ್ದವು ಅಧಿಕಾರಿಯಲ್ಲಿರ ಬೇಕಾದ ಶಮ ದಮಾದಿ ಧರ್ಮಗಳನ್ನು ತಿಳಿಸುತ್ತದೆ. ಇದರಿಂದ ಶಮ ದಮಾದಿ ಗಳಿಲ್ಲದವರು ಅನಧಿಕಾರಿಗಳು, ಅವರಿಗೆ ಬ್ರಹ್ಮ ಮೀಮಾಂಸಾದಲ್ಲಿ ಅಧಿಕಾರವಿಲ್ಲ ಎಂದು ತಿಳಿಯುತ್ತದೆ. ಹೀಗೆ ಅಥ ಶಬ್ದವು ಅಧಿಕಾರಿಗಳನ್ನು ಅನಧಿಕಾರಿಗಳಿಂದ ಬೇರ್ಪಡಿಸುತ್ತದೆ. ಇನ್ನು ಅತಃ ಶಬ್ದದ ಒಂದನೆಯ ಅರ್ಥವು, ಮೋಕ್ಷರೂಪ ಫಲವಿರುವದರಿಂದ ಎಂದಿದೆ. ಆಚಾರ್ಯ ಮಧ್ವರ ಪ್ರಕಾರ ಅತಃ ಶಬ್ದವು ಶಾಸ್ತ್ರದ ವಿಷಯ ಪ್ರಯೋಜನದ ಸಿದ್ಧಿಗಾಗಿ ಯುಕ್ತಿಗಳನ್ನು (ನ್ಯಾಯಕಲಾಪಂ) ನಿರೂಪಿಸು ತ್ತದೆ. ಆದ್ದರಿಂದ ಅಥ ಮತ್ತು ಅತಃ ಶಬ್ದಗಳಲ್ಲಿ ಪುನರುಕ್ತಿ ಇಲ್ಲ. ವಾಸ್ತವ ವಾಗಿ ಇಲ್ಲದ ಪುನರುಕ್ತಿಗೆ ಅಂಜಿ ಕೆಲವರು "ಅಥಾತಃ" ಎಂದು ಒಂದೇ ಪದ ಮಾಡಿ ಪುನರುಕ್ತಿ ಪರಿಹರಿಸಲು ಹೊರಟಿದ್ದು ಅಯುಕ್ತ.

**ಇನ್ನೊಂದು ಶಂಕಾ ಪರಿಹಾರ :** ವೇದಪ್ರಾಮಾಣ್ಯವನ್ನು ಈ ಬ್ರಹ್ಮ

ಮೀಮಾಂಸಾ ಶಾಸ್ತ್ರದ ಪೂರ್ವಭಾವಿಯಾಗಿರುವ ಜೈಮಿನಿಯ ಪೂರ್ವ ಮೀಮಾಂಸಾ ಶಾಸ್ತ್ರದಲ್ಲಿ ಸ್ಥಾಪಿಸಿದ್ದರಿಂದ ಅದನ್ನು ಪುನಃ ಬ್ರಹ್ಮಸೂತ್ರಗಳಲ್ಲಿ ಅತಃ ಶಬ್ದದ ನಾಲ್ಕನೆಯ ಅರ್ಥವನ್ನಾಗಿ ವಿವರಿಸಿದ್ದು ಪುನರುಕ್ತಿ ದೋಷ ಎಂದು ಶಂಕಿಸಕೂಡದು. ಏಕೆಂದರೆ ಬ್ರಹ್ಮ ಮೀಮಾಂಸಾ ಶಾಸ್ತ್ರವು ಪೂರ್ವ ಮೀಮಾಂಸಾ ಶಾಸ್ತ್ರವನ್ನು ಉಪಜೀವಿಸಿಲ್ಲ. ಆದರೆ ತದ್ವಿರುದ್ಧವಾಗಿ ಬ್ರಹ್ಮ ಮೀಮಾಂಸಾವನ್ನೇ ಪೂರ್ವ ಮೀಮಾಂಸಾ ಅವಲಂಬಿಸಿದೆ ಎಂಬುದು "ಶಬ್ದ ಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ" ಎಂಬ ಪುರಾಣ ವಾಕ್ಯದಿಂದ ತಿಳಿದು ಬರುತ್ತದೆ. ಎಲ್ಲ ಶಬ್ದ ರಾಶಿಗಳಿಂದ (ಶಬ್ದ ಜಾತಸ್ಯ ಎಂದರೆ ಶಬ್ದ ಸಮೂಹದಿಂದ) ಮಾಡಲ್ಪಡುವ ನಿರ್ಣಯವು ಬ್ರಹ್ಮ ಸೂತ್ರ ಮೂಲಕ ಎಂದು ಪುರಾಣ ವಾಕ್ಯದ ಅರ್ಥ. ಇದೇ ಮೇರೆಗೆ ಅತಃ ಶಬ್ದದ ಮೂರನೆಯ ಅರ್ಥವು (ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ) ಸುಸಂಗತವಾಗಿದೆ ಎಂದು ಸಮರ್ಥಿಸಲಾಗಿದೆ.

**ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ |**
**ಉಕ್ತಂ ನಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್ ||೭೪||**

**ಅವತರಣಿಕೆ :** ಪ್ರಥಮ ಸೂತ್ರದಲ್ಲಿಯ ಅತಃ ಶಬ್ದದ ವ್ಯಾಖ್ಯಾನದ ಬಗ್ಗೆ ಎರಡು ಶಂಕೆಗಳನ್ನು ಮಾಡಿಕೊಂಡು ಅವುಗಳನ್ನು ಪರಿಹರಿಸಲಾಗಿದೆ.

**ಅನುವಾದ :** ವೇದ ಪ್ರಾಮಾಣ್ಯಾದಿ ಎಲ್ಲ ವಿಷಯವು (ಈ ಬ್ರಹ್ಮ ಮೀಮಾಂಸಾ ಶಾಸ್ತ್ರದ ಅಂಗವಾದ) ಬ್ರಹ್ಮತರ್ಕವೆಂಬ ಹೆಸರುಳ್ಳ ತರ್ಕಶಾಸ್ತ್ರ ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಆದ್ದರಿಂದ (ತು = ತಸ್ಮಾತ್) ಇಲ್ಲಿ ಎಂದರೆ ಬ್ರಹ್ಮ ಮೀಮಾಂಸಾ ಶಾಸ್ತ್ರದ ಪ್ರಾರಂಭದಲ್ಲಿ, ವೇದ ಪ್ರಾಮಾಣ್ಯಾದಿ ವಿಷಯವನ್ನು ಸೂತ್ರದ ಅತಃ ಶಬ್ದದಿಂದ ಸಂಕ್ಷೇಪವಾಗಿ ಸೂಚಿಸಲಾಗಿದೆ.

**ವಿವರಣೆ :** "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದ ಅತಃ ಶಬ್ದದ ವ್ಯಾಖ್ಯಾನದ ಬಗ್ಗೆ ಎರಡು ಸಂದೇಹಗಳು ಬರುತ್ತವೆ.

i) ಅತಃ ಶಬ್ದಕ್ಕೆ ಐದು ಅರ್ಥಗಳನ್ನು ವಿವರಿಸಲಾಗಿದೆಯಷ್ಟೇ. ಅವುಗಳಲ್ಲಿ ಒಂದನೆಯ ಅರ್ಥವು ಶಾಸ್ತ್ರದ ಪ್ರಯೋಜನವಾದ ಮೋಕ್ಷರೂಪ ಫಲ ನಿರೂಪಿಸುವದರಿಂದ ಅದು ಪ್ರಕೃತವಾಗಿದೆ. ಆದರೆ ವೇದ ಪ್ರಾಮಾಣ್ಯಾದಿ ಉಳಿದ ಅರ್ಥಗಳು ಅಪ್ರಕೃತವಾಗಿವೆ. ಏಕೆಂದರೆ ಇದೇ ಮೊದಲನೆಯ ಸೂತ್ರ. ಹೀಗೆ ಅಪ್ರಕೃತವಾದ ಅರ್ಥ ವಿವರಿಸುವ ಭಾಷ್ಯವು ಉತ್ಸೂತ್ರಿತವಾಗಿದೆ.

ii) ಅತಃ ಶಬ್ದದ ವೇದ ಪ್ರಾಮಾಣ್ಯ ಮೊದಲಾದ ಅರ್ಥಗಳು ಒಂದು ವೇಳೆ ಬ್ರಹ್ಮವಿಷಯಕ ವಿಚಾರಕ್ಕೆ ಅತ್ಯಂತ ಉಪಯುಕ್ತವಾಗಿದ್ದರೆ ಅವನ್ನು ಸೂತ್ರಕಾರರೇ ವಿಸ್ತಾರವಾಗಿ ಏಕೆ ಹೇಳಿಲ್ಲ ? ಸಂಕ್ಷೇಪವಾಗಿಯೇ ಏಕೆ ಹೇಳಿದ್ದಾರೆ ?

ಹೀಗೆ ಅತಃ ಶಬ್ದದ ನಾಲ್ಕು ಅರ್ಥಗಳು (i) ಅಪ್ರಕೃತ ಮತ್ತು (ii) ಅವುಗಳ ಸಂಕ್ಷಿಪ್ತ ವಿವರಣೆ ಅಯುಕ್ತ ಎಂಬ ಎರಡು ಸಂದೇಹಗಳನ್ನು ಇಲ್ಲಿ ಪರಿಹರಿಸಲಾಗಿದೆ. ವೇದಪ್ರಾಮಾಣ್ಯಾದಿ ವಿಷಯವು ಈ ಬ್ರಹ್ಮ ಮೀಮಾಂಸಾ ಶಾಸ್ತ್ರದ ಅಂಗವಾದ ಬ್ರಹ್ಮತರ್ಕವೆಂಬ ಹೆಸರುಳ್ಳ ತರ್ಕಶಾಸ್ತ್ರ ಗ್ರಂಥದಲ್ಲಿ ವಿವರವಾಗಿ ನಿರೂಪಿಸಲ್ಪಟ್ಟಿದ್ದರಿಂದ ಅದನ್ನು ಇಲ್ಲ. ಬ್ರಹ್ಮಮೀಮಾಂಸಾ ಶಾಸ್ತ್ರದ ಪ್ರಾರಂಭದಲ್ಲಿ ಸಂಕ್ಷಿಪ್ತವಾಗಿ ಅತಃ ಶಬ್ದದಿಂದ ಸೂಚಿಸಲಾಗಿದೆ ಎಂಬುದು ಪರಿಹಾರ. ವಿವರ ಹೀಗಿದೆ.

i) ತರ್ಕಶಾಸ್ತ್ರವು ಮೀಮಾಂಸಾ ಶಾಸ್ತ್ರದ ಅಂಗವು. ಬ್ರಹ್ಮತರ್ಕವೆಂಬ ತರ್ಕಶಾಸ್ತ್ರದಲ್ಲಿ ವೇದಪ್ರಾಮಾಣ್ಯಾದಿ ಪ್ರಮೇಯಗಳು ಪ್ರಸ್ತುತವಾದ್ದರಿಂದ ಅವು ಇಲ್ಲಿಯೂ ಪ್ರಸ್ತುತವೇ.

(2) ತರ್ಕಶಾಸ್ತ್ರ ಮತ್ತು ಮೀಮಾಂಸಾ ಶಾಸ್ತ್ರ ಬೇರೆ ಬೇರೆ ಶಾಸ್ತ್ರಗಳಾಗಿವೆ. ಆದ್ದರಿಂದ ಶಾಸ್ತ್ರಭೇದ ಸಿದ್ಧಿಗೋಸ್ಕರ ಬ್ರಹ್ಮತರ್ಕದಲ್ಲಿ ವಿಸ್ತಾರವಾಗಿ ಹೇಳಿದ್ದನ್ನು ಇಲ್ಲಿ ಸಂಕ್ಷೇಪವಾಗಿ ಹೇಳಲಾಗಿದೆ. ವೇದಪ್ರಾಮಾಣ್ಯಾದಿಗಳನ್ನು ಇಲ್ಲಿಯೂ ವಿಸ್ತಾರವಾಗಿ ಹೇಳಿದ್ದರೆ ತರ್ಕ ಮತ್ತು ಮೀಮಾಂಸಾಗಳಲ್ಲಿಯ ಶಾಸ್ತ್ರಭೇದ ಸಿದ್ಧಿಸುತ್ತಿದ್ದಿಲ್ಲ. ಹೀಗೆ ಅಂಗಾಂಗಿ ಭಾವ ಮತ್ತು ಶಾಸ್ತ್ರಭೇದ ಸಿದ್ಧಿಸಲು ಇಲ್ಲಿ ವೇದ ಪ್ರಾಮಾಣ್ಯಾದಿಗಳ ಸಂಕ್ಷೇಪ ನಿರೂಪಣೆಯು ಸೂತ್ರದಲ್ಲಿಯ ಅತಃ ಶಬ್ದದಿಂದ ಸೂಚಿತವಾಗಿದೆ.

ಒಟ್ಟು ವಿದ್ಯೆಗಳು ಹದಿನಾಲ್ಕು (14). ಇವುಗಳ ನಿರೂಪಣೆ ತಲವಕಾರೋಪನಿಷತ್ತಿನಲ್ಲಿದೆ. ಇಲ್ಲಿ ರಹಸ್ಯ ವಿದ್ಯೋತ್ಪತ್ತಿ ಕಾರಣಗಳು, ನಾಲ್ಕು ವೇದ, ಎಲ್ಲ ವೇದಾಂಗಗಳು ಮತ್ತು ಮೀಮಾಂಸಾ ಶಾಸ್ತ್ರವೆಂದು ಹೇಳಲಾಗಿದೆ. ಎಂದರೆ ಉಪನಿಷತ್ತಿನಲ್ಲಿಯ ರಹಸ್ಯ ವಿದ್ಯಾಜ್ಞಾನವು, ವೇದ— ವೇದಾಂಗ ಮತ್ತು ಮೀಮಾಂಸಾ ಶಾಸ್ತ್ರದಿಂದಾಗುತ್ತದೆ ಎಂದು ಅಭಿಪ್ರಾಯ. "ವೇದಾಃ ಸರ್ವಾಂಗಾಣಿ ಸತ್ಯಂ ಆಯತನಂ" [ಆಯತನಂ-ವಿದ್ಯೋತ್ಪತ್ತಿ ಕಾರಣಂ; (ಸ್ಥಾನಂ)].

ಸುಧೋಕ್ತ ರೀತಿಯಿಂದ ಹದಿನಾಲ್ಕು ವಿದ್ಯೆಗಳ ವಿವೇಚನ ಕೆಳಗಿನಂತಿದೆ.
**ವೇದ :** ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂಬ ನಾಲ್ಕು ವೇದಗಳು.

**ಸರ್ವಾಂಗಾಣಿ :** ಪುರಾಣ, ಸ್ಮೃತಿ, ತರ್ಕಶಾಸ್ತ್ರ ಹಾಗೂ ಶಿಕ್ಷಾ–ಕಲ್ಪ–ವ್ಯಾಕರಣ–ನಿರುಕ್ತ–ಛಂದಸ್–ಜ್ಯೋತಿಷ್ಯ ಎಂಬ ಷಡಂಗಗಳು.
**ಸತ್ಯಂ** – ಮೀಮಾಂಸಾ ಶಾಸ್ತ್ರ. ಇದು ಯುಕ್ತಿಗಳಿಂದ ಶ್ರುತಿಸ್ಮೃತಿಗಳಲ್ಲಿ ನಿರೂಪಿತವಾದ ವಿಷಯಗಳನ್ನು ನಿರ್ಣಯಿಸುತ್ತದೆ.

ಒಟ್ಟನಲ್ಲಿ 4 ವೇದ, ಪುರಾಣ–ಸ್ಮೃತಿ–ತರ್ಕ ಎಂಬ ಮೂರರಿಂದ ಸಹಿತ ವಾದ ಷಡಂಗಗಳು ಮತ್ತು ಮೀಮಾಂಸಾ ಶಾಸ್ತ್ರ– ಹೀಗೆ ಹದಿನಾಲ್ಕು ವಿದ್ಯೆಗಳಿವೆ. (4+3+6+1 = 14).

**ಪ್ರಮಾಣನ್ಯಾಯಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ ।**
**ಮಾನನ್ಯಾಯೈಸ್ತು ತತ್ಸಿದ್ಧೈರ್ಮೀಮಾಂಸಾ ಮೇಯ-**
**ಶೋಧನಂ ॥೭೫॥**

**ಅವತರಣಿಕೆ :** ತರ್ಕ ಮತ್ತು ಮೀಮಾಂಸಾ ಶಾಸ್ತ್ರಗಳು ಬೇರೆ ಬೇರೆ ಎಂಬುದನ್ನು ಸಮರ್ಥಿಸುತ್ತಾರೆ.

**ಅನುವಾದ :** ಪ್ರತ್ಯಕ್ಷಾದಿ ಪ್ರಮಾಣಗಳು, ವ್ಯಾಪ್ತಿ ಅಥವಾ ಅನಿಷ್ಟ ಪ್ರಸಂಜನ ತರ್ಕ (ನ್ಯಾಯ), ಉದ್ದೇಶ–ಲಕ್ಷಣ–ವಿಭಾಗ–ಪರೀಕ್ಷಾಗಳಿಂದ ನಿರೂಪಣೆ–(ಸಚ್ಛಿಕ್ಷಾ) ಇವು ಬ್ರಹ್ಮತರ್ಕವೆಂಬ ತರ್ಕಶಾಸ್ತ್ರದಿಂದ ಮಾಡಲ್ಪಟ್ಟಿವೆ. ಮೀಮಾಂಸಾ ಶಾಸ್ತ್ರವಾದರೋ ತರ್ಕಶಾಸ್ತ್ರದಿಂದ ಸಿದ್ಧವಾದ ಪ್ರಮಾಣ ನ್ಯಾಯಗಳಿಂದ ಪ್ರಮೇಯಗಳ ಯಥಾರ್ಥ ನಿರೂಪಣೆಯನ್ನು ಮಾಡುತ್ತದೆ. (ಪ್ರಮೇಯಗಳ ಯಥಾರ್ಥ ನಿರೂಪಣಾರೂಪ ವಿಚಾರವು ತರ್ಕಶಾಸ್ತ್ರದಿಂದ ಸಿದ್ಧವಾದ ನ್ಯಾಯಗಳ ಮೂಲಕ ಮೀಮಾಂಸಾ ಶಾಸ್ತ್ರದಿಂದ ಮಾಡಲ್ಪಡುತ್ತದೆ.)

**ವಿವರಣೆ :** (1) ತರ್ಕಶಾಸ್ತ್ರ ಮತ್ತು ಮೀಮಾಂಸಾ ಶಾಸ್ತ್ರಗಳಲ್ಲಿ ನಿರೂಪಿಸಲ್ಪಟ್ಟ ವಿಷಯಗಳು ಬೇರೆ ಬೇರೆ. ಮತ್ತು ಆ ಶಾಸ್ತ್ರಗಳೂ ಬೇರೆ ಬೇರೆ ಎಂದು ತಿಳಿಯಬೇಕು. ವಿಷಯ ಭೇದವಿಲ್ಲದಿದ್ದರೆ ಶಾಸ್ತ್ರಭೇದ ಸಿದ್ಧಿಸುವದಿಲ್ಲ. ಹೀಗೆ ಶಾಸ್ತ್ರ ಭೇದವಿರುವದರಿಂದ ವೇದಪ್ರಾಮಾಣ್ಯಾದಿಗಳು ಬ್ರಹ್ಮ ತರ್ಕದಲ್ಲಿ ವಿಸ್ತಾರ ವಾಗಿಯೂ, ಪ್ರಮೇಯ ವ್ಯಕ್ತ್ಯಾದನೆಗಾಗಿರುವ ಪ್ರಸ್ತುತ ಬ್ರಹ್ಮ ಮೀಮಾಂಸಾ, ಶಾಸ್ತ್ರದಲ್ಲಿ (ಬ್ರಹ್ಮಸೂತ್ರಗಳಲ್ಲಿ) ಸಂಕ್ಷಿಪ್ತವಾಗಿಯೂ ನಿರೂಪಿಸಲ್ಪಟ್ಟಿವೆ.

(2) ತರ್ಕಶಾಸ್ತ್ರದಿಂದ ಇಲ್ಲಿ ನಿರೂಪಿಸಲ್ಪಟ್ಟ ವಿಷಯಗಳೆಂದರೆ ಪ್ರತ್ಯಕ್ಷಾದಿ ಪ್ರಮಾಣ, ವ್ಯಾಪ್ತಿ, ತರ್ಕ ಮುಂ, ಪ್ರಮಾಣವೆಂದರೆ ಪ್ರತ್ಯಕ್ಷ–ಅನುಮಾನ–ಆಗಮ ಎಂಬ ಪ್ರಮಾಣ ಅಥವಾ ಪ್ರತ್ಯಕ್ಷ–ಅಗಮ ಎಂಬ ಪ್ರಮಾಣ. ನ್ಯಾಯ ಎಂದರೆ ಅನುಮಾನಅಥವಾ ಅನುಮಾನದ ಅಂಗವಾದ ವ್ಯಾಪ್ತಿ, ಅನಿಷ್ಟ ಪ್ರಸಂಜನ ರೂಪ ತರ್ಕ. ಅಥವಾ ಪ್ರಮಾಣ ನ್ಯಾಯ ಎಂದರೆ ಪ್ರತ್ಯಕ್ಷಾದಿ ಪ್ರಯಾಣಗಳ ಸ್ವರೂಪ-ಪ್ರಕಾರ ಮತ್ತು ಸಂಖ್ಯೆ, ಸಚ್ಛಿಕ್ಷಾ ಎಂದರೆ ಉದ್ದೇಶ–ಲಕ್ಷಣ–ವಿಭಾಗ ಪರೀಕ್ಷೆಗಳಿಂದ ನಿರೂಪಣೆ)

(3) ತರ್ಕಶಾಸ್ತ್ರ : ತರ್ಕಶಾಸ್ತ್ರದಿಂದ ಸಿದ್ಧವಾದ ಯುಕ್ತಿಗಳನ್ನು ಮೀಮಾಂಸಾ ದಲ್ಲಿ ಬಳಸಿರುವದರಿಂದ ತರ್ಕಶಾಸ್ತ್ರವು ಮೀಮಾಂಸಾ ಶಾಸ್ತ್ರದ ಅಂಗವೆಂದು ಸೂಚಿತ ವಾಗುತ್ತದೆ. ಆದ್ದರಿಂದ ಅಂಗವಾದ ಬ್ರಹ್ಮತರ್ಕದಲ್ಲಿ ಪ್ರಕೃತವಾದ ವೇದ

ಪ್ರಾಮಾಣ್ಯ ಮೊದಲಾದವನ್ನು ಇಲ್ಲಿ ವಿಚಾರಿಸುವದು ಅಪ್ರಸ್ತುತವಲ್ಲವೆಂದು ತಿಳಿಯಬೇಕು.

**ಬ್ರಹ್ಮತರ್ಕಂ ಚ ಭಗವಾನ್ ಸ ಏವ ಕೃತವಾನ್ ಪ್ರಭುಃ ।**
**ಪಂಚಾಶತ್‌ಕೋಟಿವಿಸ್ತಾರಾನ್ನಾರಾಯಣತನೌ ಕೃತಾತ್ ॥೭೬॥**
**ಉದ್ಧೃತ್ಯ ಪಂಚಸಾಹಸ್ರಂ ಕೃತವಾನ್ ಬಾದರಾಯಣಃ ।**
**ಅತಸ್ತದರ್ಥಂ ಸಂಕ್ಷೇಪಾದತ ಇತ್ಯಭ್ಯಸೂಚಯತ್ ॥೭೭॥**

**ಅವತರಣಿಕೆ :** ಈ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಪ್ರಮಾಣಗಳ ಮತ್ತು ಯುಕ್ತಿಗಳ ನಿರೂಪಣೆಯು ಮೀಮಾಂಸಾಂಗವಾದ ಬ್ರಹ್ಮತರ್ಕವೆಂಬ ಗ್ರಂಥವನ್ನಾ ಧರಿಸಿದೆ ಎಂದು 75ನೇ ಶ್ಲೋಕದಲ್ಲಿ ಹೇಳಿದ್ದು ಅಯುಕ್ತ, ಏಕೆಂದರೆ ಸೂತ್ರ ಕಾರರೇ "ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ" (II-2-11) ಎಂಬ ಸೂತ್ರದಲ್ಲಿ ತರ್ಕಶಾಸ್ತ್ರವನ್ನು ನಿರಾಕರಿಸಿದ್ದಾರೆ– ಎಂಬ ಸಂದೇಹವನ್ನು ಇಲ್ಲಿ ಪರಿಹರಿಸುತ್ತಾರೆ.

**ಅನುವಾದ :** ಬ್ರಹ್ಮಸೂತ್ರ ರಚಿಸಿದ ಆ ಪೂಜ್ಯ ಪ್ರಭು ದೇದವ್ಯಾಸರೇ ಬ್ರಹ್ಮ ತರ್ಕ ಗ್ರಂಥವನ್ನು ರಚಿಸಿದ್ದಾರೆ. ವೇದವ್ಯಾಸರು ತಾವು ನಾರಾಯಣಾವತಾರದಲ್ಲಿ ರಚಿಸಿದ 50 ಕೋಟಿ ಶ್ಲೋಕ ವಿಸ್ತಾರವುಳ್ಳ ಬ್ರಹ್ಮತರ್ಕ ಗ್ರಂಥದಿಂದ ಕೆಲವು ಅರ್ಥ ಗಳನ್ನು ಹೊರತೆಗೆದು, ಐದು ಸಹಸ್ರ ಶ್ಲೋಕಗಳುಳ್ಳ ಬ್ರಹ್ಮತರ್ಕವೆಂಬ ಗ್ರಂಥ ರಚಿಸಿದರು. ಆದ್ದರಿಂದ ಅಂಗಭೂತ ತರ್ಕಶಾಸ್ತ್ರದಲ್ಲಿ ನಿರೂಪಿತವಾದ ವೇದ ಪ್ರಾಮಾಣ್ಯಾದಿಗಳನ್ನು (ಅವು ಇಲ್ಲಿಯೂ ಪ್ರಕೃತವಾದ್ದರಿಂದ) ಸೂತ್ರದಲ್ಲಿ ಅತಃ ಶಬ್ದದಿಂದ ಸಂಕ್ಷೇಪವಾಗಿ ಸೂಚಿಸಿದರು.

**ವಿವರಣೆ :** ತರ್ಕಶಾಸ್ತ್ರವನ್ನು ದ್ವಿತೀಯಾಧ್ಯಾಯದ ದ್ವಿತೀಯ ಪಾದದಲ್ಲಿ 11 ನೆಯ ಸೂತ್ರದಲ್ಲಿ ನಿರಾಕರಿಸಿರುವದರಿಂದ ಸೂತ್ರವಿರೋಧಿಯಾದ ತರ್ಕಶಾಸ್ತ್ರವು ಪ್ರಸ್ತುತ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ (ಬ್ರಹ್ಮಸೂತ್ರಗಳಿಗೆ) ಅಂಗ ಹೇಗೆ ಆಗು ತ್ತದೆ ? ವಿರೋಧಿ ತರ್ಕಶಾಸ್ತ್ರದಲ್ಲಿ ಪ್ರಸ್ತುತವಾದ ವೇದಪ್ರಾಮಾಣ್ಯಾದಿಗಳನ್ನು ಬ್ರಹ್ಮಸೂತ್ರದಲ್ಲಿ ಅತಃ ಶಬ್ದದಿಂದ ಪರಾಮರ್ಶಿಸುವದು ಅದು ಹೇಗೆ ಯುಕ್ತ ? ಈ ಮೊದಲಾದ ಸಂದೇಹಗಳನ್ನು ಇಲ್ಲಿ ಪರಿಹರಿಸಲಾಗಿದೆ.

ಸೂತ್ರಕಾರರು ನಿರಾಕರಿಸಿದ್ದು ಕಣಾದ- ಅಕ್ಷಪಾದರಿಂದ ರಚಿತವಾದ ತರ್ಕ ಶಾಸ್ತ್ರವನ್ನು. ಆದ್ದರಿಂದ ಯಾವ ಸಂದೇಹಕ್ಕೂ ಅವಕಾಶವಿಲ್ಲ. ಬ್ರಹ್ಮತರ್ಕ ಗ್ರಂಥವು ನಮಗೆ ಸಂಪೂರ್ಣ ಮಾನ್ಯವಾಗಿದೆ. ಏಕೆಂದರೆ ಸೂತ್ರಕಾರರಾದ ವೇದ ವ್ಯಾಸರಿಂದಲೇ ಅದು ರಚಿತವಾಗಿದೆ. ಇದರಲ್ಲಿ ಐದು ಸಹಸ್ರ ಶ್ಲೋಕಗಳಿವೆ. ಈ

ಗ್ರಂಥವನ್ನು ವೇದವ್ಯಾಸರು ತಮ್ಮ ಹಿಂದಿನ ನಾರಾಯಣಾವತಾರದಲ್ಲಿ ರಚಿಸಿದ ಐವತ್ತು ಕೋಟಿ ಶ್ಲೋಕ ವಿಸ್ತಾರವುಳ್ಳ ಬ್ರಹ್ಮತರ್ಕವೆಂದೇ ಹೆಸರುಳ್ಳ ಗ್ರಂಥದಿಂದ ಕೆಲವೊಂದು ಅರ್ಥಗಳನ್ನು ಆಯ್ದು ರಚಿಸಿದ್ದಾರೆ. ಆದ್ದರಿಂದ ವೇದವ್ಯಾಸ ವಿರಚಿತ ಬ್ರಹ್ಮತರ್ಕ ಗ್ರಂಥವು ಅತ್ಯಂತ ಪ್ರಮಾಣ. ಇದು ಪ್ರಸ್ತುತ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅಂಗವಾಗಿದೆ. ಆದ್ದರಿಂದ ಅಂಗ ಶಾಸ್ತ್ರದಲ್ಲಿ ಪ್ರಕೃತವಾದ ವೇದ ಪ್ರಾಮಾಣ್ಯ ಮೊದಲಾದವು, ಇಲ್ಲಿಯೂ ಪ್ರಕೃತವೇ. ಮೂಲರೂಪಿ ವಿಷ್ಣು ತನ್ನ ನಾರಾಯಣಾವತಾರದಲ್ಲಿ ಬ್ರಹ್ಮತರ್ಕವನ್ನು ರಚಿಸಿದ್ದರಿಂದ ಬ್ರಹ್ಮತರ್ಕವು ವಿಷ್ಣು ವಿರಚಿತವೆಂಬುದೂ ಮಾನ್ಯವೇ.

**ಟೀಪು :** ಬ್ರಹ್ಮತರ್ಕವೆಂಬ ಹೆಸರುಳ್ಳ ಎರಡು ತರ್ಕಗ್ರಂಥಗಳಿವೆ. ಎರಡೂ ಪ್ರಮಾಣಗಳೇ. ಒಂದು ನಾರಾಯಣಾವತಾರದಲ್ಲಿ ಮಾಡಿದ್ದು ಮತ್ತೊಂದು ವೇದವ್ಯಾಸ ರಚಿತವಾದದ್ದು. ನಾರಾಯಣ ಮತ್ತು ವೇದವ್ಯಾಸರು ವಿಷ್ಣುವಿನ ಸಾಕ್ಷಾತ್ ಅವತಾರ. ಆದ್ದರಿಂದ ಬ್ರಹ್ಮತರ್ಕ ವಿಷ್ಣುರಚಿತವೆಂದೂ ಕೆಲವೆಡೆ ಉಲ್ಲೇಖವಿದೆ.

**ಯತೋಽನುಭವತಃ ಸರ್ವಂ ಸಿದ್ಧಮೇತದತೋಽಪಿಚ ।**
**ದೇವೈಶ್ಚ ದುರ್ಗಮಾರ್ಥೇಷು ವ್ಯಾಪೃತೋ ನಾತಿವಿಸ್ತೃತಿಂ ॥೭೮॥**
**ಚಕಾರೈತಾ ಹ್ಯನಜ್ಞೇಯಾ ಯುಕ್ತಯಃ ಪ್ರತಿಪಕ್ಷಗಾಃ ॥೭೯॥**

**ಅವತರಣಿಕೆ ;** ಅತಃ ಶಬ್ದದ ವೇದಪ್ರಾಮಾಣ್ಯಾದಿ ನಾಲ್ಕು ಅರ್ಥಗಳು ಅಪ್ರಕೃತ ಮತ್ತು ಅವುಗಳ ಸಂಕ್ಷಿಪ್ತ ನಿರೂಪಣೆ ಅಯುಕ್ತ ಎಂಬ ಹಿಂದಿನ ಎರಡು ಸಂದೇಹ ಗಳನ್ನು ಇನ್ನೊಂದು ರೀತಿಯಿಂದ ಪರಿಹರಿಸಿ, ಎರಡನೇ ಸಂದೇಹವನ್ನು ಮತ್ತೆ ಬೇರೆ ಎರಡು ರೀತಿಯಿಂದ ಪರಿಹರಿಸುತ್ತಾರೆ.

**ಅನುವಾದ:**ಜಗತ್‌ಸತ್ಯತ್ವ ಮೊದಲಾದವು ಎಲ್ಲರ ಅನುಭವದಿಂದ ಸಿದ್ಧವಾದ್ದರಿಂದ, ಅವು ಅತಿ ಸ್ಪಷ್ಟವಾದ್ದರಿಂದ ಸೂತ್ರಕಾರರು, ಬಂಧ ಸತ್ಯತ್ವಾದಿ ಯುಕ್ತಿಗಳನ್ನು ಅತಃ ಶಬ್ದದಿಂದ ಸಂಕ್ಷೇಪವಾಗಿ ಸೂಚಿಸಿದರು, ದೇವತೆಗಳ ಪ್ರಾರ್ಥನೆ ಮೂಲಕ ದುರ್ಗಮವಾದ ಅರ್ಥಗಳುಳ್ಳ ವೇದಗಳಲ್ಲಿ, ವೇದಾರ್ಥವಿಚಾರದಲ್ಲಿ ಪ್ರವೃತ್ತ ರಾದ ವೇದವ್ಯಾಸರು, ಬಂಧ ಸತ್ಯತ್ವಾದಿ ಯುಕ್ತಿಗಳನ್ನು ಅತಿ ವಿಸ್ತಾರವಾಗಿ ನಿರೂಪಿಸಲಿಲ್ಲ ಪ್ರತಿವಾದಿಗಳ ಬಂಧಮಿಥ್ಯತ್ವಾದಿ ಯುಕ್ತಿಗಳು ದುರ್ಬಲವಾದುದ ರಿಂದ ಉಪೇಕ್ಷೆಗೆ ಅರ್ಹವಾಗಿವೆ.

**ವಿವರಣೆ :** ಹಿಂದಿನ ಎರಡು ಸಂದೇಹಗಳನ್ನು ಬೇರೊಂದು ರೀತಿಯಿಂದ (ಪ್ರಕಾರಾಂತರೇಣ) ಪರಿಹರಿಸುತ್ತಾರೆ. ಪ್ರಸಕ್ತ ಎಂದರೆ ವಕ್ತೃ–ಶ್ರೋತೃ ಬುದ್ಧಿಸ್ಥವಾದುದು, ಗ್ರಂಥೋಕ್ತವಾದದ್ದು ಕೂಡ ವಕ್ತೃ ಬುದ್ಧಿಸ್ಥವೇ.

ಆದ್ದರಿಂದ ಜಗತ್ಸತ್ಯತ್ವಾದಿಗಳು ಅಪ್ರಸ್ತುತವಲ್ಲ. ಸರ್ವಾನುಭವಸಿದ್ಧವಾದ್ದರಿಂದ ಅವು ಪ್ರಸ್ತುತವೇ. ಇನ್ನು ಇವು ಅತಿ ಸ್ಪಷ್ಟವಾದ್ದರಿಂದ ಇವುಗಳನ್ನು ಸೂತ್ರಕಾರರು ಸಂಕ್ಷೇಪವಾಗಿ ಅತಃ ಶಬ್ದದಿಂದ ಸೂಚಿಸಿದ್ದಾರೆ.

ಬಂಧ ಸತ್ಯತ್ವಾದಿ ಯುಕ್ತಿಗಳ ಸಂಕ್ಷೇಪ ನಿರೂಪಣೆಗೆ ಮತ್ತೆ ಎರಡು ಬೇರೆ ಕಾರಣ ಹೇಳುತ್ತಾರೆ, ಸುಲಭವಾದ ಪ್ರಮಾಣಾದಿಗಳನ್ನು ಬ್ರಹ್ಮತರ್ಕದಲ್ಲಿ ನಿರೂಪಿಸಿದ ಬಳಿಕ, ದೇವತೆಗಳ ಪ್ರಾರ್ಥನೆಯ ಮೇರೆಗೆ ದುರ್ಗಮವಾದ ವೇದಾರ್ಥಗಳಲ್ಲಿ, ವೇದಾರ್ಥ ನಿರ್ಣಯಕ ವಿಚಾರದಲ್ಲಿ ತೊಡಗಿದ ವೇದವ್ಯಾಸರು ಬಂಧ ಸತ್ಯತ್ವಾದಿಗಳನ್ನು ಸಂಕ್ಷೇಪವಾಗಿ ನಿರೂಪಿಸಿದರು. ಇದಲ್ಲದೆ ಪ್ರತಿವಾದಿಗಳು ನಿರೂಪಿಸುವ ಬಂಧಮಿಥ್ಯಾತ್ವಾದಿ ಯುಕ್ತಿಗಳು ದುರ್ಬಲವಾದ್ದರಿಂದ ಅವು ಉಪೇಕ್ಷಣೀಯವೆಂಬ ದೃಷ್ಟಿಯಿಂದ ಅವುಗಳನ್ನು ಸಂಕ್ಷೇಪವಾಗಿ ಸೂತ್ರಕಾರರು ನಿರಾಕರಿಸಿದ್ದಾರೆ.

**ಪ್ರತ್ಯಕ್ಷೇಕ್ಷಾಕ್ಷಮಃ ಪಕ್ಷಂ ಕಮೇವಾತ್ರಾಭಿವೀಕ್ಷತೇ ||೭೯||**
**ತಸ್ಮಾತ್ ಅಕ್ಷಮಪಕ್ಷತ್ವಾತ್ ಮೋಕ್ಷಶಾಸ್ತ್ರೇಽಭ್ಯುಪೇಕ್ಷಿತಃ ||೮೦||**

**ಅವತರಣಿಕೆ :** ವೇದಪ್ರಾಮಾಣ್ಯ ಒಪ್ಪದ ಬೌದ್ಧಾದಿಗಳ ಯುಕ್ತಿಗಳು ತಿರಸ್ಕಾರಾರ್ಹ ಆಗಲಿ. ಆದರೆ ವೇದಪ್ರಾಮಾಣ್ಯವನ್ನು ಅಂಗೀಕರಿಸುವವರ ಯುಕ್ತಿಗಳು ಅದು ಹೇಗೆ ತಿರಸ್ಕರಣೀಯ ಎಂಬ ಸಂದೇಹವನ್ನು ಪರಿಹರಿಸುತ್ತಾರೆ.

**ಅನುವಾದ :** ಪ್ರತ್ಯಕ್ಷ ಮತ್ತು ಸ್ಪಷ್ಟ ಪ್ರತೀತಿಯಿಂದ ಸಿದ್ಧವಾದ ವಿಷಯಗಳನ್ನೇ ಅರಿಯಲು ಅಸಮರ್ಥರಾದವರು ಈ ಬ್ರಹ್ಮವಿಷಯಕ ವಿಚಾರಶಾಸ್ತ್ರದಲ್ಲಿ (ಅತ್ರ) ಯಾವ ಪ್ರತಿಪಕ್ಷವನ್ನು ತಾನೇ ಕಲ್ಪಿಸಬಲ್ಲರು ? (ಪ್ರತಿಪಕ್ಷವನ್ನು ಕಲ್ಪಿಸಲಾರರು ಎಂದು ಅಭಿಪ್ರಾಯ). ಆದ್ದರಿಂದ ಅಸಮರ್ಥ ಪಕ್ಷವಾದ್ದರಿಂದ ಮೋಕ್ಷಶಾಸ್ತ್ರದಲ್ಲಿ ಅವರು ಆಗ್ರಹದಿಂದ ಪ್ರವೃತ್ತರಾದರೂ ಆ ಪಕ್ಷವು ಸೂತ್ರಕಾರರಿಂದ ಉಪೇಕ್ಷಿಸಲ್ಪಟ್ಟಿದೆ.

**ವಿವರಣೆ :** ವೇದಪ್ರಾಮಾಣ್ಯವನ್ನು ಒಪ್ಪದ ಬೌದ್ಧಾದಿಗಳ ಯುಕ್ತಿಗಳನ್ನು ತಿರಸ್ಕರಿಸಬಹುದು. ಆದರೆ ವೇದಪ್ರಾಮಾಣ್ಯವನ್ನು ಒಪ್ಪುವ ಮಾಯಾವಾದಿಗಳ ಬಂಧ ಮಿಥ್ಯಾತ್ವಾದಿ ಯುಕ್ತಿಗಳನ್ನು ನಿರಾಕರಿಸುವದು ಅಯುಕ್ತ, ಎಂಬ ಸಂದೇಹವನ್ನು ಇಲ್ಲಿ ಪರಿಹರಿಸುತ್ತಾರೆ. ಸ್ಪಷ್ಟ ಪ್ರತೀತಿಯಿಂದ (ಪ್ರತ್ಯಕ್ಷೇಕ್ಷಾ) ಸಿದ್ಧವಾಗುವ ವಿಷಯುಗಳನ್ನೇ ಎಂದರೆ ದುಃಖಾದಿಗಳ ಸತ್ಯತ್ವ ಮೊದಲಾದವನ್ನು ಅರಿಯಲು ಅಸಮರ್ಥರಾದವರು ಬ್ರಹ್ಮ ಮೀಮಾಂಸಾ ಶಾಸ್ತ್ರದಲ್ಲಿ ಸಮರ್ಥ ಪ್ರತಿಪಕ್ಷವನ್ನು ಸರ್ವಥಾ ಕಲ್ಪಿಸಲಾರರು. ಹೀಗೆ ಅವರ ಪಕ್ಷ ದುರ್ಬಲವಾಗಿದೆ. ಅವರು ದುರಾಗ್ರಹದಿಂದ ವೇದಶಾಸ್ತ್ರದಲ್ಲಿ ಪ್ರವೃತ್ತರಾಗಿದ್ದಾರೆ. ಅಂತೆಯೇ

ಸೂತ್ರಕಾರರು ಆ ಪಕ್ಷವನ್ನು ಉಪೇಕ್ಷಿಸಿ ವಿಸ್ತಾರದಿಂದ ನಿರಾಕರಿಸಿಲ್ಲ.

ಇಲ್ಲಿಯ ಅಭಿಪ್ರಾಯ ಹೀಗಿದೆ, ಸಾಮಾನ್ಯ ಲೌಕಿಕರಿಗೆ ಸುಲಭವಾಗಿ ತಿಳಿಯುವ ಜಗತ್ಸತ್ಯತ್ವ, ಬಂಧಸತ್ಯತ್ವವನ್ನೇ ಅರಿಯದವರಿಗೆ ಅಲೌಕಿಕಾರ್ಥ ತಿಳಿಸಲು ಹೊರಟ ವೇದ ವಿಚಾರದಲ್ಲಿ ಅಧಿಕಾರವೇ ಇಲ್ಲ. ವೇದವು ಮೋಕ್ಷ ಶಾಸ್ತ್ರವೆಂದು ಪ್ರಸಿದ್ಧವಾಗಿದೆ. ಭಗವಂತನನ್ನು ಸಂತೋಷಗೊಳಿಸುವದರಿಂದ (ತತ್ಪ್ರೀಣನಾತ್) ಎಲ್ಲರೂ ಮೋಕ್ಷ ಪಡೆಯುತ್ತಾರೆ. ಆದ್ದರಿಂದ ವೇದವು ಭಗವತ್ಪರವಾಗಿದೆ. ಆದರೆ ವೇದವು ಸ್ವರ್ಗದಲ್ಲಿಯೇ ಪರ್ಯವಸಾನ ಹೊಂದುತ್ತದೆಂದು ಹೇಳುವ ಅವರಿಗೆ ಮೋಕ್ಷಶಾಸ್ತ್ರದಲ್ಲಿ ಅಧಿಕಾರವಿಲ್ಲ. ಆದರೂ ಅವರು ಉದ್ಧಟತನದಿಂದ (ವೈಯಾತ್ಯಾತ್) ಪ್ರವೃತ್ತರಾಗುತ್ತಾರೆ. ಆದ್ದರಿಂದ ಅವರು ಸಮರ್ಥ ಪ್ರತಿಪಕ್ಷಿಗಳೇ ಆಗಲಾರರು. ಹೀಗೆ ಒಟ್ಟಿನಲ್ಲಿ ನಿರ್ದಳ ಯುಕ್ತಿಗಳುಳ್ಳ ಬಾಧಮಿಥ್ಯಾತ್ವ ಮೊದಲಾದ ವಾದ ಉಪೇಕ್ಷಣೀಯ. ಅಂತೆಯೇ ಸೂತ್ರಕಾರರು ಅದನ್ನು ಉಪೇಕ್ಷಿಸಿ ವಿಸ್ತಾರದಿಂದ ನಿರಾಕರಿಸುವ ಗೋಜಿಗೆ ಹೋಗಿಲ್ಲ.



**ಸ್ವಯಂ ಭಗವತಾ ವಿಷ್ಣುರ್ಬ್ರಹ್ಮೇತ್ಯೇತತ್ಪುರೋದಿತಮ್ ॥೮೦॥**
**ಸ ವಿಷ್ಣುರಾಹ ಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ ।**
**ಆದ್ಯಂತಂ ದೇವಶಾಸ್ತ್ರಸ್ಯ ಸ್ವಯಂ ಭಗವತಾ ಕೃತಮ್ ॥೮೧॥**
**ಮಧ್ಯಂ ತದಾಜ್ಞಯಾ ಶೇಷಪೈಲಾಭ್ಯಾಂ ಕೃತಮಂಜಸಾ ।**
**ಅತಸ್ತತ್ರೈವ ವಿಷ್ಣುತ್ವಸಿದ್ಧೇರ್ಬ್ರಹ್ಮೇತ್ಯಸೂಚಯೇತ್ ॥೮೨॥**

**ಅವತರಣಿಕೆ :** ಹೀಗೆ ಅತಃ ಶಬ್ದವನ್ನು ವ್ಯಾಖ್ಯಾನಿಸಿ ಕ್ರಮಪ್ರಾಪ್ತವಾದ ಸೂತ್ರದ ಬ್ರಹ್ಮಶಬ್ದಾರ್ಥವು ವಿಷ್ಣು ಎಂದು ಸಮರ್ಥಿಸುತ್ತಾರೆ.

**ಅನುವಾದ :** ಸ್ವಯಂ ಸೂತ್ರಕಾರರಾದ ಪೂಜ್ಯ ವೇದವ್ಯಾಸರಿಂದ ಈ ಸೂತ್ರದ ಮೊದಲು (ಪುರಾ) "ವಿಷ್ಣು ಬ್ರಹ್ಮ" ಎಂದು ಹೇಳಲ್ಪಟ್ಟಿದೆ. ವೇದ ವ್ಯಾಸರಿಂದ (ಈ ಪ್ರಥಮ, ಸೂತ್ರದ ಮೊದಲಿರುವ) ದೇವ ಮೀಮಾಂಸಾ ಶಾಸ್ತ್ರದ ಕೊನೆಗೆ "ಸ ವಿಷ್ಣು ರಾಹ ಹಿ" "ತಂ ಬ್ರಹ್ಮೇತ್ಯಾಚಕ್ಷತೇ" ಎಂದು ಹೇಳಲ್ಪಟ್ಟದ್ದು ಪುರಾಣಾದಿಗಳಲ್ಲಿ ಪ್ರಸಿದ್ಧವಿದೆ. ದೇವ ಮೀಮಾಂಸಾದ ಆದಿ ಸೂತ್ರ (ಅಥಾತೋ ದೈವೀ ಮೀಮಾಂಸಾ) ಮತ್ತು ಕೊನೆಯ ಎರಡು ಸೂತ್ರಗಳು (ಸ ವಿಷ್ಣುರಾಹ ಹಿ, ತಂ ಬ್ರಹ್ಮೇತ್ಯಾಚಕ್ಷತೇ) ಸ್ವತಃ ಸೂತ್ರಕಾರರಾದ ವೇದವ್ಯಾಸರಿಂದಲೇ ರಚಿತವಾಗಿವೆ. ಮಧ್ಯದಲ್ಲಿಯ ಸೂತ್ರಗಳು ವೇದವ್ಯಾಸರ ಆಜ್ಞೆಯ ಮೇರೆಗೆ ಶೇಷ, ಪೈಲರಿಂದ ಚನ್ನಾಗಿಯೇ (ಅಂಜಸಾ) ರಚಿತವಾಗಿವೆ.

ಆದ್ದರಿಂದ ದೇವಮೀಮಾಂಸಾದ ಕೊನೆಯ ಸೂತ್ರಗಳಲ್ಲಿಯೇ (ತತ್ರೈವ) ಬ್ರಹ್ಮ ಶಬ್ದಕ್ಕೆ ವಿಷ್ಣು ಎಂಬ ಅರ್ಥ ಪ್ರಸಕ್ತವಾದ್ದರಿಂದ (ಸಿದ್ಧೇಃ) ಈ ಪ್ರಥಮ ಸೂತ್ರದಲ್ಲಿಯೂ ಬ್ರಹ್ಮ ಎಂದರೆ ವಿಷ್ಣುವೇ ಎಂದು ಸೂತ್ರಕಾರರು ಸೂಚಿಸಿದ್ದಾರೆ.

**ವಿವರಣೆ :** ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ— ಎಂಬ ಪ್ರಥಮ ಸೂತ್ರದಲ್ಲಿಯ ಬ್ರಹ್ಮ ಎಂದರೆ ವಿಷ್ಣು ಎಂದು ಸಮರ್ಥಿಸುತ್ತಾರೆ. ಬ್ರಹ್ಮ ಶಬ್ದಕ್ಕೆ ಬ್ರಹ-ಜಾತಿ-ಜೀವ-ಕಮಲಾಸನ ಶಬ್ದರಾಶಿ ಮೊದಲಾದ ಅನೇಕ ಅರ್ಥಗಳಿವೆ. ಬ್ರಹ್ಮ ಎಂದರೆ ವಿಷ್ಣು ಎಂಬ ಬಗ್ಗೆ ಜ್ಞಾನ ವೃದ್ಧರ ಪ್ರಮಾಣಗಳೂ ಇವೆ. ಆದರೂ ಈ ಮೊದಲು 11ನೇ ಶ್ಲೋಕದಲ್ಲಿ "ಜಿಜ್ಞಾಸ್ಯೋಽಯಂ ವಿಧೀಯತೇ" ಎಂಬಲ್ಲಿ ನಿರೂಪಿಸಿದಂತೆ ಬ್ರಹ್ಮ ಎಂದರೆ ವಿಷ್ಣುವೇ, ಏಕೆಂದರೆ ಸೂತ್ರಕಾರರೇ ಬ್ರಹ್ಮ ಶಬ್ದವನ್ನು ವಿಷ್ಣು ವಿಷಯಕವಾಗಿ ಪ್ರಯೋಗಿಸಿದ್ದು ಪ್ರಕರಣಾನುಸಾರವಾಗಿ ತಿಳಿದು ಬರುತ್ತದೆ.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬುದು ಒಂದನೆಯ ಬ್ರಹ್ಮಸೂತ್ರ. ಆದರೆ ಬ್ರಹ್ಮಸೂತ್ರಗಳಿಗಿಂತ ಮೊದಲು ನಾಲ್ಕು ಅಧ್ಯಾಯಗಳುಳ್ಳ ದೈವೀ ಮೀಮಾಂಸಾ; ಹಾಗೂ ಅವಕ್ಕಿಂತ ಮೊದಲು ಹನ್ನೆರಡು ಅಧ್ಯಾಯಗಳುಳ್ಳ ಜೈಮಿನಿಯ ಪೂರ್ವ (ಕರ್ಮ) ಮೀಮಾಂಸಾ ಶಾಸ್ತ್ರಗಳಿವೆ. ಹೀಗೆ ಒಟ್ಟು ಮೀಮಾಂಸಾ ಶಾಸ್ತ್ರದಲ್ಲಿ ಇಪ್ಪತ್ತು (20) ಅಧ್ಯಾಯಗಳಿವೆ; (12+4+4 = 20) ದೈವೀ ಮೀಮಾಂಸಾದ "ಅಥಾತೋ ದೈವೀ ಮೀಮಾಂಸಾ" ಎಂಬ ಒಂದನೆಯ ಸೂತ್ರ ಮತ್ತು "ಸ ವಿಷ್ಣುರಾಹ ಹಿ", "ತಂ ಬ್ರಹ್ಮೇತ್ಯಾಚಕ್ಷತೆ" ಎಂಬ ಕೊನೆಯ ಎರಡು ಸೂತ್ರಗಳನ್ನು ಪ್ರಸಕ್ತ ಬ್ರಹ್ಮಸೂತ್ರಕಾರರಾದ ವೇದವ್ಯಾಸರೇ ರಚಿಸಿದ್ದಾರೆ. ಮಧ್ಯದಲ್ಲಿರುವ ಉಳಿದ ಸೂತ್ರಗಳನ್ನು ವೇದವ್ಯಾಸರ ಆಜ್ಞೆಯ ಮೇರೆಗೆ ಶೇಷ ಮತ್ತು ಪೈಲರು ಚೆನ್ನಾಗಿಯೇ ರಚಿಸಿದ್ದಾರೆ. ಹೀಗೆ ವೇದವ್ಯಾಸರಿಂದಲೇ ರಚಿತವಾದ ಕೊನೆಯ ಎರಡು ಸೂತ್ರಗಳಲ್ಲಿ ಬ್ರಹ್ಮ ಶಬ್ದವು ವಿಷ್ಣು ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಹಾಗೂ ಈ ಎರಡೂ ಸೂತ್ರಗಳ ನಂತರವೇ "ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಎಂಬ ಪ್ರಸಕ್ತ ಸೂತ್ರವಿದೆ. ಆದ್ದರಿಂದ ಈ ಸೂತ್ರದಲ್ಲಿಯ ಬ್ರಹ್ಮಶಬ್ದಕ್ಕೆ ವಿಷ್ಣು ಎಂಬ ಅರ್ಥವನ್ನೇ ಸೂತ್ರಕಾರರು ಸೂಚಿಸಿರುವದಾಗಿ ತಿಳಿದು ಬರುತ್ತದೆ.

**ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ ।**
**ಗುಣಾ ನಾರಾ ಇತಿ ಜ್ಞೇಯಾಸ್ತದ್ವಾನ್ನಾರಾಯಣಃ ಸ್ಮೃತಃ ॥೮೩॥**
**ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಮ್ ।**
**ಅತೋ ನಾರಾಯಣಸ್ಯೈವ ಜಿಜ್ಞಾಸಾತ್ರ ವಿಧೀಯತೇ ॥೮೪॥**

**ಅವತರಣಿಕೆ :** ಹಿಂದಿನ 82ನೆಯ ಶ್ಲೋಕದಲ್ಲಿ ಬ್ರಹ್ಮ ಎಂದರೆ ವಿಷ್ಣು ಎಂಬ ಅರ್ಥವನ್ನು ಮೀಮಾಂಸಾ ಶಾಸ್ತ್ರ ಸಂಪ್ರದಾಯದ ಪ್ರಕಾರ ನಿರೂಪಿಸಿದ್ದಾಯಿತು. ಈಗ ಮಂದರನ್ನುದ್ದೇಶಿಸಿ ಶಬ್ದಗಳ ನಿರ್ವಚನದಿಂದಲೂ ಬ್ರಹ್ಮ ಶಬ್ದವು ನಾರಾಯಣ ಶಬ್ದದ ಸಮಾನಾರ್ಥವಾದ್ದರಿಂದ ಪ್ರಥಮ ಸೂತ್ರದಲ್ಲಿ ನಾರಾಯಣ ವಿಷಯಕ ವಾಗಿಯೇ ವಿಚಾರವು (ಜಿಜ್ಞಾಸಾ) ವಿಧಿಸಲ್ಪಟ್ಟಿದೆ ಎಂಬುದನ್ನು ತಿಳಿಸುತ್ತಾರೆ. ನಾರಾಯಣನೇ ವಿಷ್ಣು ಎಂಬುದಂತೂ ಸುಪ್ರಸಿದ್ಧವಿದೆ.

**ಅನುವಾದ :** ದೋಷ-ಅರ-ಭಿನ್ನ ಶಬ್ದಗಳು ಸಮಾನಾರ್ಥವಾದ್ದರಿಂದ (ನ ಶಬ್ದವು ವಿರುದ್ಧಾರ್ಥವಾಚಕವಾದ್ದರಿಂದ), ನಾರಾಃ ಎಂದರೆ ದೋಷ ವಿರುದ್ಧ ಗುಣಗಳೆಂದು ತಿಳಿಯಬೇಕು. ನಾರಗಳು (ಗುಣಗಳು) ಉಳ್ಳವನು (ತದ್ವಾನ್) ನಾರಾಯಣನು, ಎಂದು ಸ್ಮೃತಿಯಲ್ಲಿ ಪ್ರಸಿದ್ಧಿ ಇದೆ (ಹಿ). ಆದ್ದರಿಂದ ಪ್ರಸಕ್ತ ಪ್ರಥಮ ಸೂತ್ರದಲ್ಲಿ (ಅತ್ರ) ನಾರಾಯಣ ವಿಷಯಕವಾಗಿಯೇ ವಿಚಾರವು (ಜಿಜ್ಞಾಸಾ) ವಿಧಿಸಲ್ಪಟ್ಟಿದೆ,

**ವಿವರಣೆ :** ಶಬ್ದಗಳ ನಿರ್ವಚನದಿಂದಲೂ ಬ್ರಹ್ಮಶಬ್ದ, ನಾರಾಯಣ(ವಿಷ್ಣು) ಶಬ್ದ ಸಮಾನಾರ್ಥಕವಾದ್ದರಿಂದ ನಾರಾಯಣನ ಬಗ್ಗೆಯೇ ವಿಚಾರ ಮಾಡಬೇಕೆಂದು ಪ್ರಥಮ ಸೂತ್ರ ವಿಧಿಸುತ್ತದೆ.

ಅರಾಃ ಎಂದರೆ ದೋಷಗಳು. ನಾರಾಃ (ನ ಅರಾಃ) ಎಂದರೆ ದೋಷ ವಿರುದ್ಧ ಗುಣಗಳು. ಈ ಗುಣಗಳಿಗೆ ಆಶ್ರಯ (ಅಯನಂ), ಅಥವಾ ಗುಣ ಗಳುಳ್ಳವನು ನಾರಾಯಣನು. ಬ್ರಹ್ಮಶಬ್ದವೂ ಇದೇ ಗುಣಪೂರ್ಣತ್ವ ಅರ್ಥ ವನ್ನು ಹೇಳುತ್ತದೆ. ಬಹಳ ಗುಣಗಳು ಇವನಲ್ಲಿರುವದರಿಂದ ಇವನು ಬ್ರಹ್ಮ ನೆಂದು ಪ್ರಸಿದ್ಧಿ ಇದೆ. ಆದ್ದರಿಂದ ಪ್ರಥಮ ಸೂತ್ರವು ನಾರಾಯಣನ ಬಗ್ಗೆ ವಿಚಾರವನ್ನು ವಿಧಿಸುತ್ತದೆ.

**ಸಿದ್ಧತ್ವಾದ್ ಬ್ರಹ್ಮಶಬ್ದಸ್ಯ ವಿಷ್ಣೌ ಸ್ಪಷ್ಟತಯಾ ಶ್ರುತೌ ।**
**ಅಂಭಸ್ಯಪಾರ ಇತ್ಯುಕ್ತ್ಯೋ ನಾರಾಯಣಪದೋದಿತಃ ॥೮೩॥**
**ಅಪೋ ನಾರಾ ಇತಿ ಖ್ಯಾತ ಸ ಏವಾಪ್ಸ್ವಂತರೀರಿತಃ ।**
**ಕಾವಮಕೋ ವಿಧಿರುದ್ರಾದಿಪದದಾತ್ರ್ಯೈ ಸ್ವಯಂ ಶ್ರಿಯಾ ॥೮೪॥**
**ಯೋನಿತ್ವೇನಾತ್ಮನೋ ವಿಷ್ಣೋಸ್ತಿಷ್ಠಂತೀತ್ಯುದಿತಸ್ಯ ಚ ।**
**ಯಸ್ಮಿನ್ ದೇವಾ ಅಧೀತ್ಯುಕ್ತ್ಯಾ ಸಮುದ್ರಂ ಸ್ಥಾನಮೇವ ಚ ॥೮೫॥**

**ಅವತರಣಿಕೆ :** ಹಿಂದಿನ ಎರಡು ಯುಕ್ತಿಗಳಲ್ಲದೆ ಇನ್ನೊಂದು ಯುಕ್ತಿಯಿಂದಲೂ ಬ್ರಹ್ಮಶಬ್ದವು ವಿಷ್ಣುಪರ ಎಂದು ಸಮರ್ಥಿಸುತ್ತಾರೆ,

**ಅನುವಾದ :** ತದೇವ ಬ್ರಹ್ಮ ಪರಮಂ ಕವೀನಾಂ– ಎಂದು ನಾರಾಯಣೋ

ಪನಿಷತ್ತಿನಲ್ಲಿ ಬ್ರಹ್ಮ ಶಬ್ದವು ವಿಷ್ಣುಪರ ಎಂದು ಸಿದ್ಧವಾಗಿದ್ದರಿಂದ ಸೂತ್ರದಲ್ಲಿಯ ಬ್ರಹ್ಮ ಶಬ್ದ ವಿಷ್ಣುಪರ. ತದೇವ ಬ್ರಹ್ಮ–ಎಂಬಲ್ಲಿ ತತ್ ಶಬ್ದದಿಂದ ಪರಾಮರ್ಶಿತನಾದವನು ವಿಷ್ಣುವೇ. ಏಕೆಂದರೆ, 'ಆಪೋ ನಾರಾ ಇತಿ ಪ್ರೋಕ್ತಾಃ' ಎಂಬ ಸ್ಮೃತಿಯಲ್ಲಿ ಮತ್ತು ತದೇವ ಬ್ರಹ್ಮ ಎಂಬ ಉಪನಿಷದ್ವಾಕ್ಯದ ಉಪಕ್ರಮವಾದ "ಅಂಭಸ್ಯಪಾರೇ" ಎಂಬಲ್ಲಿ ನಾರಾಯಣ ಶಬ್ದಾರ್ಥವೇ ಹೇಳಲ್ಪಟ್ಟಿದೆ. ಏಕೆಂದರೆ, (ಹಿ) ಆಪೋ ನಾರಾ ಎಂಬ ಸ್ಮೃತಿಯು ನೀರಿನೊಳಗಿರುವಿಕೆ ಎಂಬ ನಾರಾಯಣನ ಧರ್ಮವನ್ನು ಹೇಳುತ್ತದೆ. ಮತ್ತು ನೀರಿನೊಳಗಿರುವವನು ವಿಷ್ಣುವೇ ಎಂದು ಅಂಭೃಣೀ ಸೂಕ್ತದಲ್ಲಿ ಹೇಳಲಾಗಿದೆ. ಆದ್ದರಿಂದ ಅಪಾರವಾದ ನೀರಿನಲ್ಲಿದ್ದವನನ್ನು ಬೋಧಿಸುವ ಅಂಭಸ್ಯಪಾರೇ ಎಂಬ ಉಪಕ್ರಮ ವಾಕ್ಯವು ವಿಷ್ಣುಪರ. ತನ್ನ ಇಚ್ಛಾನುಸಾರವಾಗಿ ಬ್ರಹ್ಮರುದ್ರಾದಿ ಪದ ನೀಡುವ ಮಹಾಲಕ್ಷ್ಮಿಯೇ ತನಗೆ ಕಾರಣನು (ಆಶ್ರಯನು) ಸಮುದ್ರದ ನೀರಿನೊಳಗಿದ್ದ ನಾರಾಯಣ ಎಂದು ಹೇಳಿದ್ದಾಳೆ.

"ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ" ಎಂದು ಐತರೇಯ ಶ್ರುತಿಯಲ್ಲಿ ಹೇಳಲಾದ ವಿಷ್ಣುವಿನ ಸರ್ವದೇವೋಪಾಸ್ಯತ್ವ ಧರ್ಮವನ್ನು "ಯಸ್ಮಿನ್ ಇದಂ.........ಯಸ್ಮಿನ್ ದೇವಾ.... ಅಧಿ ವಿಶ್ವೇ ನಿಷೇದುಃ" ಎಂಬ ನಾರಾಯಣೋಪನಿಷದ್ವಾಕ್ಯದಲ್ಲಿ ಹೇಳಿ, ಆ ಧರ್ಮವುಳ್ಳವನು ಬ್ರಹ್ಮ ಎಂದು ಹೇಳಲಾಗಿದೆ. ಆದ್ದರಿಂದ ವಿಷ್ಣುವೇ ಬ್ರಹ್ಮ. ಇದಲ್ಲದೆ "ಯಮಂತಸ್ಸಮುದ್ರೇ ಕವಯೋವಯಂತಿ" ಎಂಬ ನಾರಾಯಣೋಪನಿಷದ್ವಾಕ್ಯದಲ್ಲಿ ವಿಷ್ಣುವಿನ ಸಮುದ್ರ ಸ್ಥಾನವನ್ನು ಪುರುಷನಿಗೆ ಹೇಳಿ ಆ ಸ್ಥಾನವುಳ್ಳವನೇ ಬ್ರಹ್ಮ ಎಂದು ಹೇಳಲಾಗಿದೆ. ಆದ್ದರಿಂದ ಬ್ರಹ್ಮಶಬ್ದ ವಿಷ್ಣು ಪರ.

**ವಿವರಣೆ :** ಬ್ರಹ್ಮ ಶಬ್ದವು ವಿಷ್ಣುಪರ ಎಂಬುದನ್ನು ಇನ್ನೊಂದು ರೀತಿಯಿಂದ ಎಂದರೆ ವಿದ್ವದ್ ರೂಢಿಯಿಂದ ಸಮರ್ಥಿಸುತ್ತಾರೆ.

ತದೇವ ಬ್ರಹ್ಮ ಪರಮಂ ಕವೀನಾಂ– ಎಂದರೆ ಜ್ಞಾನಿಗಳ ಮತದಲ್ಲಿ ವಿಷ್ಣುವೇ ಬ್ರಹ್ಮ ಎಂಬುದಾಗಿ ಶ್ರುತಿ–(ನಾರಾಯಣೋಪನಿಷತ್) ಇದೆ. ಇದರಿಂದ ಬ್ರಹ್ಮ ಶಬ್ದ ವಿಷ್ಣು ಪರ ಎಂಬುದು ವಿದ್ವದ್ರೂಢಿಯಿಂದ ತಿಳಿದು ಬರುತ್ತದೆ.

ಈ ಶ್ರುತಿಯಲ್ಲಿ ಪ್ರಸಕ್ತವಾದ ತದೇವ–ಅದುವೇ ಎಂದರೆ ಯಾರು?ಎಂಬುದೇ ಮುಖ್ಯಪ್ರಶ್ನೆ. ಪ್ರಸ್ತುತ ವಾಕ್ಯವು ನಾರಾಯಣೋಪನಿಷತ್ತಿನಲ್ಲಿದೆ. ಈ ಉಪನಿಷತ್ತಿನ ಉಪಕ್ರಮ (ಆರಂಭ) ವಾಕ್ಯ "ಅಂಭಸ್ಯಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್" ಎಂದಿವೆ. ಈ ಉಪಕ್ರಮ ವಾಕ್ಯದಲ್ಲಿ ಹೇಳಲ್ಪಟ್ಟ ಸಮುದ್ರದಲ್ಲಿರುವಿಕೆ (ಸಮುದ್ರಸ್ಥಿತತ್ವ) ಮತ್ತು ಮಹತ್ವದಾರ್ಥ

ಕ್ಕಿಂತಲೂ ಮಹತ್ ಆಗಿರುವ ಧರ್ಮ ಯಾರದು ಎಂದು ನಿರ್ಧರಿಸಬೇಕು. ಈ ಧರ್ಮಗಳು ವಿಷ್ಣುವಿನವೇ ಎಂದು ಕೆಳಗಿನ ಸಂಗತಿಗಳಿಂದ ತಿಳಿದು ಬರುತ್ತದೆ.

(a) ಆಪೋ ನಾರಾ ಇತಿ ಪ್ರೋಕ್ತಾ; ಆಪೋ ವೈ ನರಸೂನವಃ, ಅಯನಂ ತಸ್ಯ ತಾಃ ಪೂರ್ವಂ, ತೇನ ನಾರಾಯಣಃ ಸ್ಮೃತಃ — ಎಂಬ ಸ್ಮೃತಿಯಲ್ಲಿ ನೀರೇ ಆಶ್ರಯವುಳ್ಳವ ಎಂದರೆ ನೀರಿನಲ್ಲಿದ್ದವನು ನಾರಾಯಣನು ಎಂದು ಹೇಳಲಾಗಿದೆ. ಹೀಗೆ ನೀರಿನಲ್ಲಿರುವ ಧರ್ಮ ನಾರಾಯಣನದೇ.

(b) ಮಮ ಯೋನಿರಪ್ಸು ಅಂತಸ್ಸಮುದ್ರೇ — ಎಂಬ ಅಂಭೃಣೀ ಸೂಕ್ತದ ವಾಕ್ಯವು ಮಹಾಲಕ್ಷ್ಮಿಯದು. "ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಋಷಿಂ ತಂ ಸುಮೇಧಾಂ" — ಎಂದರೆ ನಾನು ನನ್ನ ಇಚ್ಛಾನುಸಾರವಾಗಿ ಬ್ರಹ್ಮ ರುದ್ರಾದಿ ಸ್ಥಾನ ನೀಡುವೆ ಎಂದು ತನ್ನ ಮಹಿಮೆ ಹೇಳಿದ ಲಕ್ಷ್ಮೀ ದೇವಿಯೇ ತನಗೆ ಕಾರಣ ಅಥವಾ ಆಶ್ರಯನು (ಪತಿ) ಸಮುದ್ರದಲ್ಲಿದ್ದಾನೆ ಎಂದು ಹೇಳಿದ್ದಾಳೆ. ಸಮುದ್ರಶಾಯಿಯಾದ ಇವನು ವಿಷ್ಣುವೇ.

(c) ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ ಎಂಬ ನಾರಾಯಣೋಪನಿಷತ್ ವಾಕ್ಯವು ತದೇವ ಬ್ರಹ್ಮ ಎಂಬ ವಾಕ್ಯಕ್ಕಿಂತ ಮೊದಲು ಇದೆ. ಇಲ್ಲಿಯ ಸರ್ವ ದೇವೋಪಾಸ್ಯತ್ವ ಧರ್ಮ, ಮಹಾನ್ ದೇವತೆಗಳಿಗಿಂತ ಮಹಾನ್ ಆಗಿರುವ ಧರ್ಮ ವಿಷ್ಣುವಿನದೇ. ಏಕೆಂದರೆ ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ, ಪ್ರದಿಶಾ ವಿಧರ್ಮಣಿ. ಎಂಬ ಐತರೇಯ ಶ್ರುತಿ ವಾಕ್ಯದಲ್ಲಿ ಈ ಧರ್ಮ ವಿಷ್ಣುವಿನದೇ ಎಂಬ ಸ್ಪಷ್ಟ ಉಲ್ಲೇಖವಿದೆ.

(d) 'ಯಮಂತಸ್ಸಮುದ್ರೇ ಕವಯೋವಯಂತಿ' ಎಂಬ ನಾರಾಯಣೋಪನಿಷತ್ ವಾಕ್ಯದಲ್ಲಿ ವಿಷ್ಣುವಿನ ಸಮುದ್ರ ಸ್ಥಾನವನ್ನು ಪುರುಷನಿಗೆ ಹೇಳಿ ಆ ಸಮುದ್ರ ಸ್ಥಾನವುಳ್ಳವನು ಬ್ರಹ್ಮನೇ ಎಂದು ಕೊನೆಗೆ ಹೇಳಲಾಗಿದೆ. ಆದ್ದರಿಂದ ಬ್ರಹ್ಮ ಶಬ್ದವು ವಿಷ್ಣುವಾಚಕವೆಂದು ಸಿದ್ಧಿಸುತ್ತದೆ.

**ನಾಮ ಚಾಕ್ಷರಮಿತ್ಯೇವ ಋಚ ಇತ್ಯುದಿತಂ ತು ಯತ್ ।**
**ಯತಃ ಪ್ರಸೂತೇತ್ಯುಕ್ತ್ವಾ ಚ ತದೇವ ಬ್ರಹ್ಮ ಚಾಬ್ರವೀತ್ ॥೮೮॥**

**ಅವತರಣಿಕೆ :** ಬ್ರಹ್ಮಶಬ್ದ ವಿಷ್ಣುಪರವೆಂಬುದಕ್ಕೆ ಇನ್ನೊಂದು ಯುಕ್ತಿಯನ್ನು ಹೇಳಿ ಉಪಸಂಹಾರ ಮಾಡುತ್ತಾರೆ.

**ಅನುವಾದ :** ಯದಕ್ಷರೇ ಪರಮೇ ಪ್ರಜಾಃ ಎಂಬುದಾಗಿ ನಾರಾಯಣೋಪನಿಷತ್ತಿನಲ್ಲಿ ಹೇಳಿದ ಅಕ್ಷರ ಎಂಬ ಹೆಸರು (ನಾಮ) ವಿಷ್ಣುವಿನದೇ. ಏಕೆಂದರೆ ವಾಮನ ಸೂಕ್ತದ "ಋಚೋ ಅಕ್ಷರೇ ಪರಮೇ ವ್ಯೋಮನ್" ಎಂಬಲ್ಲಿ ಅಕ್ಷರ ಶಬ್ದವು ವಿಷ್ಣುವಿನಲ್ಲಿದೆ. ಆದ್ದರಿಂದ ತದೇವ ಬ್ರಹ್ಮ ಪರಮಂ ಕವೀನಾಂ ಎಂಬಲ್ಲಿ ವಿಷ್ಣುವೇ ಬ್ರಹ್ಮ ಶಬ್ದವಾಚ್ಯನು.

"ಯತಃ ಪ್ರಸೂತಾ ಜಗತಃ ಪ್ರಸೂತೀ" ಎಂಬ ನಾರಾಯಣೋಪನಿಷತ್ ವಾಕ್ಯವು ಪುರುಷನಿಗೆ (ವಿಷ್ಣುವಿಗೆ), ಪ್ರಕೃತಿ (ಲಕ್ಷ್ಮೀ) ಕಾರಣತ್ವವನ್ನು ಹೇಳಿ ಅದುವೇ ಬ್ರಹ್ಮ ಎಂದು "ಮಮಯೋನಿಃ ಅಪ್ಸು ಅಂತಃ" ಎಂಬ ಶ್ರುತಿ ಪ್ರತಿಪಾದಿಸುತ್ತದೆ. ಆದ್ದರಿಂದ ಬ್ರಹ್ಮ ಶಬ್ದದ ಮುಖ್ಯಾರ್ಥ ವಿಷ್ಣುವೇ.

**ವಿವರಣೆ :** ಪ್ರಥಮ ಸೂತ್ರದ ಬ್ರಹ್ಮ ಶಬ್ದವು ವಿಷ್ಣುವಾಚಕವೇ. ಇದಕ್ಕೆ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. "ತದೇವ ಬ್ರಹ್ಮ ಪರಮಂ ಕವೀನಾಂ" ಎಂಬಲ್ಲಿ ಬ್ರಹ್ಮ ಶಬ್ದ ವಾಚ್ಯನು ವಿಷ್ಣು. ಏಕೆಂದರೆ ಈ ವಾಕ್ಯವು ನಾರಾಯಣ ಉಪನಿಷತ್ತಿನಲ್ಲಿದೆ. ಈ ವಾಕ್ಯಕ್ಕಿಂತ ಮೊದಲು 'ಯದಕ್ಷರೇ ಪರಮೇ ಪ್ರಜಾಃ' (ಅಕ್ಷರ ಶಬ್ದವಾಚ್ಯನಾದ ವಿಷ್ಣುವಿನ ಅಧೀನದಲ್ಲಿ ಎಲ್ಲ ಪ್ರಜೆಗಳಿದ್ದಾರೆ ಎಂದರೆ ವಿಷ್ಣು ಸರ್ವರಿಗೆ ಆಶ್ರಯ–ಸರ್ವಾಶ್ರಯ)ಎಂಬ ವಾಕ್ಯವಿದೆ.ಆ ಬ್ರಹ್ಮ ಯಾರೆಂದರೆ ಅಕ್ಷರ ಶಬ್ದ ವಾಚ್ಯನು ಎಂದರ್ಥ. ಅಕ್ಷರನ ಮುಖ್ಯಲಕ್ಷಣವೆಂದರೆ ಸರ್ವಾಶ್ರಯತ್ವ. ಈ ಸರ್ವಾಶ್ರಯತ್ವ ಧರ್ಮವು ವಾಮನ ಸೂಕ್ತದಲ್ಲಿ "ಋಚೋಕ್ಷರೇ ಪರಮೇ ವ್ಯೋಮನ್" ಎಂಬಲ್ಲಿ ವಾಮನ ನಾಮಕ ವಿಷ್ಣುವಿಗೆ ಹೇಳಲಾಗಿದೆ. (ಋಗಾದಿ ಸರ್ವವೇದಗಳು, ಸರ್ವ ಪ್ರಾಣಿಗಳ ಹೃದಯಾಕಾಶದಲ್ಲಿರುವ ವಿಷ್ಣು ಪ್ರತಿಪಾದಕ. ರಮಾ ಬ್ರಹ್ಮಾದಿ ಎಲ್ಲ ದೇವತೆಗಳು ಅವನ ಅಧೀನದಲ್ಲಿ ಇದ್ದಾರೆ ಎಂದರ್ಥ). ಇಲ್ಲಿ ಅಕ್ಷರ ಎಂದರೆ ನಾಶ ರಹಿತ ಎಂದು ಅರ್ಥ. ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಮತ್ತು ಅಪೂರ್ಣತಾ ಎಂಬ ನಾಲ್ಕು ವಿಧ ನಾಶ ರಹಿತನು ವಿಷ್ಣುವೇ.

ಇದಲ್ಲದೆ "ಯತಃ ಪ್ರಸೂತಾ ಜಗತಃ ಪ್ರಸೂತೀ" ಎಂಬ ವಾಕ್ಯವು ನಾರಾಯಣೋಪನಿಷತ್ತಿನಲ್ಲಿ 'ತದೇವ ಬ್ರಹ್ಮ' ಎಂಬ ಮಂತ್ರಕ್ಕಿಂತ ಮೊದಲು ಇದೆ, ಯಾವ ಪುರುಷನಿಂದ ಜಗತ್ತಿನ ತಾಯಿಯಾದ ಲಕ್ಷ್ಮೀದೇವಿಯು ಹುಟ್ಟಿರುವಳೋ ಎಂದು ಇದರ ಅರ್ಥ. ಇದೇ ಅರ್ಥವನ್ನು ಅಂಭೃಣೀ ಸೂಕ್ತದಲ್ಲಿಯ ಮಮ ಯೋನಿಃ ಅಪ್ಸು ಅಂತಃ ಸಮುದ್ರೇ ಎಂಬ ವಾಕ್ಯ ಹಾಗೂ ತಸ್ಮಾತ್ ಅವ್ಯಕ್ತಂ ಉತ್ಪನ್ನಂ ತ್ರಿಗುಣಂ ದ್ವಿಜಸತ್ತಮ ಎಂಬ ಸ್ಮೃತಿ ವಾಕ್ಯ ಹೇಳುತ್ತವೆ. ಹೀಗೆ, "ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಎಂಬ ಪ್ರಥಮ ಸೂತ್ರದಲ್ಲಿಯು ಬ್ರಹ್ಮ ಎಂದರೆ ವಿಷ್ಣು ಎಂದು ಸಿದ್ಧವಾಯಿತು,

**ಎರಡು ಆಕ್ಷೇಪಗಳ ಪರಿಹಾರ :**

**1) ಬ್ರಹ್ಮ ಶಬ್ದದ ಅರ್ಥ ವಿವರಣೆ ಅನಗತ್ಯ ಎಂಬ ಆಕ್ಷೇಪ :**

ಬ್ರಹ್ಮ ಶಬ್ದಕ್ಕೆ ಜಾತಿ, ಜೀವ, ಕಮಲಾಸನ ಮೊದಲಾದ ಅನೇಕ ಅರ್ಥಗಳಿದ್ದರೂ, ಆ ಅರ್ಥಗಳು ಪ್ರಕೃತದಲ್ಲಿ ಅನುಪಯುಕ್ತ. ಏಕೆಂದರೆ ಸೂತ್ರಕಾರರೇ "ಜನ್ಮಾದ್ಯಸ್ಯ ಯತಃ" ಎಂಬ ಎರಡನೇ ಸೂತ್ರದಲ್ಲಿ ಬ್ರಹ್ಮನು

ಜಗಜ್ಜನ್ಮಾದಿಕರ್ತಾ ಎಂದು ಹೇಳಿದ್ದಾರೆ. ಜೀವನು ಜಗಜ್ಜನ್ಮಾದಿ ಕರ್ತಾ ಅಲ್ಲ ಎಂಬುದಂತೂ ಅನುಭವ ಸಿದ್ಧ. ಹೀಗೆ ಸೂತ್ರಕಾರರಿಂದಲೇ ಬ್ರಹ್ಮ ಶಬ್ದಕ್ಕೆ ಜಾತಿ, ಜೀವ ಮೊದಲಾದ ಅರ್ಥಗಳು ನಿರಾಕರಿಸಲ್ಪಟ್ಟಿದ್ದರಿಂದ ಭಾಷ್ಯಕಾರರಾದ ಶ್ರೀ ಮಧ್ವಾಚಾರ್ಯರು ಬ್ರಹ್ಮ ಶಬ್ದಕ್ಕಿರುವ ಬೇರೆ ಅರ್ಥಗಳನ್ನು ನಿರಾಕರಿಸಿ ಆ ಶಬ್ದ ವಿಷ್ಣುಪರ ಎಂದು ನಿರೂಪಿಸಿದ್ದು ಅಸಂಗತ. (ಭಾಷ್ಯಕಾರೀಯಂ ನಿರಾಕರಣಂ ಅನುಪಪನ್ನಮ್),

**ಪರಿಹಾರ :** ಈ ಆಕ್ಷೇಪ ಅಯುಕ್ತ. (ತದತೀವ ಮಂದಂ) ಹೇಗೆಂದರೆ—
(a) ಬ್ರಹ್ಮ ಶಬ್ದವನ್ನು ಕೇಳಿದೊಡನೆ ಅದಕ್ಕಿರುವ ಜಾತಿ, ಜೀವ ಮೊದಲಾದ ಅರ್ಥಗಳು ಶ್ರೋತೃಗಳ ಮನಸ್ಸಿನಲ್ಲಿ ಮೂಡುತ್ತವೆ. ಆದ್ದರಿಂದ ಬ್ರಹ್ಮ ಎಂದರೆ ಜೀವಾದಿಗಳಲ್ಲ, ವಿಷ್ಣುವೇ ಎಂಬ ಪರಿಹಾರಕ್ಕಾಗಿ ಎರಡನೇ ಸೂತ್ರದವರೆಗೆ ಕಾಯುವದು ಅನುಚಿತ. ಆದ್ದರಿಂದ ಭಾಷ್ಯಕಾರರು ಉಳಿದ ಅರ್ಥಗಳನ್ನು ನಿರಾಕರಿಸಿದ್ದು ಅತ್ಯಂತ ಸಮಂಜಸ.

(b) ಸೂತ್ರದಲ್ಲಿಯು ಬ್ರಹ್ಮ ಶಬ್ದವು ಜೀವಾದಿ ಪರವೇ ಹೇಗೆ ಎಂಬ ಶಂಕೆ ಬಂದಾಗ ಅದರ ಪರಿಹಾರಕ್ಕಾಗಿ ಈ ಸೂತ್ರಕ್ಕಿಂತ ಮೊದಲಿದ್ದ 'ಸ ವಿಷ್ಣು ರಾಹ ಹಿ, ತಂ ಬ್ರಹ್ಮೇತ್ಯಾಚಕ್ಷತೇ ಎಂಬ ದೈವೀ ಮೀಮಾಂಸಾದ ಸೂತ್ರ ಗಳನ್ನು ಬಿಟ್ಟು ಮುಂದಿನ ಎರಡನೇ ಸೂತ್ರವನ್ನೇಕೆ ಅನ್ವೇಷಿಸಬೇಕು ?

(c) ಇದಲ್ಲದೆ ಭಾಷ್ಯಕಾರರಾದರೋ ಎರಡನೇ ಸೂತ್ರದ ಸಮಾಲೋಚನೆ ಯಿಂದ ಶಂಕೆಯುನ್ನು ಪರಿಹರಿಸಿಕೊಂಡು, ಬ್ರಹ್ಮ ಎಂದರೆ ವಿಷ್ಣು ಎಂದು ಅರ್ಥವನ್ನು ಮಾಡಬಾರದು ಎಂದು ಹೇಳಿಲ್ಲ.

**2ನೇಆಕ್ಷೇಪ :** ಇನ್ನು ಕೆಲವರು ಬ್ರಹ್ಮನು ಪ್ರಸಿದ್ಧನೋ, ಅಪ್ರಸಿದ್ಧನೋ ? ಪ್ರಸಿದ್ಧನಿದ್ದರೆ ಅವನ ಬಗ್ಗೆ ವಿಚಾರ ಅನಗತ್ಯ. ಅಪ್ರಸಿದ್ಧನಿದ್ದರೆ ಅವನ ಬಗ್ಗೆ ವಿಚಾರಿಸುವದಾದರೂ ಹೇಗೆ ? ಎಂದು ಶಂಕಿಸಿ, ಬ್ರಹ್ಮನೆಂದರೆ ಜೀವ ಮತ್ತು ಈ ಜೀವ ಪ್ರಸಿದ್ಧನಿದ್ದರೂ (ನಾನು, ನಾನು ಎಂಬ ದೈನಂದಿನ ತಿಳುವಳಿಕೆ ಇದ್ದು ದರಿಂದ ಪ್ರಸಿದ್ಧನಿದ್ದರೂ) ಅವನ ಬಗ್ಗೆ ವಿಚಾರವು ಯುಕ್ತವಾಗಿದೆ. ಏಕೆಂದರೆ ದೇಹವೇ ಆತ್ಮಹೇಗೆ ಎಂಬ ಸಂಶಯವಿರುವದರಿಂದ ಅದರ ಪರಿಹಾರಕ್ಕಾಗಿ ಬ್ರಹ್ಮವಿಷಯಕ ವಿಚಾರ ಆವಶ್ಯವೆನ್ನುತ್ತಾರೆ.

**ಪರಿಹಾರ :** ಈ ಆಕ್ಷೇಪವೂ ಹಿಂದಿನ ಒಂದನೇ ಆಕ್ಷೇಪದ ಪರಿಹಾರದಿಂದ ನಿರಾಕೃತವಾಗುತ್ತದೆ, (ಏತೇನ ಏತದಪಿ ನಿರಸ್ತಮ್) ಹೇಗೆಂದರೆ - ಒಂದನೆಯು ಸೂತ್ರದಲ್ಲಿ ಬ್ರಹ್ಮನ ಬಗ್ಗೆ ವಿಚಾರ ಮಾಡಬೇಕು ಎಂದು ವಿಧಿಸಲಾಗಿದೆ. ಎಂದರೆ ಸಕಲ ಜನ್ಮಾದಿಕರ್ತನೂ, ಜ್ಞಾನಾನಂದಾದಿ ಗುಣಪೂರ್ಣನೂ ಆದ ಬ್ರಹ್ಮ ಎಂದರೆ

ನಾರಾಯಣನ ಬಗ್ಗೆ ವಿಚಾರ ಮಾಡಬೇಕು ಎಂದು ಹೇಳಲಾಗಿದೆ. ಹೀಗಿರುವಾಗ ಜೀವನ ಬಗ್ಗೆ ಪ್ರಸಿದ್ಧಿಯ ಸಂದೇಹವನ್ನು ಪೂರ್ವಪಕ್ಷಿಯು ಎತ್ತಿಕೊಂಡು ಅದನ್ನು ಪರಿಹರಿಸುವದು ಅನುಚಿತ.

ಇನ್ನು ಬ್ರಹ್ಮಜಿಜ್ಞಾಸಾ ಎಂದರೆ ಜೀವ ಜಿಜ್ಞಾಸಾ ಎಂದು ಹೇಳಕೂಡದು. ಏಕೆಂದರೆ ಬ್ರಹ್ಮನೆಂದರೆ ಜೀವ ಎಂದು ಸೂತ್ರಕಾರರು ಎಲ್ಲಿಯೂ ಹೇಳಿಲ್ಲ.

ಹೀಗೆ ಬ್ರಹ್ಮ ಮೀಮಾಂಸಾ ಶಾಸ್ತ್ರಕ್ಕೆ (ಬ್ರಹ್ಮಸೂತ್ರಗಳಿಗೆ) ಅಧಿಕಾರಿ–ವಿಷಯ–ಪ್ರಯೋಜನ–ಪರಸ್ಪರ ಸಂಬಂಧ ಎಂಬ ಅನುಬಂಧ ಚತುಷ್ಟಯವಿರುವದರಿಂದ ಬ್ರಹ್ಮನ ಬಗ್ಗೆ ವಿಚಾರಮಾಡಬೇಕು ಮತ್ತು ಬ್ರಹ್ಮ ಮೀಮಾಂಸಾ ಶಾಸ್ತ್ರವು ಆರಂಭಣೀಯವಾಗಿದೆ.

ಇಲ್ಲಿಗೆ ಜಿಜ್ಞಾಸಾಧಿಕರಣವು ಮುಗಿಯಿತು.

— ಶ್ರೀಕೃಷ್ಣಾರ್ಪಣಮಸ್ತು.

# ಪರಿಶಿಷ್ಟ-೧

## ಪಾರಿಭಾಷಿಕ ಶಬ್ದಗಳ ಅಲ್ಪ ಪರಿಚಯ

ಶ್ರೀಮನ್ನ್ಯಾಯಸುಧಾ ಗ್ರಂಥವು ಯುಕ್ತ್ಯಾತ್ಮಕವಾಗಿದೆ. ಆದ್ದರಿಂದ ಅದರ ಪುಟ ಪುಟಗಳಲ್ಲಿ ತರ್ಕಶಾಸ್ತ್ರದ ಪಾರಿಭಾಷಿಕ ಶಬ್ದಗಳಿವೆ. ಪ್ರಾರಂಭಿಕ ಓದುಗರ ಸೌಕರ್ಯಕ್ಕೋಸ್ಕರ ಅವುಗಳ ಅಲ್ಪ ಪರಿಚಯ ಕೆಳಗೆ ಇದೆ.

### ಉದ್ದೇಶ-ಲಕ್ಷಣ-ಪರೀಕ್ಷಾ

ನ್ಯಾಯಶಾಸ್ತ್ರದಲ್ಲಿ ಮುಖ್ಯವಾಗಿ ನಿರೂಪಿಸಲ್ಪಟ್ಟ ಪ್ರಮಾಣಾದಿಗಳ ಜ್ಞಾನವು ಉದ್ದೇಶ-ಲಕ್ಷಣ-ಪರೀಕ್ಷಾದಿಗಳ ಅಧೀನವಾಗಿದೆ. "ತ್ರಿವಿಧಾ ಚಾಸ್ಯ(ನ್ಯಾಯಶಾಸ್ತ್ರಸ್ಯ) ಪ್ರವೃತ್ತಿಃ, ಉದ್ದೇಶಲಕ್ಷಣಪರೀಕ್ಷಾ ಚೇತಿ" —ನ್ಯಾಯಸೂತ್ರಗಳ ಭಾಷ್ಯಕಾರರಾದ ವಾತ್ಸ್ಯಾಯನರು.

1) **ಉದ್ದೇಶ :** ಉದ್ದೇಶಸ್ತು ನಾಮಮಾತ್ರೇಣ ವಸ್ತುಸಂಕೀರ್ತನಂ. (ನಾಮ್ನಾ-ಗೀರ್ವಾಣವಾಣ್ಯಾ, ಸಂಕೀರ್ತನಂ-ವರ್ಣಾತ್ಮಕಶಬ್ದಃ), ಉದ್ದೇಶವೆಂದರೆ ವಸ್ತುಪ್ರತಿಪಾದಕ ನಾಮಾತ್ಮಕ ಶಬ್ದ ಅಥವಾ ಶಬ್ದ ಸಮೂಹ. ಆದರೆ ಇದು ಲಕ್ಷಣ ವಾಕ್ಯವಿರಬಾರದು. ಉದಾ- ದ್ರವ್ಯ-ಗುಣ-ಕರ್ಮ-ಸಾಮಾನ್ಯ-ವಿಶೇಷ-ಸಮವಾಯ-ಅಭಾವಾಃ ಸಪ್ತಪದಾರ್ಥಾಃ.

2) **ಲಕ್ಷ್ಯಂ :** ಯಸ್ಯ ಲಕ್ಷಣಂ ಉಚ್ಯತೇ ತತ್ ಲಕ್ಷ್ಯಂ. ಯಾವುದರ ಲಕ್ಷಣ ಹೇಳಲಾಗುವದೋ ಅದಕ್ಕೆ ಲಕ್ಷ್ಯವೆನ್ನುವರು. ಉದಾ— ಗಂಧವತೀ ಪೃಥಿವೀ. ಎಂಬ ಲಕ್ಷಣವಾಕ್ಯದಲ್ಲಿ ಲಕ್ಷ್ಯವು ಪೃಥಿವೀ; ಗಂಧವತೀ ಅದರ ಲಕ್ಷಣ.

3) **ಲಕ್ಷಣಂ :** ಲಕ್ಷ್ಯಮಾತ್ರವ್ಯಾಪಕಃ ಧರ್ಮಃ ಲಕ್ಷಣಂ, ಯಥಾ ಗೋಃ ಸಾಸ್ನಾದಿಮತ್ವಂ. ಲಕ್ಷ್ಯಮಾತ್ರದಲ್ಲಿರುವ ವಸ್ತುವಿನ ಅಸಾಧಾರಣ ಧರ್ಮಕ್ಕೆ ಲಕ್ಷಣವೆನ್ನುವರು. ಉದಾ- ಗಂಗೆದೊಗಲು ಮೊದಲಾದವಿರುವದು ಆಕಳ ಲಕ್ಷಣ. ಲಕ್ಷಣ ಜ್ಞಾನವು ವಸ್ತುವನ್ನು ಇತರ ವಸ್ತುಗಳಿಂದ ವಿಂಗಡಿಸುತ್ತದೆ. ಅಥವಾ ಇದರಿಂದ ಲೋಕ ವ್ಯವಹಾರ ನಡೆಯುತ್ತದೆ. ಆದ್ದರಿಂದ ಲಕ್ಷಣ ಜ್ಞಾನದ ಪ್ರಯೋಜನವೆಂದರೆ "ವ್ಯಾವೃತ್ತಿಃ ವ್ಯವಹಾರಃ ವಾ."

4) **ಅಲಕ್ಷಣಂ :** ಅನ್ಯಥಾಭೂತಂ ತು ಅಲಕ್ಷಣಮ್. ಯಾವ ಲಕ್ಷಣವು ಸರಿಯಾಗಿರದೆ ವಿಪರೀತವಾಗಿರುವದೋ ಅದಕ್ಕೆ ಎಂದರೆ ದೋಷಯುಕ್ತ ಲಕ್ಷಣಕ್ಕೆ ಅಲಕ್ಷಣವೆನ್ನುವರು. ಲಕ್ಷಣದ ದೋಷಗಳು i) ಅಸಂಭವ (ii) ಅವ್ಯಾಪ್ತಿ (iii) ಅತಿವ್ಯಾಪ್ತಿ ಎಂದು ಮೂರು ವಿಧ.

5) **ಅಸಂಭವ :** ಲಕ್ಷ್ಯೇ ವ್ಯಾಪ್ತ್ಯವರ್ತನಂ ಅಸಂಭವಃ. ಲಕ್ಷ್ಯದಲ್ಲಿ ಎಲ್ಲಿಯೂ ಇಲ್ಲದಿರುವದು. ಹೇಳಿದ ಲಕ್ಷಣವು ಲಕ್ಷ್ಯದಲ್ಲಿರುವದು ಅಸಂಭವವೇ. ಉದಾ— ಒಂದು ಖುರವುಳ್ಳದ್ದು ಆಕಳು ಎಂಬ ಲಕ್ಷಣ. ಕುದುರೆಗೆ ಮಾತ್ರ ಒಂದು ಖುರವಿರುತ್ತದೆ ಆಕಳಿಗಿಲ್ಲ.

6) **ಅವ್ಯಾಪ್ತಿ :** ಲಕ್ಷ್ಯೈಕದೇಶೇ ಲಕ್ಷಣಸ್ಯ ಅವರ್ತನಂ ಅವ್ಯಾಪ್ತಿಃ, ಯಥಾ ಶಬಲತ್ವಮ್ ಗೋಃ ಲಕ್ಷಣಂ. ಲಕ್ಷಣವು ಲಕ್ಷ್ಯದ ಏಕದೇಶದಲ್ಲಿ ಮಾತ್ರ ಇದ್ದರೆ ಅದು ಅವ್ಯಾಪ್ತಿ ದೋಷವುಳ್ಳದ್ದು. ಉದಾ— ಹಂಡ ಬಂಡ ಬಣ್ಣವಿರುವದು ಆಕಳ ಲಕ್ಷಣವೆಂದು ಹೇಳಿದರೆ ಈ ಲಕ್ಷಣವು ಬಿಳಿಯ ಕರಿಯ ಮತ್ತು ಕೆಂಪು ಆಕಳಲ್ಲಿ ಇಲ್ಲವಾದ್ದರಿಂದ ಇದಕ್ಕೆ ಅವ್ಯಾಪ್ತಿ ದೋಷ ಬರುತ್ತದೆ.

7) **ಅತಿವ್ಯಾಪ್ತಿ :** ಅಲಕ್ಷ್ಯೇ ಲಕ್ಷಣಗಮನಂ ಅತಿವ್ಯಾಪ್ತಿಃ, ಯಥಾ ಶೃಂಗಿತ್ವಂ ಗೋಃ ಲಕ್ಷಣಂ. ಲಕ್ಷಣವು ಲಕ್ಷ್ಯವನ್ನು ದಾಟಿ (ಅತಿ) ಲಕ್ಷ್ಯವಲ್ಲದ ವಸ್ತುಗಳಿಗೂ ಅನ್ವಯಿಸಿದರೆ ಅದು ಅತಿವ್ಯಾಪ್ತಿ ದೋಷವುಳ್ಳದ್ದು. ಉದಾ- ಕೋಡುಳ್ಳದ್ದು ಆಕಳ ಎಂದು ಹೇಳಿದರೆ, ಈ ಲಕ್ಷಣವು ಎಮ್ಮೆ, ಆಡು ಮತ್ತು ಚಿಗರೆಗಳಿಗೂ ಅನ್ವಯಿಸುವದರಿಂದ ಅತಿವ್ಯಾಪ್ತಿ ದೋಷವುಳ್ಳದ್ದು ಎನ್ನುವರು.

8) **ಪರೀಕ್ಷಾ :** ಯುಕ್ತಾಯುಕ್ತ ಚಿಂತಾ ಪರೀಕ್ಷಾ. ನಿರೂಪಿಸಲ್ಪಟ್ಟ ಲಕ್ಷಣವು ಕೂಡುತ್ತದೆಯೋ ಇಲ್ಲವೋ, ಎಂದರೆ ಯುಕ್ತವೋ, ಅಯುಕ್ತವೋ ಎಂಬ ವಿಚಾರ ಅಥವಾ ಪರಾಮರ್ಶಕ್ಕೆ ಪರೀಕ್ಷಾ ಎನ್ನುವರು,

**ಪ್ರಮಾಣಾದಿ ನಿರೂಪಣಂ :** ಪ್ರಮಾಣಗಳಿಂದ ನಿಶ್ಚಿತವಾದ ಪರಾಪರ ತತ್ತ್ವ ಜ್ಞಾನ ಉಂಟಾಗುತ್ತದೆ. ಜ್ಞಾನದಿಂದ ಧ್ಯಾನ, ಧ್ಯಾನದಿಂದ ಭಗವಂತನ ಸಾಕ್ಷಾತ್ಕಾರ ಹಾಗೂ ಆವನ ಪ್ರಸಾದ (ಅತ್ಯಂತಿಕ ಅನುಗ್ರಹ) ದ್ವಾರಾ ಮೋಕ್ಷವಾಗುತ್ತದೆ. ಆದ್ದರಿಂದ ಸಾಧಕನಿಗೆ ಪ್ರಮಾಣಜ್ಞಾನ ಅವಶ್ಯಕ.

9) **ಪ್ರಮಾಣಂ :** ಯಥಾರ್ಥಂ ಪ್ರಮಾಣಂ. ಜ್ಞೇಯಂ ಅನತಿಕ್ರಮ್ಯ ವರ್ತಮಾನಂ, ಯಥಾವಸ್ಥಿತಮೇವ ಜ್ಞೇಯಂ ಯತ್ ಸಾಕ್ಷಾದ್ವಾ ಜ್ಞಾನಸಾಧನತ್ವೇನ ವಾ ವಿಷಯೀಕರೋತಿ ನಾನ್ಯಥಾ ತತ್ಪ್ರಮಾಣಮ್।ಯಥಾರ್ಥವಾದುದು ಪ್ರಮಾಣ. ವಸ್ತುವು ಹೇಗಿದೆಯೋ ಅದನ್ನು ಹಾಗೆಯೇ ವಿಷಯೀಕರಿಸುವಜ್ಞಾನ ಅಥವಾ ಜ್ಞಾನ ಸಾಧನವು ಪ್ರಮಾಣ. ಉದಾ — ಹಗ್ಗವನ್ನು ಹಗ್ಗವೆಂದೇ ವಿಷಯೀಕರಿಸುವ ಜ್ಞಾನ ಅಥವಾ ಕಣ್ಣು ಪ್ರಮಾಣ.

10) **ಪ್ರಮಾ :** ಎಂದರೆ ಯಥಾರ್ಥ ಜ್ಞಾನ.

11) **ಪ್ರಮಾತೃ :** ಪ್ರಮಾತಾ ಎಂದರೆ ಜ್ಞಾನವುಳ್ಳವ (ಪ್ರಮಾವಾನ್)

12) **ಪ್ರಮೇಯಂ ;** ಜ್ಞಾನಕ್ಕೆ ವಿಷಯವಾದುದು ಪ್ರಮೇಯ. ಘಟಜ್ಞಾನಕ್ಕೆ ಘಟವು ವಿಷಯ.

13) **ಕೇವಲಪ್ರಮಾಣಂ :** ಕೇವಲ ಪ್ರಮಾಣವೆಂದರೆ ಯಥಾರ್ಥ ಜ್ಞಾನ. ಇದು ಪ್ರತ್ಯಕ್ಷ, ಅನುಮಾನ, ಶಬ್ದ ಎಂದು ಮೂರು ವಿಧ.

14) **ಅನು ಪ್ರಮಾಣಂ :** ಅನುಪ್ರಮಾಣವೆಂದರೆ ಯಥಾರ್ಥ ಜ್ಞಾನ ಸಾಧನ. ಇದು ಪ್ರತ್ಯಕ್ಷ–ಅನುಮಾನ–ಅಗಮ ಎಂದು ಮೂರು ವಿಧ.

**ಟೀಪು :** (i) ಪ್ರತ್ಯಕ್ಷ–ಅನುಮಾನ–ಅಗಮ ಈ ಶಬ್ದಗಳನ್ನು ಜ್ಞಾನ ಮತ್ತು ಜ್ಞಾನ ಸಾಧನ ಎಂಬ ಎರಡರಲ್ಲಿಯೂ ಬಳಸಲಾಗುತ್ತದೆ.

ಜ್ಞಾನದ ಪ್ರಕಾರಗಳು : ಜ್ಞಾನವು ಸವಿಕಲ್ಪಕ, ನಿರ್ವಿಕಲ್ಪಕ ಎಂದು ಎರಡು ವಿಧ.

15) **ನಿರ್ವಿಕಲ್ಪಿಕ ಜ್ಞಾನ :** ನಿಷ್ಪ್ರಕಾರಕಂ ಜ್ಞಾನಂ ನಿರ್ವಿಕಲ್ಪಕಂ. ದೂರ ದಿಂದ ಒಂದು ವಸ್ತು ನೋಡಿದಾಗ ಅದರ ಆಕಾರ–ಗುಣ–ಧರ್ಮಗಳ ಜ್ಞಾನ ವಾಗುವದಿಲ್ಲ. ಇದು ಕೇವಲ ಒಂದು ವಸ್ತು ಎಂಬ ಜ್ಞಾನವಾಗುತ್ತದೆ. ಇಂತಹ ಜ್ಞಾನಕ್ಕೆ ನಿರ್ವಿಕಲ್ಪಕ ಜ್ಞಾನವೆನ್ನುವರು. ಎಂದರೆ ಇದು ವಸ್ತು ಸ್ವರೂಪವನ್ನು ಮಾತ್ರ ತಿಳಿಸುತ್ತದೆ; ಅದರ ಧರ್ಮಗಳನ್ನಲ್ಲ.

16) **ಸವಿಕಲ್ಪಕ ಜ್ಞಾನ :** ಸ ಪ್ರಕಾರಕಂ ಜ್ಞಾನಂ ಸವಿಕಲ್ಪಕಮ್. ಗುಣ ಧರ್ಮಾದಿ ವಿಶಿಷ್ಟ ಜ್ಞಾನಕ್ಕೆ ಸವಿಕಲ್ಪಕ ಜ್ಞಾನವೆನ್ನುವರು. ಉದಾ– ಇವನು ಗಿಡ್ಡ, ಇವನು ಬ್ರಾಹ್ಮಣ, ಇವನು ಗೌರವರ್ಣದವ, ಇವನು ಅಡಿಗೆಯುವ ಮುಂ. ನಿರ್ದಿಷ್ಟ ಜ್ಞಾನ ಸವಿಕಲ್ಪಕ ಜ್ಞಾನ.

ಜ್ಞಾನವು (i) ಈಶ್ವರಜ್ಞಾನ (ii) ಲಕ್ಷ್ಮೀಜ್ಞಾನ (iii) ಯೋಗಿಜ್ಞಾನ (iv) ಅಯೋಗಿಜ್ಞಾನ ಎಂದು ನಾಲ್ಕು ವಿಧ.

17) **ಈಶ್ವರಜ್ಞಾನ :** ಈಶ್ವರಜ್ಞಾನವು ಸರ್ವವಿಷಯಕ ಮತ್ತು ನಿಯಮೇನ ಯಥಾರ್ಥ. ಅದು ಅನಾದಿ, ನಿತ್ಯ ಸ್ವತಂತ್ರ ಮತ್ತು ಅತೀವ ಅತ್ಯಂತ ಸ್ಪಷ್ಟ.

18) **ಲಕ್ಷ್ಮೀ ಜ್ಞಾನ :** ಲಕ್ಷ್ಮೀಜ್ಞಾನವು ಅನಾದಿ ನಿತ್ಯ ಮತ್ತು ಈಶ್ವರಾ ಧೀನವಾಗಿದೆ. ಅದು ನಿಯಮೇನ ಯಥಾರ್ಥವಾಗಿದೆ. ಈಶ್ವರ ವಿಷಯದಲ್ಲಿ ಪೂರ್ಣ ಜ್ಞಾನವಿರುವದಿಲ್ಲ. ಆದರೆ ಉಳಿದ ವಿಷಯಗಳ ಬಗ್ಗೆ ಆಲೋಚಿಸದಿದ್ದರೂ (ಅನಾಲೋಚನೆ) ಸರ್ವ ವಿಷಯಕ"ವಾಗಿರುತ್ತದೆ. ಆದರೆ ಈಶ್ವರನಿಗಿಂತ ಸ್ಪಷ್ಟತ್ವ ದಲ್ಲಿ ಕಡಿಮೆ ಇರುತ್ತದೆ.

19) **ಯೋಗಿಜ್ಞಾನಂ :** ಯೋಗಪ್ರಭಾವದಿಂದ ದೊರೆತ ಜ್ಞಾನವು ಯೋಗಿ ಜ್ಞಾನ. ಅದು (a) ಋಜುಯೋಗಿಜ್ಞಾನ (b) ತಾತ್ವಿಕಯೋಗಿಜ್ಞಾನ ಮತ್ತು (c) ಅತಾತ್ವಿಕಯೋಗಿಜ್ಞಾನವೆಂದು ಮೂರು ವಿಧ.

a) **ಋಜುಯೋಗಿಜ್ಞಾನ :** ಋಜುಗಳೆಂದರೆ ಬ್ರಹ್ಮಪದವಿಗೆ ಯೋಗ್ಯರಾದ ಜೀವರು. ಅವರ ಜ್ಞಾನವು ಈಶ್ವರ ವಿಷಯದಲ್ಲಿ ಅಸಾರ್ವತ್ರಿಕ ಮತ್ತು ಈಶ್ವರ

ನನ್ನು ಬಿಟ್ಟು ಉಳಿದೆಡೆಯಲ್ಲಿ ಆಲೋಚಿಸಿದರೆ ಸರ್ವ ವಿಷಯಕವಿರುತ್ತದೆ. ಇವರ ಜ್ಞಾನವು ಸ್ವರೂಪ ಮತ್ತು ಬಾಹ್ಯ (ಮನೋವೃತ್ತಿ) ಎಂದು ಎರಡು ವಿಧ. ಈ ಎರಡೂ ನಿಯಮೇನ ಯಥಾರ್ಥ ಮತ್ತು ಇತರರಿಗಿಂತ ಅಧಿಕವಾಗಿರುತ್ತದೆ, ಇವರ ಸ್ವರೂಪ ಜ್ಞಾನವು ಅನಾದಿ ನಿತ್ಯ. ಆದರೂ ಮುಕ್ತಿಯ ವರೆಗೆ ಯೋಗಪ್ರಭಾವದಿಂದ ಭಗವಂತನ ಗುಣಕರ್ಮಗಳ ವಿಷಯವಾಗಿ ಹೆಚ್ಚೆಚ್ಚು ಅಭಿವ್ಯಕ್ತವಾಗುತ್ತದೆ. ಹಾಗೂ ಮುಕ್ತಿಯಲ್ಲಿ ಏಕಪ್ರಕಾರವಾಗಿರುತ್ತದೆ. ಇವರ ಬಾಹ್ಯ ಜ್ಞಾನವು ಮನೋವೃತ್ತಿಯಾಗಿದ್ದು ಪ್ರವಾಹತಃ ಅನಾದಿ ಮತ್ತು ಯಥಾರ್ಥ. ಇದು ಕೂಡ ಮುಕ್ತಿಯವರೆಗೆ ಯೋಗ ಪ್ರಭಾವದಿಂದ ಹೆಚ್ಚೆಚ್ಚು ವ್ಯಕ್ತವಾಗುತ್ತದೆ. ಮುಕ್ತಿಯಲ್ಲಿ ಮಾತ್ರ ಬಾಹ್ಯಜ್ಞಾನವಿರುವದಿಲ್ಲ.

b) **ತಾತ್ವಿಕಯೋಗಿಜ್ಞಾನ :** ಋಜುಯೋಗಿಗಳಿಗಿಂತ ಭಿನ್ನರಾದ ತತ್ವಾಭಿಮಾನಿ ದೇವತೆಗಳಿಗೆ ತಾತ್ವಿಕ ಯೋಗಿಗಳೆನ್ನುವರು. ಇವರ ಜ್ಞಾನವು ಅನಾದಿ ಮತ್ತು ಈಶ್ವರನನ್ನು ಬಿಟ್ಟು ಉಳಿದೆಡೆಯಲ್ಲಿ ಆಲೋಚಿಸಿದರೂ ಕೂಡ ಸರ್ವ ವಿಷಯಕವಲ್ಲ. ಇವರ ಜ್ಞಾನವು ಸ್ವರೂಪ ಮತ್ತು ಬಾಹ್ಯ ಎಂದು ಎರಡು ವಿಧ. ಸ್ವರೂಪಜ್ಞಾನವು ಅನಾದಿ, ನಿತ್ಯ, ಮತ್ತು ಯಥಾರ್ಥ. ಬಾಹ್ಯಜ್ಞಾನವೂ ಪ್ರವಾಹತಃ ಅನಾದಿ ಆಗಿದೆ. ಆದರೆ ಒಮ್ಮೊಮ್ಮೆ ಅಯಥಾರ್ಥವೂ ಇರುತ್ತದೆ.

c) **ಅತಾತ್ವಿಕಯೋಗಿಜ್ಞಾನ :** ಋಜುಯೋಗಿಗಳು, ತಾತ್ವಿಕಯೋಗಿಗಳನ್ನು ಬಿಟ್ಟು ಉಳಿದ ದೇವ-ಋಷಿ-ಮನುಷ್ಯಾದಿ ಯೋಗಿಗಳಿಗೆ ಅತಾತ್ವಿಕಯೋಗಿಗಳೆನ್ನುವರು. ಇವರ ಜ್ಞಾನವು ಸಾದಿ ಮತ್ತು ಈಶ್ವರನನ್ನು ಬಿಟ್ಟು ಉಳಿದೆಡೆ ತುಸು ಅಜ್ಞಾನದಿಂದ ಕೂಡಿರುತ್ತದೆ. ಇವರ ಜ್ಞಾನವೂ ಸ್ವರೂಪ ಮತ್ತು ಬಾಹ್ಯವೆಂದು ಎರಡು ವಿಧ. ಸ್ವರೂಪ ಜ್ಞಾನವು ಅನಾದಿ ಮತ್ತು ಯಥಾರ್ಥವಾಗಿದೆ. ಬಾಹ್ಯ ಜ್ಞಾನವು ಸಾದಿ ಮತ್ತು ಒಮ್ಮೊಮ್ಮೆ ಅಯಥಾರ್ಥವೂ ಇರುತ್ತದೆ.

20) **ಅಯೋಗಿಜ್ಞಾನ :** ಯೋಗಿಗಳಲ್ಲದವರು ಅಯೋಗಿಗಳು. ಇವರ ಜ್ಞಾನವು ಈಶ್ವರನನ್ನು ಬಿಟ್ಟು ಉಳಿದೆಡೆಯಲ್ಲಿ ಹೆಚ್ಚಾಗಿ ಅಜ್ಞಾನದಿಂದ ಕೂಡಿರುತ್ತದೆ. ಇವರ ಜ್ಞಾನವು ಸ್ವರೂಪ ಮತ್ತು ಬಾಹ್ಯವೆಂದು ಎರಡು ವಿಧ. ಇವರ ಸ್ವರೂಪ ಜ್ಞಾನವು ವ್ಯಕ್ತ್ಯಪೇಕ್ಷಯಾ ಮತ್ತು ಬಾಹ್ಯಜ್ಞಾನವು ಪ್ರವಾಹತಃ ಉತ್ಪತ್ತಿ ವಿನಾಶವುಳ್ಳದ್ದು. ಮುಕ್ತಿ ಯೋಗ್ಯರು, ನಿತ್ಯಸಂಸಾರಿಗಳು ಮತ್ತು ತಮೋಯೋಗ್ಯರು ಎಂದು ಅಯೋಗಿಗಳು ಮೂರು ವಿಧ. ಮುಕ್ತಿಯೋಗ್ಯರ ಸ್ವರೂಪ ಜ್ಞಾನ ಯಥಾರ್ಥವೇ, ತಮೋಯೋಗ್ಯರ ಜ್ಞಾನ ಅಯಥಾರ್ಥವೇ. ನಿತ್ಯ ಸಂಸಾರಿಗಳ ಜ್ಞಾನವು ಮಿಶ್ರಿತ. ಮೂವರ ಬಾಹ್ಯ ಜ್ಞಾನವು ಒಮ್ಮೊಮ್ಮೆ ಯಥಾರ್ಥ ಮತ್ತು ಒಮ್ಮೊಮ್ಮೆ ಅಯಥಾರ್ಥ ಆಗಿರುತ್ತದೆ.

**ಅಯಥಾರ್ಥ ಜ್ಞಾನ :** ಅಯಥಾರ್ಥ ಜ್ಞಾನವು ಸಂಶಯ,ವಿಪರ್ಯಾಯ (ಭ್ರಮ) ಮತ್ತು ತರ್ಕ ಎಂದು ಮೂರು ವಿಧ ಎಂದು ನೈಯಾಯಿಕರು ಹೇಳುತ್ತಾರೆ. (ಅಯಥಾರ್ಥಾನುಭವಃ ತ್ರಿವಿಧಃ ಸಂಶಯ-ವಿಪರ್ಯಾಯ ತರ್ಕಭೇದಾತ್- ತರ್ಕಸಂಗ್ರಹ). ಆದರೆ ನಾವು ತರ್ಕವು ಪ್ರಮಾಣವೆನ್ನುತ್ತೇವೆ. ಆದು ಅನುಮಾನದ ಒಂದು ಪ್ರಕಾರ.

21) **ಸಂಶಯಜ್ಞಾನ :** ಅನವಧಾರಣಾ ಜ್ಞಾನಂ ಸಂಶಯಃ-ಏಕಸ್ಮಿನ್ ಧರ್ಮಿಣಿ ಭಾಸಮಾನ-ವಿರುದ್ಧ-ಅನೇಕಾಕಾರ-ಅವಗಾಹಿಜ್ಞಾನಂ. ಯಥಾ ಸ್ಥಾಣುರ್ವಾ ಪುರುಷೋ ವಾ ಇತಿ. ಸಂಶಯಜ್ಞಾನವೆಂದರೆ ನಿಶ್ಚಯಾತ್ಮಕವಲ್ಲದ ಜ್ಞಾನ. ಒಂದು ವಸ್ತುವಿನಲ್ಲಿ ತೋರುವ ಪರಸ್ಪರ ವಿರುದ್ಧವಾದ ಅನೇಕ ಪ್ರಕಾರಗಳುಳ್ಳ ಜ್ಞಾನಕ್ಕೆ ಸಂಶಯಜ್ಞಾನ ಎನ್ನುವರು. ಉದಾ- ದೂರದಿಂದ ಒಂದು ವಸ್ತುವನ್ನು ನೋಡಿದಾಗ ಇದು ಮೋಟು ಮರವೋ ಇಲ್ಲವೆ ಮನುಷ್ಯನೋ ಎಂದು ಬರುವ ಅನಿಶ್ಚಯಾತ್ಮಕ ಜ್ಞಾನಕ್ಕೆ ಸಂಶಯ ಎನ್ನುವರು. ನಿರ್ಣಾಯಕವಲ್ಲದ ಸಾಧಾರಣ ಧರ್ಮವೊಂದೇ ಸಂಶಯಕ್ಕೆ ಕಾರಣ. ನಿರ್ಣಾಯಕಾಭಾವ- ಸಹಕೃತಃ ಸಾಧಾರಣ ಧರ್ಮಃ ಏಕಃ ಏವ ಸಂಶಯಹೇತುಃ).

22) **ವಿಪರ್ಯಯ (ಭ್ರಮ) :** ವಸ್ತುವಿನ ವಿಪರೀತ ನಿರ್ಧಾರಕ್ಕೆ ವಿಪರ್ಯಯ ಅಥವಾ ಭ್ರಮ ಎನ್ನುವರು. ಉದಾ- ದೂರದಿಂದ ಶಿಂಪನ್ನು ನೋಡಿದಾಗ ಇದು ಬೆಳ್ಳಿ ಎಂದು ಒಮ್ಮೊಮ್ಮೆ ಬರುವ ಭ್ರಮ (ಭ್ರಮ ಬರಲಿಕ್ಕೆ ಮೂರು ಸಂಗತಿಗಳು ಅವಶ್ಯ. (i) ಸತ್ಯ ಅಧಿಷ್ಠಾನ (ಶಿಂಪು) (ii) ಸತ್ಯ ಪ್ರಧಾನ, ಎಂದಾದರೂ ಒಮ್ಮೆ ನೋಡಿದ ಬೆಳ್ಳಿ (iii) ಇವೆರಡರ ಸಾದೃಶ್ಯ.) **ಟೀಪು :** ಶ್ರೀಮನ್ಮಧ್ವಾಚಾರ್ಯರ ಪ್ರಕಾರ ಶಿಂಪೇ ಕಣ್ಣಿನ ದೋಷ ಮೂಲಕ ಅತ್ಯಂತ ಅಸತ್ಯವಾದ ಬೆಳ್ಳಿಯಾಗಿ ತೋರುತ್ತವೆ. (ಶುಕ್ತಿರೇವ ಅತ್ಯಂತ ಅಸದ್ರಜತಾತ್ಮನಾ ಪ್ರತಿಭಾತಿ) 'ಅಸತ್ಯವಾದ ಬೆಳ್ಳಿಯೇ ನನಗೆ ತೋರಿತ್ತು' ಎಂದು ಹಿಂದಿನಿಂದ ಬರುವ ಬಾಧಜ್ಞಾನ ಮೂಲಕ, ತೋರಿದ ಬೆಳ್ಳಿ ಅಸತ್ಯವೆಂದು ಶ್ರೀಮಧ್ವಾಚಾರ್ಯರು ನಿರ್ಣಯಿಸಿದ್ದಾರೆ.

23) **ತರ್ಕ :** ಕಸ್ಯಚಿದ್ಧರ್ಮಸ್ಯ ಅನಂಗೀಕಾರೇ ಅರ್ಥಾಂತರಸ್ಯ ಆಪಾದಕಂ ತರ್ಕ ; ಅಪ್ರಮಾಣವಾದ ಒಂದನ್ನು (ವ್ಯಾಪ್ಯಂ) ಒಪ್ಪಿದರೆ ಪ್ರಮಾಣಭೂತವಾದ ಇನ್ನೊಂದನ್ನು (ವ್ಯಾಪಕವನ್ನು) ನಿರಾಕರಿಸುವ ಅನಿಷ್ಟ ಪ್ರಸಂಗಕ್ಕೆ ತರ್ಕವೆನ್ನುವರು. ಉದಾ- ಪರ್ವತವು ಬೆಂಕಿಯುಳ್ಳದ್ದು ಹೊಗೆಯಿರುವದರಿಂದ, ಎಂದು ಅನುಮಾನ ಪ್ರಯೋಗಿಸಿದಾಗ, ಒಬ್ಬನು ಪರ್ವತದಲ್ಲಿ ಹೊಗೆಯಿರಲಿ ಆದರೆ ಅಗ್ನಿ ಬೇಡ ಎಂದರೆ ಆಗ ಅವನನ್ನು ಕುರಿತು, ಬೆಂಕಿ ಇಲ್ಲದಿದ್ದರೆ (ಅದರಿಂದ ವ್ಯಾಪ್ಯವಾದ) ಹೊಗೆಯೂ ಬೇಡ ಎಂದು ಅನಿಷ್ಟ ಆಪಾದನೆ

ಮಾಡುವದಕ್ಕೆ ತರ್ಕವೆನ್ನುವರು. (ಯದಿ ದಹ್ನಿಃ ನ ಸ್ಯಾತ್ ತರ್ಹಿ ಧೂಮೋಪಿ ನಸ್ಯಾತ್) ಆದರೆ ಪ್ರತ್ಯಕ್ಷವಿರುವ ಹೊಗೆಯನ್ನು ನಿರಾಕರಿಸಲು ಶಕ್ಯವಿಲ್ಲ.
**ಟೀಪು** : ಸಿದ್ಧಾಂತಿಗಳ ಪ್ರಕಾರ, ತರ್ಕವು ಅಪ್ರಮಾಣವಲ್ಲ. ಅದು ಅನುಮಾನದ ಒಂದು ಪ್ರಭೇದ ಮಾತ್ರ.

## ಅನುಪ್ರಮಾಣ ಮತ್ತು ಅದರ ಪ್ರಭೇದಗಳು

ಈ ಮೊದಲು ವಿವರಿಸಿದಂತೆ ಅನುಪ್ರಮಾಣವೆಂದರೆ ಪ್ರಮಾಕರಣಂ ಅಥವಾ ಯಥಾರ್ಥಜ್ಞಾನಸಾಧನಂ.

24) **ಕರಣ :** ಕರಣವೆಂದರೆ ಅಸಾಧಾರಣ ಸಾಧನ ಅಥವಾ ಕಾರಣ. ಉದಾ ಘಟದ ರೂಪಜ್ಞಾನಕ್ಕೆ ಕಣ್ಣು ಕರಣ.

25) **ಕಾರಣಂ :** ಕಾರ್ಯಕ್ಕಿಂತ ಮೊದಲು ನಿಯಮೇನ ಇರುವದು ಕಾರಣದ ಲಕ್ಷಣ. (ನಿಯತಪೂರ್ವಭಾವಿತ್ವಂ).

ಕಾರಣಗಳು ಉಪಾದಾನ, ನಿಮಿತ್ತವೆಂದು ಎರಡು ವಿಧ. ನೈಯಾಯಿಕರಾದರೋ (i) ಸಮವಾಯಿ ಕಾರಣ (ii) ಅಸಮವಾಯಿ ಕಾರಣ ಮತ್ತು (iii) ನಿಮಿತ್ತಕಾರಣವೆಂದು ಮೂರು ಕಾರಣ ಒಪ್ಪಿದ್ದಾರೆ,

26) **ಉಪಾದಾನ ಕಾರಣ :** ಪರಿಣಾಮಿತ್ವೇ ಸತಿ ಯತ್ಕಾರಣಂ ತತ್ ಉಪಾದಾನಕಾರಣಂ. ವಿಕಾರ ಹೊಂದಿ ಕಾರ್ಯವನ್ನು ಉತ್ಪಾದಿಸುವ ಕಾರಣವು ಉಪಾದಾನ ಕಾರಣ. ಉದಾ– ಮಣ್ಣು ಗಡಿಗೆಗೆ ಉಪಾದಾನ ಕಾರಣ. (ನೈಯಾಯಿಕರು ಇದಕ್ಕೆ ಸಮವಾಯಿ ಕಾರಣ ಎನ್ನುವರು. ವಿವರಣೆ ಕೆಳಗೆ ಇದೆ.)

27) **ನಿಮಿತ್ತ ಕಾರಣ :** ಅಪರಿಣಾಮಿತ್ವೇ ಸತಿ ಯತ್ಕಾರಣಂ ತತ್ ನಿಮಿತ್ತಕಾರಣಂ.ವಿಕಾರವಾಗದೆ ಕಾರ್ಯವನ್ನು ಉತ್ಪಾದಿಸುವ ಕಾರಣವು ನಿಮಿತ್ತ ಕಾರಣ. ಉದಾ– ಕುಂಬಾರ, ಅವನ ದಂಡ ಮತ್ತು ಚಕ್ರ ಇವು ಘಟಕ್ಕೆ ನಿಮಿತ್ತ ಕಾರಣ.

28) **ಸಮವಾಯಿ ಕಾರಣ** : ಯತ್ ಸಮವೇತಂ (ಯಸ್ಮಿನ್ ಸಮವೇತಂ) ಕಾರ್ಯಂ ಉತ್ಪದ್ಯತೇ ತತ್ ಸಮವಾಯಿಕಾರಣಮ್. ಬೇರ್ಪಡಿಸಲಾಗದಿರುವ ಯಾವುದರಲ್ಲಿ, ಯಾವುದು ಸಂಬದ್ಧವಾಗಿ, ಕಾರ್ಯವನ್ನು ಹುಟ್ಟಿಸುವದೋ ಅದು ಸಮವಾಯಿ ಕಾರಣ. ಉದಾ— ತಂತುಗಳು ಪಟಕ್ಕೆ ಸಮವಾಯಿ ಕಾರಣ.
**ಟೀಪು** : ಸಂಬಂಧವು ಸಮವಾಯ, ಸಂಯೋಗ ಎಂದು ಎರಡು ವಿಧ. ಪುಸ್ತಕದ ಮೇಲೆ ಕೈ ಇಟ್ಟಾಗ ಕೈ ಮತ್ತು ಪುಸ್ತಕಗಳ ನಡುವಿನ ಸಂಬಂಧ ಸಂಯೋಗ. ಇವುಗಳಲ್ಲಿ ಒಂದನ್ನು ತೆಗೆದರೆ ಸಂಯೋಗ ಸಂಬಂಧ ಇಲ್ಲವಾಗುತ್ತದೆ. ಕೂಡಿಯೇ ಇರುವ, ಒಂದು ವಸ್ತು ನಾಶವಾಗದೆ ಇನ್ನೊಂದನ್ನು ಆಶ್ರಯಿಸಿಕೊಂಡಿರುವ ಎರಡು ವಸ್ತುಗಳ ನಡುವಿನ ಸಂಬಂಧಕ್ಕೆ ಸಮವಾಯ ಎನ್ನುವರು. ಅಯುತ ಸಿದ್ಧಯೋಃ ಸಂಬಂಧಃ ಸಮವಾಯಃ, ಯಯೋಃ ಮಧ್ಯೇ ಏಕಂ ಅವಿನಶ್ಯತ್,

ಅಪರಾಧೀನಮೇವ ಅವತಿಷ್ಠತೇ ತೌ ಅಯುತ ಸಿದ್ಧೌ. ಉದಾ–ತಂತು ಪಟಗಳ ನಡುವಿನ ಸಂಬಂಧ ಸಮವಾಯ. ಸ್ಥೂಲವಾಗಿ ಅವಯವ ಅವಯವಿ, ಗುಣ–ಗುಣಿ, ಕ್ರಿಯಾ ಕ್ರಿಯಾವಾನ್, ಜಾತಿ-ವ್ಯಕ್ತಿ, ವಿಶೇಷ ನಿತ್ಯದ್ರವ್ಯ ಇವುಗಳ ಸಂಬಂಧಕ್ಕೆ ಸಮವಾಯ ಸಂಬಂಧ ಎನ್ನುವರು.

29) **ಅಸಮವಾಯಿಕಾರಣ :** ಯತ್ ಸಮವಾಯಿಕಾರಣಪ್ರತ್ಯಾಸನ್ನಂ, ಅವಧೃತಸಾಮರ್ಥ್ಯಂ ತತ್ ಅಸಮವಾಯಿಕಾರಣವ್. ಅಥವಾ ಕಾರ್ಯೇಣ ಕಾರಣೇನ ವಾ ಸಹ ಏಕಸ್ಮಿನ್ ಅರ್ಥೇ ಸಮವೇತಂ ಸತ್ ಕಾರಣಂ ಅಸಮವಾಯಿ ಕಾರಣಂ. ಕಾರ್ಯ ಅಥವಾ ಆ ಕಾರ್ಯದ ಸಮವಾಯಿ ಕಾರಣದೊಡನೆ ಸಮವಾಯಿ ಸಂಬಂಧದಿಂದಿರುವ ಕಾರಣವು ಅಸಮವಾಯಿ ಕಾರಣ. ಉದಾ–ತಂತು ಸಂಯೋಗ ಪಟಕ್ಕೆ ಅಸಮವಾಯಿ ಕಾರಣ. ಮತ್ತು ತಂತು ರೂಪ ಪಟರೂಪಕ್ಕೆ ಅಸಮವಾಯಿ ಕಾರಣ. ಸ್ಥೂಲವಾಗಿ ಕಾರ್ಯಗತ ರೂಪಗುಣ ಕ್ರಿಯಾದಿಗಳಿಗೆ ಕಾರಣಗತ ರೂಪ-ಗುಣ–ಕ್ರಿಯಾದಿಗಳು ಅಸಮವಾಯಿ ಕಾರಣ. ಉದಾ– ಪಟದ ಶೌಕ್ಲ್ಯಕ್ಕ ತಂತುಶೌಕ್ಲ್ಯ ಅಸಮವಾಯಿ ಕಾರಣ.

**ಅನುಪ್ರಮಾಣದ ಪ್ರಭೇದಗಳು :** ಅನುಪ್ರಮಾಣವೆಂದರೆ ಜ್ಞಾನಸಾಧನ. ಎಂದು ಮೇಲೆ ವಿವರಿಸಿದ್ದಾಯಿತು. ಜ್ಞಾನ ಸಾಧನಗಳು ಮುಖ್ಯವಾಗಿ ಪ್ರತ್ಯಕ್ಷ, ಅನುಮಾನ.ಆಗಮ (ಶಬ್ದ) ಎಂದು ಮೂರು ವಿಧ. ಇವುಗಳ **ವಿವರಣೆ ಮುಂದೆ ಇದೆ.** ಪ್ರತ್ಯಕ್ಷವು ಸಾಮಾನ್ಯವಾಗಿ ಈಗ ಸಮೀಪದಲ್ಲಿರುವ ಕೆಲವು ವಸ್ತುಗಳನ್ನು ಮಾತ್ರ ಗ್ರಹಿಸುತ್ತದೆ. ಶಬ್ದವು ಸ್ವತಂತ್ರವಾಗಿ ಎಲ್ಲ ವಿಷಯಗಳನ್ನು ಗ್ರಹಿಸುತ್ತದೆ.

**ಟೀಪು :** ಈ ಮೂರು ಪ್ರಮಾಣಗಳಲ್ಲದೆ ಕೆಲವು ದರ್ಶನಕಾರರು ಬೇರೆ ಪ್ರಮಾಣಗಳನ್ನೂ ಅಂಗೀಕರಿಸಿದ್ದಾರೆ, ಆದರೆ ಅವು ಈ ಮೂರರಲ್ಲಿಯೇ ಅಂತರ್ಗತವಾಗುತ್ತವೆ.

30) **ಅರ್ಥಾಪತ್ತಿ :** ಶರೀರದಿಂದ ಪುಷ್ಟನಾದ ದೇವದತ್ತನು ಹಗಲು ಊಟ ಮಾಡುವದಿಲ್ಲ ಎಂದರೆ ಅವನು ರಾತ್ರಿ ಊಟ ಮಾಡುತ್ತಾನೆ ಎಂಬುದು ಅರ್ಥತಃ ಪ್ರಾಪ್ತವಾಗುತ್ತದೆ. ಆದ್ದರಿಂದ ಇದಕ್ಕೆ ಅರ್ಥಾಪತ್ತಿ ಎನ್ನುವರು. ಇಲ್ಲಿ ದೇವದತ್ತನ ಪುಷ್ಟತೆಯು ರಾತ್ರಿ ಭೋಜನವಿಲ್ಲದೆ ಬೇರೆ ರೀತಿಯಿಂದ ಕೂಡುವದಿಲ್ಲವಾದ್ದರಿಂದ, (ಅನ್ಯಥಾ ಅನುಪಪದ್ಯಮಾನತ್ವಾತ್) ಅವನ ರಾತ್ರಿ ಭೋಜನವು ಅರ್ಥಾಪತ್ತಿಯಿಂದ ತಿಳಿಯಲಾಗುತ್ತದೆ. ಆದರೆ ಅರ್ಥಾಪತ್ತಿಯು ನಿಜವಾಗಿ ಅನುಮಾನದಲ್ಲಿಯೇ ಅಂತರ್ಗತ ಆಗುತ್ತದೆ.

31) **ಉಪಮಾನ :** 'ಸಾದೃಶ್ಯಜ್ಞಾನಸಾಧನಂ ಉಪಮಾನಂ' ಕಾಡಾಕಳದ ಜ್ಞಾನವಿಲ್ಲದ ಪಟ್ಟಣಿಗನಿಗೆ ಆದರ ಜ್ಞಾನ ಮಾಡಿಕೊಳ್ಳಲು 'ಕಾಡಾಕಳು ಆಕಳಂತೆ ಇರುತ್ತದೆ ಎಂದು ಹೇಳಲಾಗುತ್ತದೆ. ನಂತರ ಅವನು ಅಡವಿಗೆ ಹೋದಾಗ

ಕಾಡಾಕಳನ್ನು ಕಂಡು ಹಿಂದಿನ ಉಪಮಾನ ವಾಕ್ಯದ ಸ್ಮರಣೆಯಿಂದ ಕಾಡಾಕಳನ್ನು ಗುರ್ತಿಸುತ್ತಾನೆ. ಆದರೆ ಈ ಉಪಮಾನ ಪ್ರಮಾಣವು ಅನುಮಾನದಲ್ಲಿ ಅಂತರ್ಭಾವವಾಗುತ್ತದೆ.

32) **ಅಭಾವ :** ವಸ್ತುಗಳ ಅಭಾವ ಜ್ಞಾನವು ಅವುಗಳ ಅಭಾವದಿಂದಲೇ ತಿಳಿಯುವದರಿಂದ ಅಭಾವವು (ಅನುಪಲಬ್ಧಿಃ) ಪ್ರತ್ಯೇಕ ಪ್ರಮೇಣವೆಂದು ಕೆಲವರು ಒಪ್ಪಿದ್ದಾರೆ. ಆದರೆ ಇದು ಪ್ರತ್ಯಕ್ಷ ಮತ್ತು ಅನುಮಾನದಲ್ಲಿ ಅಂತರ್ಗತವಾಗುತ್ತದೆ.

33) **ಐತಿಹ್ಯ :** ಅನಿರ್ದಿಷ್ಟ ಪ್ರವಕ್ತೃಕಂ ಪ್ರವಾದಪಾರಂಪರ್ಯಂ ಐತಿಹ್ಯಮ್. ಇಂಥವನಿಂದಲೇ ಇದು ಹೊರಟಿತು ಎಂದು ತಿಳಿಯಲಾಗದ ಪ್ರವಾದ ಪರಂಪರೆಗೆ ಐತಿಹ್ಯ ಎನ್ನುವರು. ಉದಾ— ಈ ಆಲದ ಮರದಲ್ಲಿ ದೆವ್ವವಿದೆ.

34) **ಸಂಭವ ;** ಬಹುಲಜ್ಞಾನೇ ಅಲ್ಪಜ್ಞಾನಂ ಸಂಭವಃ. ಒಬ್ಬನಲ್ಲಿ ಒಂದು ನೂರು ರೂಪಾಯಿ ಇವೆ ಎಂದು ಜ್ಞಾನವಾದಾಗ ಅವನಲ್ಲಿ ಇಪ್ಪತ್ತೈದು ರೂಪಾಯಿ ಇವೆ ಎಂಬುದು ತಾನಾಗಿಯೇ ತಿಳಿಯುತ್ತದೆ (ಸಂಭವತಿ). ಈ ಸಂಭವವು ಅನುಮಾನದಲ್ಲಿ ಅಂತರ್ಗತವಾಗುತ್ತದೆ.

34) **ಪರಿಶೇಷ :** ಪ್ರಸಕ್ತಪ್ರತಿಷೇಧೇ ಪರಿಶಿಷ್ಯಮಾಣೇ ಬುದ್ಧಿಃ ಪರಿಶೇಷಃ. ಪ್ರಸಕ್ತವಾದವುಗಳಲ್ಲಿ ಕೆಲವನ್ನು ನಿಷೇಧಿಸಿದ ಬಳಿಕ ಉಳಿಯುವ ಒಂದಕ್ಕೆ ಪರಿಶೇಷ ಜ್ಞಾನ ಎನ್ನುವರು. ಉದಾ— ಇದ್ದ ನಾಲ್ವರಲ್ಲಿ ಮೂವರು ಕದ್ದಿಲ್ಲವೆಂದರೆ ಉಳಿದ ನಾಲ್ಕನೆಯವನೇ ಕದ್ದವ ಎಂದು ಜ್ಞಾನವಾಗುತ್ತದೆ. ಈ ಪ್ರಮಾಣವೂ ಅನುಮಾನದಲ್ಲಿ ಅಂತರ್ಗತವಾಗುತ್ತದೆ.

**ಟೀಪು :** ಮೇಲಿನ ಪ್ರಮಾಣಗಳಲ್ಲದೆ ಕಣ್ಣು ಸನ್ನೆ, ಕೈಕಾಲು ಸನ್ನೆ ಮೊದಲಾದವೂ ಜ್ಞಾನ ಸಾಧನವಾಗಿವೆ.

## ಪ್ರತ್ಯಕ್ಷ

1) **ಪ್ರತ್ಯಕ್ಷ**— ನಿರ್ದೋಷೇಂದ್ರಿಯಂ ಪ್ರತ್ಯಕ್ಷಂ— ಅಥವಾ ನಿರ್ದೋಷ ಅರ್ಥೇಂದ್ರಿಯ ಸನ್ನಿಕರ್ಷಃ ಪ್ರತ್ಯಕ್ಷಮ್ (ಅರ್ಥ= ಇಂದ್ರಿಯ ವಿಷಯಃ) ಪ್ರತ್ಯಕ್ಷವೆಂದರೆ ನಿರ್ದುಷ್ಟವಾದ ಇಂದ್ರಿಯ ಅಥವಾ ಇಂದ್ರಿಯ— ವಿಷಯಗಳ ಸಂಬಂಧ. (ದೋಷರಹಿತವಾದ ಕಣ್ಣಿನಿಂದ ರೂಪಜ್ಞಾನವಾಗುವದರಿಂದ ಕಣ್ಣು ಸಾಧನ. ಆದರೆ ಕೇವಲ ಕಣ್ಣಿನಿಂದ ಜ್ಞಾನವಾಗುವದಿಲ್ಲ. ಅದಕ್ಕೆ ಘಟ ಮೊದಲಾದ ವಸ್ತುವಿನೊಡನೆ ಸಂಬಂಧವಾದರೆ ಅದರ ರೂಪಜ್ಞಾನವಾಗುತ್ತದೆ. ಈ ದೃಷ್ಟಿಯಿಂದ, ಕಣ್ಣು ಮತ್ತು ಸಂಬಂಧ ಎರಡಕ್ಕೂ ಪ್ರತ್ಯಕ್ಷವೆನ್ನುವರು. ವಿಷಯಗಳೆಡೆಗೆ ಇರುವ ಅಕ್ಷ (ಇಂದ್ರಿಯ)ಗಳಿಗೆ ಪ್ರತ್ಯಕ್ಷ ಎನ್ನುವರು. "ವಿಷಯಾನ್ ಪ್ರತಿ ಸ್ಥಿತಂ ಹಿ ಅಕ್ಷಂ ಪ್ರತ್ಯಕ್ಷಂ". ವಿ.ತ.ನಿ.

**ಪ್ರತ್ಯಕ್ಷದ ಪ್ರಕಾರಗಳು :** ಪ್ರತ್ಯಕ್ಷವೆಂದರೆ ಇಂದ್ರಿಯವೆಂದು ಮೇಲೆ ಹೇಳಿದೆಯಷ್ಟೇ. ಇಂದ್ರಿಯುವೆಂದರೆ ಜ್ಞಾನೇಂದ್ರಿಯ. ಈ ಜ್ಞಾನೇಂದ್ರಿಯ,

ಸ್ವರೂಪೇಂದ್ರಿಯ ಮತ್ತು ಬಾಹ್ಯೇಂದ್ರಿಯವೆಂದು ಎರಡು ವಿಧ.

2) **ಸ್ವರೂಪೇಂದ್ರಿಯ (ಸಾಕ್ಷಿ)** : ಇದರಿಂದ ವ್ಯಕ್ತಿಯ ಸ್ವರೂಪಜ್ಞಾನ ಅಭಿವ್ಯಕ್ತವಾಗುತ್ತದೆ. ಸ್ವರೂಪೇಂದ್ರಿಯಕ್ಕೆ ಸಾಕ್ಷಿ ಎನ್ನುವರು. ಸಾಕ್ಷಿಯಿಂದ ಉಂಟಾದ ಜ್ಞಾನವು ನಿಯಮೇನ ಯಥಾರ್ಥವಿರುತ್ತದೆ. ಸಾಕ್ಷಿಯ ವಿಷಯ **ಗಳೆಂದರೆ**— ಆತ್ಮನ ಸ್ವರೂಪ ಮತ್ತು ಧರ್ಮ, ಸುಖಾದಿಗಳು, ಭಾವರೂಪ ಅಜ್ಞಾನ, ಮನಸ್ಸು ಮತ್ತು ಮನೋಧರ್ಮ, ಜ್ಞಾನ–ಕಾಲ–ಅವ್ಯಾಕೃತ ಆಕಾಶ ಮುಂತಾದವುಗಳು.

3) **ಬಾಹ್ಯೇಂದ್ರಿಯ** (ಪ್ರಾಕೃತೇಂದ್ರಿಯ) — ಮೂಗು, ನಾಲಿಗೆ, ಕಣ್ಣು, ತ್ವಚೆ, ಕಿವಿ ಮತ್ತು ಮನಸ್ಸು ಎಂದು ಜ್ಞಾನೇಂದ್ರಿಯಗಳು ಆರು. ಇವುಗಳಲ್ಲಿ ಮೂಗಿನ ವಿಷಯವೆಂದರೆ ವಾಸನೆ (ಸುಗಂಧ–ದುರ್ಗಂಧ ಮುಂ.) ರಸವು ನಾಲಗೆಗೆ ವಿಷಯ; ರೂಪ, ಸಂಖ್ಯಾ, ಕರ್ಮ ಮುಂ. ಕಣ್ಣಿನ ವಿಷಯ. ಸ್ಪರ್ಶವು ತ್ವಗಿಂದ್ರಿಯದ ವಿಷಯ, ವಾಯುಸ್ಪರ್ಶವು ತ್ವಗಿಂದ್ರಿಯದಿಂದ ತಿಳಿಯುತ್ತದೆ. ವಾಯುವನ್ನು ಅನುಮಾನದಿಂದ ಊಹಿಸಲಾಗುತ್ತದೆ. ಶಬ್ದವು ಕಿವಿಗೆ ವಿಷಯ. ಮನಸ್ಸು ಪಂಚೇಂದ್ರಿಯ ದ್ವಾರಾ ಮೇಲಿನ ಎಲ್ಲ ವಿಷಯಗಳನ್ನು ಗ್ರಹಿಸುತ್ತದೆ. ಮತ್ತು ಸ್ವತಂತ್ರವಾಗಿ ಸ್ಮರಣೆಗೆ ಕಾರಣವಾಗುತ್ತದೆ. (ಸ್ವಾತಂತ್ರ್ಯೇಣ ಸ್ಮರಣ ಸಾಧನಂ ಮನಃ) ಸ್ಮರಣವು ಮುಖ್ಯವಾಗಿ ಸಂಸ್ಕಾರಗಳಿಂದೊಡಗೂಡಿದ ಮನಸ್ಸಿನಿಂದ ಹುಟ್ಟುತ್ತದೆ. (ಸಂಸ್ಕಾರಸಹಕೃತ ಮನೋಜನ್ಯಾಂ ಸ್ಮೃತಿಃ).

ಮನಸ್ಸು 5 ಪ್ರಕಾರವಾಗಿದೆ. ಚಿತ್ತ (ಸ್ಮರಣ), ಚೇತನಾ (ಬಹು ವಿಷಯಕ ಸ್ಮರಣೆ), ಅಹಂಕಾರ, ಬುದ್ಧಿ (ನಿಶ್ಚಯಾತ್ಮಕ ಜ್ಞಾನ) ಹಾಗೂ ಅಂತಃಕರಣವು. ಮನಸ್ಸು ಪ್ರಾಯಃ ಹೃದಯ ಮತ್ತು ಕಂಠ ಪ್ರದೇಶದಲ್ಲಿದ್ದು ಸರ್ವತ್ರ ಸಂಚರಿಸುತ್ತದೆ. ರಾಗಾದಿಗಳು ಮನಸ್ಸಿನ ದೋಷಗಳು. ಅತಿದೂರ, ಅತಿಸಮೀಪ, ಸೂಕ್ಷ್ಮತೆ, ಆತಂಕ, ಹೋಲಿಕೆ ಮುಂ. ವಿಷಯ ಗತ ದೋಷಗಳು. ಕಾಚ–ಕಾಮಲಾದಿಗಳು ಇಂದ್ರಿಯ ದೋಷ. ದೋಷಗಳಿದ್ದರೆ ಸರಿಯಾದ ಜ್ಞಾನ ಆಗುವದಿಲ್ಲ.

**ಟೀಪು :** (1) ಸಾಕ್ಷಿ, ಮನಸ್ಸು ಮತ್ತು ಪಂಚ ಜ್ಞಾನೇಂದ್ರಿಯಗಳು. ಹೀಗೆ ಏಳು ಇಂದ್ರಿಯಗಳಿಂದ ಜ್ಞಾನ ಹುಟ್ಟುವದರಿಂದ ಪ್ರತ್ಯಕ್ಷವು ಏಳು ವಿಧವಾಗಿದೆ. **(ಪ್ರತ್ಯಕ್ಷಂ ಸಪ್ತವಿಧಮ್)**

(2) ಎಲ್ಲ ಜೀವರ ಪ್ರಾಕೃತೇಂದ್ರಿಯಗಳು ಒಂದೇ ಬಗೆಯವಿರುವದಿಲ್ಲ. ಅವು ದೈವ–ಅಸುರ–ಮಧ್ಯಮ ಎಂದು ಮೂರು ವಿಧ. ದೈವವು ಯಥಾರ್ಥ ಜ್ಞಾನ ಪ್ರಚುರ, ತಾಮಸವು ಅಯಥಾರ್ಥ ಜ್ಞಾನ ಪ್ರಚುರ ಮತ್ತು ಮಧ್ಯಮ ಉಭಯಾತ್ಮಕ.

**ಪ್ರತ್ಯಕ್ಷದ ಪ್ರಭೇದಗಳು :**

(1) ಪ್ರತ್ಯಕ್ಷದ ಲಕ್ಷಣವು ನಿರ್ದುಷ್ಟ ಇಂದ್ರಿಯ ಎಂದಿರುವಾಗ, ಪ್ರತ್ಯಕ್ಷವು

(i) ಈಶ್ವರ ಪ್ರತ್ಯಕ್ಷ (ii) ಲಕ್ಷ್ಮೀ ಪ್ರತ್ಯಕ್ಷ (iii) ಯೋಗಿ ಪ್ರತ್ಯಕ್ಷ ಮತ್ತು (iv) ಅಯೋಗಿ ಪ್ರತ್ಯಕ್ಷವೆಂದು ನಾಲ್ಕು ವಿಧ. ಇದರಲ್ಲಿ ಈಶ್ವರ ಪ್ರತ್ಯಕ್ಷ ಮತ್ತು ಲಕ್ಷ್ಮೀ ಪ್ರತ್ಯಕ್ಷವೆಂದರೆ ಅವರ ಸ್ವರೂಪೇಂದ್ರಿಯ. ಅವರಿಗೆ ಪ್ರಾಕೃತ ಅಥವಾ ಬಾಹ್ಯೇಂದ್ರಿಯಗಳಿಲ್ಲ. ಹಿಂದೆ ಹೇಳಿದಂತೆ ಈಶ್ವರ ಜ್ಞಾನವು ಸರ್ವವಿಷಯಕ ಮತ್ತು ಯಥಾರ್ಥ. ಲಕ್ಷ್ಮೀದೇವಿಗೆ ಈಶ್ವರನನ್ನು ಬಿಟ್ಟು ಆಲೋಚಿಸದಿದ್ದರೂ ಸರ್ವ ವಿಷಯಕ ಯಥಾರ್ಥ ಜ್ಞಾನವಿದೆ. ಯೋಗಿ ಮತ್ತು ಅಯೋಗಿಗಳಿಗೆ ಸ್ವರೂಪೇಂದ್ರಿಯ ಮತ್ತು ಬಾಹ್ಯೇಂದ್ರಿಯಗಳಿರುತ್ತವೆ. ಯೋಗಿಗಳ ಸ್ವರೂಪ ಜ್ಞಾನ ಯಥಾರ್ಥವೇ. ಅಯೋಗಿಗಳ ಸ್ವರೂಪೇಂದ್ರಿಯ ಅವರವರ ಸ್ವರೂಪ ವನ್ನವಲಂಬಿಸಿರುತ್ತದೆ. ಉತ್ತಮರ ಸ್ವರೂಪೇಂದ್ರಿಯವು ವಿಷಯ ಮತ್ತು ಪ್ರಕಾರಗಳಲ್ಲಿ ಯಥಾರ್ಥವೇ. ಅಧಮ ಮತ್ತು ಮಧ್ಯಮರ ಸ್ವರೂಪೇಂದ್ರಿಯವು, ಸ್ವರೂಪದಲ್ಲಿ ಮಾತ್ರ ಯಥಾರ್ಥ; ಪ್ರಕಾರದಲ್ಲಿ ಕ್ರಮವಾಗಿ ಅಯಥಾರ್ಥ ಮತ್ತು ಮಿಶ್ರ ಇರುತ್ತವೆ. ಯೋಗಿಗಳ ಬಾಹ್ಯೇಂದ್ರಿಯಗಳು ಸಾಮಾನ್ಯವಾಗಿ ಯಥಾರ್ಥವೇ. ಅಯೋಗಿಗಳ ಜ್ಞಾನ ಯಥಾರ್ಥವೆಂಬ ನಿಯಮವಿಲ್ಲ.

(3) ಪ್ರತ್ಯಕ್ಷದ ಲಕ್ಷಣವು ನಿರ್ದುಷ್ಟ ಇಂದ್ರಿಯಾರ್ಥಸನ್ನಿಕರ್ಷ ಎಂದಿರುವಾಗ ಈ ಸನ್ನಿಕರ್ಷವು ಕೆಳಗಿನಂತೆ ಆಗುತ್ತದೆಂದು ನೈಯಾಯಿಕರ ಮತ. ಆತ್ಮವು ಮನಸ್ಸಿನೊಡನೆ, ಮನಸ್ಸು ಇಂದ್ರಿಯದೊಡನೆ, ಇಂದ್ರಿಯವು ವಿಷಯದೊಡನೆ ಸಂಬಂಧ ಹೊಂದಿದ ನಂತರ ವಸ್ತುವಿನ ಜ್ಞಾನವಾಗುತ್ತದೆ. (ಆತ್ಮಾ ಮನಸಾ ಸಂಯುಜ್ಯತೇ ಮನಃ ಇಂದ್ರಿಯೇಣ, ಇಂದ್ರಿಯಂ ಅರ್ಥೇನ). ಈ ಸಂಬಂಧವು (i) ಸಂಯೋಗ (ii) ಸಂಯುಕ್ತ ಸಮವಾಯ, (iii) ಸಂಯುಕ್ತ ಸಮವೇತ ಸಮವಾಯ (iv) ಸಮವಾಯ (v) ಸಮವೇತ ಸಮವಾಯ (vi) ವಿಶೇಷಣ ವಿಶೇಷ್ಯಭಾವ ಎಂದುನೈಯಾಯಿಕರು ಹೇಳುತ್ತಾರೆ. ಇವುಗಳಉದಾಹರಣೆಗಳೆಂದರೆ– (a) ಕಣ್ಣು ಘಟ ಇವುಗಳ ನಡುವಿನ ಸಂಬಂಧ, ಸಂಯೋಗ (b) ಕಣ್ಣು ಘಟರೂಪಕ್ಕಿರುವ ಸಂಬಂಧ ಸಂಯುಕ್ತ ಸಮವಾಯ (c) ಕಣ್ಣು ಮತ್ತು ಘಟದ ರೂಪತ್ವದ ಸಂಬಂಧ ಸಂಯುಕ್ತ ಸಮವೇತ ಸಮವಾಯ. (d) ಕಿವಿ ಮತ್ತು ಶಬ್ದ ಇವುಗಳ ಸಂಬಂಧ ಸಮವಾಯ. (e) ಕಿವಿ ಮತ್ತು ಶಬ್ದತ್ವಗಳ ಸಂಬಂಧ ಸಮವೇತ ಸಮವಾಯ. (f) ಕಣ್ಣು ಮತ್ತು ನೆಲದ ಮೇಲಿನ ಘಟದ ಅಭಾವ. ಇವುಗಳಿಗಿರುವ ಸಂಬಂಧವು ವಿಶೇಷಣ–ವಿಶೇಷ್ಯಭಾವ.

ಆದರೆ ನೈಯಾಯಿಕರು ಹೇಳಿದ್ದು ಸರಿಯಲ್ಲ. ಏಕೆಂದರೆ ಗುಣ–ಗುಣಿಗಳಿಗೆ ಅಭೇದವಿರುವದರಿಂದ ಸಮವಾಯ ಸಂಬಂಧವೇ ಅಪ್ರಮಾಣಿಕ.

**ಟೀಪು** : ನಮ್ಮ ಪ್ರಕಾರ, ತೈಜಸ ಅಹಂಕಾರದಿಂದ ಹುಟ್ಟಿದ ಇಂದ್ರಿಯಗಳು ತೇಜೋಮಯವಾಗಿವೆ. ಆದ್ದರಿಂದ ಎಲ್ಲ ಇಂದ್ರಿಯಗಳು ತಮ್ಮ ತೇಜಸ್ಸಿನ

ಮೂಲಕ ವಿಷಯಗಳೆಡೆಗೆ ಹೋಗಿ ಅವುಗಳನ್ನು ಗ್ರಹಿಸುತ್ತವೆ. (ಇಂದ್ರಿಯಾಣಿ ವಸ್ತು ಪ್ರಾಪ್ಯ ಪ್ರಕಾಶಕಾರೀಣಿ ।....ಸರ್ವೇಂದ್ರಿಯಾಣಾಂ ಸ್ವಸ್ವವಿಷಯೈಃ ಸ್ವಸ್ವ ವಿಷಯಪ್ರತಿಯೋಗಿಕಾಭಾವೇನ ಚ ಸಾಕ್ಷಾದೇವ ರಶ್ಮಿದ್ವಾರಾ ಸನ್ನಿಕರ್ಷಃ"— ಪ್ರಮಾಣಪದ್ಧತಿ)

— ● —

## ಅನುಮಾನ

1) **ಅನುಮಾನ :** "ನಿರ್ದೋಷೋಪಪತ್ತಿಃ ಅನುಮಾನಂ" ಅನುಮಾನವೆಂದರೆ ನಿರ್ದುಷ್ಟ ಯುಕ್ತಿ. ಯುಕ್ತಿಯಿಂದುಂಟಾಗುವ ಜ್ಞಾನಕ್ಕೆ ಅನುಮಿತಿ ಅಥವಾ ಅನುಮಾನ ಎಂದು ಕರೆಯುವರು. ಪ್ರತ್ಯಕ್ಷಕ್ಕೆ ಗೋಚರವಾಗದ ಅನೇಕ ವಿಷಯಗಳನ್ನು, ಭೂತ ಭವಿಷ್ಯದರ್ಥಗಳನ್ನು ಅನುಮಾನದಿಂದ ತಿಳಿಯಬಹುದು. ಅನುಮಾನದ ಪರಿಚಯವನ್ನು ಒಂದು ಉದಾಹರಣೆಯಿಂದ ಮಾಡಿಕೊಳ್ಳುವಾ. i) ಪರ್ವತಃ ವಹ್ನಿಮಾನ್ (ii) ಧೂಮಾತ್(iii) ಯತ್ರ ಯತ್ರ ಧೂಮಃ ತತ್ರ ತತ್ರ ವಹ್ನಿಃ, ಯಥಾ ಮಹಾನಸಃ (iv)ತಥಾ ಚ ಅಯಂ (v)ತಸ್ಮಾತ್ ತಥಾ.

ಪರ್ವತವು ಬೆಂಕಿಯುಳ್ಳದ್ದು ಹೊಗೆಯಿದ್ದುದರಿಂದ. ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇದೆ, ಅಡಿಗೆಯ ಮನೆಯಂತೆ. ಈ ಪರ್ವತ ಹಾಗೆ (ಹೊಗೆಯುಳ್ಳದ್ದು) ಇದೆ. ಆದ್ದರಿಂದ ಈ ಪರ್ವತವು ಹಾಗೆ ಎಂದರೆ ಬೆಂಕಿಯುಳ್ಳದ್ದು ಇದೆ. ಧರ್ಮವು ನಿಶ್ಚಿತವಿದ್ದ ಸ್ಥಳದಲ್ಲಿ ಅನುಮಾನವು ಪ್ರವೃತ್ತವಾಗುವದಿಲ್ಲ. ಪರ್ವತದಲ್ಲಿ ಬೆಂಕಿಯಿದ್ದ ಬಗ್ಗೆ ಸಂಶಯವಿರುವುದರಿಂದ ಅನುಮಾನವು ಪ್ರವೃತ್ತವಾಗಿದೆ.

2) **ಲಿಂಗ :** ಮೇಲಿನ ಉದಾಹರಣೆಯಲ್ಲಿ ಪರ್ವತದಲ್ಲಿ ಬೆಂಕಿ ಇದೆ ಎಂಬುದನ್ನು ಹೊಗೆ ಎಂಬ ಯುಕ್ತಿಯಿಂದ ನಿಶ್ಚಯಿಸಲಾಗಿದೆ. ಆದ್ದರಿಂದ ಇಲ್ಲಿ ಹೊಗೆ ಎಂಬುದು ಯುಕ್ತಿ, ಇದಕ್ಕೆ ಉಪಪತ್ತಿ, ಲಿಂಗ, ಸಾಧನ, ಹೇತು. ವ್ಯಾಪ್ಯ ಎಂದು ಕರೆಯುವರು.

3) **ಸಾಧ್ಯ :** ಯಾವುದನ್ನು ಸಾಧಿಸಬೇಕಾಗಿದೆಯೋ (To prove) ಅದು ಸಾಧ್ಯ. ಪರ್ವತದಲ್ಲಿ ಬೆಂಕಿಯನ್ನು ಸಾಧಿಸಬೇಕಾಗಿದೆ. ಆದ್ದರಿಂದ ಪರ್ವತದಲ್ಲಿಯ ಬೆಂಕಿ (ಪರ್ವತೀಯ ವಹ್ನಿ) ಸಾಧ್ಯ.

4) **ವ್ಯಾಪ್ತಿ :** ಮೇಲಿನ ಉದಾಹರಣೆಯಲ್ಲಿ ಕೇವಲ ಹೊಗೆಯ ಜ್ಞಾನದಿಂದ ಪರ್ವತದಲ್ಲಿ ಬೆಂಕಿ ಇದೆ ಎಂದು ನಿಶ್ಚಯವಾಗುವದಿಲ್ಲ. ಆದರೆ ಹೊಗೆ ಇದ್ದಲ್ಲಿ ಬೆಂಕಿ ಇದೆ ಎಂಬ ಜ್ಞಾನವೂ ಬೇಕು. ಇದಕ್ಕೆ ವ್ಯಾಪ್ತಿ ಎನ್ನುವರು. ಹೇತುವಿಗೆ

ವ್ಯಾಪ್ತಿ ಮೂಲವಾದುದು. ವ್ಯಾಪ್ತಿ ಎಂದರೆ ಎರಡು ಪದಾರ್ಥಗಳು ನಿಯಮೇನ ಕೂಡಿಕೊಂಡಿವೆ ಎಂಬುದು. ಸಾಹಚರ್ಯನಿಯಮಃ ವ್ಯಾಪ್ತಿಃ. ಹೊಗೆಗೆ ಬೆಂಕಿಯೊಡನೆ ನಿಯತ (ಅವ್ಯಭಿಚರಿತ) ಸಂಬಂಧವಿದೆ. ಅವು ಎರಡೂ ಸದಾ ಕೂಡಿಕೊಂಡಿವೆ. ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇದೆ ಎಂಬುದಕ್ಕೆ ವ್ಯಾಪ್ತಿ ಎನ್ನುವರು. ಆದರೆ ಬೆಂಕಿ ಇದ್ದಲ್ಲೆಲ್ಲ ಹೊಗೆ ಇರುವದಿಲ್ಲ. ಉದಾ : ಕಾಯ್ದ ಕಬ್ಬಿಣ ಗುಂಡು, ನಿಗಿ ನಿಗಿ ಕೆಂಡ, ಇಲೆಕ್ಟ್ರಿಕ್ ಬಲ್ಬ ಮುಂ. ವ್ಯಾಪ್ತಿಯು ಎರಡು ವಿಧ, ಅನ್ವಯ ವ್ಯಾಪ್ತಿ, ವ್ಯತಿರೇಕ ವ್ಯಾಪ್ತಿ, ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇದೆ, ಅಡಿಗೆಯ ಮನೆಯಲ್ಲಿಯಂತೆ ಎಂಬುದು ಅನ್ವಯ ವ್ಯಾಪ್ತಿ. ಇಲ್ಲಿ ಸಾಧನವಾದ ಹೊಗೆಗೆ ಸಾಧ್ಯವಾದ ಬೆಂಕಿಯೊಂದಿಗೆ ಅನ್ವಯ ಸಂಬಂಧವಿದೆ. ಇಲ್ಲಿ ವ್ಯಾಪ್ತಿ ವಚನವು ಸಾಧನ ಪುರಸ್ಸರವಾಗಿ ದೃಷ್ಟಾಂತಪೂರ್ವಕವಾಗಿ ಇರುತ್ತದೆ. ಇನ್ನು ಎಲ್ಲಿ ಬೆಂಕಿ ಇಲ್ಲವೋ ಅಲ್ಲಿ ಹೊಗೆ ಇಲ್ಲ. ನೀರಿನ ಮಡುವಿನಲ್ಲಿಯಂತೆ. ಎಂಬುದು ವ್ಯತಿರೇಕ ವ್ಯಾಪ್ತಿ, ಇಲ್ಲಿ ಸಾಧ್ಯಾಭಾವಕ್ಕೆ ಸಾಧನಾಭಾವದೊಂದಿಗೆ ವ್ಯಾಪ್ತಿ ಇದೆ. ದೃಷ್ಟಾಂತವೂ ಇದೆ. "ಸಾಧನಸ್ಯ ಸಾಧ್ಯೇನ ವ್ಯಾಪ್ತಿಃ ಅನ್ವಯ ವ್ಯಾಪ್ತಿಃ, ಸಾಧ್ಯಾಭಾವಸ್ಯ ಸಾಧನಾಭಾವೇನ ವ್ಯಾಪ್ತಿಃ ವ್ಯತಿರೇಕಃ. "ವ್ಯಾಪ್ತಿಗೆ ದೃಷ್ಟಾಂತವಿರಲೇಬೇಕು," ವ್ಯಾಪ್ತಿಗ್ರಹಣಸ್ಥಲಂ ದೃಷ್ಟಾಂತಃ." ದೃಷ್ಟಾಂತವು ಸಾಧರ್ಮ್ಯದೃಷ್ಟಾಂತ, ವೈಧರ್ಮ್ಯದೃಷ್ಟಾಂತ ಎಂದು ಎರಡು ವಿಧ. ಅನ್ವಯವ್ಯಾಪ್ತಿಯನ್ನು ಗ್ರಹಿಸುವ ಸ್ಥಳಕ್ಕೆ ಸಾಧರ್ಮ್ಯ ದೃಷ್ಟಾಂತವೆನ್ನುವರು. ಈ ಮೇಲಿನ ಧೂಮಾನುಮಾನದಲ್ಲಿ ಅಡಿಗೆಯ ಮನೆಯು(ಮಹಾನಸಃ) ಸಾಧರ್ಮ್ಯ ದೃಷ್ಟಾಂತ. ವ್ಯತಿರೇಕ ವ್ಯಾಪ್ತಿ ಗ್ರಹಣಸ್ಥಳಕ್ಕೆ ವೈಧರ್ಮ್ಯ ದೃಷ್ಟಾಂತ ಎನ್ನುವರು. ಮೇಲಿನ ಧೂಮಾನುಮಾನದಲ್ಲಿ ನೀರಿನ ಮಡು ವ್ಯತಿರೇಕ ದೃಷ್ಟಾಂತ.

(5) **ಪಕ್ಷ ಧರ್ಮತಾ**— ಪರ್ವತಕ್ಕೆ ಪಕ್ಷ ಎನ್ನುವರು. ಸಂದಿಗ್ಧ ಸಾಧ್ಯವಾನ್ ಪಕ್ಷಃ. ಅನುಮಾನದಲ್ಲಿ ಮುಖ್ಯವಾಗಿ ಹೇತು ಪಕ್ಷದಲ್ಲಿರಬೇಕು. ಎಂದರೆ ಪಕ್ಷ ಧರ್ಮ ಅತ್ಯವಶ್ಯ. ಪ್ರಕೃತದಲ್ಲಿ ಹೊಗೆ (ಹೇತು) ಪರ್ವತದಲ್ಲಿ (ಪಕ್ಷದಲ್ಲಿ) ಇದೆ.

**ಟೀಪು** : ಪಕ್ಷ ಧರ್ಮತಾ ಎಂದರೆ ಹೇತು ಪಕ್ಷದಲ್ಲಿರುವದು ಎಂಬ ಅರ್ಥ ಯಾವಾಗಲೂ ಇರುವದಿಲ್ಲ. ಕೆಲವು ಅನುಮಾನಗಳಲ್ಲಿ ಹೇತು ಪಕ್ಷದಲ್ಲಿರದೆ ಸಮುಚಿತ ಪ್ರದೇಶದಲ್ಲಿ ಮಾತ್ರ ಇರುತ್ತದೆ. ಆದ್ದರಿಂದ **ಪಕ್ಷಧರ್ಮತ್ವಂ ಎಂದರೆ ಸಮುಚಿತ ದೇಶ ವೃತ್ತಿತ್ವಂ.** ಉದಾ– ಉರ್ಧ್ವದೇಶಃ ವೃಷ್ಟಿಮಾನ್ ಅಧೋ ದೇಶೇ ನದೀಪೂರಾತ್. ಮೇಲಿನ ಪ್ರದೇಶದಲ್ಲಿ ಮಳೆಯಾಗಿದೆ, ಕೆಳಭಾಗದಲ್ಲಿ ನದಿ ತುಂಬಿದೆ. ಇಲ್ಲಿ ಹೇತುವಾದ ನದೀಪೂರಂ (ನದೀ ತುಂಬುವಿಕೆ) ಪಕ್ಷವಾದ ಊರ್ಧ್ವ ದೇಶದಲ್ಲಿರದೆ ಕೆಳಗಿನ ಪ್ರದೇಶದಲ್ಲಿದೆ.

(6) **ಪರಾಮರ್ಶ :** ಮೇಲೆ ವಿವರಿಸಿದಂತೆ ಪರ್ವತದಲ್ಲಿ ಬೆಂಕಿ ಇದೆ ಎಂದು ನಿಶ್ಚಯಿಸಲು ವ್ಯಾಪ್ತಿಜ್ಞಾನ ಮತ್ತು ಹೇತು ಪಕ್ಷದಲ್ಲಿರುವದು ಇವೆರಡೂ ಅವಶ್ಯ, ಇದಕ್ಕೆ ಪರಾಮರ್ಶವೆನ್ನುವರು. ಪರಾಮರ್ಶವೆಂದರೆ ವ್ಯಾಪ್ತಿಯುಳ್ಳ ಹೇತು ಪಕ್ಷದಲ್ಲಿದೆ ಎಂಬ ಜ್ಞಾನ. ವ್ಯಾಪ್ತಿವಿಶಿಷ್ಟಪಕ್ಷಧರ್ಮತಾಜ್ಞಾನಂ ಪರಾಮರ್ಶಃ ಯಥಾ ವಹ್ನಿವ್ಯಾಪ್ಯಧೂಮವಾನ್ ಅಯಂ ಇತಿ ಜ್ಞಾನಂ. ಈ ಪರ್ವತವು ಬೆಂಕಿಯಿಂದ ವ್ಯಾಪ್ಯವಾದ ಹೊಗೆಯುಳ್ಳದ್ದು ಎಂಬ ಜ್ಞಾನಕ್ಕೆ ಪರಾಮರ್ಶ ಎನ್ನುವರು.

**ಟೀಪು :** (i) ಪರಾಮರ್ಶವೇ ಅನುಮಿತಿಯ ಜೀವಾಳ ಎಂಬುದು ಮೇಲಿನ ವಿವರಣೆಯಿಂದ ತಿಳಿದು ಬರುತ್ತದೆ. ಆದ್ದರಿಂದ ಪರಾಮರ್ಶದಿಂದ ಹುಟ್ಟಿದ ಜ್ಞಾನಕ್ಕೆ ಅನುಮಿತಿ ಎನ್ನುವರು. ಪರಾಮರ್ಶಜನ್ಯಜ್ಞಾನಂ ಅನುಮಿತಿಃ.

(ii) ವ್ಯಾಪ್ತಿ ಮತ್ತು ಪಕ್ಷ ಧರ್ಮತಾ ಇವು ಅನುಮಾನದ ಎರಡು ಮುಖ್ಯ ಅಂಗಗಳು. "ಅನುಮಾನಸ್ಯ ದ್ವೇ ಅಂಗೇ ವ್ಯಾಪ್ತಿಃ ಪಕ್ಷಧರ್ಮತಾ ಚ."

(7,8) **ವ್ಯಾಪ್ಯ–ವ್ಯಾಪಕ :** ವ್ಯಾಪ್ತಿಯಲ್ಲಿರುವ ಎರಡು ವಸ್ತುಗಳಲ್ಲಿ ಕಡಿಮೆ ಪ್ರದೇಶದಲ್ಲಿರುವದಕ್ಕೆ ವ್ಯಾಪ್ಯ ಎನ್ನುವರು. ಇಲ್ಲಿ ಧೂಮ ವ್ಯಾಪ್ಯವು. ಹೆಚ್ಚು ಪ್ರದೇಶದಲ್ಲಿರುವದು ವ್ಯಾಪಕವು. ಇಲ್ಲಿ ಬೆಂಕಿ ವ್ಯಾಪಕ, "ನ್ಯೂನದೇಶ ವೃತ್ತಿತ್ವಂ ವ್ಯಾಪ್ಯಂ ಯಥಾ ಧೂಮವತ್ವಂ" "ಅಧಿಕದೇಶವೃತ್ತಿತ್ವಂ ವ್ಯಾಪಕಂ ಯಥಾ ಅಗ್ನಿಃ".

(9) **ಸಪಕ್ಷ :** ಸಾಧ್ಯಧರ್ಮವು ನಿಶ್ಚಿತವಾಗಿರುವ ಸ್ಥಳಕ್ಕೆ ಸಪಕ್ಷವೆನ್ನುವರು. ಉ.ಎ.— ಅಡಿಗೆಯ ಮನೆ (ಹಿಂದಿನಕಾಲದ್ದು). ಕಟ್ಟಿಗೆಯಿಂದ ಅಡಿಗೆಯನ್ನು ಮಾಡುವಾಗ ಅಡಿಗೆಯ ಮನೆಯಲ್ಲಿ ನಿಶ್ಚಿತವಾಗಿ ಬೆಂಕಿ ಇರುತ್ತದೆ. "ನಿಶ್ಚಿತ ಸಾಧ್ಯವಾನ್ ಸಪಕ್ಷಃ ಯಥಾ ಮಹಾನಸಃ".

(10) **ವಿಪಕ್ಷ :** ಸಾಧ್ಯಧರ್ಮವು ನಿಶ್ಚಿತವಾಗಿ ಇಲ್ಲದಿರುವ ಸ್ಥಳಕ್ಕೆ ವಿಪಕ್ಷವೆನ್ನುವರು. ಬೆಂಕಿ ನಿಶ್ಚಿತವಾಗಿ ದೊಡ್ಡ ನೀರಿನ ಮಡುವಿನಲ್ಲಿ ಇರುವದಿಲ್ಲ. ಆದ್ದರಿಂದ ಮಡುವಿಗೆ ವಿಪಕ್ಷವೆನ್ನುವರು. "ನಿಶ್ಚಿತ ಸಾಧ್ಯಾಭಾವವಾನ್ ವಿಪಕ್ಷಃ ಯಥಾ ಮಹಾಹ್ರದಃ".

11–15) **ಪಂಚಾವಯವಗಳು :** ಮೇಲಿನ ಅನುಮಾನದ ಉದಾಹರಣೆಯಲ್ಲಿ ಇರುವ ಐದು ವಾಕ್ಯಗಳಿಗೆ ಕ್ರಮವಾಗಿ i) ಪ್ರತಿಜ್ಞಾ ii) ಹೇತು iii) ಉದಾಹರಣ iv) ಉಪನಯ v) ನಿಗಮನ ವಾಕ್ಯಗಳೆನ್ನುವರು. ಇವುಗಳಿಗೆ ಅನುಮಾನದ "ಪಂಚ ಅವಯವ" ಎನ್ನುವರು.

**ಟೀಪು :** ಅನುಮಾನದಲ್ಲಿ ಐದೇ ಅವಯವ ಇರಬೇಕೆಂಬ ನಿಯಮವಿಲ್ಲ. ಉದಾಹರಣ–ಉಪನಯ–ನಿಗಮನ, ಅಥವಾ ಪ್ರತಿಜ್ಞಾ–ಹೇತು–ಉದಾಹರಣ ಈ ಮೂರೇ ಸಾಕು ಎಂದು ಕೆಲವರ ಅಭಿಪ್ರಾಯ. ಉದಾಹರಣ, ಉಪನಯ

ಎರಡೇ ಸಾಕು ಎಂದು ಕೆಲವರ ಮತ, ಆದರೆ ಐದೇ, ಮೂರೇ ಅಥವಾ ಎರಡೇ ಇರಬೇಕೆಂಬ ಸಂಖ್ಯೆಯ ಅಗತ್ಯವಿಲ್ಲ ಎಂದು ಶ್ರೀಮದಾಚಾರ್ಯರ ಮತ, ವ್ಯಾಪ್ತಿ ವಿಶಿಷ್ಟ ಹೇತುವೇ ನಿಜವಾದ ಅನುಮಿತಿ ಜನಕವು. ಈ ಸ್ಮರಣೆ ಮಾಡಿಕೊಡಲು ಅವಶ್ಯವಿದ್ದಷ್ಟು ಅವಯವ ಇದ್ದರೆ ಸಾಕು. ಕೆಲವರಿಗೆ ಪ್ರತಿಜ್ಞೆಯಿಂದಲೇ ಅಗ್ನಿ-ಧೂಮಗಳ ವ್ಯಾಪ್ತಿ ನೆನಪಾಗಿ ಅನುಮಿತಿ ಉಂಟಾಗಬಹುದು. ಇನ್ನೊಬ್ಬನಿಗೆ ಹೇತುವಾದ ಧೂಮವನ್ನು ಹೇಳುವದರಿಂದ ನೆನಪಾಗಬಹುದು. ಮತ್ತೆ ಕೆಲವರಿಗೆ ಐದೂ ಬೇಕಾಗಬಹುದು. ಆದ್ದರಿಂದ ಅವಯವ ಸಂಖ್ಯೆಯ ನಿಯಮ ವಿಲ್ಲ.

## ಅನುಮಾನದ ಪ್ರಕಾರಗಳು

**1ನೇ ವರ್ಗೀಕರಣ :** ಸ್ವಾರ್ಥಾನುಮಾನ-ಪರಾರ್ಥಾನುಮಾನ.

16) **ಸ್ವಾರ್ಥಾನುಮಾನ :** ಸ್ವಾರ್ಥಂ ಸ್ವಪ್ರಮಿತಿಹೇತುಃ. ತಾನೇ ಪುನಃ ಪುನಃ ಅಡಿಗೆಮನೆ ಮೊದಲಾದವುಗಳಲ್ಲಿ ಹೊಗೆ ಬೆಂಕಿ ನಿಯಮೇನ ಇದ್ದುದನ್ನು ಕಂಡು, ಹೊಗೆ ಇದ್ದಲ್ಲಿ ಬೆಂಕಿ ಇದೆ ಎಂಬ ವ್ಯಾಪ್ತಿಯನ್ನು ಗ್ರಹಿಸುತ್ತಾನೆ. ನಂತರ ಪರ್ವತದೆಡೆಗೆ ಹೋದಾಗ ಅಲ್ಲಿದ್ದ ಹೊಗೆಯನ್ನು ಕಂಡು ಬೆಂಕಿ ಇರುವ ಬಗ್ಗೆ ಸಂಶಯಗೊಳ್ಳುತ್ತಾನೆ. ಆಗ ವ್ಯಾಪ್ತಿಯ ಸ್ಮರಣೆಯಾಗಿ ಅಲ್ಲಿದ್ದ ಹೊಗೆಯನ್ನು ಕಂಡು ಅದರಿಂದ ಬೆಂಕಿ ಇವೆ ಎಂದು ನಿರ್ಧರಿಸುತ್ತಾನೆ. ಹೀಗೆ ಪರ್ವತದಲ್ಲಿ ಬೆಂಕಿ ಇವೆ ಎಂಬುದನ್ನು ತಾನೇ ನಿರ್ಧರಿಸುವದಕ್ಕೆ ಸ್ವಾರ್ಥಾನುಮಾನ ಎನ್ನುವರು.

17) **ಪರಾರ್ಥಾನುಮಾನ :** ಇನ್ನು ತಾನೇ ಹೊಗೆಯಿಂದ ಬೆಂಕಿ ಇದೆ ಎಂಬುದನ್ನು ನಿರ್ಧರಿಸಿಕೊಂಡು ಅದನ್ನು ಪರರಿಗೆ ತಿಳಿಸಲು ಮೇಲೆ 11-15ರಲ್ಲಿ ನಿರೂಪಿಸಿರುವ ಐದು ವಾಕ್ಯಗಳನ್ನು ಪ್ರಯೋಗಿಸುವನೋ, ಅದಕ್ಕೆ ಪರಾರ್ಥಾನುಮಾನ ಎನ್ನುವರು.

**2ನೇ ವರ್ಗೀಕರಣ :** ಅನುಮಾನವು ಕೇವಲಾನ್ವಯೀ, ಕೇವಲವ್ಯತಿರೇಕೀ ಮತ್ತು ಅನ್ವಯವ್ಯತಿರೇಕೀ ಎಂದು ಮೂರು ವಿಧ.

18) **ಕೇವಲಾನ್ವಯೀ ಅನುಮಾನ-** ಅನ್ವಯಮಾತ್ರವ್ಯಾಪ್ತಿಕಂ ಕೇವಲಾನ್ವಯೀ. ಹೇತುವು ಎಲ್ಲ ಪಕ್ಷ ಮತ್ತು ಸಪಕ್ಷಗಳಲ್ಲಿ ಇರುತ್ತದೆ. ಇಲ್ಲಿ ವಿಪಕ್ಷವೇ ಇರುವದಿಲ್ಲ. ಉದಾ-(i) ಘಟಃ ಅಭಿಧೇಯಃ (ii) ಪ್ರಮೇಯತ್ವಾತ್ (iii) ಯತ್ ಪ್ರಮೇಯಂ ತತ್ ಅಭಿಧೇಯಂ ಯಥಾ ಪಟಃ (iv) ತಥಾ ಚ ಅಯಂ (v) ತಸ್ಮಾತ್ ತಥಾ. ಘಟವು ವಾಚ್ಯವಾಗಿದೆ ಜ್ಞಾನಕ್ಕೆ ವಿಷಯವಾದ್ದರಿಂದ. ಇಲ್ಲಿ ಹೇತುವಾದ ಪ್ರಮೇಯತ್ವವು ಎಲ್ಲ ಪಕ್ಷಗಳಲ್ಲಿ (ಎಲ್ಲ ಘಟಗಳಲ್ಲಿ) ಇದೆ. ಮತ್ತು ಸಪಕ್ಷವಾದ ಪಟದಲ್ಲಿಯೂ ಇದೆ. ಯತ್ ಅಭಿಧೇಯಂ ನ ಭವತಿ ತತ್ ಪ್ರಮೇಯಂ ಅಪಿ ನ ಭವತಿ ಎಂದು ವ್ಯತಿರೇಕ ವ್ಯಾಪ್ತಿ ಹೇಳಲು ಬರುವದಿಲ್ಲ. ಏಕೆಂದರೆ ಎಲ್ಲವೂ ಅಭಿಧೇಯ (ವಾಚ್ಯ)ವಾಗಿದೆ. ಹೀಗಾಗಿ ವ್ಯತಿ

ರೇಕ ವ್ಯಾಪ್ತಿಗೆ ದೃಷ್ಟಾಂತವಿಲ್ಲ. (ಸರ್ವಪಕ್ಷವೃತ್ತಿತ್ವೇ ಸತಿ, ಸಪಕ್ಷವೃತ್ತಿತ್ವೇ ಸತಿ, ವಿಪಕ್ಷರಹಿತತ್ವಂ ಕೇವಲಾನ್ವಯೀ ಅನುಮಾನಂ.)

19) **ಕೇವಲವ್ಯತಿರೇಕೀ ಅನುಮಾನ**– ವ್ಯತಿರೇಕಮಾತ್ರವ್ಯಾಪ್ತಿಕಂ ಕೇವಲ ವ್ಯತಿರೇಕೀ. ಕೇವಲ ವ್ಯತಿರೇಕ ವ್ಯಾಪ್ತಿಯುಳ್ಳ ಅನುಮಾನಕ್ಕೆ ಕೇವಲ ವ್ಯತಿರೇಕೀ ಅನುಮಾನ ಎನ್ನುವರು. ಉದಾ–ಜೀವತ್ ಶರೀರಂ, ಸಾತ್ಮಕಂ । ಪ್ರಾಣಾದಿ ಮತ್ವಾತ್ । ಯತ್ ಸಾತ್ಮಕಂ ನ ಭವತಿ ತತ್ ಪ್ರಾಣಾದಿಮತ್ ನ ಭವತಿ ಯಥಾ ಘಟಃ । ನ ಚ ಇದಂ ಜೀವತ್ ಶರೀರಂ ತಥಾ। ತಸ್ಮಾತ್ ನ ತಥಾ । ಬದುಕಿರುವವನ ದೇಹವು ಆತ್ಮವುಳ್ಳದ್ದಾಗಿದೆ. ಇಂದ್ರಿಯ ಚೇಷ್ಟಾದಿಗಳಿರುವದರಿಂದ ಎಂಬುದನ್ನು ವ್ಯತಿರೇಕ ವ್ಯಾಪ್ತಿಯಿಂದ ಸಾಧಿಸಲಾಗಿದೆ. ಪ್ರಕೃತ ಅನುಮಾನದಲ್ಲಿ ಯತ್ ಪ್ರಾಣಾದಿಮತ್ ತತ್ ಸಾತ್ಮಕಂ ಎಂದು ಅನ್ವಯ ವ್ಯಾಪ್ತಿ ಹೇಳಲು ಬರುವದಿಲ್ಲ, ಏಕೆಂದರೆ ಎಲ್ಲಿ ಬದುಕಿರುವವರ ದೇಹಗಳು ಪಕ್ಷದಲ್ಲಿ ಸೇರಿರುವದರಿಂದ ಅನ್ವಯ ವ್ಯಾಪ್ತಿಗೆ ದೃಷ್ಟಾಂತವೇ ಇಲ್ಲ. ಇಲ್ಲಿ ಹೇತು (ಪ್ರಾಣಾದಿಮತ್ವಂ) ಎಲ್ಲ ಪಕ್ಷಗಳಲ್ಲಿದೆ ಮತ್ತು ಎಲ್ಲ ವಿಪಕ್ಷಗಳಲ್ಲಿ ಇಲ್ಲ. ಈ ಅನುಮಾನಕ್ಕೆ ಸಪಕ್ಷವಂತೂ ಇಲ್ಲವೇ ಇಲ್ಲ. "ಪಕ್ಷವ್ಯಾಪಕಂ ಅವಿದ್ಯಮಾನಸಪಕ್ಷಂ, ಸರ್ವಸ್ಮಾತ್ ವಿಪಕ್ಷಾತ್ ವ್ಯಾವೃತ್ತಂ ಕೇವಲವ್ಯತಿರೇಕೀ."

20) **ಅನ್ವಯ ವ್ಯತಿರೇಕೀ ಅನುಮಾನ**– ಇಲ್ಲಿ ಅನ್ವಯ ಮತ್ತು ವ್ಯತಿರೇಕಿ ಹೀಗೆ ಎರಡೂ ವ್ಯಾಪ್ತಿಗಳಿರುತ್ತವೆ. ಉದಾ– ಪ್ರಾರಂಭದಲ್ಲಿ ಕೊಟ್ಟ ಪರ್ವತೋ ವಹ್ನಿಮಾನ್ ಧೂಮಾತ್........ ಇಲ್ಲಿ ಯತ್ರ ಯತ್ರ ಧೂಮ: ತತ್ರ ತತ್ರ ವಹ್ನಿ: ಯಥಾ ಮಹಾನಸಃ ಎಂಬ ಅನ್ವಯ ವ್ಯಾಪ್ತಿ (ಹೊಗೆಯದ್ದಲ್ಲಿ ಬೆಂಕಿ ಇದೆ, ಅಡಿಗೆಯ ಮನೆಯಲ್ಲಿಯಂತೆ) ಮತ್ತು "ಯತ್ರ ವಹ್ನಿರ್ನಾಸ್ತಿ ತತ್ರಧೂಮೋಽಪಿ ನಾಸ್ತಿ, ಯಥಾ ಮಹಾಹ್ರದಃ (ಬೆಂಕಿ ಇಲ್ಲದಿದ್ದಲ್ಲಿ ಹೊಗೆಯೂ ಇಲ್ಲ. ನೀರಿನ ಮಡುವಿನಲ್ಲಿಯಂತೆ) ಎಂಬ ವ್ಯತಿರೇಕ ವ್ಯಾಪ್ತಿ– ಹೀಗೆ ಎರಡೂ ಇವೆ. ಇಲ್ಲಿ ಹೇತುವು ಪಕ್ಷದಲ್ಲಿ ಸಪಕ್ಷದಲ್ಲಿಯೂ ಇದ್ದು ವಿಪಕ್ಷದಲ್ಲಿ ಸರ್ವಥಾ ಇರುವದಿಲ್ಲ. "ಪಕ್ಷ ವ್ಯಾಪಕಂ, ಸಪಕ್ಷವೃತ್ತಿ, ಸರ್ವವಿಪಕ್ಷವ್ಯಾವೃತ್ತಂ ಅನ್ವಯ ವ್ಯತಿರೇಕೀ." ಶಬ್ದಃ ಅನಿತ್ಯಃ ಕೃತಕತ್ವಾತ್ (ಶಬ್ದವು ಅನಿತ್ಯ ಕೃತಕವಾದ್ದರಿಂದ) ವೆಂಬುದೂ ಅನ್ವಯ ವ್ಯತಿರೇಕಿಯ ಉದಾಹರಣೆ.

21) **ಅನುಮಾನದ ರೂಪಗಳು :** ಅನ್ವಯವ್ಯತಿರೇಕೀ ಅನುಮಾನಕ್ಕೆ ಐದು ರೂಪಗಳಿರುವದಾಗಿ ನೈಯಾಯಿಕರು ಹೇಳುತ್ತಾರೆ, ಹೇಗೆಂದರೆ (i) ಹೇತು, ಧೂಮ, ಪಕ್ಷದಲ್ಲಿರುತ್ತವೆ (ಪಕ್ಷಧರ್ಮತ್ವಂ) (ii) ಹೇತು: ಸಪಕ್ಷದಲ್ಲಿ (ದೃಷ್ಟಾಂತದಲ್ಲಿ) ಇರುತ್ತದೆ (ಸಪಕ್ಷಸತ್ವಂ). (iii) ಹೇತು ವಿಪಕ್ಷದಲ್ಲಿ (ನೀರಿನ ಮಡುವಿನಲ್ಲಿ) ಇರುವದಿಲ್ಲ. (ವಿಪಕ್ಷಾತ್ ವ್ಯಾವೃತ್ತಿಃ) (iv) ಅನುಮಾನಕ್ಕೆ

ಪ್ರತ್ಯಕ್ಷಾದಿಗಳಿಂದ ಬಾಧವಿಲ್ಲ, (ಅಬಾಧಿತವಿಷಯತ್ವಂ) (v) ಅನುಮಾನವು ವಿರೋಧಿ ಅನುಮಾನರಹಿತವಾಗಿರುತ್ತದೆ. (ಅಸತ್‌ಪ್ರತಿಪಕ್ಷತ್ವಮ್) ಆದರೆ ಕೇವಲಾನ್ವಯೀ ಮತ್ತು ಕೇವಲ ವ್ಯತಿರೇಕೀ ಅನುಮಾನಗಳಿಗೆ ನಾಲ್ಕೇ ರೂಪಗಳಿರುತ್ತವೆ. ಕೇವಲಾನ್ವಯಿಯಲ್ಲಿ ವಿಪಕ್ಷವೂ ಕೇವಲ ವ್ಯತಿರೇಕಿಯಲ್ಲಿ ಸಪಕ್ಷವೂ ಇರುವದಿಲ್ಲ.

**3ನೇ ವರ್ಗೀಕರಣ :** ಅನುಮಾನವು ಕಾರ್ಯಾನುಮಾನ, ಕಾರಣಾನುಮಾನ, ಅಕಾರ್ಯಕಾರಣಾನುಮಾನ ಎಂದು ಮೂರು ವಿಧ.

22) **ಕಾರ್ಯಾನುಮಾನ :** ಯತ್ ಕಾರ್ಯಂ ಕಾರಣಂ ಅನುಮಾಪಯತಿ ತತ್ ಕಾರ್ಯಾನುಮಾನಂ. ಕಾರ್ಯವು ಕಾರಣದ ಅನುಮಾಪಕವಾಗಿದ್ದರೆ ಎಂದರೆ ಕಾರ್ಯದಿಂದ ಕಾರಣವನ್ನು ಊಹಿಸಿದರೆ ಅದು ಕಾರ್ಯಾನುಮಾನ. ಉದಾ– ಪರ್ವತೋ ವಹ್ನಿಮಾನ್ ಧೂಮಾತ್. (ಪರ್ವತವು ಬೆಂಕಿಯುಳ್ಳದ್ದು ಹೊಗೆ ಇದ್ದದರಿಂದ). ಬೆಂಕಿಯಿಂದ ಹೊಗೆ ಹುಟ್ಟುವದರಿಂದ ಹೊಗೆ ಕಾರ್ಯ ಮತ್ತು ಬೆಂಕಿ ಕಾರಣ. ಇಲ್ಲಿ ಕಾರ್ಯವಾದ ಹೊಗೆಯಿಂದ ಕಾರಣವಾದ ಬೆಂಕಿಯನ್ನು ಊಹಿಸಿದ್ದರಿಂದ ಇದು ಕಾರ್ಯಾನುಮಾನ.

23) **ಕಾರಣಾನುಮಾನ :** ಯತ್ ಕಾರಣಂ ಕಾರ್ಯಮನುಮಾಪಯತಿ, ತತ್ ಕಾರಣಾನುಮಾನಂ. ಕಾರಣವು ಕಾರ್ಯದ ಅನುಮಾಪಕವಾಗಿದ್ದರೆ, ಎಂದರೆ ಕಾರಣದಿಂದ ಕಾರ್ಯವನ್ನು ಊಹಿಸಲಾಗಿದ್ದರೆ ಅದು ಕಾರಣಾನುಮಾನ. ಉದಾ–ಮೇಘೋನ್ನತಿಃ ವೃಷ್ಟೇಃ. ಕಾರಣವಾದ ಜಲಭರಿತ ಮೋಡದಿಂದ ಕಾರ್ಯವಾದ ಮಳೆಯನ್ನು ಊಹಿಸುವದು ಕಾರಣಾನುಮಾನ.

24) **ಅಕಾರ್ಯಕಾರಣಾನುಮಾನ :** ಸಾಧ್ಯ ಸಾಧನಗಳಿಗೆ (ವ್ಯಾಪ್ಯ, ವ್ಯಾಪಕಗಳಿಗೆ) ಕಾರ್ಯ ಕಾರಣಭಾವವಿರದಿದ್ದರೆ, ಅದು ಅಕಾರ್ಯಕಾರಣಾನುಮಾನ, ಉದಾ– ರಸಃ ರೂಪಸ್ಯ ಅನುಮಾಪಕಃ, ರಸದಿಂದ ರೂಪವನ್ನು ಊಹಿಸುವದು. ರೂಪ, ರಸಗಳಿಗೆ ಕಾರ್ಯಕಾರಣಭಾವವಿಲ್ಲ, ಆದರೂ ರಸವಿದ್ದಲ್ಲಿ ರೂಪವಿರುತ್ತದೆ.

**4ನೇ ವರ್ಗೀಕರಣ :** ಅನುಮಾನವು ದೃಷ್ಟಾನುಮಾನ ಮತ್ತು ಸಾಮಾನ್ಯತಃ ದೃಷ್ಟಾನುಮಾನ ಎಂದು ಎರಡು ವಿಧ.

25) **ದೃಷ್ಟಾನುಮಾನ :** ಪ್ರತ್ಯಕ್ಷಕ್ಕೆ ಯೋಗ್ಯವಾದ ವಸ್ತುವಿನ ಬಗ್ಗೆ (ದೃಷ್ಟವಸ್ತು) ಅನುಮಿತಿ ಹುಟ್ಟಿಸುವ ಅನುಮಾನವು ದೃಷ್ಟಾನುಮಾನ. ಉದಾ- ಪರ್ವತಃ ವಹ್ನಿಮಾನ್ ಧೂಮಾತ್. ಇಲ್ಲಿ ಪ್ರತ್ಯಕ್ಷಕ್ಕೆ ಯೋಗ್ಯವಾದ ಅಗ್ನಿಯ ಜ್ಞಾನವನ್ನು ಊಹಿಸಲಾಗಿದೆ.

26) **ಸಾಮಾನ್ಯತಃ ದೃಷ್ಟಾನುಮಾನ ;** ಪ್ರತ್ಯಕ್ಷಕ್ಕೆ ಯೋಗ್ಯವಲ್ಲದ ವಸ್ತುವಿನ ಬಗ್ಗೆ ಅನುಮಿತಿ ಹುಟ್ಟಿಸುವ ಅನುಮಾನಕ್ಕೆ ಸಾಮಾನ್ಯತಃ ದೃಷ್ಟಾನುಮಾನ

ಎನ್ನುವರು. ಉದಾ– ಇವನು ಕಣ್ಣುಳ್ಳವನು, ರೂಪಜ್ಞಾನವುಳ್ಳವನಾದ್ದರಿಂದ. (ಹೊರಗೆ ಕಾಣುವ ಕಣ್ಣು ಕೇವಲ ಗೋಲಕ. ಚಕ್ಷುರಿಂದ್ರಿಯವು ಒಳಗೆ ಇರುತ್ತದೆ. ಅದು ಕಣ್ಣಿಗೆ ಕಾಣುವದಿಲ್ಲ.) ಈ ಅನುಮಾನದ ಇನ್ನೊಂದು ಉದಾಹರಣೆ ಎಂದರೆ ಯಜ್ಞಾದಿಪ್ರವೃತ್ತಿಃ ಸ್ವರ್ಗಾದಿಫಲವತೀ ಪ್ರವೃತ್ತಿತ್ವಾತ್, ಕೃಷೀವಲಸ್ಯ ಕರ್ಷಣಾದಿಪ್ರವೃತ್ತಿವತ್. ಯಜ್ಞಾದಿ ಪ್ರವೃತ್ತಿಯು ಸ್ವರ್ಗಾದಿ ಫಲವುಳ್ಳದ್ದು, ಪ್ರವೃತ್ತಿಯಾದ್ದರಿಂದ. ಒಕ್ಕಲುತನ ಮಾಡುವವನ ಊಳುವ ಪ್ರವೃತ್ತಿಯಂತೆ.

**5ನೇ ವರ್ಗೀಕರಣ :** ಅನುಮಾನವು ಸಾಧನಾನುಮಾನ ಮತ್ತು ದೂಷಣಾನುಮಾನ ಎಂದು ಎರಡು ವಿಧ.

27) **ಸಾಧನಾನುಮಾನ :** ಸಾಧನ ಅಥವಾ ಹೇತುವಿನಿಂದ ಸ್ವಪಕ್ಷಸಾಧಕ ಅನುಮಾನಕ್ಕೆ ಸಾಧನಾನುಮಾನವೆನ್ನುವರು. ಉದಾ—ಪರ್ವತವು ಬೆಂಕಿಯುಳ್ಳದ್ದು, ಹೊಗೆ ಇದ್ದುದರಿಂದ,

29) **ದೂಷಣಾನುಮಾನ :** ಇದು 'ದುಷ್ಟಪ್ರಮಿತಿಜನಕಂ'(ದುಷ್ಟಜ್ಞಾನವನ್ನು ಹುಟ್ಟಿಸುವದು) ಮತ್ತು ತರ್ಕ ಎಂದು ಎರಡು ಅವಾಂತರ ಭೇದವುಳ್ಳದ್ದು.

28) **ದುಷ್ಟಪ್ರಮಿತಿಜನಕಂ :** ಪ್ರಮಾಣಬಾಧ ಮೂಲಕ ತನ್ನ ಸಾಧ್ಯವನ್ನು ಸಾಧಿಸಲು ಅಸಮರ್ಥವಾದ ಅನುಮಾನಕ್ಕೆ ದುಷ್ಟಪ್ರಮಿತಿಜನಕವೆನ್ನುವರು. ಉದಾ— ವಹ್ನಿಃ ಅನುಷ್ಣಃ ಪದಾರ್ಥತ್ವಾತ್, ಜಲವತ್, (ಬೆಂಕಿ ಉಷ್ಣವಲ್ಲ, ಪದಾರ್ಥವಾದ್ದರಿಂದ, ನೀರಿನಂತೆ) ಈ ಅನುಮಾನವು ಪ್ರತ್ಯಕ್ಷದಿಂದ ಬಾಧಿತವಾಗಿದೆ. ಬೆಂಕಿ ಸುಡುವದು ಪ್ರತ್ಯಕ್ಷ ಸಿದ್ಧ. ಆದ್ದರಿಂದ ಈ ಅನುಮಾನವು ಬೆಂಕಿ ಉಷ್ಣವಲ್ಲವೆಂಬುದನ್ನು ಸಾಧಿಸಲಾರದು.

**ಗಮನಿಸಿರಿ :** ಪರ್ವತಃ ವಹ್ನಿಮಾನ್ ಧೂಮಾತ್, (ಪರ್ವತವು ಬೆಂಕಿಯುಳ್ಳದ್ದು ಹೊಗೆಯಿರುವದರಿಂದ) ಎಂದು ಪ್ರಾರಂಭದಲ್ಲಿ ನಿರೂಪಿಸಿದ ಪಂಚಾವಯವವುಳ್ಳ ಅನುಮಾನವು. ಪರಾರ್ಥಾನುಮಾನ, ಅನ್ವಯ ವ್ಯತಿರೇಕೀ ಅನುಮಾನ. ಕಾರ್ಯಾನುಮಾನ, ದೃಷ್ಟಾನುಮಾನ ಹಾಗೂ ಸಾಧನಾನುಮಾನಗಳ ಉದಾಹರಣೆಯಾಗಿದೆ.

30) **ತರ್ಕ :** "ಕಸ್ಯಚಿತ್ ಧರ್ಮಸ್ಯ ಅಂಗೀಕಾರೇ ಅರ್ಥಾಂತರಸ್ಯ ಆಪಾದನಂ ತರ್ಕಃ". ಪರ್ವತವು ಬೆಂಕಿಯುಳ್ಳದ್ದು, ಹೊಗೆಯಿದ್ದುದರಿಂದ ಎಂದು ಅನುಮಾನ ಪ್ರಯೋಗ ಮಾಡಿದಾಗ, ಒಬ್ಬನು "ಹೊಗೆ ಇರಲಿ ಬೆಂಕಿ ಇರುವದು ಬೇಡ" (ಅಸ್ತು ಧೂಮಃ ವಹ್ನಿಃ ಮಾಸ್ತು)ಎಂದು ಆಕ್ಷೇಪಿಸಿದರೆ, ಅವನನ್ನು ಕುರಿತು, ಬೆಂಕಿ ಇಲ್ಲದೇ ಹೋದರೆ ಹೊಗೆಯೂ ಇರುವದು ಬೇಡ. **ಯದಿ ವಹ್ನಿಃ ನ ಸ್ಯಾತ್, ತರ್ಹಿ ಧೂಮೋಽಪಿ ನ ಸ್ಯಾತ್**" ಎಂದು ಮಾಡುವ ಅನಿಷ್ಟ ಆಪಾದನೆಗೆ ತರ್ಕ ಎನ್ನುತ್ತಾರೆ. ಇಲ್ಲಿ ಒಂದನ್ನು ಎಂದರೆ, ಬೆಂಕಿಯಿಲ್ಲ ಎಂಬುದನ್ನು (ವಹ್ನ್ಯಭಾವಸ್ಯ)

ಒಪ್ಪಿದರೆ ಪ್ರಮಾಣ ಸಮ್ಮತವಾದ ಬೇರೊಂದರ ಅಭಾವವನ್ನು, ಧೂಮಾಭಾವವನ್ನು ಒಪ್ಪುವ ಅನಿಷ್ಟ ಪ್ರಸಂಗ ಬರುತ್ತದೆ. ಇದುವೇ ತರ್ಕ. ನೈಯಾಯಿಕರು ತರ್ಕವು ಅಪ್ರಮಾಣವೆನ್ನುತ್ತಾರೆ. ಆದರೆ ಇದು ಅಯುಕ್ತ. ಏಕೆಂದರೆ ತರ್ಕವು ಒಂದು ವಿಧದ ಅನುಮಾನವೇ. ಇದು ಪ್ರತಿವಾದಿಯ ಅನುಮಾನಕ್ಕೆ ದೋಷವನ್ನು ಹೇಳುತ್ತದೆ. ಬೆಂಕಿ ಇಲ್ಲದಿದ್ದರೆ, ಹೊಗೆಯೂ ಇರಲಾರದು. ಆದರೆ ಹೊಗೆ ಇದೆ. ಆದ್ದರಿಂದ ಬೆಂಕಿಯೂ ಇದೆ. ಈ ರೀತಿ ತರ್ಕವು ಸಾಧ್ಯವನ್ನು ಸಾಧಿಸುತ್ತದೆ.

ತರ್ಕದ ಅಂಗಗಳು ಐದು. (i) ಆಪಾದಕಸ್ಯ ಆಪಾದ್ಯೇನ ವ್ಯಾಪ್ತಿಃ. ವಹ್ನ್ಯಭಾವವು ಆಪಾದಕ, ಧೂಮಾಭಾವವು ಆಪಾದ್ಯ. "ಯತ್ರ ವಹ್ನ್ಯಭಾವ: ತತ್ರ ಧೂಮಾಭಾವಃ" ಬೆಂಕಿ ಇಲ್ಲದಿದ್ದಲ್ಲಿ ಹೊಗೆಯೂ ಇರುವದಿಲ್ಲ ಎಂಬುದೇ ವ್ಯಾಪ್ತಿ, (ii) "ಪ್ರತಿ ತರ್ಕೇಣ ಅಪ್ರತಿಘಾತ: (ಅವಿರೋಧಃ). ಬೆಂಕಿ ಇಲ್ಲದಿದ್ದರೆ ಹೊಗೆಯೂ ಇರದೆ ಹೋಗಲಿ ಎಂಬ ತರ್ಕಕ್ಕೆ ಯಾವ ವಿರೋಧವೂ ಇಲ್ಲ. (iii) ಆಪಾದ್ಯಸ್ಯ ಅನಿಷ್ಟತ್ವಂ. ಹೊಗೆ ಇರುವದೂ ಬೇಡ (ಧೂಮೋಽಪಿ ನ ಸ್ಯಾತ್) ಎಂಬ ಆಪಾದ್ಯವು ಪ್ರತಿವಾದಿಗೆ ಅನಿಷ್ಟವಿದೆ. ಏಕೆಂದರೆ ಹೊಗೆ ಪ್ರತ್ಯಕ್ಷ ಸಿದ್ಧ. ಇದನ್ನಲ್ಲಗಳೆಯುವದು ಅನಿಷ್ಟ. (iv) ಆಪಾದ್ಯಸ್ಯ ವಿಪರ್ಯಯೇ ಪರ್ಯವಸಾನಂ. ಧೂಮಾಭಾವವನ್ನು ಪ್ರತ್ಯಕ್ಷ ವಿರೋಧ ಮೂಲಕ ಅಂಗೀಕರಿಸಲು ಬರುವದಿಲ್ಲವಾದ್ದರಿಂದ, ಪರ್ವತದಲ್ಲಿ ಬೆಂಕಿ ಇದೆ ಎಂದು ಒಪ್ಪಬೇಕಾಗುತ್ತದೆ. (v) ಪರಸ್ಯ ಅನನುಕೂಲತ್ವಂ. ಅನಿಷ್ಟ ಆಪಾದನೆ ಪರಿಹರಿಸಿಕೊಳ್ಳಲು ಪ್ರತಿವಾದಿಗೆ ಪ್ರತಿಪಕ್ಷ ಅನುಮಾನ ಮಾಡಲು ಬರುವದಿಲ್ಲ.

### ಅನುಮಾನದ ದೋಷಗಳು (ಉಪಪತ್ತಿದೋಷಾಃ)

31) **ದೋಷಗಳು :** ಪ್ರಾರಂಭದಲ್ಲಿ ನಿರೂಪಿಸಿದಂತೆ ಅನುಮಾನವೆಂದರೆ ನಿರ್ದುಷ್ಟ ಯುಕ್ತಿ ಅಥವಾ ಉಪಪತ್ತಿ. ದೋಷವು ಯಾವಾಗಲೂ ಜ್ಞಾನ ಪ್ರತಿಬಂಧಕ. ಅದು ಸರಿಯಾದ ಅನುಮಿತಿ ಜ್ಞಾನವನ್ನು ಹುಟ್ಟಿಸುವದಿಲ್ಲ ಅಥವಾ ಸಂಶಯ ಇಲ್ಲವೆ ವಿಪರೀತ ಜ್ಞಾನ ಹುಟ್ಟಿಸುತ್ತದೆ. ಆದ್ದರಿಂದ ಅನುಮಾನ ದೋಷಗಳನ್ನು ತಿಳಿಯೋಣ.

ದೋಷಗಳು ಮುಖ್ಯವಾಗಿ **ಅರ್ಥದೋಷ, ಶಬ್ದದೋಷ** ಎಂದು ಎರಡು ವಿಧ, ಅರ್ಥದೋಷಗಳು ಅರ್ಥದ್ವಾರಾ ಶಬ್ದ ದೋಷಗಳೂ ಆಗುತ್ತವೆ. ಇದರಂತೆ ಶಬ್ದದೋಷಗಳು ಶಬ್ದದ್ವಾರಾ ಅರ್ಥದೋಷಗಳೂ ಆಗುತ್ತವೆ. ವಿರೋಧ ಮತ್ತು ಅಸಂಗತಿ ಇವೆರಡು ಅರ್ಥದೋಷಗಳು. ನ್ಯೂನತೆ ಮತ್ತು ಆಧಿಕ್ಯ ಇವು ಶಬ್ದದೋಷಗಳು.

ವಿರೋಧವೆಂದರೆ ಪರಸ್ಪರ ಅನ್ವಯವಾಗುವ ಯೋಗ್ಯತೆ ಇಲ್ಲದಿರುವುದು (ಯೋಗ್ಯತಾವಿರಹಃ ವಿರೋಧಃ)ಉದಾ—ಬೆಂಕಿ ಉಷ್ಣವಲ್ಲ, ಪದಾರ್ಥವಾದ್ದರಿಂದ ನೀರಿನಂತೆ.ಅಸಂಗತಿ ಎಂದರೆ ಆಕಾಂಕ್ಷೆ ಇಲ್ಲದಿರುವಿಕೆ.(ಆಕಾಂಕ್ಷಾ ವಿರಹಃ ಅಸಂಗತಃ) ಉದಾ— ಪರ್ವತವು ಅಗ್ನಿಯುಳ್ಳದ್ದಲ್ಲ. ನ್ಯೂನತೆ ಎಂದರೆ ಅವಶ್ಯ ಹೇಳ ಬೇಕಾದುದನ್ನು ಪೂರ್ಣವಾಗಿ ಹೇಳದೆ ಏಕದೇಶ ಮಾತ್ರ ಹೇಳುವದು. ಅವಶ್ಯ ವಕ್ತವ್ಯಸ್ಯ ಏಕದೇಶ ಮಾತ್ರ ವಚನಂ ನ್ಯೂನಂ, ಉದಾ—ಪರ್ವತಃ ಧೂಮ ವತ್ವಾತ್. ಇಲ್ಲಿ ಪರ್ವತಃ ವಹ್ನಿಮಾನ್ ಎಂದು ಅವಶ್ಯವಾಗಿ ಹೇಳಬೇಕಾದು ದನ್ನು ಹೇಳಿಲ್ಲ. ಆಧಿಕ್ಯ ಎಂದರೆ ಆಕಾಂಕ್ಷಿತವಾದದ್ದಲ್ಲದೆ ಪ್ರಯೋಜನವಿಲ್ಲದ ಬೇರೊಂದನ್ನು ಹೇಳುವದು. ಉದಾ ಪರ್ವತಃ ಅಗ್ನಿಮಾನ್ ಧೂಮವತ್ವಾತ್ ಪ್ರಕಾಶವಿಶೇಷಾಚ್ಚ. ಇಲ್ಲಿ ಪ್ರಕಾಶ ವಿಶೇಷಘಾತ್ ಎನ್ನುವದು ಹೆಚ್ಚಿನದು.

**ವಿರೋಧದ ಪ್ರಕಾರಗಳು** : ಅನುಮಾನದಲ್ಲಿಯ ವಿರೋಧವು ಪ್ರತಿಜ್ಞಾ ವಿರೋಧ ಹೇತು ವಿರೋಧ, ದೃಷ್ಟಾಂತ ವಿರೋಧ ಎಂದು ಮೂರು ವಿಧ.

32) **ಪ್ರತಿಜ್ಞಾ ವಿರೋಧ** : ಇಲ್ಲಿ ಪ್ರತಿಜ್ಞಾತವಾದ ಅರ್ಥಕ್ಕೆ ಪ್ರತಿಸ್ಪರ್ಧಿ ಇರುತ್ತದೆ. "ಪ್ರತಿಜ್ಞಾತಾರ್ಥಪ್ರತಿಸ್ಪರ್ಧಿಸದ್ಭಾವಃ ಪ್ರತಿಜ್ಞಾವಿರೋಧಃ.ಇದರಲ್ಲಿ ಪ್ರಮಾಣ ವಿರೋಧ, ಸ್ವವಚನ ವಿರೋಧ ಎಂದು ಎರಡು ಅವಾಂತರ ಭೇದಗಳಿವೆ.

33) **ಪ್ರಮಾಣವಿರೋಧ** : ಪ್ರಮಾಣ ವಿರೋಧವು ಪ್ರಬಲ ಪ್ರಮಾಣ ವಿರೋಧ ಮೂಲಕ ಇಲ್ಲವೆ ಸಮಬಲ ಪ್ರಮಾಣ ವಿರೋಧ ಮೂಲಕ ಇರುತ್ತದೆ. ವಿರೋಧವಾದರೋ, ಪ್ರತ್ಯಕ್ಷ, ಅನುಮಾನ, ಆಗಮ ಪ್ರಮಾಣಗಳ ಮೂಲಕ ಉಂಟಾಗುತ್ತದೆ. ಉದಾ– ಸರ್ವಂ ತೇಜಃ ಅನುಷ್ಣಂ, ದ್ರವ್ಯತ್ವಾತ್ ಜಲವತ್, ತೇಜಸ್ಸಾದ ಅಗ್ನಿಯು ಉಷ್ಣವಲ್ಲ, ದ್ರವ್ಯವಾದ್ದರಿಂದ ನೀರಿನಂತೆ. ಇದು ಸ್ಪರ್ಶಪ್ರತ್ಯಕ್ಷಕ್ಕೆ ವಿರುದ್ಧವಾದುದು. ಚಕ್ಷುಃ ರೂಪಗ್ರಾಹಕಂ ನ ಭವತಿ ಇಂದ್ರಿಯತ್ವಾತ್–ಕಣ್ಣು ರೂಪ ಗ್ರಾಹಕವಲ್ಲ, ಇಂದ್ರಿಯವಾದ್ದರಿಂದ. ಇದು ಅನು ಮಾನ ವಿರೋಧ. ಬ್ರಾಹ್ಮಣೇನ ಸುರಾಪೇಯಾ ದ್ರವದ್ರವ್ಯತ್ವಾತ್ ಕ್ಷೀರವತ್. ಬ್ರಾಹ್ಮಣನು ಸುರಾಪಾನ ಮಾಡಬಹುದು. ಏಕೆಂದರೆ ಸುರಾ ದ್ರವದ್ರವ್ಯ ವಾಗಿದೆ, ಹಾಲಿನಂತೆ. ಇದಕ್ಕೆ ಆಗಮ ವಿರೋಧವಿದೆ. ವಿಶ್ವಂ ಮಿಥ್ಯಾ ದೃಶ್ಯ ತ್ವಾತ್– ಜಗತ್ತು ಸುಳ್ಳು, ಕಣ್ಣಿಗೆ ಕಾಣುವದರಿಂದ ಎಂಬ (ದುಷ್ಟ) ಅನುಮಾನಕ್ಕೆ ವಿಶ್ವಂ ಸತ್ಯಂ ಪ್ರಾಮಾಣಿಕತ್ವಾತ್ ಆತ್ಮವತ್ ಎಂಬ ಪ್ರಮಾಣ ವಿರೋಧ ಇದೆ.

34) **ಸ್ವವಚನ ವಿರೋಧ** ; ಸ್ವವಚನ ವಿರೋಧವೆಂದರೆ ತನ್ನ ಮಾತಿನಲ್ಲಿಯೇ ಇರುವ ವಿರೋಧ, ಇದು ಅಪಸಿದ್ಧಾಂತ ಮತ್ತು ಜಾತಿ ಎಂದು ಎರಡು ವಿಧ.

35) **ಅಪಸಿದ್ಧಾಂತ** : ಪೂರ್ವಾಚಾರ್ಯರು ಪ್ರಾಮಾಣಿಕವೆಂದು ಒಪ್ಪಿದುದಕ್ಕೆ

ವಿರುದ್ಧವಾದುದನ್ನು ಒಪ್ಪಿದರೆ ಅದು ಅಪಸಿದ್ಧಾಂತವೆನಿಸುತ್ತದೆ. (ಪೂರ್ವಾಚಾರ್ಯ ಅಂಗೀಕೃತಸಿದ್ಧಾಂತವಿರುದ್ಧ-ಅಂಗೀಕಾರಃ ಅಪಸಿದ್ಧಾಂತಃ) ಉದಾ–ನಿರೀಶ್ವರ ಸಾಂಖ್ಯವಾದಿಯು ಈಶ್ವರನನ್ನು ಒಪ್ಪುವದು.

36) **ಜಾತಿ** ; ಜಾತಿ ಎಂದರೆ ಸ್ವವಚನದಲ್ಲಿಯು ವಿರೋಧ. (ಸ್ವವಚನೇ ಏವ ಸ್ವವ್ಯಾಹತಿಃ ಜಾತಿಃ) ಉದಾ– i) ನನ್ನ ತಾಯಿ ಬಂಜೆ (ಮೇ ಮಾತಾ ವಂಧ್ಯಾ) ಇಲ್ಲಿ ಸ್ವವಚನ ವ್ಯಾಘಾತವಿದೆ, ii) ನಾನು ಮೂಕ (ಮೂಕೋಹಂ) ಇಲ್ಲಿ ಸ್ವಕ್ರಿಯಾ ವಿರೋಧವಿದೆ. iii) ಪ್ರಮೇಯಂ ಮಾನಸಾಪೇಕ್ಷಂ ನ ಭವತಿ" ಜ್ಞಾನ ವಿಷಯವು ಪ್ರಮಾಣಾಪೇಕ್ಷಿಯಲ್ಲ ಎಂಬುದು ಸ್ವನ್ಯಾಯವಿರೋಧದ ಉದಾಹರಣೆ. (ಪ್ರಮೇಯ ಎಂದರೆ ಜ್ಞಾನ ವಿಷಯ. ಪ್ರಮಾಣಪ್ರಮಿತವಾದುದೇ ಜ್ಞಾನಕ್ಕೆ ವಿಷಯವಾಗುತ್ತದೆ. ಆದರೆ ಪ್ರಮೇಯವು ಪ್ರಮಾಣ ಪ್ರಮಿತವಲ್ಲ ಎಂದು ಹೇಳುವದು ಸ್ವನ್ಯಾಯ ವಿರೋಧದ ಉದಾಹರಣೆ).

37) **ಹೇತು ವಿರೋಧ** ; ಹೇತು ವಿರೋಧವು ಅಸಿದ್ಧಿ ಮತ್ತು ಅವ್ಯಾಪ್ತಿ ಎಂದು ಎರಡು ವಿಧ.

38) **ಅಸಿದ್ಧಿ** ಎಂದರೆ ಹೇತು ಸಮುಚಿತ ಪ್ರದೇಶದಲ್ಲಿ ಇಲ್ಲದಿರುವದು. "ಸಮುಚಿತ ಸ್ಥಲೇ ಲಿಂಗಸ್ಯ ಅಪ್ರಮಿತಿಃ ಅಸಿದ್ಧಿಃ" ಉದಾ– ಶಬ್ದಃ ಅನಿತ್ಯಃ ಚಾಕ್ಷುಷತ್ವಾತ್. ಇಲ್ಲಿ ಚಾಕ್ಷುಷತ್ವ ಹೇತು ಶಬ್ದದಲ್ಲಿ ಇಲ್ಲ. ಏಕೆಂದರೆ ಶಬ್ದವು ಶ್ರವಣೇಂದ್ರಿಯ ಗೋಚರ.

39) **ಅವ್ಯಾಪ್ತಿ** : ಇದು ಮೂರು ವಿಧ. i) ಹೇತುವಿಗೆ ಸಾಧ್ಯ ಮತ್ತು ಸಾಧ್ಯಾಭಾವ ಹೀಗೆ ಎರಡರೊಡನೆ ಸಂಬಂಧವಿರುವದು. ಉದಾ– ಪರ್ವತಃ ವಹ್ನಿಮಾನ್ ಪ್ರಮೇಯತ್ವಾತ್ ii) ಹೇತುವಿಗೆ ಸಾಧ್ಯದೊಡನೆ ಸಂಬಂಧ ಇರದೆ ಸಾಧ್ಯಾಭಾವದೊಡನೆ ಸಂಬಂಧವಿರುವದು. ಉದಾ– ಶಬ್ದಃ ನಿತ್ಯಃ ಕೃತಕತ್ವಾತ್ iii) ಹೇತುವಿಗೆ ಸಾಧ್ಯ ಮತ್ತು ಸಾಧ್ಯಾಭಾವ ಹೀಗೆ ಎರಡರ ಸಂಬಂಧವೂ ಇಲ್ಲದಿರುವದು. ಉದಾ– ಸರ್ವಂ ಅನಿತ್ಯಂ ಸತ್ವಾತ್ (ಇಲ್ಲಿ ಎಲ್ಲವೂ ಪಕ್ಷದಲ್ಲಿ ಸೇರಿರುವವರಿಂದ ನಿಶ್ಚಿತಸಾಧ್ಯವುಳ್ಳ ಸಪಕ್ಷ ಮತ್ತು ನಿಶ್ಚಿತ ಸಾಧ್ಯಾಭಾವವುಳ್ಳ ವಿಪಕ್ಷ ಇಲ್ಲ.)

40) **ದೃಷ್ಟಾಂತ ವಿರೋಧ** : ದೃಷ್ಟಾಂತವೆಂದರೆ ವ್ಯಾಪ್ತಿಗ್ರಹಣ ಸ್ಥಳ. ದೃಷ್ಟಾಂತ ದೋಷವು ಸಾಧ್ಯವೈಕಲ್ಯ ಮತ್ತು ಸಾಧನ ವೈಕಲ್ಯ ಎಂದು ಎರಡು ವಿಧ. ಸಾಧ್ಯವೈಕಲ್ಯವೆಂದರೆ ದೃಷ್ಟಾಂತದಲ್ಲಿ ಸಾಧ್ಯವು ಇಲ್ಲದಿರುವದು. ಉದಾ– ಮನಃ ಅನಿತ್ಯಂ ಮೂರ್ತತ್ವಾತ್ ಪರಮಾಣುವತ್. ಇಲ್ಲಿ ದೃಷ್ಟಾಂತವಾದ ಪರಮಾಣುವಿನಲ್ಲಿ ಸಾಧ್ಯವಾದ ಅನಿತ್ಯತ್ವವಿಲ್ಲ; ಪರಮಾಣುಗಳು ನಿತ್ಯವೆಂದೇ ವೈಶೇಷಿಕರು ಹೇಳುತ್ತಾರೆ. ಸಾಧನವೈಕಲ್ಯವೆಂದರೆ ದೃಷ್ಟಾಂತದಲ್ಲಿ ಸಾಧನ ಇಲ್ಲದಿರು

ವದು. ಉದಾ– ಮನಃ ಅನಿತ್ಯಂ ಮೂರ್ತತ್ವಾತ್ ಯಥಾ ಕರ್ಮ. ಇಲ್ಲಿ ದೃಷ್ಟಾಂತವಾದ ಕರ್ಮದಲ್ಲಿ ಸಾಧನವಾದ ಮೂರ್ತತ್ವವಿಲ್ಲ. (ಮೂರ್ತವೆಂದರೆ ಪರಿಚ್ಛಿನ್ನ ಪರಿಮಾಣವುಳ್ಳದ್ದು. ಕರ್ಮಕ್ಕೆ ಪರಿಮಾಣವೇ ಇಲ್ಲವಾದ್ದರಿಂದ ಅದರಲ್ಲಿ ಮೂರ್ತತ್ವ ಇಲ್ಲ.)

41) **ಅಸಂಗತಿ**– ಆಕಾಂಕ್ಷಾವಿರಹಃ ಅಸಂಗತಿಃ । ಆಕಾಂಕ್ಷೆ ಇಲ್ಲದಿರುವಾಗ ಹೇಳು ವದಕ್ಕೆ ಅಸಂಗತಿ ಎನ್ನುವರು. ಉದಾ– ಈಶ್ವರನು ಸರ್ವಜ್ಞ. ಸರ್ವಕರ್ತಾ ಎಂದು ಒಪ್ಪುವವನನ್ನು ಕುರಿತು "ವಿಶ್ವಾದಿಕಂ ಸಕರ್ತೃಕಂ ಕಾರ್ಯತ್ವಾತ್ ಪಟ ವತ್ ಎಂದು ಹೇಳುವ ಅನುಮಾನ ಅಸಂಗತ. ಇದರಂತೆ ಪರ್ವತವು ಬೆಂಕಿ ಯುಳ್ಳದ್ದು ಎಂದು ಹೇಳಿದಾಗ ಅದರಲ್ಲಿ ಗಿಡ–ಕಲ್ಲು ಮೊದಲಾದವು ಇವೆ ಎಂದು ಹೇಳುವದು ಅಸಂಗತ; ಅವನ್ನು ತಿಳಿಯ ವ ಇಚ್ಛೆಯೇ ಇಲ್ಲದಿರುವಾಗ ಅವುಗಳನ್ನು ಹೇಳುವದು ಅಸಂಗತ.

42) **ಆರು ನಿಗ್ರಹ ಸ್ಥಾನಗಳು :** ಮೇಲೆ ಹೇಳಿದ ವಿರೋಧಾದಿ ದೋಷ ಗಳು ವಾದ ವಿವಾದ ರೂಪವಾದ ಕಥಾ ಪ್ರಸಂಗದಲ್ಲಿಯೂ ಬರುತ್ತವೆ. ಕಥಾ ಎಂದರೆ ವಿದ್ವಜ್ಜನಗೋಷ್ಠಿ, ಚರ್ಚೆ, ವಾದವಿವಾದ, ವಾದ–ಜಲ್ಪ–ವಿತಂಡ ಎಂದು ಕಥಾ ಮೂರು ವಿಧ, ತತ್ವನಿರ್ಣಯಕ್ಕೋಸ್ಕರ ಗುರು ಶಿಷ್ಯರು ಇಲ್ಲವೆ ಸಜ್ಜ ನರು ಮಾಡುವ ವಾದವಿವಾದಕ್ಕೆ **ವಾದ** ಎನ್ನುವರು. (ವಾದಃ ತತ್ವ ಬುಭುತ್ಸು ಕಥಾ). **ಜಲ್ಪ** ಎಂದರೆ ಖ್ಯಾತಿ (ಪ್ರಸಿದ್ಧಿ) ಲಾಭ–ಪೂಜಾ–ಸ್ಪರ್ಧೆ ಮೂಲಕ ಸಜ್ಜನರಲ್ಲಿ ನಡೆಯುವ ವಾದ ವಿವಾದ ಅಥವಾ ಚರ್ಚೆ (ಸ್ವಪಕ್ಷ ಸಾಧನೋ ಪೇತ–ವಿಜಿಗೀಷುಕಥಾ ಜಲ್ಪಃ) ಸಜ್ಜನರು ಮತ್ತು ಅಸಜ್ಜನರ ನಡುವೆ ಜಯಾ ಪಜಯಕ್ಕಾಗಿ ಪೂಜಾ–ಲಾಭ–ಬಹುಮಾನಗಳಿಗಾಗಿ ಸ್ಪರ್ಧೆಯಿಂದ ನಡೆಯುವ ವಿವಾದಕ್ಕೆ **ವಿತಂಡ** ಎನ್ನುವರು. ಇದರಲ್ಲಿ ತತ್ವವನ್ನು ಬಚ್ಚಿಟ್ಟು ಪರರ ದೂಷಣ ವನ್ನೇ ಮಾಡಲಾಗುತ್ತವೆ. ಕಥಾ (ವಿತಂಡ) ಮುಖ್ಯವಾಗಿ ಸಮಯ ಬಂಧ, ಪ್ರಶ್ನೆ, ಸ್ವಪಕ್ಷ ಸಾಧನ ಹಾಗೂ ಪರಪಕ್ಷ ದೂಷಣಗಳನ್ನು ಒಳಗೊಂಡಿರುತ್ತದೆ. ಸಮಯ ಬಂಧವೆಂದರೆ ವಾದಿ ಪ್ರತಿವಾದಿಗಳು ತಮ್ಮ ತಮ್ಮ ಸಿದ್ಧಾಂತದಂತೆ ಅನುಮಾನ ಪ್ರಯೋಗ ಮಾಡಬೇಕು ಎಂದು ಉಭಯತರು ಒಪ್ಪಿಕೊಂಡ ನಿಯಮ. ಕಥಾ ಪ್ರಸಂಗದಲ್ಲಿ ಬರುವ ದೋಷ ಅಥವಾ ನಿಗ್ರಹ ಸ್ಥಾನಗಳು ಆರು. (ಮೇಲೆ ನಿರೂಪಿಸಿದ) ವಿರೋಧ–ಅಸಂಗತಿ–ನ್ಯೂನತೆ–ಅಧಿಕ್ಯ ಹಾಗೂ ಸಂವಾದ–ಅನುಕ್ತಿ. **ಸಂವಾದ**ವೆಂದರೆ ವಿಪ್ರತಿಪನ್ನ (ವಿರುದ್ಧ ಅಥವಾ ಸಂಶಯವುಳ್ಳ) ಪ್ರಮೇಯದ ಅಂಗೀಕಾರ. **ಅನುಕ್ತಿ** ಎಂದರೆ ಪರರಿಗೆ ತಿಳಿಯುವ ಸಲುವಾಗಿ ಅವಶ್ಯವಾಗಿ ಹೇಳಬೇಕಾದುದನ್ನು ಹೇಳದಿರುವದು.

**ಟೀಪು :** (1) ನಿಗ್ರಹ ಎಂದರೆ ಪರಾಜಯ. ನಿಗ್ರಹ ಸ್ಥಾನ ಎಂದರೆ ಪರಾಭವಕ್ಕೆ

ನಿಮಿತ್ತ ಅಥವಾ ಕಾರಣ. ನಿಗ್ರಹ ಸ್ಥಾನಗಳು ಮೇಲೆ ನಿರೂಪಿಸಿದಂತೆ ಆರು. (ವಿರೋಧ–ಅಸಂಗತಿ–ನ್ಯೂನತೆ–ಆಧಿಕ್ಯ–ಸಂವಾದ–ಅನುಕ್ತಿ). ತಾರ್ಕಿಕರಾದರೋ 22 ನಿಗ್ರಹಸ್ಥಾನ ಹೇಳುತ್ತಾರೆ. ಅವು ಹೀಗಿವೆ. ಪ್ರತಿಜ್ಞಾಹಾನಿಃ, ಪ್ರತಿಜ್ಞಾಂತರಂ, ಪ್ರತಿಜ್ಞಾವಿರೋಧಃ, ಪ್ರತಿಜ್ಞಾ ಸನ್ಯಾಸಃ, ಹೇತ್ವಂತರಂ, ಅರ್ಥಾಂತರಂ, ನಿರರ್ಥಕಂ, ಅವಿಜ್ಞಾತಾರ್ಥಂ, ಅಪಾರ್ಥಕಂ, ಅಪ್ರಾಪ್ತಕಾಲಂ, ನ್ಯೂನಂ, ಅಧಿಕಂ, ಪುನರುಕ್ತಂ, ಅನನುಭಾಷಣಂ, ಅಜ್ಞಾನಂ, ಅಪ್ರತಿಭಾ, ವಿಕ್ಷೇಪಃ, ಮತಾನುಜ್ಞಾ, ಪರ್ಯನು ಯೋಜ್ಯೋಪೇಕ್ಷಣಂ, ನಿರನುಯೋಜ್ಯಾನುಯೋಗಃ, ಅಪಸಿದ್ಧಾಂತಃ ಮತ್ತು ಹೇತ್ವಾಭಾಸಃ.

2) ತಾರ್ಕಿಕರು ಹೇಳುವ ಇಪ್ಪತ್ತೆರಡು ನಿಗ್ರಹ ಸ್ಥಾನಗಳು ನಾವು ಮೇಲೆ (42 ರಲ್ಲಿ) ನಿರೂಪಿಸಿದ ವಿರೋಧಾದಿ ಆರು ನಿಗ್ರಹ ಸ್ಥಾನಗಳಲ್ಲಿಯೇ ಅಂತರ್ಗತವಾಗು ತ್ತವೆ.

## ಹೇತ್ವಾಭಾಸಗಳು

ಹೇತ್ವಾಭಾಸಗಳೆಂದರೆ ದುಷ್ಟಹೇತುಗಳು, ಇವು ಹೇತುಗಳಂತೆ ತೋರು ತ್ತವೆ. ಆದರೆ ನಿಜವಾಗಿ ಹೇತುಗಳಲ್ಲ. ಇವುಗಳಲ್ಲಿ ಹೇತುವಿನ ಎಲ್ಲ ಲಕ್ಷಣ ಗಳಿರುವದಿಲ್ಲ. ಈ ಮೊದಲು ನಿರೂಪಿಸಿದಂತೆ ಅನ್ವಯ–ವ್ಯತಿರೇಕೀ ಅನುಮಾನಕ್ಕೆ ಐದು (5) ರೂಪಗಳು ಹಾಗೂ ಕೇವಲಾನ್ವಯೀ, ಕೇವಲ ವ್ಯತಿರೇಕೀ ಅನುಮಾನ ಗಳಿಗೆ ನಾಲ್ಕು ರೂಪಗಳಿರುತ್ತವೆ. ಆದರೆ ಅಗತ್ಯವಿದ್ದ ರೂಪಗಳಲ್ಲಿ ಕೆಲವೊಂದು ಇದ್ದು ಕೆಲವು ಇಲ್ಲದಿದ್ದರೆ ಆ ಹೇತುಗಳಿಗೆ ಹೇತ್ವಾಭಾಸ ಎನ್ನುತ್ತಾರೆ. ಇವು ದುಷ್ಟಹೇತುಗಳಾದ್ದರಿಂದ ಇವುಗಳಿಂದ ಸರಿಯಾದ ಜ್ಞಾನ ಹುಟ್ಟುವದಿಲ್ಲ.

ಪ್ರಾಚೀನ ನೈಯಾಯಿಕರ ಪ್ರಕಾರ ಹೇತ್ವಾಭಾಸಗಳು ಏಳು. ಅಸಿದ್ಧ–ವಿರುದ್ಧ–ಅನೈಕಾಂತಿಕ (ಸವ್ಯಭಿಚಾರಿ)–ಅನಧ್ಯವಸಿತ–ಕಾಲಾತ್ಯಯಾಪದಿಷ್ಟ (ಬಾಧ) ಸತ್‌ಪ್ರತಿಪಕ್ಷ–ಪ್ರಕರಣಸಮ. ಆದರೆ ನವೀನ ನೈಯಾಯಿಕರ ಪ್ರಕಾರ ಹೇತ್ವಾ ಭಾಸಗಳು ಐದು. (i) ಅಸಿದ್ಧ (ii) ವಿರುದ್ಧ (iii) ಅನೈಕಾಂತಿಕ (ಸವ್ಯಭಿ ಚಾರಿ) (iv) ಕಾಲಾತ್ಯಯಾಪದಿಷ್ಟ (ಬಾಧ) (v) ಸತ್‌ಪ್ರತಿಪಕ್ಷ.

43) **ಅಸಿದ್ಧ :** ವ್ಯಾಪ್ತಿ ಮತ್ತು ಪಕ್ಷಧರ್ಮತಾ ಇವೆರಡು ಅನುಮಾನದ ಮುಖ್ಯ ಅಂಗಗಳು. ಈ ಧರ್ಮಗಳಿಲ್ಲದ ಹೇತುವಿಗೆ ಅಸಿದ್ಧ ಎನ್ನುತ್ತಾರೆ. "ವ್ಯಾಪ್ತಿ ಪಕ್ಷ ಧರ್ಮತಾ–ಅನ್ಯತರ ವಿಕಲಃ ಹೇತುಃ ಅಸಿದ್ಧಃ"— ಲಿಂಗತ್ವೇನ ಅನಿಶ್ಚಿತಃ ಹೇತುಃ ಅಸಿದ್ಧಃ. ಅಸಿದ್ಧವು ಮೂರು ವಿಧ.(44, 45, 46)

44) **ಆಶ್ರಯಾಸಿದ್ಧ :** ಆಶ್ರಯ ಅಥವಾ ಪಕ್ಷವೇ ಅಸಿದ್ಧವಾದ ಹೇತುವಿಗೆ ಆಶ್ರಯಾಸಿದ್ಧ ಎನ್ನುವರು. (ಆಶ್ರಯಃ ಪಕ್ಷಃ ಅಸಿದ್ಧಃ ಯಸ್ಯ ಹೇತೋಃ ಸಃ ಆಶ್ರಯಾಸಿದ್ಧಃ) ಉದಾ— ಗಗನಾರವಿಂದಂ ಸುರಭಿ, ಅರವಿಂದತ್ವಾತ್ ಸರೋ

ಜಾರವಿಂದವತ್. ಆಕಾಶ ಕಮಲವು ಸುವಾಸನೆಯುಳ್ಳದ್ದು, ಕಮಲವಾದ್ದರಿಂದ ಕೆರೆಯಲ್ಲಿಯ ಕಮಲದಲ್ಲಿಯಂತೆ. ಇಲ್ಲಿ ಪಕ್ಷವಾದ ಆಕಾಶಕಮಲ ಇಲ್ಲವೇ ಇಲ್ಲ. ಆಶ್ರಯಾಸಿದ್ಧಕ್ಕೆ ಇನ್ನೊಂದು ಉದಾಹರಣೆಯೆಂದರೆ ಶಶಶೃಂಗಂ ತೀಕ್ಷ್ಣಂ ಶೃಂಗತ್ವಾತ್. ಮೊಲದಕೋಡು ತೀಕ್ಷ್ಣವಾದುದು, ಕೋಡಾದ್ದರಿಂದ. ಇಲ್ಲಿ ಮೊಲದ ಕೋಡು ಅಸತ್ಯವಾಗಿದೆ. ಆದ್ದರಿಂದ ಹೇತುವು ಆಶ್ರಯಾಸಿದ್ಧ.

45) **ಸ್ವರೂಪಾಸಿದ್ಧ :** ಹೇತುವಿನ ಧರ್ಮವು (ಸ್ವರೂಪ) ಪಕ್ಷದಲ್ಲಿ ಸಿದ್ಧವಿರದಿದ್ದರೆ ಆ ಹೇತುವಿಗೆ ಸ್ವರೂಪಾಸಿದ್ಧವೆನ್ನುವರು. ಉದಾ– ಶಬ್ದಃ ಅನಿತ್ಯಃ ಚಾಕ್ಷುಷತ್ವಾತ್. ಶಬ್ದವು ಅನಿತ್ಯ ಚಕ್ಷುರಿಂದ್ರಿಯ ಜ್ಞಾನಕ್ಕೆ ವಿಷಯುವಾದ್ದರಿಂದ. ಇಲ್ಲಿ ಹೇತುವಾದ ಚಾಕ್ಷುಷತ್ವವು ಪಕ್ಷದಲ್ಲಿ ಇಲ್ಲವೇ ಇಲ್ಲ. ಏಕೆಂದರೆ ಶಬ್ದವು ಶ್ರವಣೇಂದ್ರಿಯಕ್ಕೆ ವಿಷಯವಾಗಿದೆ.

46) **ವ್ಯಾಪ್ಯತ್ವಾಸಿದ್ಧ :** ಇದು ಎರಡು ವಿಧ. ಸಾಧ್ಯ ಸಂಬಂಧ ರಹಿತವಾದುದು ಮತ್ತು ಉಪಾಧಿ ಸಂಬಂಧವುಳ್ಳದ್ದು. (ಸೋಪಾಧಿಕ ಸಂಬಂಧಃ).

47) **ಸಾಧ್ಯಸಂಬಂಧರಹಿತಃ :** ಹೇತುವಿಗೆ ಸಾಧ್ಯದೊಡನೆ ಸಂಬಂಧವಿಲ್ಲದಿರುವದು. ಉದಾ– ಸರ್ವಂ ಕ್ಷಣಿಕಂ ಸತ್ವಾತ್. ಇಲ್ಲಿ ಸತ್ವ ಮತ್ತು ಕ್ಷಣಿಕತ್ವಗಳಲ್ಲಿ ವ್ಯಾಪ್ತಿ ಇಲ್ಲ. ಇದಲ್ಲದೆ ಎಲ್ಲವೂ ಪಕ್ಷದಲ್ಲಿ ಸೇರಿದ್ದರಿಂದ ಪಕ್ಷಾತಿರಿಕ್ತ ಸಪಕ್ಷವೇ ಇಲ್ಲ. ಹೀಗಾಗಿ ಹೇತುವಿಗೆ ಇರಬೇಕಾದ ಸಪಕ್ಷಸತ್ವ ಎಂಬ ಧರ್ಮ ಇಲ್ಲ. ಆದ್ದರಿಂದ ಇದು ಹೇತ್ವಾಭಾಸ.

48) **ಸೋಪಾಧಿಕ ಸಂಬಂಧ :** ಉಪಾಧಿಯುಕ್ತವಾದ ಹೇತು ಸೋಪಾಧಿಕ. ಉದಾ– ಯಾಗೀಯ ಹಿಂಸಾ (ವೈಧೀ ಹಿಂಸಾ) ಪಾಪಸಾಧನಂ, ಹಿಂಸಾತ್ವಾತ್, ಬ್ರಾಹ್ಮಣ ಹಿಂಸಾವತ್. ಇಲ್ಲಿ ಪಾಪಸಾಧನಕ್ಕೆ ಹೇತುವಾದ ಹಿಂಸಾತ್ವವು ಪ್ರಯೋಜಕವಲ್ಲ. ಆದರೆ ನಿಷಿದ್ಧತ್ವವು ಪ್ರಯೋಜಕ (ಕಾರಣ). ಪ್ರಯೋಜಕಕ್ಕೆ, ವಿಶಿಷ್ಟ ಕಾರಣಕ್ಕೆ ಉಪಾಧಿ ಎನ್ನುವರು. Special cause for general effect. ಇಲ್ಲಿ ಪಾಪಸಾಧನಕ್ಕೆ ನಿಷಿದ್ಧತ್ವ ಉಪಾಧಿಯಾಗಿದೆ. ಎಂದರೆ ಹಿಂಸೆಯು ನಿಷಿದ್ಧತ್ವದೊಡನೆ ಸಂಬಂಧ ಹೊಂದಿದರೆ ಮಾತ್ರ (ಬ್ರಾಹ್ಮಣ ಹಿಂಸೆ, ಗೋಹಿಂಸೆ ಮೊದಲಾದವಲ್ಲಿ) ಪಾಪ ಸಾಧನ ಆಗುತ್ತದೆ. ಇಲ್ಲವಾದರೆ ಇಲ್ಲ. ಹೀಗಾಗಿ ಉಪಾಧ್ಯಭಾವದಿಂದ ಸಾಧ್ಯಾಭಾವವನ್ನು ಊಹಿಸಬಹುದು. (ಉಪಾಧ್ಯಭಾವಃ ಸಾಧ್ಯಾಭಾವಸಾಧನೇ ಹೇತುಃ ಭವತಿ) ಉದಾ—ಯಾಗೀಯ ಹಿಂಸಾ ಪಾಪಸಾಧನಂ ನ ಭವತಿ. ಅನಿಷಿದ್ಧತ್ವಾತ್, ಭೋಜನವತ್. ಉಪಾಧಿಯ ಇನ್ನೊಂದು ಉದಾಹರಣೆ– ಪರ್ವತೋ ಧೂಮವಾನ್ ವಹ್ನೇಃ.ಪರ್ವತವು ಹೊಗೆಯುಳ್ಳದ್ದು, ಬೆಂಕಿ ಇದ್ದುದರಿಂದ. ಇಲ್ಲ ಹಸಿಕಟ್ಟಿಗೆಯ ಸಂಬಂಧ (ಆರ್ದ್ರೇಂಧನ ಸಂಯೋಗಃ) ಉಪಾಧಿ. ಬೆಂಕಿಯು ಹಸಿ ಕಟ್ಟಿಗೆಯೊಡನೆ ಸಂಬಂಧ ಹೊಂದಿದರೆ ಮಾತ್ರ ಹೊಗೆಗೆ ಕಾರಣವಾಗುತ್ತದೆ.

**ಉಪಾಧಿಯೂ ಎರಡು ರೀತಿಯಿಂದ ದೋಷವಾಗುತ್ತದೆ.** (1) ಮೂಲ ದೋಷಯುಕ್ತ ಅನುಮಾನವು ಪ್ರವೃತ್ತವಾಗುವ ಮೊದಲು,ಎಂದರೆ ಸಾಧ್ಯ ಸಾಧನ ಗಳ ನಡುವಿನ ವ್ಯಾಪ್ತಿ ಗ್ರಹಣವಾಗುವಾಗಲೇ ಅವೆರಡರಲ್ಲಿ ವ್ಯಾಪ್ತಿಯಿಲ್ಲ ಎಂದು ಉಪಾಧಿಯು ಅವ್ಯಾಪ್ತಿಯನ್ನು ಎತ್ತಿ ತೋರಿಸುತ್ತದೆ(**ವ್ಯಭಿಚಾರೋನ್ನಾಯಕಃ**) (2) ಮುಂದೆ ಅನುಮಾನ ಪ್ರವೃತ್ತವಾದ ನಂತರ "**ಸತ್ ಪ್ರತಿಪಕ್ಷೋನ್ನಾಯಕ** ವಾಗುತ್ತದೆ. ಎಂದರೆ ಮೂಲ ಅನುಮಾನಕ್ಕೆ ಪ್ರತಿಯಾದ ವಿರುದ್ಧ ಸದನುಮಾನ ವನ್ನು ಎತ್ತಿ ತೋರಿಸುತ್ತದೆ. ಉದಾ– ಯಾಗೀಯ ಹಿಂಸಾ ಪಾಪಸಾಧನಂ ನ ಭವತಿ, ಅನಿಷಿದ್ಧತ್ವಾತ್, ಭೋಜನವತ್.

**ಉಪಾಧಿಯ ಲಕ್ಷಣ** : ಸಾಧ್ಯಕ್ಕೆ ವ್ಯಾಪಕವಾಗಿ, ಸಾಧನಕ್ಕೆ ಅವ್ಯಾಪಕವಾಗಿರು ವದು ಉಪಾಧಿಯ ಲಕ್ಷಣ. ಸಾಧ್ಯವ್ಯಾಪಕತ್ವೇ ಸತಿ ಸಾಧನ ಅವ್ಯಾಪಕತ್ವಂ ಉಪಾಧೇಃ ಲಕ್ಷಣಂ. ಉದಾ– ಪರ್ವತವು ಹೊಗೆಯುಳ್ಳದ್ದು ಬೆಂಕಿಯುಳ್ಳದ್ದು ದ ರಿಂದ (ಪರ್ವತಃ ಧೂಮವಾನ್ ವಹ್ನೇಃ) ಇಲ್ಲಿ ಹೇತುವಾದ ಬೆಂಕಿಗೆ ಆರ್ದ್ರೇಂಧನ ಸಂಯೋಗವು ಉಪಾಧಿ. ಎಂದರೆ ಹಸಿಕಟ್ಟಿಗೆಯ ಸಂಬಂಧವು ಉಪಾಧಿ. ಹೇಗೆಂದರೆ ಸಾಧ್ಯವಾದ ಹೊಗೆ ಎಲ್ಲಿದೆಯೋ ಅಲ್ಲಿ, ಎಂದರೆ ಅಡಿಗೆಯ ಮನೆಯಲ್ಲಿ ಬೆಂಕಿ ಇದೆ. ಹೀಗೆ ಉಪಾಧಿಯು ಸಾಧ್ಯಕ್ಕೆ ವ್ಯಾಪಕವಾಗಿದೆ. ಮತ್ತು ಸಾಧನವಾದ ಬೆಂಕಿಯು ಎಲ್ಲಿವೆಯೋ ಅಲ್ಲಿ (ಪರ್ವತದಲ್ಲಿ) ಆರ್ದ್ರೇಂಧನ ಸಂಯೋಗ ಇಲ್ಲ. ಎಂದರೆ ಉಪಾಧಿಯು ಸಾಧನಕ್ಕೆ ಅವ್ಯಾಪಕವಾಗಿದೆ. (ಯತ್ರ ಧೂಮಃ ತತ್ರ ಆರ್ದ್ರೇಂಧನ ಸಂಯೋಗಃ ಯಥಾ ಮಹಾನಸಃ । ಯತ್ರ ವಹ್ನಿಃ ತತ್ರ ಆರ್ದ್ರೇಂಧನ ಸಂಯೋಗಃ ನಾಸ್ತಿ ಯಥಾ ಪರ್ವತೇ ।)

49) **ವಿರುದ್ಧ** : ಸಾಧ್ಯಾಭಾವವ್ಯಾಪ್ತಃ ಹೇತುಃ ವಿರುದ್ಧಃ । ಪರ್ವತೋ ವನ್ಹಿ ಮಾನ್ ಧೂಮಾತ್ ಎಂಬ ಸದನುಮಾನದಲ್ಲಿ. ಹೇತುವಾದ ಧೂಮವು ಸಾಧ್ಯ ವಾದ ಅಗ್ನಿಯಿಂದ ವ್ಯಾಪ್ತವಾಗಿದೆ. ಏಕೆಂದರೆ ಹೊಗೆ ಇದ್ದಲ್ಲೆಲ್ಲ ಬೆಂಕಿ ಇದೆ. ಆದರೆ ಹೇತು ಸಾಧ್ಯದಿಂದ ವ್ಯಾಪ್ತವಾಗದೆ ಸಾಧ್ಯಾಭಾವದಿಂದ ವ್ಯಾಪ್ತವಾದರೆ ಅದು ವಿರುದ್ಧ ಹೇತು ಎನಿಸುತ್ತದೆ. ಉದಾ– ಶಬ್ದಃ ನಿತ್ಯಃ ಕೃತಕತ್ವಾತ್. ಇಲ್ಲಿ ಕೃತಕತ್ವವಿದ್ದಲ್ಲಿ ನಿತ್ಯತ್ವವಿರದೆ ಅನಿತ್ಯತ್ವವಿರುತ್ತದೆ. ಎಂದರೆ ಹೇತು ಸಾಧ್ಯಾ ಭಾವದಿಂದ ವ್ಯಾಪ್ತವಾಗಿದೆ.

**ಗಮನಿಸಿರಿ** : ಹೇತು ವಾಸ್ತವವಾಗಿ ಪಕ್ಷ–ಸಪಕ್ಷಗಳಲ್ಲಿರಬೇಕು ಮತ್ತು ವಿಪಕ್ಷ ದಲ್ಲಿರಬಾರದು. ಆದರೆ ಇದಕ್ಕೆ ವಿರುದ್ಧವಾಗಿ ಹೇತು ಪಕ್ಷ ವಿಪಕ್ಷದಲ್ಲಿ ಮಾತ್ರ ಇದ್ದರೆ ಅದು ವಿರುದ್ಧ ಹೇತು ಎನಿಸುತ್ತದೆ.

50) **ಅನೈಕಾಂತಿಕ (ಸವ್ಯಭಿಚಾರಿ)** : ಐಕಾಂತಿಕ ಎಂದರೆ ನಿಯಮದಿಂದ ಇರುವದು; ನಿಯತ. ನಿಯತವಲ್ಲದ್ದು ಅನೈಕಾಂತಿಕ. ಸದನುಮಾನದಲ್ಲಿ ಹೇತು ನಿಯಮೇನ ಸಾಧ್ಯದೊಡನೆ ಸಂಬಂಧ ಹೊಂದಿರುತ್ತದೆ. ಆದರೆ ಅದು ಸಾಧ್ಯಾ

ಭಾವದೊಡನೆಯೂ ಸಂಬಂಧ ಹೊಂದಿದರೆ ಎಂದರೆ ವ್ಯಭಿಚರಿತವಾದರೆ ಅದು ಅನೈಕಾಂತಿಕ ಅಥವಾ ವ್ಯಭಿಚಾರಿ ಹೇತು ಎನಿಸುತ್ತದೆ. (ವ್ಯಭಿಚಾರೀ ಸಾಧ್ಯವತ್ ಅನ್ಯವೃತ್ತಿಃ)

ಅನೈಕಾಂತಿಕ (ಸವ್ಯಭಿಚಾರಃ) ಮೂರು ವಿಧ. ಸಾಧಾರಣ-ಅಸಾಧಾರಣ ಅನುಪಸಂಹಾರಿ.

51) **ಸಾಧಾರಣ ಅನೈಕಾಂತಿಕ :** ಸಾಧ್ಯಾಭಾವವಿದ್ದಲ್ಲಿ ಹೇತು ಇರುವದು ಸಾಧಾರಣ ಅನೈಕಾಂತಿಕ. (ಸಾಧ್ಯಾಭಾವವತ್‌ವೃತ್ತಿಃ ಸಾಧಾರಣಃ ಅನೈಕಾಂತಿಕಃ) ಉದಾ- ಪರ್ವತಃ ಅಗ್ನಿಮಾನ್ ಪ್ರಮೇಯತ್ವಾತ್. ಇಲ್ಲಿ ಪ್ರಮೇಯತ್ವವು (ಜ್ಞಾನಕ್ಕೆ ವಿಷಯು) ಬೆಂಕಿ ಇಲ್ಲದ ಮಡುವಿನಲ್ಲಿ (ಸಾಧ್ಯಾಭಾವವಿದ್ದಲ್ಲಿ) ಇದೆ.

52) **ಅಸಾಧಾರಣ ಅನೈಕಾಂತಿಕ :** ಎಲ್ಲ ಸಪಕ್ಷ ವಿಪಕ್ಷಗಳಲ್ಲಿರದೆ ಪಕ್ಷದಲ್ಲಿ ಮಾತ್ರ ಇರುವ ಹೇತುವಿಗೆ ಅಸಾಧಾರಣ ಅನೈಕಾಂತಿಕ ಎನ್ನುವರು. (ಸರ್ವ-ಸಪಕ್ಷ-ವಿಪಕ್ಷ-ವ್ಯಾವೃತ್ತಃ ಪಕ್ಷೇ ಏವ ವರ್ತಮಾನಃ ಹೇತುಃ ಅಸಾಧಾರಣ-ಅನೈಕಾಂತಿಕಃ) ಉದಾ — ಭೂಃ ನಿತ್ಯಾ ಗಂಧವತ್ವಾತ್, ಇಲ್ಲಿ ಗಂಧವತ್ವ ಹೇತು ಪಕ್ಷವಾದ ಭೂಮಿಯಲ್ಲಿ ಮಾತ್ರ ಇದೆ. ಸಪಕ್ಷ-ವಿಪಕ್ಷಗಳಲ್ಲಿ ಇಲ್ಲ.

53) **ಅನುಪಸಂಹಾರೀ :** ಅನ್ವಯ ದೃಷ್ಟಾಂತ ಮತ್ತು ವ್ಯತಿರೇಕ ದೃಷ್ಟಾಂತ ಗಳಿಲ್ಲದ ಹೇತುವಿಗೆ ಅನುಪಸಂಹಾರೀ ಎನ್ನುತ್ತಾರೆ. ಉದಾ — ಸರ್ವಂ ಅನಿತ್ಯಂ ಪ್ರಮೇಯತ್ವಾತ್. ಇಲ್ಲಿ ಎಲ್ಲವೂ ಪಕ್ಷದಲ್ಲಿ ಸೇರಿದ್ದರಿಂದ ದೃಷ್ಟಾಂತವೇ ಇಲ್ಲ.

54) **ಅನಧ್ಯವಸಿತಃ :** ಅಧ್ಯವಸಿತ ಎಂದರೆ ನಿಶ್ಚಿತ. ಅನಧ್ಯವಸಿತ ಎಂದರೆ ಅನಿಶ್ಚಿತ. ಹೇತುವಿನಿಂದ ಸಾಧ್ಯದ ನಿಶ್ಚಯವಾಗದಿದ್ದರೆ, ಎಂದರೆ ಹೇತು ಅಸಾಧಕ ವಾದರೆ ಅದಕ್ಕೆ ಅನಧ್ಯವಸಿತ ಎನ್ನುವರು. (ಸಾಧ್ಯ-ಅಸಾಧಕಃ ಪಕ್ಷೇ ಏವ ವರ್ತಮಾನಃ ಹೇತುಃ ಅನಧ್ಯವಸಿತಃ). ಹೇತು ಸಾಧ್ಯವನ್ನು ಸಾಧಿಸದಿದ್ದರೆ, ಅದು ದೋಷವೇ. ಅನಧ್ಯವಸಿತ ಮೂರು ವಿಧ.

i) **ಸಪಕ್ಷ ವಿಪಕ್ಷ ರಹಿತ :** ಉದಾ- ಸರ್ವಂ ಅನಿತ್ಯಂ ಸತ್ವಾತ್. ಎಲ್ಲವೂ ಅನಿತ್ಯ ಅಸ್ತಿತ್ವದಲ್ಲಿರುವುದರಿಂದ. ಇಲ್ಲಿ ಎಲ್ಲವೂ ಪಕ್ಷದಲ್ಲಿ ಸೇರಿದ್ದರಿಂದ ದೃಷ್ಟಾಂತವೇ ಇಲ್ಲ. ಹೀಗಾಗಿ ಇಲ್ಲಿ ಸಪಕ್ಷ ವಿಪಕ್ಷಗಳಿಲ್ಲ.

ii) **ಸಪಕ್ಷ ವಿಪಕ್ಷ ಸಹಿತ :** ಸಪಕ್ಷ ವಿಪಕ್ಷಗಳುಳ್ಳದ್ದು, ಉದಾ ಭೂಃ ನಿತ್ಯಾ ಗಂಧವತ್ವಾತ್. ಭೂಮಿ ನಿತ್ಯ ಗಂಧವುಳ್ಳದ್ದರಿಂದ, ಇಲ್ಲಿ ಸಪಕ್ಷವೆಂದರೆ ನಿತ್ಯತ್ವವುಳ್ಳ ಆಕಾಶ. ವಿಪಕ್ಷ ಎಂದರೆ ನಿತ್ಯತ್ವ ಇಲ್ಲದ ಜಲ. ಹೀಗೆ ಇಲ್ಲಿ ಸಪಕ್ಷ ವಿಪಕ್ಷಗಳೆರಡೂ ಇವೆ.

iii) **ಸಪಕ್ಷವಾನ್ ವಿಪಕ್ಷರಹಿತ :** ಸಪಕ್ಷವುಳ್ಳ ಮತ್ತು ವಿಪಕ್ಷಇಲ್ಲದ್ದು.

ಉದಾ ಶಬ್ದಃ ಅಭಿಧೇಯಃ ಶಬ್ದತ್ವಾತ್; ಶಬ್ದವು ವಾಚ್ಯ ಶಬ್ದತ್ವವಿರುವುದರಿಂದ. ಇಲ್ಲಿ ಸಪಕ್ಷವಾದ ಘಟ ಇದೆ. ಆದರೆ ಎಲ್ಲವೂ ವಾಚ್ಯವಾದ್ದರಿಂದ ವಿಪಕ್ಷವೇ ಇಲ್ಲ. **ಟೀಪು** : ನವೀನ ನೈಯಾಯಿಕರು ಅನಧ್ಯವಸಿತವನ್ನು ಪ್ರತ್ಯೇಕ ಹೇತ್ವಾಭಾಸ ವೆಂದು ಒಪ್ಪುವದಿಲ್ಲ. ಅವರು ಇದನ್ನು ವ್ಯಾಪ್ಯತ್ವಾಸಿದ್ದದಲ್ಲಿ (ಮೇಲಿನ 46, 47 ಮತ್ತು 48ರಲ್ಲಿ) ಅಂತರ್ಗತ ಮಾಡುತ್ತಾರೆ.

55) **ಕಾಲಾತ್ಯಯೋಪದಿಷ್ಟ (ಬಾಧಿತ)** : ಸಾಧ್ಯದ ಅಭಾವವೇ ಬೇರೆ ಪ್ರಮಾಣದಿಂದ ನಿಶ್ಚಿತವಿರುವ ಹೇತುವಿಗೆ ಕಾಲಾತ್ಯಯಾಪದಿಷ್ಟ ಅಥವಾ ಬಾಧಿತ ಎನ್ನುವರು. (ಯಸ್ಯ ಸಾಧ್ಯಾಭಾವಃ ಪ್ರಮಾಣೇನ ನಿಶ್ಚಿತಃ ಸಃ ಕಾಲಾತ್ಯಯಾಪ ದಿಷ್ಟಃ).ಬಾಧ ಬರುವದು ಪ್ರತ್ಯಕ್ಷ–ಅನುಮಾನ–ಆಗಮ ಪ್ರಮಾಣಗಳಿಂದ.ಉದಾ–

(1) ಅಗ್ನಿಃ ಅನುಷ್ಣಃ ದ್ರವ್ಯತ್ವಾತ್, ಜಲವತ್.ಅಗ್ನಿಯು ಉಷ್ಣವಲ್ಲ ದ್ರವ್ಯವಾದ್ದ ರಿಂದ ನೀರಿನಂತೆ.ಇದು ಪ್ರತಿಪಕ್ಷದಿಂದ ಬಾಧಿತ.ಇಲ್ಲಿ ಸಾಧ್ಯವಾದ ಅಗ್ನಿಯ ಅನುಷ್ಣ ತೆಯ ಅಭಾವವು ಎಂದರೆ ಅಗ್ನಿ ಉಷ್ಣ ಎಂಬುದು, ಪ್ರತ್ಯಕ್ಷ ಸ್ಪರ್ಶದಿಂದ ಸಿದ್ಧ.

ii) **ಚಕ್ಷುಃ ರೂಪಗ್ರಾಹಕಂ ನ ಭವತಿ, ಇಂದ್ರಿಯತ್ವಾತ್.** ಕಣ್ಣು ರೂಪ ಗ್ರಾಹಕವಲ್ಲ, ಇಂದ್ರಿಯವಾದ್ದರಿಂದ, ಇದು ಅನುಮಾನದಿಂದ ಬಾಧಿತ. ರೂಪ ಜ್ಞಾನವೆಂಬ ಕಾರ್ಯವಂತೂ ಇದೆ. ಇದಕ್ಕೆ ಒಂದು ಕರಣ (ಸಾಧನ) ಬೇಕು. ಕಿವಿ, ಮೂಗು ಮುಂತಾದ ಇಂದ್ರಿಯಗಳಿಂದ ರೂಪಜ್ಞಾನ ಆಗುವದಿಲ್ಲವಾದ್ದರಿಂದ, ಪರಿಶೇಷದಿಂದ ಕಣ್ಣು ರೂಪ ಗ್ರಾಹಕವೆಂದು ಸಿದ್ಧಿಸುತ್ತದೆ. ಆದ್ದರಿಂದ ಕಣ್ಣು ರೂಪಗ್ರಾಹಕವಲ್ಲವೆಂಬುದು ಅನುಮಾನ ಪ್ರಮಾಣದಿಂದ ಬಾಧಿತ.

iii) ಬ್ರಾಹ್ಮಣೇನ ಸುರಾಪೇಯಾ ದ್ರವದ್ರವ್ಯತ್ವಾತ್, ಕ್ಷೀರವತ್– ಬ್ರಾಹ್ಮಣನು ಸುರಾಪಾನ ಮಾಡಬೇಕು. ಅದು ದ್ರವದ್ರವ್ಯವಾದ್ದರಿಂದ, ಹಾಲಿನಂತೆ. ಇದು ಆಗಮ ಪ್ರಮಾಣದಿಂದ ಬಾಧಿತ.

56) **ಸತ್‌ಪ್ರತಿಪಕ್ಷ** : ಸಾಧ್ಯಾಭಾವವನ್ನೇ ಸಾಧಿಸುವ ಇನ್ನೊಂದು ಹೇತು ಇದ್ದರೆ ಅದಕ್ಕೆ ಸತ್‌ಪ್ರತಿಪಕ್ಷ ಎನ್ನುವರು. ಸಾಧ್ಯಾಭಾವ ಸಾಧಕಂ ಹೇತ್ವಂತರಂ ಯಸ್ಯವಿದ್ಯತೇ ಸಃ ಸತ್‌ಪ್ರತಿಪಕ್ಷಃ ಉದಾ– ವಾಯುಃ ಪ್ರತ್ಯಕ್ಷಃ ಪ್ರತ್ಯಕ್ಷಸ್ಪರ್ಶಿ ತ್ವಾತ್ (ವಾಯುವು ಪ್ರತ್ಯಕ್ಷ ಸ್ಪರ್ಶಕ್ಕೆ ಗೋಚರವಾದ್ದರಿಂದ) ಎಂಬ ಅನುಮಾನವು ವಾಯುಃ ನ ಪ್ರತ್ಯಕ್ಷಃ ರೂಪರಹಿತ ದ್ರವ್ಯತ್ವಾತ್ (ವಾಯು ಪ್ರತ್ಯಕ್ಷವಲ್ಲ ರೂಪ ರಹಿತ ದ್ರವ್ಯವಾದ್ದರಿಂದ) ಎಂಬ ಸಮಬಲ ಪ್ರಮಾಣಕ್ಕೆ ವಿರುದ್ಧವಾಗಿದೆ.

57) **ಪ್ರಕರಣ ಸಮ** : ಸ್ವಪಕ್ಷ ಪ್ರಮೇಯ ಮತ್ತು ಪರಪಕ್ಷ ಪ್ರಮೇಯ ಸಾಧಿಸುವಲ್ಲಿ ಬಳಸಲ್ಪಡುವ ಹೇತುವು ಪಕ್ಷಧರ್ಮತ್ವ-ಸಪಕ್ಷ ಸತ್ವ-ವಿಪಕ್ಷಾತ್ ವ್ಯಾವೃತ್ತಿ ಎಂಬ ಮೂರು ಅಂಶಗಳುಳ್ಳದ್ದಿದ್ದರೆ ಅದು ಪ್ರಕರಣ ಸಮಃ ಉದಾ– **ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್.** ಜಗತ್ತು ಸುಳ್ಳು ಕಣ್ಣಿಗೆ ಕಾಣುವದರಿಂದ ಶಿಂಪಿನಲ್ಲಿ ತೋರಿದ ಬೆಳ್ಳಿಯಂತೆ. ಇಲ್ಲಿ ದೃಶ್ಯತ್ವ ಹೇತು ಪಕ್ಷ

ವಾದ ಜಗತ್ತಿನಲ್ಲಿ ಇದೆ. ಸಪಕ್ಷವಾದ ಶಿಂಪಿನಲ್ಲಿ ತೋರುವ ಬೆಳ್ಳಿಯಲ್ಲಿದೆ; ಹಾಗೂ ವಿಪಕ್ಷವಾದ ಬ್ರಹ್ಮನಲ್ಲಿ ಇಲ್ಲ, ಇನ್ನು ಇಲ್ಲಿಯು ದೃಶ್ಯತ್ವ ಹೇತುವನ್ನು ಜಗತ್ತು ಸತ್ಯವೆಂದು ಸಾಧಿಸಲು ಬಳಸಬಹುದು. ಹೇಗೆಂದರೆ **ವಿಶ್ವಂ ಸತ್ಯಂ ದೃಶ್ಯತ್ವಾತ್ ಬ್ರಹ್ಮವತ್.** ಇಲ್ಲಿ ದೃಶ್ಯತ್ವ ಹೇತು ಪಕ್ಷವಾದ ಜಗತ್ತಿನಲ್ಲಿದೆ, ಸಪಕ್ಷವಾದ ಬ್ರಹ್ಮನಲ್ಲಿ ಇದೆ. ವಿಪಕ್ಷವಾದ ಶುಕ್ತಿರಜತದಲ್ಲಿ ಇಲ್ಲ. ಅದು ಅಸತ್. ಹೀಗೆ ದೃಶ್ಯತ್ವ ಹೇತು ಉಭಯ ಪ್ರಮೇಯ ಸಾಧನೆಯಲ್ಲಿ ಮೂರು ಅಂಶಗಳುಳ್ಳದ್ದಾಗಿದೆ, ಆದ್ದರಿಂದ ಇದು ಪ್ರಕರಣ ಸಮ.

**ಟೀಪು :** (i) ನವೀನ ನೈಯಾಯಿಕರು ಈ ಪ್ರಕರಣ ಸಮವನ್ನು ಪ್ರತ್ಯೇಕ ಹೇತ್ವಾಭಾಸವೆಂದು ಒಪ್ಪುವದಿಲ್ಲ. ಅದನ್ನು ಸತ್ ಪ್ರತಿಪಕ್ಷದಲ್ಲಿ (ಮೇಲಿನ 56 ರಲ್ಲಿ) ಸೇರಿಸುತ್ತಾರೆ.

(ii) ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಎಂಬ ಮೇಲಿನ ಅನುಮಾನದಲ್ಲಿ, ಅನುಮಾ ನಕ್ಕಿರುವ ಎಲ್ಲ ದೋಷಗಳೂ ಇವೆ ಎಂದು ಶ್ರೀಮಧ್ವಾಚಾರ್ಯರು ತಮ್ಮ "ಪ್ರಮಾಣಲಕ್ಷಣ"ವೆಂಬ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ. "ಸರ್ವೇ ಏತೇ ದೋಷಾಃ ದೃಶ್ಯತ್ವಾನುಮಾನೇ ದ್ರಷ್ಟವ್ಯಾಃ"

## ಆಗಮ

1) **ಆಗಮ :** "ನಿರ್ದೋಷಃ ಶಬ್ದಃ ಆಗಮಃ". ಆಗಮ ಎಂದರೆ (ಯಥಾರ್ಥ ಜ್ಞಾನಕ್ಕೆ ಪ್ರತಿಬಂಧಕವಾಗುವ) ದೋಷಗಳಿಲ್ಲದ ಶಬ್ದ ಅಥವಾ "ದೋಷ-ರಹಿತ ಪದಾತ್ಮಕ ವಾಕ್ಯ". ಆಕಾಂಕ್ಷಾ-ಯೋಗ್ಯತಾ ಸನ್ನಿಧಿಗಳುಳ್ಳ ಪದಸಮೂಹಕ್ಕೆ ವಾಕ್ಯವೆನ್ನುವರು. ಇವುಗಳ ವಿವರ ಕೆಳಗಿನಂತಿದೆ.

2) **ಶಬ್ದ-ವರ್ಣ :** ಶಬ್ದವು ಧ್ವನ್ಯಾತ್ಮಕ ವರ್ಣಾತ್ಮಕವೆಂದು ಎರಡು ವಿಧ. ಧ್ವನ್ಯಾತ್ಮಕ ಶಬ್ದಗಳು ಧ್ವನಿಗಳಿಂದ ವ್ಯಕ್ತವಾದ (ವ್ಯಂಗ್ಯ) ಅರ್ಥಗಳಿಂದ ಅನೇಕ ಅರ್ಥ ಹೇಳುತ್ತವೆ. ಆದರೆ ಈ ಅರ್ಥಗಳನ್ನು ಗ್ರಹಿಸುವವರು ಬಹಳ ಸಾಧನ ಮಾಡಿದ ಮಹಾ ಜ್ಞಾನಿಗಳು ಮಾತ್ರ. (ಐತರೇಯ ಭಾಷ್ಯದಲ್ಲಿ ಹೇಳಿದಂತೆ, ಸಮುದ್ರಘೋಷ, ಘಂಟಾನಾದ, ವೃಕ್ಷಪತನ, ಭೇರೀತಾಡನ, ದಧಿಮಂಥನ, ಹಲ್ಲಿಯ ಧ್ವನಿ........ಮುಂತಾದ ಧ್ವನಿಗಳು ವಿಷ್ಣುವಿನ ಗುಣೋತ್ಕರ್ಷವನ್ನು ಹೇಳುತ್ತವೆ. "ಇತ್ಯಾದಯಃ ಸರ್ವೇ ಘೋಷಾಃ ವಿಷ್ಣೋರೇವ ಗುಣೋನ್ನತಿಂ ವದಂತಿ") ವರ್ಣಾತ್ಮಕ ಶಬ್ದಗಳು 50 (ಅಕಾರದಿಂದ ಳಕಾರ ವರೆಗೆ).

3) **ಪದ :** ಪದವೆಂದರೆ ವಿಭಕ್ತ್ಯಂತ ವರ್ಣ ಸಮುದಾಯ. ಮೂಲ ಶಬ್ದಕ್ಕೆ (ಪ್ರಕೃತಿ) ಪ್ರತ್ಯಯ ಎಂದರೆ ವಿಭಕ್ತಿ ಪ್ರತ್ಯಯ ಜೋಡಿಸುವದರಿಂದ ಪದವಾಗುತ್ತದೆ. ಉದಾ– ರಾಮಃ, ರಾಮೇಣ.

4) **ವಾಕ್ಯ** : ಕೇವಲ ಪದಸಮೂಹ ವಾಕ್ಯವಲ್ಲ. ಆದರೆ ಆಕಾಂಕ್ಷಾ, ಯೋಗ್ಯತಾ ಸನ್ನಿಧಿಗಳುಳ್ಳ ಪದಸಮೂಹ ವಾಕ್ಯ.

5) **ಆಕಾಂಕ್ಷಾ** : ವಾಕ್ಯದಲ್ಲಿಯ ಪದಗಳಿಗೆ ಪರಸ್ಪರ ಆಕಾಂಕ್ಷೆ ಇರಬೇಕು. ಉದಾ– ಕೊಡು ಎಂಬ ಶಬ್ದ ಉಚ್ಚರಿಸಿದೊಡನೆ ಅರ್ಥ ಪೂರ್ಣವಾಗುವದಿಲ್ಲ. ಏನನ್ನು ಕೊಡಬೇಕು ಎಂಬ ಆಕಾಂಕ್ಷೆ ಹುಟ್ಟುತ್ತದೆ. ಆದ್ದರಿಂದ ಅದನ್ನು ಪೂರ್ಣಮಾಡಲು 'ಕೊಡವನ್ನು' ಎಂದು ಹೇಳಬೇಕು. ಕೊಡವನ್ನು ಕೊಡು ಎಂದು ಹೇಳಬೇಕು ಆದ್ದರಿಂದ ಕೊಡವನ್ನು ಕೊಡು ಎಂಬುದು ವಾಕ್ಯ. ಆದರೆ ಗೌಃ ಅಶ್ವಃ ಪುರುಷಃ ಹಸ್ತೀ ಎಂಬುದು ವಾಕ್ಯವಲ್ಲ ಏಕೆಂದರೆ ಇಲ್ಲಿ ಆಕಾಂಕ್ಷೆ ಇಲ್ಲ.

6) **ಯೋಗ್ಯತೆ** : ಅಗ್ನಿನಾ ಸಿಂಚತಿ ಎಂಬ ವಾಕ್ಯ ಪ್ರಮಾಣವಲ್ಲ. ಏಕೆಂದರೆ ಅಗ್ನಿಗೆ ಸಿಂಪಡಿಸುವ ಯೋಗ್ಯತೆ ಇಲ್ಲ. ಅರ್ಥಕ್ಕೆ ಬಾಧೆ ಬರದಿರುವದೇ ಯೋಗ್ಯತೆ. (ಅರ್ಥಾಬಾಧಃ ಯೋಗ್ಯತಾ)

7) **ಸನ್ನಿಧಿ** : ಶಬ್ದಗಳನ್ನು ವಿಲಂಬವಿಲ್ಲದೆ ಉಚ್ಚರಿಸಿದರೆ ಮಾತ್ರ ಅರ್ಥವಾಗುತ್ತದೆ. ಇದಕ್ಕೆ ಸನ್ನಿಧಿ ಎನ್ನುವರು. (ಅವಿಲಂಬೇನ ಉಚ್ಚರಿತತ್ವಂ ಸನ್ನಿಧಿಃ) ಆತೆಯೇ ನೀರನ್ನು ಎಂದು ಈಗ ಹೇಳಿ ಒಂದು ಗಂಟೆ ನಂತರ ತೆಗೆದುಕೊಂಡು ಎಂದೂ ಮತ್ತೊಂದು ಗಂಟೆ ನಂತರ ಬಾ ಎಂದೂ ಹೇಳಿದರೆ ಅದು ವಾಕ್ಯವಾಗಲಾರದು– ಏಕೆಂದರೆ ಇಲ್ಲಿ ಸನ್ನಿಧಿ ಇಲ್ಲ.

8) **ವಾಕ್ಯದೋಷಗಳು** : ದೋಷಗಳು ಮೂಲತಃ ಶಬ್ದದಲ್ಲಿ ಇಲ್ಲ. ಆದರೆ ಅದನ್ನು ಉಚ್ಚರಿಸುವ ಪುರುಷನ ದೋಷಗಳು ಎಂದರೆ ಅಜ್ಞಾನ-ವಂಚನೆ-ಅಸಮರ್ಥ ಇಂದ್ರಿಯ ಮೊದಲಾದವು ಅವನಾಡಿದ ವಾಕ್ಯದಲ್ಲಿ ನುಸುಳುತ್ತವೆ.

ಕೆಲವು ವಾಕ್ಯ ದೋಷಗಳನ್ನು ಮಾತ್ರ ಕೆಳಗೆ ಕೊಡಲಾಗಿದೆ.

i) **ಅಬೋಧಕತ್ವ** : ಅರ್ಥವಾಗದ ವಾಕ್ಯ. ಉದಾ– ಕಚತಟಪಾನಾಂ ಜಬಗಡದತ್ವಾತ್. ಗೌರಶ್ವಃ ಪುರುಷೋ ಹಸ್ತೀ.

ii) **ವಿಪರೀತ ಬೋಧಕತ್ವ** : ಪ್ರಮಾಣಕ್ಕೆ ವಿರುದ್ಧವಾದ್ದರಿಂದ ವಿಪರೀತ ಬೋಧಕ ವಾಕ್ಯ. ಉದಾ– ಜಗತ್ತು ಸುಳ್ಳು. ವೇದಾಧಿಕಾರ ಶೂದ್ರರಿಗಿದೆ ಬ್ರಾಹ್ಮಣರಿಗಿಲ್ಲ ಮುಂ.

iii) **ಜ್ಞಾತಜ್ಞಾಪಕತ್ವ** : ಗೊತ್ತಿದ್ದುದನ್ನೇ ತಿಳಿಸುವದು. ಬೆಂಕಿ ಬಿಸಿ, ಬೆಲ್ಲ ಸಿಹಿ, ಸೂರ್ಯೋದಯ ಪೂರ್ವದಿಕ್ಕಿನಲ್ಲಿ ಆಗುತ್ತದೆ ಮುಂ.

iv) **ಅಪ್ರಯೋಜಕತ್ವ** : ಪ್ರಯೋಜನವಿಲ್ಲದ ವಾಕ್ಯಗಳು. ಉದಾ–ಕಾಗೆಗೆ ಹಲ್ಲುಗಳೆಷ್ಟು ? ಕುರಿಯ ಅಂಡ ಎಷ್ಟು ಭಾರ ? ಕಂಬಳಿಯ ಕೂದಲೆಷ್ಟು ? ಚೋಳ ದೇಶದಲ್ಲಿ ಏನು ಸುದ್ದಿ ?

v) **ಅನಭಿಮತ ಪ್ರಯೋಜನತ್ವ :** ವ್ಯಾಪಾರದಿಂದ ಜೀವಿಸು ಎಂದು ವಿರಕ್ತನಿಗೆ ಹೇಳುವ ವಾಕ್ಯ.

vi) **ಅಶಕ್ಯಸಾಧನ ಪ್ರತಿಪಾದಕತ್ವ :** ಮರಣ ಹೊಂದಿರುವವನನ್ನು ಕುರಿತು ಹಿಮಾಲಯದ ಉತ್ತರ ಶಿಖರದಲ್ಲಿರುವ ಮರಣ ಪರಿಹಾರಕ ಸಂಜೀವಿನಿ ತರುವ ಉಪದೇಶದ ವಾಕ್ಯ.

vii) **ಸಣ್ಣ ಉಪಾಯವಿರುವಾಗ ದೊಡ್ಡ ಉಪಾಯದ ಉಪದೇಶ :** ಉಗುರಿನಿಂದ ಆಗುವ ಕೆಲಸಕ್ಕೆ ಕೊಡಲಿಯು ಉಪಯೋಗ ಹೇಳಿದಂತೆ. ನೀರಡಿಸಿದ ದಕ್ಷಿಣ ದೇಶದವನಿಗೆ ಗಂಗಾ ತೀರದಲ್ಲಿ ಭಾವಿ ತೋಡಿ ನೀರು ಕುಡಿ ಎಂಬ ಉಪದೇಶ,

9) **ಆಗಮ ಬೋಧಕತ್ವ :** ಕೊನೆಯ ವರ್ಣ ಉಚ್ಚರಿಸಿದೊಡನೆ, ಪೂರ್ವ ಪೂರ್ವದಲ್ಲಿ ಉಚ್ಚರಿಸಿದ ವರ್ಣಗಳ ಸಂಸ್ಕಾರ ಮೂಲಕ ಶ್ರವಣೇಂದ್ರಿಯವು ಅನೇಕ ವರ್ಣಗಳಲ್ಲಿ ಪದ ಜ್ಞಾನವನ್ನುಂಟುಮಾಡುತ್ತದೆ. ಇದರಂತೆ ಅದು ಅನೇಕ ಪದಗಳಲ್ಲಿ ವಾಕ್ಯಜ್ಞಾನ ಹುಟ್ಟಿಸುವದು, ವಾಚ್ಯ ವಾಚ್ಯಾರ್ಥ ಜ್ಞಾನವನ್ನು ತಿಳಿದುಕೊಂಡ ಶಬ್ದದ ಸ್ಮರಣೆಯಾದರೆ ಮಾತ್ರ ಅದು ಅರ್ಥ ಬೋಧಕವಾಗುತ್ತದೆ. (ಸಮ್ಯಕ್ ಜ್ಞಾತಃ ಅನುಸ್ಮೃತ ಸಂಬಂಧಶ್ಚ).

10) **ಶಬ್ದಜ್ಞಾನ ;** ಪ್ರಾಥಮಿಕ ವ್ಯುತ್ಪತ್ತಿಯಾಗುವಾಗ (ಎಂದರೆ ಪ್ರಾರಂಭದಲ್ಲಿ ಶಬ್ದ ಶಬ್ದಾರ್ಥ ಜ್ಞಾನವಾಗುವಾಗ) ಪದಗಳ ಅರ್ಥಜ್ಞಾನವು ಲೋಕ ವ್ಯವಹಾರಕ್ಕನುಗುಣವಾಗಿ ಇತರ ಪದಗಳ ಅರ್ಥದೊಡನೆ ಸಂಬದ್ಧವಾಗಿಯೇ ಆಗುತ್ತದೆ. ಉದಾ— ಹಿಂಡುವ ಆಕಳ, ಚಲಿಸುವ ಗಾಡಿ, ನೀಲೀ ಆಕಾಶ, ಹಳದೀ ಭಂಗಾರ ಮುಂ. ಆದ್ದರಿಂದ ಪದಗಳು ಅನ್ವಿತ ಸ್ವಾರ್ಥ (ಸ್ವ ಅರ್ಥ) ಹೇಳುತ್ತವೆ. 'ಪದಾನ್ಯೇವ ಅನ್ವಿತ ಸ್ವಾರ್ಥಾಭಿಧಾಯೀನಿ' ನಂತರ ಇತರ ಶಬ್ದಗಳ ಜೋಡಣೆಯಿಂದ (ಪದಾಂತರಸಮಭಿವ್ಯಾಹಾರೇಣ), ಪದಗಳ ಸಾಮಾನ್ಯ ಶಕ್ತಿಯು ವಿಶೇಷದಲ್ಲಿ ಪರಿವರ್ತನೆಗೊಂಡು ವಾಕ್ಯಾರ್ಥ ಜ್ಞಾನವಾಗುತ್ತದೆ. ಆದ್ದರಿಂದ ಪದಗಳಿಗೆ ಒಂದೇ ಶಕ್ತಿಯನ್ನು ಒಪ್ಪಬೇಕು. ಇಲ್ಲದಿದ್ದರೆ ಕಲ್ಪನಾ ಗೌರವ ದೋಷ ಬರುತ್ತದೆ. "ಶಕ್ತಿಶ್ಚೈವ ಅನ್ವಿತೇ ಸ್ವಾರ್ಥೇ ಶಬ್ದಾನಾಂ ಅನುಭೂಯತೇ । ಅತಃ ಅನ್ವಿತಾಭಿಧಾಯಿತ್ವಂ ಗೌರವಂ ಕಲ್ಪನೇ ಅನ್ಯಥಾ" ಅನುವ್ಯಾಖ್ಯಾನ. ಶಬ್ದಾರ್ಥ ಜ್ಞಾನವು ಅನೇಕ ರೀತಿಯಿಂದ ಆಗುತ್ತದೆ. ವಸ್ತುಗಳನ್ನು ಪ್ರತ್ಯಕ್ಷ ತೋರಿಸುವದು, ವೃದ್ಧ ವ್ಯವಹಾರ, ಸಾದೃಶ್ಯ, ಕೋಶ ಮುಂ.

11) **ಶಬ್ದವೃತ್ತಿ :** ಶಬ್ದಗಳು ತಮ್ಮ ಅರ್ಥಗಳನ್ನು ಅನೇಕ ಪ್ರಕಾರಗಳಿಂದ ತಿಳಿಸುತ್ತವೆ. ಅರ್ಥ ಪ್ರತಿಪಾದನೆಯ ಈ ನಾನಾರೀತಿಗಳನ್ನು ಶಬ್ದ ವೃತ್ತಿಗಳೆಂದು ಕರೆಯುವರು. ಈ ವೃತ್ತಿಗಳು ಮೂರು (i) ಪರಮ ಮುಖ್ಯವೃತ್ತಿ

(ii) ಮುಖ್ಯವೃತ್ತಿ (iii) ಅಮುಖ್ಯ ವೃತ್ತಿ.

(i) **ಪರಮ ಮುಖ್ಯ ವೃತ್ತಿ :** ಇದು ಪರಮಾತ್ಮನ ವಿಷಯದಲ್ಲಿ ಮಾತ್ರ ಇರುತ್ತದೆ. ಶಬ್ದಗಳು ಮಹಾಯೋಗ ಎಂದರೆ ತಮ್ಮ ಅವಯವ ಶಕ್ತಿಯಿಂದ ಹಾಗೂ ಮಹಾ ವಿದ್ವದ್ರೂಢಿಯಿಂದ ಪರಮಾತ್ಮನನ್ನೇ ಬೋಧಿಸುತ್ತವೆ.

(ii) **ಮುಖ್ಯ ವೃತ್ತಿ :** ಮುಖ್ಯವೃತ್ತಿಯು a) ಯೋಗ b) ರೂಢ c) ಯೋಗರೂಢ ಎಂದು ಮೂರು ವಿಧ.

(a) **ಯೋಗ :** ಅವಯವ ಶಕ್ತಿಯಿಂದ ಬೋಧಿತವಾಗುವ ಅರ್ಥಕ್ಕೆ ಯೌಗಿಕ ಅರ್ಥವೆನ್ನುವರು. ಉದಾ– ವಾಚಕ, ಪಾಠಕ, ದಂಡೀ (ದಂಡ ಹಿಡಿದ ಸನ್ಯಾಸಿ).

(b) **ರೂಢಿ :** ರೂಢಿ ಎಂದರೆ ಪ್ರಯೋಗ ಬಾಹುಲ್ಯ ಅಥವಾ ಸಮುದಾಯ ಶಕ್ತಿ, ಈ ಶಕ್ತಿಯಿಂದ ಅರ್ಥವನ್ನು ಪ್ರತಿಪಾದಿಸುವ ಶಬ್ದಗಳು ರೂಢ ಶಬ್ದಗಳು. ಉದಾ– ಘಟ, ಪಟ, ಗೋ (ಆಕಳು), ಅಶ್ವ (ಕುದುರೆ).

(c) **ಯೋಗರೂಢಿ :** ಯೋಗ ಮತ್ತು ರೂಢಿ ಎರಡನ್ನೂ ಕೂಡಿರುವ ವೃತ್ತಿ. ಉದಾ– ಪಂಕಜ (ಕೆಸರು ಅಥವಾ ನೀರಿನಲ್ಲಿ ಹುಟ್ಟಿದ ಕಮಲ).

(iii) ಅಮುಖ್ಯ ವೃತ್ತಿಗೆ ಲಕ್ಷಣ ಎನ್ನುವರು, ಮುಖ್ಯಾರ್ಥ ಕೂಡದಿರುವಾಗ ಅದಕ್ಕೆ ಸಂಬಂಧವುಳ್ಳ ಇನ್ನೊಂದು ಅರ್ಥವನ್ನು ಹೇಳಲಾಗುತ್ತದೆ. ಉದಾ-- ಗಂಗಾಯಾಂ ಘೋಷಃ ಎಂದರೆ ಗಂಗೆಯಲ್ಲಿ, ಗಂಗಾ ಪ್ರವಾಹದಲ್ಲಿ ಹಳ್ಳಿ ಎಂದು ಅರ್ಥವಾಗುತ್ತದೆ. ಆದರೆ ಪ್ರವಾಹದಲ್ಲಿ ಹಳ್ಳಿ ಇರುವದು ಅಶಕ್ಯ. ಆದ್ದರಿಂದ ಗಂಗಾಯಾಂ ಎಂದರೆ ಗಂಗಾ ಪ್ರವಾಹಕ್ಕೆ ಸಂಬಂಧಿಸಿದ ಗಂಗಾ ತೀರ ಎಂದು ಅರ್ಥ ಮಾಡಲಾಗುತ್ತದೆ. ಹೀಗೆ ಹೇಳುವ ಉದ್ದೇಶವೆಂದರೆ ಆ ಹಳ್ಳಿ ಗಂಗಾ ಪ್ರವಾಹದಂತೆ, ಬಹಳ ತಂಪಾದುದು, ಪವಿತ್ರವಾದುದು ಎಂದು. "ಮುಖ್ಯಾರ್ಥ ಬಾಧೇ. ತದ್ಯೋಗೇ, ರೂಢಿತೋಽಥಪ್ರಯೋಜನಾತ್" ಇಲ್ಲಿ ಗಂಗಾ ಪ್ರವಾಹವೆಂಬ ಅರ್ಥವನ್ನು ಬಿಟ್ಟು (ಜಹತ್) ತೀರ ಎಂದು ಅರ್ಥ ಮಾಡಿದ್ದರಿಂದ ಇದಕ್ಕೆ ಜಹತ್ ಲಕ್ಷಣವೆನ್ನುವರು,) ಇದರಂತೆ ಮಂಚಾಃ ಕ್ರೋಶಂತಿ ಎಂದರೆ ಮಂಚದ ಮೇಲೆ ಮಲಗಿದ ಹುಡುಗರು ಅಳುತ್ತಾರೆ. ಮುಖ್ಯಾರ್ಥವನ್ನು ಬಿಡದೆ ಬೇರೆ ಅರ್ಥವನ್ನು ಹೇಳುವದಕ್ಕೆ ಅಜಹಲ್ಲಕ್ಷಣ ಎನ್ನುವರು. ಉದಾ-- ಕಾಕೇಭ್ಯಃಧದಿ ರಕ್ಷ್ಯತಾಮ್- ಇಲ್ಲಿ ಕಾಗೆಗಳಿಂದ ಮೊಸರನ್ನು ರಕ್ಷಿಸು ಎಂಬಲ್ಲಿ ಮೊಸರನ್ನು ಕೇವಲ ಕಾಗೆಗಳಿಂದ ರಕ್ಷಿಸಬೇಕು ಎಂದು ಅಲ್ಲ; ಆದರೆ ಮೊಸರನ್ನು ತಿನ್ನುವ ಬೆಕ್ಕು, ನಾಯಿ ಮೊದಲಾದವುಗಳಿಂದಲೂ ರಕ್ಷಿಸಬೇಕೆಂದು ಭಾವ. ಇಲ್ಲಿ ಮುಖ್ಯಾರ್ಥವಾದ ಕಾಗೆಯನ್ನು ಬಿಡದೆ ಮೊಸರನ್ನು ತಿನ್ನುವ ಎಲ್ಲ ಪ್ರಾಣಿಗಳು ಎಂದು ಕಾಕೇಭ್ಯಃ ಶಬ್ದಕ್ಕೆ ಅರ್ಥವಿರುವದರಿಂದ, ಇದು ಅಜಹಲ್ಲಕ್ಷಣದ ಉದಾಹರಣೆ. ಪ್ರಯೋಗ ಬಾಹುಲ್ಯದಿಂದಲೇ ಅಮುಖ್ಯಾರ್ಥ ಇರುವಲ್ಲಿ ರೂಢ ಲಕ್ಷಣ ಎನ್ನು

ವರು. ಉದಾ-- ಗ್ರಾಮಃ ಗಚ್ಛತಿ, ಇಲ್ಲಿ ಹಳ್ಳಿ ಎಂದರೆ ಹಳ್ಳಿಯ ಎಲ್ಲ ಜನರು ಎಂದು ಅರ್ಥ. ಆದ್ದರಿಂದ ಇದಕ್ಕೆ ರೂಢ ಲಕ್ಷಣವೆನ್ನುವರು. ಇನ್ನು ಅಗ್ನಿಃ ಮಾಣವಕಃ ಬ್ರಹ್ಮಚಾರಿಯು (ಮಾಣವಕಃ) ಅಗ್ನಿ ಎಂದರೆ, ಆತನು ಅಗ್ನಿಯಂತೆ ವರ್ಚಸ್ವಿಯೂ, ತೇಜಃಪುಂಜನೂ ಆಗಿದ್ದಾನೆ ಎಂದು ಭಾವ. ಇದು ಗೌಣೀ ವೃತ್ತಿ ಎನಿಸುತ್ತದೆ. ಚಿತ್ರದಲ್ಲಿಯ ಸಿಂಹಕ್ಕೆ ಸಿಂಹ ಎನ್ನುವದು ಉಪಚಾರ. ಉಪಚಾರ ಪ್ರಯೋಗ ಬಾಹುಲ್ಯವಿದ್ದರೆ ರೂಢೋಪಚಾರ ಎನ್ನುವರು. ಉದಾ- ಹಂಚು ಸುಡುತ್ತದೆ. ಏಕೀ ಭವಂತಿ- ಒಂದಾಗುತ್ತವೆ. ಎಂದರೆ ಒಂದೇ ಸ್ಥಳದಲ್ಲಿ ಸೇರುತ್ತವೆ ಎಂದು ಅರ್ಥ. ಉದಾ- ಸಾಯಂಕಾಲೇ ಗಾವಃ ಗೋಷ್ಠೇ ಏಕೀ ಭವಂತಿ- ಸಾಯಂಕಾಲದಲ್ಲಿ ಆಕಳುಗಳು ಕೊಟ್ಟಿಗೆಯಲ್ಲಿ ಒಂದೆಡೆ ಸೇರುತ್ತವೆ. ಇದರಂತೆ ಅಧುನಾ ಬ್ರಾಹ್ಮಣಾಃ ಏಕೀ ಭವಂತಿ ಎಂದರೆ ಮೊದಲು ಭಿನ್ನಾಭಿಪ್ರಾಯವುಳ್ಳ ಬ್ರಾಹ್ಮಣರು ಈಗ ಒಂದೇ ಅಭಿಪ್ರಾಯವುಳ್ಳವರಾಗಿದ್ದಾರೆ ಎಂದು ಅರ್ಥ. ಇವು ಲಕ್ಷಿತ ಲಕ್ಷಣಾ ವೃತ್ತಿಯ ಉದಾಹರಣೆ.

12) **ಆಗಮದ ಪ್ರಕಾರಗಳು :** ಆಗಮಗಳು ಪೌರುಷೇಯ (ಪುರುಷಕೃತ) ಮತ್ತು ಅಪೌರುಷೇಯ (ಪುರುಷಕೃತವಲ್ಲದ)ಎಂದು ಎರಡು ವಿಧ. ಬ್ರಹ್ಮಸೂತ್ರ ಭಾರತ ಪುರಾಣ ಮನುಸ್ಮೃತಿ ಮುಂ. ಪೌರುಷೇಯ. ವೇದಗಳು ಅಪೌರುಷೇಯ. ಅವು ಯಾರಿಂದಲೂ ರಚಿತವಾಗಿಲ್ಲ, ನಿತ್ಯ ವೇದದಲ್ಲಿ ಸಂಹಿತಾ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳು ಸೇರುತ್ತವೆ. ಅಪೌರುಷೇಯ ವೇದದಲ್ಲಿ ಪುರುಷರ ಯಾವ ದೋಷಗಳೂ ಇಲ್ಲವಾದ್ದರಿಂದ ಅದು ಪರಮ ಪ್ರಮಾಣ. ಇನ್ನು ಪೌರುಷೇಯ ಆಗಮದಲ್ಲಿ ಆಪ್ತವಾಕ್ಯ ಪ್ರಮಾಣ. ಆಪ್ತ ಎಂದರೆ ಆ ವಿಷಯದ ಯಥಾರ್ಥ ಜ್ಞಾನುಳ್ಳವ, ಇಂದ್ರಿಯಾದಿ ಸಾಮರ್ಥ್ಯವುಳ್ಳವ ಮತ್ತು ವಂಚನಾದಿ ದೋಷವಿಲ್ಲದವ. ಇನ್ನು ಅವನ ವಾಕ್ಯ ಪ್ರಮಾಣವಾಗಬೇಕಾದರೆ ಅದನ್ನು ಕೇಳುವ ಶೋತೃಗಳು ಜ್ಞಾನ ಗ್ರಹಿಸುವ ಯೋಗ್ಯತೆಯುಳ್ಳವರೂ ವಕ್ತಾನಿಗೆ ಪ್ರಿಯರೂ ಇರಬೇಕು. ಜೊತೆಗೆ ಉಪದೇಶದ ಪ್ರಸಂಗ ಅನುಕೂಲವಿರಬೇಕು. ಚೇಷ್ಟೆ ಮೊದಲಾದ ಸಂದರ್ಭವಿರಬಾರದು. ಹೀಗೆ ಆಪ್ತಿಯು ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ. ಪ್ರಸಂಗಾನುಕೂಲ್ಯಗಳನ್ನು ಅವಲಂಬಿಸಿದೆ. ಆಪ್ತಿ ಇದ್ದಲ್ಲಿ ಪ್ರಾಮಾಣ್ಯವಿರುವದು ನಿಶ್ಚಿತ.

13) **ಪ್ರಮಾಣಗಳ ಪ್ರಾಮಾಣ್ಯ :** ಹುಟ್ಟಿದ ಜ್ಞಾನ ಮತ್ತು ಅದನ್ನು ಹುಟ್ಟಿಸುವ ಕರಣಗಳು (ಇಂದ್ರಿಯ, ಲಿಂಗ, ಶಬ್ದ) ಯಥಾರ್ಥ ಅಥವಾ ಪ್ರಮಾಣ ಎಂಬುದನ್ನು ನಿಶ್ಚಯಿಸುವದು ಅವಶ್ಯ. ಈ ಪ್ರಾಮಾಣ್ಯನಿಶ್ಚಯದಿಂದಲೇ ನಿಃಶಂಕ ಪ್ರವೃತ್ತಿ ಹುಟ್ಟುತ್ತದೆ. ಪ್ರಮಾಣದ ಪ್ರಾಮಾಣ್ಯದ ವಿವರ ಕೆಳಗಿನಂತಿದೆ.

A) **ಜ್ಞಾನ ಪ್ರಾಮಾಣ್ಯಂ :** "ಉತ್ಪತ್ತೌ ಜ್ಞಪ್ತೌ ಚ ಸ್ವತಃ" ಜ್ಞಾನವು ಯಾವುದರಿಂದ ಹುಟ್ಟುತ್ತದೆಯೋ, ಅದರಿಂದಲೇ ಅದರ ಪ್ರಾಮಾಣ್ಯವೂ ಹುಟ್ಟುತ್ತದೆ. ಎಂದರೆ ಜ್ಞಾನಜನಕ ಸಾಮಗ್ರಿಯಿಂದಲೇ (ಇಂದ್ರಿಯಾದಿಗಳಿಂದ) ಜ್ಞಾನ ಪ್ರಾಮಾಣ್ಯವೂ ಹುಟ್ಟುತ್ತದೆ. ಇದಕ್ಕೆ ಉತ್ಪತ್ತೌ ಸ್ವತಸ್ತ್ವಂ ಎನ್ನುತ್ತಾರೆ. ಇನ್ನು ಜ್ಞಾನವು ಯಾವ ಸಾಕ್ಷಿಯಿಂದ ಗ್ರಹಿಸಲ್ಪಡುತ್ತದೆಯೋ, ಅದರಿಂದಲೇ ಅದರ ಪ್ರಾಮಾಣ್ಯವೂ ಗ್ರಹಿಸಲ್ಪಡುತ್ತದೆ. ಇದಕ್ಕೆ ಜ್ಞಪ್ತೌ ಸ್ವತಸ್ತ್ವ ಎನ್ನುವರು. (ಜ್ಞಾನದ ಅಪ್ರಾಮಾಣ್ಯವು ಉತ್ಪತ್ತಿಯಲ್ಲಿ ಮತ್ತು ಜ್ಞಪ್ತಿಯಲ್ಲಿ ಪರತಃ ಎಂದು ನಮ್ಮ ಸಿದ್ಧಾಂತ)

B) **ಕರಣ ಪ್ರಾಮಾಣ್ಯಂ ;** ಉತ್ಪತ್ತೌ ಸ್ವತಃ ಜ್ಞಪ್ತೌ ಪರತಃ. ಜ್ಞಾನಜನಕ ಶಕ್ತಿಯಿಂದಲೇ ಕರಣದ ಪ್ರಾಮಾಣ್ಯವೂ ಹುಟ್ಟುತ್ತವೆ. (ಕರಣಾನಾಂಚ ಜ್ಞಾನ ಜನನ ಶಕ್ತ್ಯಾ ಏವ ತದ್ಯಾಥಾರ್ಥ್ಯಜನಕತ್ವಂ ಸ್ವತಸ್ತ್ವಮ್). ಕರಣ ಪ್ರಾಮಾಣ್ಯವು ಜ್ಞಪ್ತೌ ಪರತಃ ಆಗಿದೆ. ಕರಣಗಳೆಂದರೆ ಇಂದ್ರಿಯ-ಲಿಂಗ-ಶಬ್ದ. ಇವುಗಳನ್ನು ಕ್ರಮವಾಗಿ ಅನುಮಾನ-ಪ್ರತ್ಯಕ್ಷ-ಶ್ರೋತ್ರೇಂದ್ರಿಯ ಗ್ರಹಿಸುತ್ತವೆ. ಕರಣಗಳ ಪ್ರಾಮಾಣ್ಯ ಗೊತ್ತಾಗುವದು ಸಂವಾದಾದಿಗಳಿಂದ. ಆದ್ದರಿಂದ ಕರಣ ಪ್ರಾಮಾಣ್ಯವು ಜ್ಞಪ್ತೌ ಪರತಃ ಆಗಿದೆ. (ಕರಣದ ಅಪ್ರಾಮಾಣ್ಯವು ಉತ್ಪತ್ತಿಯಲ್ಲಿ ಮತ್ತು ಜ್ಞಪ್ತಿಯಲ್ಲಿ ಪರತಃ ಇದೆ.)

— ● —

# ಪರಿಶಿಷ್ಟ-೨

## ಶ್ರೀಮನ್ನ್ಯಾಯಸುಧಾ - (ಮಂಗಲ ಶ್ಲೋಕಗಳು)

### ಅಧ್ಯಾಯ ೧

ಶ್ರಿಯಃ ಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ-
ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ।
ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ
ನಮೋಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ ॥೧॥

ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ
ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ವಂ ಪರಂ ।
ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಚಾಕಾರಿ ಸನ್ಮಾರ್ಗಗಃ
ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಂ ॥೨॥

ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ
ವ್ಯಾವೃತ್ತಿಶ್ಚ ವಿಪಕ್ಷತೋಥ ವಿಷಯೇ ಸಕ್ತಿರ್ನ ವೈ ಬಾಧಿತೇ ।
ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸ ಮೇ
ಭೂಯಾತ್ತತ್ತ್ವವಿನಿರ್ಣಯಾಯ ಭಗವಾನಾನಂದತೀರ್ಥೋ ಮುನಿಃ

ಭವತಿ ಯದನುಭಾವಾದೇಡಮೂಕೋಪಿ ವಾಗ್ಮೀ
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।
ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥೪॥

ರಮಾನಿವಾಸೋಚಿತವಾಸಭೂಮಿಃ
ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭ
ತೀರ್ಥಾಮೃತಾಬ್ಧಿರ್ಭವತಾದ್ವಿಭೂತ್ಯೈ ॥೫॥

ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ಮಮ ॥೬॥

ಶ್ರೀಮದಾನಂದತೀರ್ಥಾರ್ಯಸನ್ಮನ್ಯಸರಸೀಭುವಿ ।
ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥೭॥

ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ
ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಂ ।
ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ
ಪ್ರಪನ್ನಾ ಮಾನ್ಯಾಃ ಸ್ಮಃ ಕಿಮಪಿ ಚ ವದಂತೋಽಪಿ ಮಹತಾಂ ॥೮॥

**ಅಧ್ಯಾಯ ೨ :**

ಯತ್ಪದಂ ವೇದಸಂವೇದ್ಯಂ ಕಟಾಕ್ಷೇಣಾಪಿ ವೀಕ್ಷಿತುಂ ।
ನ ಕ್ಷಮಂತೇ ವಿಮತಯಸ್ತಮುಪಾಸೇ ಶ್ರಿಯಃ ಪತಿಮ್ ॥

**ಅಧ್ಯಾಯ ೩ :**

ಕುಪಿತಾಹಿಫಣಚ್ಛಾಯಾಸಮೀಕೃತ್ಯಾಪರಂ ಸುಖಂ ।
ಸೇವಂತೇ ಯತ್ಪದಂ ಧೀರಾಸ್ತಮುಪಾಸೇ ವಲ್ಲಭಂ ಶ್ರಿಯಃ ॥

**ಅಧ್ಯಾಯ ೪ :**

ಯದೀಯಚರಣಾಂಭೋಜಚ್ಛಾಯಾಮಾಶ್ರಿತ್ಯ ನಿರ್ವೃತಾಃ ।
ನಂದಂತಿ ಸತತಂ ಮುಕ್ತಾಃ ಸಂಶ್ರಯೇ ತಂ ಶ್ರಿಯಃ ಪತಿಮ್ ॥

**ಉಪಸಂಹಾರ :**

ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।
ಧ್ರಿಯತಾಂ ಸದಯೇ ಹೃದಯೇ ಕಮಲಾಮಹಿಲೇನ ಪೂರುಷೇಣ ॥
ನ ವೈದುಷ್ಯಭ್ರಾಂತ್ಯಾ ನ ಚ ವಚನಚಾತುರ್ಯಕುಧಿಯಾ
ನ ಮಾತ್ಸರ್ಯಾವೇಶಾನ್ನ ಚ ಚಪಲತಾದೋಷವಶತಃ ।
ಪರಂ ಶ್ರದ್ಧಾಜಾಡ್ಯಾದಕೃಪಿ ಕೃತಿರಾಚಾರ್ಯವಚಸಿ
ಸ್ಖಲನ್ನಪ್ಯೇತಸ್ಮಾಜ್ಜಗತಿ ನ ಹಿ ನಿಂದ್ಯೋಽಸ್ಮಿ ವಿದುಷಾಂ ॥
ಅನುವ್ಯಾಖ್ಯಾಮೃತಾಂಭೋಧೇಃ ಸಮುತ್ಪನ್ನಾತಿನಿರ್ಮಲಾ ।
ಇಯಂ ನ್ಯಾಯಸುಧಾ ಭೌಮ್ಯೈರ್ವಿಬುಧೈಸ್ಸೇವ್ಯತಾಂ ಸದಾ ॥
ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ-
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ
ಚತುರ್ಥಾಧ್ಯಾಯೇಽಸ್ಮಿಂಶ್ಚರಮಚರಣಃ ಪರ್ಯವಸಿತಃ ॥

## ಅನುವ್ಯಾಖ್ಯಾನಂ

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥೧॥

ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ
ಜಗದ್ಗುರೂಣಾಂ ಗುರುಮಂಜಸೈವ ।
ವಿಶೇಷತೋ ಮೇ ಪರಮಾಖ್ಯವಿದ್ಯಾ-
ವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ ॥೨॥
ಪ್ರಾದುರ್ಭೂತೋ ಹರಿರ್ವ್ಯಾಸೋ ವಿರಿಂಚಭವಪೂರ್ವಕೈಃ ।
ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಮ್ ॥೩॥
ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ
ಯತಸ್ತದುದಿತಂ ಮಾನಜಾದಿಭ್ಯಸ್ತದರ್ಥತಃ ॥೪॥
ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ ।
ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ ॥೫॥
ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್
ದೃಶ್ಯತೇ ಬ್ರಹ್ಮಸೂತ್ರಾಣಾಮೇಕಧಾಽನ್ಯತ್ರ ಸರ್ವಶಃ ॥೬॥
ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ ।
ಸ್ವಯಂ ಕೃತಾಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ ॥೭॥
ತತ್ರ ಕಾರಾಥ ಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ।
ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ॥೮॥

## ॥ ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ॥

ಓತತ್ವವಾಚೀ ಹ್ಯೋಂಕಾರಃ ವಕ್ತ್ಯಸೌ ತದ್ಗುಣೋತತಾಂ ।
ಸ ಏವ ಬ್ರಹ್ಮಶಬ್ದಾರ್ಥಃ ನಾರಾಯಣಪದೋದಿತಃ ॥೯॥
ಸ ಏವ ಭರ್ಗಶಬ್ದಾರ್ಥೋ ವ್ಯಾಹೃತೀನಾಂ ಚ ಭೂಮತಃ ।
ಭಾವನಾಚ್ಚೈವ ಸುತ್ವಾಚ್ಚ ಸೋಯಂ ಪುರುಷ ಇತ್ಯಪಿ ॥೧೦॥
ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ
‘ಜ್ಞಾನೀ ಪ್ರಿಯತಮೋಽ ಮೇ’ ತಂ ವಿದ್ವಾನೇವ ಚಾಮೃತಃ ॥೧೧॥
ವೃಣುತೇ ಯಂ ತೇನ ಲಭ್ಯಃ ಇತ್ಯಾದ್ಯುಕ್ತಿಬಲೇನ ಹಿ ।
ಜಿಜ್ಞಾಸೋತ್ಥಜ್ಞಾನಜಾತ್ ತತ್ಪ್ರಸಾದಾದೇವ ಮುಚ್ಯತೇ ॥೧೨॥
ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥೧೩॥
ಋತೇ ತ್ವತ್ಕ್ರಿಯತೇ ಕಿಂಚಿದಿತ್ಯಾದೇರ್ನ ಹರಿಂ ವಿನಾ ।
ಜ್ಞಾನಸ್ವಭಾವತೋಽಪಿ ಸ್ಯಾನ್ಮುಕ್ತಿಃ ಕಸ್ಯಾಪಿ ಹಿ ಕ್ವಚಿತ್ ॥೧೪॥
ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ
ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥೧೫॥

ಇತ್ಯುಕ್ತೇರ್ಬಂಧಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ ।
ಮಿಥ್ಯಾತ್ವಮಪಿ ಬಂಧಸ್ಯ ನ ಪ್ರತ್ಯಕ್ಷವಿರೋಧತಃ ॥೧೬॥
ಮಿಥ್ಯಾತ್ವಂ ಯದಿ ದುಃಖಾದೇಃ ತದ್ವಾಕ್ಯಸ್ಯಾಗ್ರತೋ ಭವೇತ್ ।
ಮಿಥ್ಯಾಯಾಃ ಸಾಧಕತ್ವಂ ಚ ನ ಸಿದ್ಧಂ ಪ್ರತಿವಾದಿನಃ ॥೧೭॥
ತಚ್ಚ ಮಿಥ್ಯಾಪ್ರಮಾಣೇನ ಸತಾ ವಾ ಸಾಧ್ಯತೇ ತ್ವಯಾ
ಸತಾ ಚೇತ್ ದ್ವೈತಸಿದ್ಧಿಃ ಸ್ಯಾತ್, ನ ಸಿದ್ಧಂ ಚಾನ್ಯಸಾಧನಂ ॥೧೮॥
ಸಾಧಕತ್ವಂ ಸತಸ್ತೇನ ಸಾಕ್ಷಿಣಾ ಸಿದ್ಧಿಮಿಚ್ಛತಾ
ಸ್ವೀಕೃತಂ ಹ್ಯವಿಶೇಷಸ್ಯ ಸಾಧ್ಯಾ ಸಾಧಕತಾ ಪುನಃ........... ॥೧೯॥
ತಚ್ಚಾವಿಶೇಷಮಾನೇನ ಸಾಧ್ಯಮಿತ್ಯನವಸ್ಥಿತಿಃ ।
ಅನಂಗೀಕುರ್ವತಾಂ ವಿಶ್ವಸತ್ಯತಾಂ ತನ್ನ ವಾದಿತಾ ॥೨೦॥
ತಸ್ಮಾತ್ ವ್ಯವಹೃತಿಃ ಸರ್ವಾ ಸತ್ಯೇತ್ಯೇವ ವ್ಯವಸ್ಥಿತಾ ।
ವ್ಯಾವಹಾರಿಕಮೇತಸ್ಮಾತ್ ಸತ್ಯಮಿತ್ಯೇವ ಚಾಗತಂ ॥೨೧॥
ವ್ಯವಹಾರಸತಶ್ಚಾಪಿ ಸಾಧಕತ್ವಂ ತು ಪೂರ್ವವತ್ ।
ಸತ್ತ್ರೈವಿಧ್ಯಂ ಚ ಮಾನೇನ ಸಿಧ್ಯೇತ್ ಕೇನೇತಿ ಪೃಚ್ಛ್ಯತೇ ॥೨೨॥
ತಸ್ಮಾದುಕ್ತಪ್ರಕಾರೇಣ ನೈವ ಸಿದ್ಧಿಃ ಕಥಂಚನ ।
ವೈಲಕ್ಷಣ್ಯಂ ಸದಸತೋರಪ್ಯೇತೇನ ನಿಷಿಧ್ಯತೇ ॥೨೩॥
ವೈಲಕ್ಷಣ್ಯಂ ಸತಶ್ಚಾಪಿ ಸ್ವಯಂ ಸದ್ಭೇದವಾದಿನಃ ।
ಅಸತಶ್ಚಾಪಿ ವಿಶ್ವಸ್ಯ ತೇನಾನಿಷ್ಟಂ ಕಥಂ ಭವೇತ್ ॥೨೪॥
ಯದ್ಯುಚ್ಯತೇಽಪಿ ಸರ್ವಸ್ಮಾದಿತಿ ಸದ್ಭೇದಸಂಸ್ಥಿತಿಃ ।
ಸನ್ಮಾತ್ರತ್ವಂ ಬ್ರಹ್ಮಣೋಽಪಿ ತಸ್ಮಾತ್ತದಪಿ ನೋ ಭವೇತ್ ॥೨೫॥
ಜ್ಞಾನಬಾಧ್ಯತ್ವಮಪಿ ತು ನ ಸಿದ್ಧಂ ಪ್ರತಿವಾದಿನಃ ।
ವಿಜ್ಞಾತಸ್ಯಾನ್ಯಥಾ ಸಮ್ಯಗ್ವಿಜ್ಞಾನಂ ಹ್ಯೇವ ತನ್ಮತಮ್ ॥೨೬॥
ಅಸದ್ವಿಲಕ್ಷಣಜ್ಞಪ್ತ್ಯೈ ಜ್ಞಾತವ್ಯಂ ಅಸದೇವ ಹಿ ।
ತಸ್ಮಾತ್ ಅಸತ್ಪ್ರತೀತಿಶ್ಚ ಕಥಂ ತೇನ ನಿವಾರ್ಯತೇ ॥೨೭॥
ಅನ್ಯಥಾತ್ವಮಸತ್ತಸ್ಮಾತ್ ಭ್ರಾಂತಾವೇವ ಪ್ರತೀಯತೇ ।
ಸತ್ವಸ್ಯಾಸತ ಏವಂ ಹಿ ಸ್ವೀಕಾರ್ಯೈವ ಪ್ರತೀತತಾ ॥೨೮॥
ತಸ್ಯಾನಿರ್ವಚನೀಯತ್ವೇ ಸ್ಯಾದೇಷ ಹ್ಯನವಸ್ಥಿತಿಃ
ನಿರ್ವಿಶೇಷೇ ಸ್ವಯಂಭಾತೇ ಕಿಮಜ್ಞಾನಾವೃತಂ ಭವೇತ್ ॥೨೯॥
ಮಿಥ್ಯಾವಿಶೇಷೋಪ್ಯಜ್ಞಾನಸಿದ್ಧಿಮೇವ ಹ್ಯಪೇಕ್ಷತೇ
ನ ಚಾವರಣಮಜ್ಞಾನಮಸತ್ಯೇ ತೇನ ಚೇಷ್ಯತೇ ॥೩೦॥

ಅಪ್ರಕಾಶಸ್ವರೂಪತ್ವಾಜ್ಜಡೇಽಜ್ಞಾನಂ ನ ಮನ್ಯತೇ ।
ಅಜ್ಞಾನಾಭಾವತಃ ಶಾಸ್ತ್ರಂ ಸರ್ವಂ ವ್ಯರ್ಥೀಭವಿಷ್ಯತಿ ॥೩೧॥
ಅಜ್ಞಾನಸ್ಯ ಚ ಮಿಥ್ಯಾತ್ವಂ ಅಜ್ಞಾನಾದಿತಿ ಕಲ್ಪನೇ ।
ಅನವಸ್ಥಿತಿಸ್ತಥಾ ಚ ಸ್ಯಾತ್ ಅನ್ಯೋನ್ಯಾಶ್ರಯತಾಽಥವಾ ॥೩೨॥
ಸ್ವಭಾವಾಜ್ಞಾನವಾದಸ್ಯ ನಿರ್ದೋಷತ್ವಾನ್ನತದ್ಭವೇತ್
ಅವಿದ್ಯಾದುರ್ಘಟತ್ವಂ ಚೇತ್ ಸ್ಯಾದಾತ್ಮಾಪಿ ಹಿ ತಾದೃಶಃ ॥೩೩॥
ಅತೋಽಧಿಕಾರಿವಿಷಯಫಲಯೋಗಾದಿವರ್ಜಿತಂ
ಅನಂತದೋಷದುಷ್ಟಂಚ ಹೇಯಂ ಮಾಯಾಮತಂ ಶುಭೈಃ ॥೩೪॥
ಸತ್ಯತ್ವಾತ್ತೇನ ದುಃಖಾದೇಃ ಪ್ರತ್ಯಕ್ಷೇಣ ವಿರೋಧತಃ ।
ನ ಬ್ರಹ್ಮತಾಂ ವದೇದ್ವೇದೋ ಜೀವಸ್ಯ ಹಿ ಕಥಂಚನ ॥೩೫॥
ಯಜಮಾನಪ್ರಸ್ತರತ್ವಂ ಯಥಾ ನಾರ್ಥಃ ಶ್ರುತೇರ್ಭವೇತ್ ।
ಬ್ರಹ್ಮತ್ವಮಪಿ ಜೀವಸ್ಯ ಪ್ರತ್ಯಕ್ಷಸ್ಯಾವಿಶೇಷತಃ ॥೩೬॥
ಸಾರ್ವಜ್ಞಾದಿಗುಣಂ ಜೀವಾದ್ಭಿನ್ನಂ ಜ್ಞಾಪಯತಿ ಶ್ರುತಿಃ ।
ಈಶಂ ತಾಮುಪಜೀವ್ಯೈವ ವರ್ತತೇ ಹ್ಯೈಕ್ಯವಾದಿನೀ ॥೩೭॥
ಉಪಜೀವ್ಯವಿರೋಧೇನ ನಾಸ್ಯಾಸ್ತನ್ಮಾನತಾ ಭವೇತ್ ।
ಸ್ವಾತಂತ್ರ್ಯೇ ಚ ವಿಶಿಷ್ಟತ್ವೇ ಸ್ಥಾನಮತ್ಯೈಕ್ಯಯೋರಪಿ ॥೩೮॥
ಸಾದೃಶ್ಯೇ ಚೈಕ್ಯವಾಕ್ ಸಮ್ಯಕ್ ಸಾವಕಾಶಾ ಯಥೇಷ್ಟತಃ ।
ಅವಕಾಶೋಜ್ಝಿತಾ ಭೇದಶ್ರುತಿರ್ನಾತಿಬಲಾ ಕಥಂ ॥೩೯॥
ಅಜ್ಞಾನಾಸಂಭವಾದೇವ ಮಿಥ್ಯಾಭೇದೋ ನಿರಾಕೃತಃ
ಅತೋ ಯಥಾರ್ಥಬಂಧಸ್ಯ ವಿನಾ ವಿಷ್ಣುಪ್ರಸಾದತಃ ॥೪೦॥
ಅನಿವೃತ್ತೇಸ್ತದರ್ಥಂ ಹಿ ಜಿಜ್ಞಾಸಾತ್ರ ವಿಧೀಯತೇ
ಯಥಾ ದೃಷ್ಟ್ಯಾ ಪ್ರಸನ್ನಃ ಸನ್ ರಾಜಾ ಬಂಧಾಪನೋದಕೃತ್ ॥೪೧॥
ಏವಂ ದೃಷ್ಟಃ ಸ ಭಗವಾನ್ ಕುರ್ಯಾತ್ ಬಂಧವಿಭೇದನಮ್
ಕಾರ್ಯತಾ ಚ ನ ಕಾಚಿತ್ ಸ್ಯಾದಿಷ್ಟಸಾಧನತಾಂ ವಿನಾ ॥೪೨॥
ಕಾರ್ಯಂ ನ ಹಿ ಕ್ರಿಯಾವ್ಯಾಪ್ಯಂ ನಿಷಿದ್ಧಸ್ಯ ಸಮತ್ವತಃ
ನ ಭವಿಷ್ಯತ್ಕ್ರಿಯಾ ಕಾರ್ಯಂ ಸ್ರಕ್ಷ್ಯತೀಶ ಇತಿ ಹ್ಯಪಿ ॥೪೩॥
ಕಾರ್ಯಂ ಸ್ಯಾನ್ನೈವ ಚಾಕರ್ತುಂ ಅಶಕ್ಯಂ ಕಾರ್ಯಮಿಷ್ಯತೇ
ಸಾಮ್ಯಾದೇವ ನಿಷಿದ್ಧಸ್ಯ ತದಿಷ್ಟಂ ಸಾಧನಂ ತಥಾ ॥೪೪॥
ಕಾರ್ಯಂ ಸಾಧನಮಿಷ್ಟಸ್ಯ ಭಗವಾನಿಷ್ಟದೇವತಾ ।
ಮುಖ್ಯೇಷ್ಟಂ ವಾ ಸುಮನಸಾಂ ಪ್ರೇಯಸ್ತದಿತಿ ಚ ಶ್ರುತಿಃ ॥೪೫॥

ಪ್ರಾಣಬುದ್ಧಿಮನಃಖಾತ್ಮದೇಹಾಪತ್ಯಧನಾದಯಃ ।
ಯತ್ಸಂಪರ್ಕಾತ್ ಪ್ರಿಯಾ ಆಸನ್‌ತತಃ ಕೋನ್ಯಃಪರಃ ಪ್ರಿಯಃ ॥೪೬॥
ಇತ್ಯಾದಿವಾಕ್ಯೈರಾಕಾಂಕ್ಷಾಸನ್ನಿಧಿಯೋಗ್ಯತಾ ಯತಃ ।
ತಸ್ಮಿನ್ನೇವ ಸಮಸ್ತಸ್ಯೇತಿ ಇಷ್ಟೇ ವ್ಯುತ್ಪತ್ತಿರಿಷ್ಯತೇ ॥೪೭॥
ಆತ್ಮರೂಪಾನ್ ತವ ಭ್ರಾತೇತ್ಯಾದಾವಾವಾಪತೋಽಪಿ ಚ ।
ಉದ್ವಾಪಾತ್ ವರ್ತಮಾನತ್ವಾತ್ ಆಕಾಂಕ್ಷಾದಿಬಲಾದಪಿ ॥೪೮॥
ಬಾಲೋ ವ್ಯುತ್ಪತ್ತಿಮಪ್ಯೇತಿ ನಾನಯೇತ್ಯಾದಿವಾಕ್ಯತಃ
ಆನೀಯಮಾನದೃಷ್ಟ್ಯೈವ ವ್ಯುತ್ಪತ್ತೇಃ ಸಂಭವೇ ಸತಿ ॥೪೯॥
ಏಷ್ಯದಾನಯನಾಯಾಯಂ ಕುತ ಏವ ಪ್ರತೀಕ್ಷತೇ
ವ್ಯುತ್ಪನ್ನೋ ವರ್ತಮಾನೇ ತು ಕ್ರಿಯಾಶಬ್ದೇ ಭವಿಷ್ಯತಿ ॥೫೦॥
ಪುನರ್ದೃಷ್ಟ್ಯೈವ ಶಬ್ದಶ್ರುತ್ ಪಶ್ಚಾದ್ವ್ಯುತ್ಪತ್ತಿಮೇಷ್ಯತಿ ।
ವರ್ತಮಾನಮತೀತಂ ಚ ಭವಿಷ್ಯದಿತಿ ಚ ಕ್ರಮಾತ್ ॥೫೧।
ಆಕಾಂಕ್ಷಾದಿಯುತಂ ಯಸ್ಮಾತ್ ವಿಧೇರ್ವ್ಯುತ್ಪಾದನಂ ಕುತಃ
ದೃಷ್ಟ್ವಾ ಜ್ಞಾತಪದಾರ್ಥಸ್ಯ ಸ್ಯಾದಾಕಾಂಕ್ಷಾ ಭವಿಷ್ಯತಿ ॥೫೨॥
ವ್ಯುತ್ಪತ್ತಿಃ ಪ್ರಥಮಾ ತಸ್ಮಾತ್ ವರ್ತಮಾನೇಽಗತೇ ತತಃ
ಇಷ್ಟಮಾಕಾಂಕ್ಷತೇ ಸರ್ವೋ ನ ಪ್ರವೃತ್ತಿಮಪೇಕ್ಷತೇ ॥೫೩॥
ಅಪರೋಕ್ಷಂ ಪರೋಕ್ಷಂ ವಾ ಜ್ಞಾನಮಿಷ್ಟಸ್ಯ ಸಾಧನಮ್ ।
ಕ್ವಾಪಿ ಚೇಷ್ಟಾ ತದರ್ಥಾ ಸ್ಯಾತ್ ಅತ್ರಿರ್ಹಿ ರಸವಿತ್ತಯೇ ॥೫೪॥
ವಾಕ್ಯಾರ್ಥಜ್ಞಾನಮಾತ್ರೇಣ ಕ್ವಚಿದಿಷ್ಟಂ ಭವೇದಪಿ

ನ ಚ ಸ್ರುಕ್‌ಸ್ರುವವಹ್ನ್ಯಾದಾವತಾತ್ಪರ್ಯಂ ಶ್ರುತೇರ್ಭವೇತ್ ॥೫೫॥
ಯತ್ಕಿಂಚಿತ್ಕರಣಸ್ಯಾಪಿ ಯಜ್ಞತ್ವೇ ವಾಽನ್ಯಥಾ ಭವೇತ್ ।
ತಸ್ಮಾದುಪಾಸನಾರ್ಥಂ ಚ ಸ್ವಾರ್ಥೇ ತಾತ್ಪರ್ಯವದ್ಭವೇತ್ ॥೫೬॥
ಇತಿ ಶಬ್ದೋನ್ನಯೋಽಗ್ನ್ಯಾವಿತ್ಯಪ್ಯನ್ನೀತೇ ಸ್ಮೃತಿರ್ಭವೇತ್ ।
ಇತಿ ಶಬ್ದವ್ಯಪೇತಾನಿ ಹ್ಯಪಿ ಸಂತಿ ವಚಾಂಸ್ಯಲಮ್ ॥೫೭॥
ಆತ್ಮಾನಮೇವೇತ್ಯಾದೀನಿ ಯೋಗೇಽಗ್ನಾವಪಿ ತತ್ಸಮಮ್
ಏಕವಾಕ್ಯತ್ವಯೋಗೇ ತು ವೇದಸ್ಯಾಪಿ ಹ್ಯಶೇಷತಃ ॥೫೮॥
ವಾಕ್ಯಭೇದೋ ನ ಯುಕ್ತಃ ಸ್ಯಾದ್ಯೋಗಶ್ಚ ಸ್ಯಾನ್ಮಹಾಫಲೇ
ಇತಿ ಬ್ರೂಯಾಗಿತಿ ವಚೋ ಗತಮಗ್ನೌ ಸಮೀಪಗಂ ॥೫೯॥
ಕಲ್ಪನಾಗೌರವಂ ಚೇತ್‌ಸ್ಯಾತ್ ಪೃಥಕ್‌ತಾತ್ಪರ್ಯಕಲ್ಪನೇ ।
ಕಲ್ಪನಾಗೌರವಾದೇವ ಪದಾರ್ಥಾ ನ ಸ್ಯುರೇವ ಹಿ ॥೬೦॥

ಪ್ರಮಾಣಾವಗತತ್ವಂ ಚೇತ್ ತಾತ್ಪರ್ಯಾಣಾಂ ತಥೈವ ಹಿ ।
ತಸ್ಮಾತ್ ಪದಾರ್ಥೇ ವಾಕ್ಯಾರ್ಥೇ ತಾತ್ಪರ್ಯಮುಭಯತ್ರ ಚ ॥೬೧॥
ಪೃಥಗೇವ ಚ ವಾಕ್ಯತ್ವಂ ಪೃಥಗನ್ವಯತೋ ಭವೇತ್ ।
ಅವಾಂತರತ್ವಾದ್ವಾಕ್ಯಾನಾಂ ವಾಕ್ಯಭೇದೋ ನ ದೂಷಣಮ್ ॥೬೨॥
ಅಂಗೀಕೃತತ್ವಾದಪಿ ತೈಃ ಪದಾನಾಂ ತು ಪೃಥಕ್ ಪೃಥಕ್ ।
ಕ್ರಿಯಾಪದೇನಾನ್ವಯಸ್ಯ ವಾಕ್ಯಭೇದೋ ಹಿ ದೂಷಣಮ್ ॥೬೩॥
ಪ್ರತ್ಯಕ್ಷಾದಿವಿರೋಧೇ ತು ಗೌಣಾರ್ಥಸ್ಯಾಪಿ ಸಂಭವಾತ್ ।
ಅತಾತ್ಪರ್ಯಂ ಪದಾರ್ಥೇಽಪಿ ನ ಕಲ್ಪ್ಯಮವಿರೋಧತಃ ॥೬೪॥
ಅತೋ ಜ್ಞಾನಫಲಾನ್ಯೇವ ಕರ್ಮಾಣಿ ಜ್ಞಾನಮೇವ ಹಿ ।
ಮುಖ್ಯಪ್ರಸಾದದಂ ವಿಷ್ಣೋರ್ಜಿಜ್ಞಾಸಾಯಾಶ್ಚ ತದ್ಭವೇತ್ ॥೬೫॥
ಕರ್ತವ್ಯಾ ತೇನ ಜಿಜ್ಞಾಸಾ ಶ್ರುತಿಪ್ರಾಮಾಣ್ಯಯೋಗತಃ
ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ ॥೬೬॥
ಅನವಸ್ಥಾಽನ್ಯಥಾ ಹಿ ಸ್ಯಾದಪ್ರಾಮಾಣ್ಯಂ ತಥಾನ್ಯತಃ
ಮಿಥ್ಯಾಜ್ಞಪ್ತಿಪ್ರಲಂಭಾದೇಸ್ತೇನ ವೇದವಿರೋಧಿ ಯತ್ ॥೬೭॥
ಅಪಿ ವೇದಾನಾಂ ಅಂಗೀಕಾರ್ಯಾ ಹಿ ನಿತ್ಯತಾ ।
ನ ಹಿ ಧರ್ಮಾದಿಸಿದ್ಧಿಃ ಸ್ಯಾನ್ನಿತ್ಯವಾಕ್ಯಂ ವಿನಾ ಕ್ವಚಿತ್ ॥೬೮॥
ಅವಿಪ್ರಲಂಭಸ್ತತ್ ಜ್ಞಾನಂ ತತ್ಕೃತತ್ವಾದಯೋಽಪಿ ಚ ।
ಕಲ್ಪ್ಯಾ ಗೌರವದೋಷೇಣ ಪುಂವಾಕ್ಯಂ ಜ್ಞಾಪಕಂ ನ ತತ್ ॥೬೯॥
ಪ್ರತ್ಯಕ್ಷಃ ಕಸ್ಯಚಿತ್ ಧರ್ಮೋ ವಸ್ತುತ್ವಾದಿತಿ ಚೋದಿತೇ ।
ನ ಬುದ್ಧೋ ಧರ್ಮದರ್ಶೀ ಸ್ಯಾತ್ಪುಂಸ್ತ್ವಾದಿತ್ಯನುಮಾಪತಿಃ ॥೭೦॥
ಅಧರ್ಮವಾದಿನೋ ವಾಕ್ಯಂ ಅಪ್ರಯೋಜನಮೇವ ಹಿ ।
ಧರ್ಮಾಭಾವೋಽಪಿ ನೋ ತೇನ ಪ್ರತ್ಯಕ್ಷಾವಗತೋ ಭವೇತ್ ॥೭೧॥
ಅತಃ ಸಂಶಯಸಂಪತ್ತಾ ವಾಕ್ಯಂ ಪ್ರತ್ಯಕ್ಷವತ್ಪ್ರಮಾ
ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ ಶಬ್ದಾನಾಂ ಅನುಭೂಯತೇ ॥೭೨॥
ಅತೋಽನ್ವಿತಾಭಿಧಾಯಿತ್ವಂ ಗೌರವಂ ಕಲ್ಪನೇಽನ್ಯಥಾ
ನ ಚಾಶಕ್ತ್ಯಾಭಿಧಾಯಿತ್ವಂ ಪ್ರವೃತ್ತಿಶ್ಚ ದ್ವಿಧಾನ್ಯಥಾ ॥೭೩॥
ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ ।
ಉಕ್ತಂ ವಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್ ॥೭೪॥
ಪ್ರಮಾಣನ್ಯಾಯಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ ।
ಮಾನನ್ಯಾಯೈಸ್ತು ತತ್ಸಿದ್ಧೈರ್ಮೀಮಾಂಸಾ ಮೇಯಶೋಧನಂ ॥೭೫

ಬ್ರಹ್ಮತರ್ಕಂ ಚ ಭಗವಾನ್ ಸ ಏವ ಕೃತವಾನ್ ಪ್ರಭುಃ ।
ಪಂಚಾಶತ್‌ಕೋಟಿವಿಸ್ತಾರಾನ್ನಾರಾಯಣತನೌ ಕೃತಾತ್ ॥೭೬॥
ಉದ್ಧೃತ್ಯ ಪಂಚಸುಹಸ್ರಂ ಕೃತವಾನ್ ಬಾದರಾಯಣಃ ।
ಅತಸ್ತದರ್ಥಂ ಸಂಕ್ಷೇಪಾದತ ಇತ್ಯಭ್ಯಸೂಚಯತ್ ॥೭೭॥
ಯತೋಽನುಭವತಃ ಸರ್ವಂ ಸಿದ್ಧಮೇತದತೋಽಪಿ ಚ ।
ದೇವೈಶ್ಚ ದುರ್ಗಮಾರ್ಥೇಷು ವ್ಯಾಪೃತೋ ನಾತಿವಿಸ್ತೃತಿಂ ॥೭೮॥
ಚಕಾರೈತಾ ಹ್ಯವಜ್ಞೇಯಾ ಯುಕ್ತಯಃ ಪ್ರತಿಪಕ್ಷಗಾಃ
ಪ್ರತ್ಯಕ್ಷೇಕ್ಷಾಕ್ಷಮಃ ಪಕ್ಷಂ ಕಮೇವಾತ್ರಾಭಿವೀಕ್ಷತೇ ॥೭೯॥
ತಸ್ಮಾತ್ ಅಕ್ಷಮಪಕ್ಷತ್ವಾತ್ ಮೋಕ್ಷಶಾಸ್ತ್ರೇಽಭ್ಯುಪೇಕ್ಷಿತಃ
ಸ್ವಯಂ ಭಗವತಾ ವಿಷ್ಣುರ್ಬ್ರಹ್ಮೇತ್ಯೇತತ್ಪುರೋದಿತಮ್ ॥೮೦॥
ಸ ವಿಷ್ಣುರಾಹ ಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ ।
ಆದ್ಯಂತಂ ದೇವಶಾಸ್ತ್ರಸ್ಯ ಸ್ವಯಂ ಭಗವತಾ ಕೃತಮ್ ॥೮೧॥
ಮಧ್ಯಂ ತದಾಜ್ಞಯಾ ಶೇಷರುದ್ರಾಭ್ಯಾಂ ಕೃತಮಂಜಸಾ ।
ಅತಸ್ತತ್ರೈವ ವಿಷ್ಣುತ್ವಸಿದ್ಧೇರ್ಬ್ರಹ್ಮೇತ್ಯಸೂಚಯತ್ ॥೮೨॥
ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ ।
ಗುಣಾ ನಾರಾ ಇತಿ ಜ್ಞೇಯಾಸ್ತದ್ವಾನ್ನಾರಾಯಣಃ ಸ್ಮೃತಃ ॥೮೩॥
ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಮ್ ।
ಅತೋ ನಾರಾಯಣಸ್ಯೈವ ಜಿಜ್ಞಾಸಾತ್ರ ವಿಧೀಯತೇ ॥೮೪॥
ಸಿದ್ಧತ್ವಾದ್ ಬ್ರಹ್ಮಶಬ್ದಸ್ಯ ವಿಷ್ಣೌ ಸ್ಪಷ್ಟತಯಾ ಶ್ರುತೌ ।
ಅಂಭಸ್ಯಪಾರ ಇತ್ಯುಕ್ತೋ ನಾರಾಯಣಪದೋದಿತಃ ॥೮೫॥
ಆಪೋ ನಾರಾ ಇತಿ ಹ್ಯಾಹ ಸ ಏವಾಪ್ಸ್ವಂತರೀರಿತಃ ।
ಕಾಮತೋ ವಿಧಿರುದ್ರಾದಿಪದದಾತ್ರ್ಯಾ ಸ್ವಯಂ ಶ್ರಿಯಾ ॥೮೬॥
ಯೋನಿತ್ವೇನಾತ್ಮನೋ ವಿಷ್ಣೋಸ್ತ್ವಿತ್ಯಂತೀತ್ಯುದಿತಸ್ಯ ಚ ।
ಯಸ್ಮಿನ್ ದೇವಾ ಅಧೀತ್ಯುಕ್ತ್ವಾ ಸಮುದ್ರಂ ಸ್ಥಾನಮೇವ ಚ ॥೮೭॥
ನಾಮ ಚಾಕ್ಷರಮಿತ್ಯೇವ ಋಚಿ ಇತ್ಯುದಿತಂ ತು ಯತ್ ।
ಯತಃ ಪ್ರಸೂತೇತ್ಯುಕ್ತ್ವಾ ಚ ತದೇವ ಬ್ರಹ್ಮ ಚಾಬ್ರವೀತ್ ॥೮೮॥

॥ ಇತಿ ಜಿಜ್ಞಾಸಾಧಿಕರಣಂ ಸಮಾಪ್ತಂ ॥
॥ ಶ್ರೀಕೃಷ್ಣಾರ್ಪಣಮಸ್ತು ॥

* * * *

# -: ಒಪ್ಪೋಲೆ :-

ತುಂಬಾ ಜಾಗ್ರತೆ ವಹಿಸಿದ್ದರೂ ನನ್ನ ದೃಷ್ಟಿಮಾಂದ್ಯದ ಮೂಲಕ ಮುದ್ರಣ ದೋಷಗಳು ಅಲ್ಲಲ್ಲಿ ನುಸುಳಿವೆ. ಮಹತ್ವದ ದೋಷಗಳನ್ನು ಮಾತ್ರ ಕೆಳಗೆ ತಿದ್ದಲಾಗಿದೆ. ಉಳಿದ ಅಲ್ಪ ಅಕ್ಷರದೋಷಗಳನ್ನು ಸಹೃದಯ ವಾಚಕರೇ ಸರಿಪಡಿಸಿಕೊಂಡು ಓದಬೇಕಾಗಿ ವಿನಂತಿ.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 1 | 11 | ಭಾಷೂಗಳನ್ನು | ಭಾಷ್ಯಗಳನ್ನು |
| 1 | 18 | ಅನಂದ | ಆನಂದ |
| 2 | 25 | ಶ್ರಯ: | ಶ್ರಿಯಃ |
| 4 | 7 | ಪರಿವ್ರಜೇತ್ | ಪರಾಂ ವ್ರಜೇತ್ |
| 5 | 23 | ಪಾಬೋಧಿ | ಪ್ರಾಬೋಧಿ |
| 8 | 23 | ಹ್ಯದಃ | ಹ್ರದಃ |
| 9 | 27 | ಮಾನಸೇ ಮೇ | ಮಾನಸೇ ಚ |
| 13 | 11,12 | ನಿಷ್ಣಾತರಲ್ಲಿ–ಪ್ರೌಢರಲ್ಲಿ | ನಿಷ್ಣಾತರಲ್ಲ–ಪ್ರೌಢರಲ್ಲ |
| 15 | 19 | ಏಭಃ | ಏಭಿಃ |
| 16 | 12 | ಪ್ರಕೃತ್ಯಭಮಾನಿ | ಪ್ರಕೃತ್ಯಭಿಮಾನಿ |
| 18 | 9,17 | ಅಪ್ಮತಮಂ | ಆಪ್ತತಮಂ |
| 20 | 17 | ವಿಷಕರ ಮಂತ್ರದಲ್ಲಿವಂತೆ | ವಿಷಹರ ಮಂತ್ರದಲ್ಲಿಯಂತೆ |
| 22 | 18 | ಸುಗಮವಾಗಿ | ಸುಗಮವಾಗುವಂತೆ |
| 24 | 18 | ಅಲ್ಲದ | ಅಲ್ಲಿಯ |
| 34 | 26 | ನಿನ್ನವಾದ ಯುಕ್ತ | ನಿನ್ನವಾದ ಅಯುಕ್ತ |
| 38 | 7,24 | ಧಗವಂತ | ಭಗವಂತ |
| 40 | 27 | ಆಪವರ್ಗಃ | ಅಪವರ್ಗಃ |
| 43 | 1 | ವ್ಯಾಘಂಟ | ವ್ಯಾಘುಂಟ್ಯ |
| 45 | 26 | ಮಿಥ್ಯಾಃ | ಮಿಥ್ಯಾ |
| 48 | 13 | ಅಪ್ರಮಾಣ | ಅಪ್ರಮಾಣ |
| 54 | 8 | ವಿಜಗೀಷು | ವಿಜಗೀಷು |
| 55,59 | – | ಸದ್ವಚನಾಭಾಸ | ಸದ್ವಚನಾಭಾಸಲಕ್ಷಣಯೋಗಿತ್ವಂ |
| 64 | 22 | ಬಾಧ್ಯತ್ವಾತ್–ಶುಕ್ತರಜತಂ | ಬಾಧ್ಯತ್ವಾತ್-ಶುಕ್ತಿರಜತಂ |
| 73 | 27 | ಅನಿರ್ವಚನೀಯಕ್ಕೆ | ಅನಿರ್ವಚನೀಯತ್ವಕ್ಕೆ |
| 75 | 14 | ವಿಚಾರ ಅಸಹಿಷ್ಣುತ್ವಂ | ವಿಚಾರಅಸಹಿಷ್ಣುತ್ವಂ |
| 80 | 14 | ಪ್ರಮುಷಿತ | ಪ್ರಮುಷಿತ |

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| 82 | 3 | ಮಾದಕತ್ವ | ಮಾರಕತ್ವ |
| 84 | 3 | ನ್ಯಾಯಕಲ್ವತರು | ನ್ಯಾಯ ಕಲ್ಪತರು |
| 84 | 17 | ಅಸಂಬದ | ಅಸಂಬಂಧ |
| 84 | 26 | ಭೇದ ಅಗ್ರಹ | ಭೇದ ಅಗ್ರಹ |
| 88 | 16 | ಎಭ್ರಮಾಲಂಬನಂ | ವಿಭ್ರಮಾಲಂಬನಂ |
| 115 | 12 | ಕೃತ್ಯುವ್ದೇಶ್ಯತ್ವಂ–ತದಗವಮಸ್ತು | ಕೃತ್ಯುದ್ದೇಶ್ಯತ್ವಂ–ತದವಗಮಸ್ತು |
| 116 | 5 | ದೇದಕ್ಕೆ | ವೇದಕ್ಕೆ |
| 117 | 20,25 | ಉದ್ದಾಪಾತ್–ದೇದ | ಉದ್ವಾಪಾತ್–ವೇದ |
| 123 | 16 | ಸಾಕ್ಷಾತ್ಕರವನ್ನು | ಸಾಕ್ಷಾತ್ಕಾರವನ್ನು |
| 124 | 1,10 | ಸ್ರುವ | ಸ್ರುವ |
| 126 | 5 | ಬಾದಿರೋ | ಖಾದಿರೋ |
| 130 | 31 | ಬೃಹ್ಮಸ್ವರಪದ | ಬೃಹ್ಮಸ್ವರೂಪದ |
| 132 | 3,17,19,27 | ಆವಾಂತರ | ಅವಾಂತರ |
| 136 | 1 | ಭೂಮಜ್ಞಾನ | ಧೂಮಜ್ಞಾನ |
| 138 | 18 | ಹಿಂದೆ ಕೇಳಿದ | ಕೇಳಿದ (ಶ್ರುತಃ) |
| 139 | 20 | ಅನುಮತಿ | ಅನುಮಿತಿ |
| 148 | 22 | ಯಥಾವಸ್ಥಿತಿಮೇವ | ಯಥಾವಸ್ಥಿತಮೇವ |
| 154 | 16 | ವಾಕ್ಯರಚ | ವಾಕ್ಯ ರಚಿಸಿ |
| 160 | 22 | ಸಾಧಿಸುತ್ತಾನೆ | ಸಾಧಿಸತ್ತೇನೆ |
| 166 | 9 | ಬೋಧಕೋಪಾಯ | ವಾಕ್ಯಾರ್ಥೋಪಾಯ |
| 166 | 14 | ಜ್ಞಾನಬೋಧಕವಲ್ಲ | ವಾಕ್ಯಾರ್ಥಬೋಧಕವೇ |
| 166 | 27 | ಪದವಿಷಯಕ | ಪದಗಳ |
| 169 | 7 | ಸಿದ್ಧಾಂತದ ಬಗ್ಗೆ ಆಕ್ಷೇಪ | ವಿಶೇಷಾನ್ವಿತಾಭಿಧಾನದ ಬಗ್ಗೆ ಆಕ್ಷೇಪ |
| 188 | 18,19 | ನಾರಾಯಪೋಪನಿಷತ್ | ನಾರಾಯಣೋಪನಿಷತ್ |

